್ರೀಬಾಲಲೀಲಾಮಹಾಂತಶಿವಯೋಗೀಶ್ವರ ಗ್ರ ಮಾಲೆ — ೧೫

ಕಲ್ಲಮಠದ ಪ್ರಭುದೇವರು

ವಿರಚಿಸಿದ

# ಲಿಂಗಲೀಲಾವಿಲಾಸಚಾರಿತ್ರ

ಪ್ರಕಾಶಕರು :

ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು

ಮುರುಘಾಮಠ

ಧಾರವಾಡ

ಸಂಪಾದಕರು

ಪ್ರೊ. ಸಂ. ಶಿ. ಭೂಸನೂರಮಠ, ಎಮ್. ಎ.

ಲಿಂಗರಾಜ ಕಾಲೇಜ

ಬೆಳಗಾವಿ

೧೯೫೬



ಶ್ರೀ. ನಿ. ಪ್ರ. ಸ್ವ.

ಶ್ರೀ ಮುರುಘೇಂದ್ರಶಿವಯೋಗಿಗಳು

ಗಚ್ಚಿನಮಠ, ಅಥಣಿ

# ಅರ್ಪಣೆ

ಶಿವಶರಣರ ಸಾಮರಸ್ಯದ ಮಾರ್ಗದಲ್ಲಿ ನಡೆದು

ಶಿವಯೋಗವನ್ನಾಚರಿಸಿ

ಪರಮವೈರಾಗ್ಯಮೂರ್ತಿಗಳು

ಮತ್ತು ಮಹಾಶಿವಯೋಗಿಗಳೆನಿಸಿ

ಮೆರೆದ

ಅಥಣಿ ಗಚ್ಚಿನಮಠದ

ಲಿಂಗೈಕ್ಯ

ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ

**ಶ್ರೀ ಮುರುಘೇಂದ್ರಶಿವಯೋಗಿಗಳ**

ದಿವ್ಯಪಾದಪದ್ಮಂಗಳಲ್ಲಿ

ಈ ಗ್ರಂಥವನ್ನು ಭಕ್ತಿಪುರಸ್ಸರವಾಗಿ

ಸಮರ್ಪಿಸಲಾಗಿದೆ.

# ಅನುಕ್ರಮಣಿಕೆ

## ಲಿಂಗಲೀಲಾವಿಲಾಸಚಾರಿತ್ರದ ಸಂಸ್ಕರಣಕ್ಕೆ ತಾಡವೋಲೆಯನ್ನಿತ್ತು ಸಹಕರಿಸಿದ ಮಹನೀಯರು

ಓಲೆಯ ಗ್ರಂಥಗಳ ಸಂಕೇತ :

| | |
|---|---|
| ಹು. | ೧ ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಗುರುಸಿದ್ಧ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರುಸಾವಿರಮಠ, ಹುಬ್ಬಳ್ಳಿ |
| ಎ. | ೨ ಶ್ರೀ. ನಿ. ಪ್ರ. ಸ್ವ. ಸಿದ್ಧರಾಮ ಸ್ವಾಮಿಗಳು, ವಿರಕ್ತಮಠ, ಎಕ್ಕುಂಡಿ |
| ರಾ. | ೩ ಶ್ರೀ. ನಿ. ಪ್ರ. ಸ್ವ. ಬಸವಸ್ವಾಮಿಗಳು, ವಿರಕ್ತಮಠ, ರಾಣೇಬೆನ್ನೂರ |
| ಮು. | ೪ ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯಸ್ವಾಮಿಗಳು, ಮುರುಘಾಮಠ, ಧಾರವಾಡ |

## ಮುನ್ನುಡಿಯ ಸಂಕೇತಗಳು

| | |
|---|---|
| ಲಿಂ. ಲೀ. ವಿ. ಚಾ. | ಲಿಂಗಲೀಲಾವಿಲಾಸಚಾರಿತ್ರ |
| ಕ. ಕ. ಚ. ಸಂ. | ಕರ್ನಾಟಕ ಕವಿಚರಿತೆ ಸಂಪುಟ |
| ಸಿ. ಸಾ. ಸಂ. | ಸಿದ್ಧರಾಮ ಸಾಹಿತ್ಯ ಸಂಗ್ರಹ |
| ಶ. ತ್ರ. ಶಿ. | ಶತಕತ್ರಯ ಶಿವಾಧವಶತಕ |
| ಕೈ. ಕ. ಯೋ. ವ. | ಕೈವಲ್ಯಕಲ್ಪವಲ್ಲರಿ ಯೋಗಪ್ರತಿಪಾದನ ಸ್ಥಳ ವಚನ |
| ಭ. ಗೀ. ಅ. ಶ್ಲೋ. | ಭಗವದ್ಗೀತೆ ಅಧ್ಯಾಯ ಶ್ಲೋಕ |
| ಕೇ. ಉ. ಮಂ. | ಕೇನೋಪನಿಷತ್ ಮಂತ್ರ |
| ಕ. ಉ. ಅ. ವ. ಮಂ. | ಕಠೋಪನಿಷತ್ ಅಧ್ಯಾಯ ವಲ್ಲೀ ಮಂತ್ರ |
| ಸಂ. ಪ. | ಸಂಧಿ ಪದ್ಯ |
| ಪು. | ಪುಟ |

# ಪ್ರಕಾಶಕರ ಮಾತು

ವಿಶ್ವಸಾಹಿತ್ಯದ ವಿಸ್ತಾರವಾದ ನಭೋಂಗಣದಲ್ಲಿ ಅನಂತ ಕೃತಿ ನಕ್ಷತ್ರಗಳು ತಮ್ಮ ನಿತ್ಯೋಜ್ವಲವಾದ ಪ್ರಭೆಯನ್ನು ವಿಶ್ವಕ್ಕೆ ನೀಡುತ್ತಿವೆ. ಹಗಲುಗತ್ತಲೆಯ ಅನಂತ ಅಂಧಕಾರದಲ್ಲಿ ಎಡೆಯಾಡುತ್ತಿರುವ ಮಾನವನ ಜೀವನ ಇಂತಹ ಪ್ರಭೆಯ ಪ್ರಸಾದವನ್ನು ಸ್ವೀಕರಿಸಿದರೆ ಸತ್ಯವಾಗುತ್ತದೆ, ಸುಂದರವಾಗುತ್ತದೆ, ಶಿವವಾಗುತ್ತದೆ. ಈ ನಕ್ಷತ್ರ ಮಾಲಿಕೆಯಲ್ಲಿ ತೊಳಗಿ ಬೆಳಗುವ ಕನ್ನಡ ಕೃತಿಗಳ ಸಂಖ್ಯೆಯು ಸಾಕಷ್ಟಿದೆ. ಆದರೆ ಇದರ ಅರಿವು ಕನ್ನಡಿಗರಿಗೆ ಸಾಕಷ್ಟಿದ್ದಂತೆ ತೋರುವುದಿಲ್ಲ.

ಇಂತಹ ಉಜ್ವಲವಾದ ಕನ್ನಡ ಸಾಹಿತ್ಯದ ಪರಂಪರೆಯನ್ನು ಉಳಿಸಿಕೊಂಡು ಹೋಗುವುದು ಕನ್ನಡಿಗರ ಕರ್ತವ್ಯ. ಅದರಲ್ಲಿಯೂ ಮಾನವ ಜೀವನದ ಪರಮ ಧ್ಯೇಯವನ್ನು ಸಾಧಿಸಿ, ಅನುಭವಿಸಿ, ತಮ್ಮ ಅನುಭವವನ್ನು ಮಾನವ ಕುಲಕ್ಕೆ ನೀಡಿದ ಶಿವಶರಣರ ವಚನಗಳನ್ನು, ಅವರ ದಿವ್ಯ ಜೀವನಗಳನ್ನೇ ಕುರಿತಿರುವ ಚರಿತೆಗಳನ್ನು ಕಾದುಕೊಂಡು ಹೋಗುವುದು ನಮ್ಮ ಪವಿತ್ರ ಕರ್ತವ್ಯ. ಈ ಸದುದ್ದೇಶವೇ ಪ್ರೇರಕ ಶಕ್ತಿಯಾಗಿ 'ಶ್ರೀಬಾಲಲೀಲಾಮಹಾಂತಶಿವಯೋಗೀಶ್ವರ ಗ್ರಂಥಮಾಲೆ' ಯಲ್ಲಿ ಇಲ್ಲಿಯವರೆಗೆ ೧೪ ಪುಷ್ಪಗಳನ್ನು ಅರಳಿಸಿದೆ. ಲಿಂಗೈಕ್ಯ ಶ್ರೀಮದಥಣಿ ಮುರುಘೇಂದ್ರ ಮಹಾಶಿವಯೋಗಿಗಳ ನೆನಹಿನಲ್ಲಿ ಪ್ರಾರಂಭವಾಗಿರುವ ಈ ಮಾಲೆಯ ಹದಿನೈದನೆಯ ಪುಷ್ಪವೇ ಲಿಂಗಲೀಲಾ-ವಿಲಾಸಚಾರಿತ್ರ. ಸ್ಥಲಾನುಗುಣವಾಗಿ ಪುರಾತನ ಶರಣರ ವಚನಗಳನ್ನು ಸೇರಿಸಿ ವ್ಯಾಖ್ಯಾನವನ್ನು ಬರೆದವರು ಕಲ್ಲಮಠದ ಪ್ರಭುದೇವರು. ತತ್ತ್ವ ಧರ್ಮ ನೀತಿ ಅನುಭವಗಳೇ ಪರಿಪಕ್ವವಾಗಿ, ಪರಮಾನಂದ ರಸದ ಹೊನಲಂತೆ ಹರಿವ ಈ ಚಾರಿತ್ರ 'ಶ್ರೋತವ್ಯ, ಮಂತವ್ಯ, ನಿದಿಧ್ಯಾಸಿತವ್ಯ.' ಈ ಚಾರಿತ್ರದ ಭಾಷೆ ಕನ್ನಡವಾದರೇನು ? ಅದರಲ್ಲಿ ಪ್ರಜ್ವಲಿಸುತ್ತಿರುವ ಸ್ವಾನುಭಾವ ವಿಶ್ವೇಮಾನವರ ಹೃದಯ ತಿಳಿವ ಭಾಷೆ. ತಿಳಿಯಲಪೇಕ್ಷಿಸುವ ಹೃದಯಕ್ಕೆ ವಿಶ್ವಕಲ್ಯಾಣವನ್ನು ನೀಡುವ ಸಾಮರ್ಥ್ಯ ಲಿಂಗಲೀಲಾವಿಲಾಸಚಾರಿತ್ರಕ್ಕಿದೆಯೆಂದು ನಮ್ಮ ನಂಬುಗೆ.

ಇಂತಹ ಅಪೂರ್ವವಾದ, ಅತ್ಯುಜ್ವಲವಾದ ಗ್ರಂಥ ಇಲ್ಲಿಯ ವರೆಗೆ ಬೆಳಕು ಕಾಣದೆ ಇದ್ದುದು ಕನ್ನಡ ಸಾಹಿತ್ಯದ ದುರ್ದೈವ. ಇದರ ಹಿರಿಮೆಯನ್ನು ಕಂಡ

ಕೆಲವು ಸಾಹಿತ್ಯ ಪ್ರೇಮಿಗಳು ಈ ಗ್ರಂಥವನ್ನು ಪ್ರಕಾಶಪಡಿಸಲೇಬೇಕೆಂದು ಆಗ್ರಹಪೂರ್ವಕವಾಗಿ ಬಿನ್ನವಿಸಿಕೊಂಡರು. ಲಿಂಗರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವ ಶ್ರೀ. ಸಂ. ಶಿ. ಭೂಸನೂರಮಠ ಅವರು ಈ ಗ್ರಂಥವನ್ನು ಸಂಸ್ಕರಿಸಿ ಸಂಪಾದಿಸಲು ಅನುಮತಿಯನ್ನಿತ್ತರು. ರಾವೂರು ಸಿದ್ಧಲಿಂಗೇಶ್ವರಮಠ ಮತ್ತು ಆದವಾನಿಯ ಕಲ್ಲಮಠದ ಶ್ರೀ. ನಿ. ಪ್ರ ಸ್ವ. ಶ್ರೀ ಬೋಳಬಸವ ಮಹಾಸ್ವಾಮಿಗಳು ಈ ಕಾರ್ಯದಲ್ಲಿ ತಮ್ಮ ಅವಿಶ್ರಾಂತವಾದ ಸಹಾಯ ಸಲಹೆಗಳನ್ನು ನೀಡಿದರು. ಮತ್ತು ನಿವೃತ್ತ ಮುಖ್ಯಾಧ್ಯಾಪಕರಾದ ಶ್ರೀ ಕೆ. ಎಸ್. ಪಾಟೀಲರು ಕೈಬರೆಹದ ಪ್ರತಿಗಳನ್ನು ನೋಡಿ ಮುದ್ರಣಪ್ರತಿಯನ್ನು ಅತ್ಯಂತ ಶ್ರಮವಹಿಸಿ ಶ್ರದ್ಧೆಯಿಂದ ಸಿದ್ಧಮಾಡಿದರು. ಇವರೆಲ್ಲರ ಪರಿಶ್ರಮದ ಫಲವೇ ಮುದ್ರಿತವಾಗಿ ಪ್ರಕಾಶ ಹೊಂದಿರುವ ಲಿಂಗಲೀಲಾವಿಲಾಸಚಾರಿತ್ರ.

ತಮ್ಮ ಸಹಾಯ ಸಲಹೆಗಳನ್ನು ನೀಡಿದ, ಸಂಸ್ಕೃತ ಹಾಗೂ ಕನ್ನಡ ಸಾಹಿತ್ಯದಲ್ಲಿ ಅಭಿಜ್ಞರಾದ ಶ್ರೀ. ನಿ. ಪ್ರ. ಸ್ವ. ಬೋಳಬಸವ ಮಹಾಸ್ವಾಮಿಗಳು, ತಾಡ ಓಲೆಯನ್ನಿತ್ತು ಸಹಕರಿಸಿದ ಮಹನೀಯರು, ಸಂಪಾದಕರಾದ ಶ್ರೀ. ಸಂ. ಶಿ. ಭೂಸನೂರಮಠ ಮತ್ತು ಪ್ರತಿಯನ್ನು ಮಾಡಿದ ಶ್ರೀ. ಕೆ. ಎಸ್. ಪಾಟೀಲರು ಇತೋಪ್ಯಧಿಕವಾಗಿ ಕನ್ನಡ ಸಾಹಿತ್ಯಕ್ಕೆ ತಮ್ಮ ಸೇವೆಯನ್ನು ಸಲ್ಲಿಸುವ ಶಕ್ತಿಯನ್ನು ಪಡೆಯಲೆಂದು, ಅಂತಹ ಶಕ್ತಿಯನ್ನು ಶ್ರೀ ಶಿವಯೋಗೀಶ್ವರನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

ಲಿಂಗರಾಜ ಮುದ್ರಣಾಲಯದ ಒಡೆಯರಾದ ಶ್ರೀ. ಜೀಳಗಿ ಬಂಧುಗಳು ತಮ್ಮ ಹಲವಾರು ಕೆಲಸಗಳನ್ನು ಬದಿಗಿರಿಸಿ ಲಿಂಗಲೀಲಾವಿಲಾಸಚಾರಿತ್ರವನ್ನು ಅತ್ಯಂತ ಸುಂದರವಾಗಿ ಮುದ್ರಿಸಿ ಕೊಟ್ಟರು. ಇನ್ನೂ ಇಂತಹ ಅನೇಕ ಕಾರ್ಯ ಅವರಿಂದ ನೆರವೇರುವಂತೆ ಶ್ರೀಶಿವಯೋಗಿಗಳು ಆಶೀರ್ವದಿಸಲೆಂದು ಹೃತ್ಪೂರ್ವಕ ಹಾರೈಸುತ್ತೇವೆ.

ಶ್ರೀ ಮುರುಘಾಮಠ
ಹಾವೇರಿಪೇಟೆ, ಧಾರವಾಡ
ಮಾ. ಶು. ೨ ಸೋಮವಾರ
ದಿನಾಂಕ ೧-೧-೫೬

ಪ್ರಕಾಶಕರು

# ಲಿಂಗಲೀಲಾವಿಲಾಸಚಾರಿತ್ರ

## ಮುನ್ನುಡಿ

ಮಾನವನ ಜೀವನ ಕೋಟಿ ಮುಖ. ಒಂದೊಂದು ಜೀವನದ ಮುಖ ಒಂದೊಂದು ರೀತಿ. ಕೋಟಿಮುಖವಾಗಿ ಹರಿವ ಜೀವನಕ್ಕೆ ಹಲವಾರು ಹಾದಿ, ಕೆಲವೊಂದು ಗುರಿ. ಗೊತ್ತುಗುರಿಯ ಅರಿವಿಲ್ಲದೆ ಸಾಗಿರುವ ಜೀವನಗಳ ಸಂಖ್ಯೆ ಸಣ್ಣದಲ್ಲ. ಒಂದರಲ್ಲೊಂದು ಹೆಣೆದುಕೊಂಡು ತೊಡಕು ಒಡಕಾಗಿ, ಅಲುಕು ಮಲುಕಾಗಿರುವ ಗುರಿಗಳನ್ನು ಸಾಧಿಸಲು ಹವಣಿಸುತ್ತಿರುವ ಜೀವನಗಳ ಲೆಕ್ಕ ಕೋಟಿಯಾಚೆ. ನಿರ್ಧರವಾದ ಪರಮಧ್ಯೇಯವೊಂದನ್ನು ಮುಂದಿಟ್ಟುಕೊಂಡು ನಡೆದಿರುವ ಜೀವನಗಳ ಪ್ರಮಾಣ ಅತ್ಯಲ್ಪ. ಬಾಳುವೆಯ ಕೊನೆಯ ಅಂಕ ಸಾವೆಂಬ ನಿಸ್ಸಂಶಯದ ಬುದ್ಧಿ ಕೆಲವರಿಗೆ. ಐಹಿಕಜೀವನ ಆಮುಷ್ಮಿಕ ಜೀವನದ ಪೂರ್ವ ರಂಗವೆಂಬ ನಂಬುಗೆ ಹಲವರಿಗೆ. ಮರಣದಾಚೆ ಇಣುಕಿ ನೋಡುವುದೇ ಮೂರ್ಖ ತನವೆಂಬ ವಿಚಾರ ಹಲವಾರು ತಲೆಗಳಲ್ಲಿ. ಇಂದು ಮತ್ತು ಈ ಜೀವನದಲ್ಲಿಯೆ ಇಹಪರಗಳ ಸಮರಸ ಸಮ್ಮಿಲನವನ್ನು ಸಾಧಿಸುವುದೇ ಮಾನವ ಜೀವನದ ಚರಮ ಸಿದ್ಧಿಯೆಂದು ನಂಬಿ ನಡೆವವರು ಕೆಲವರು. ಮಾನವೀಯ ಮನದ ಚಾಂಚಲ್ಯ ಧ್ಯೇಯಗಳಲ್ಲಿ ಹಬ್ಬಿ ಒಮ್ಮೆ ಇದರಲ್ಲಿ ಮತ್ತೊಮ್ಮೆ ಅದರಲ್ಲಿ ಸುಳಿದು ಹರಿದಾಡುವ ಸಂಚಾರಿ ಜೀವನಗಳ ಸಂಖ್ಯೆಗೂ ಮಿತಿ ಇಲ್ಲ.

ಜೀವನದ ಚರಮಧ್ಯೇಯದ ಬಗೆಗಿರುವ ಅಜ್ಞಾನ ಅನಿಶ್ಚಯ, ಸಂಶಯ ಸಂಕರ, ವಿಪರೀತ ವಿಭಿನ್ನ ಕಲ್ಪನೆಗಳು, ವಿಚಾರ ವಿಶ್ವಾಸಗಳು ಮಾನವನ ಬುದ್ಧಿಯಷ್ಟು, ಹೃದಯದಷ್ಟು ಪುರಾತನ. ಮಾನವನ ಹೃದಯ ಮತ್ತು ಬುದ್ಧಿಗೆ ಎಂದೂ ತಿಳಿಯಬಾರದ ಈ ಸಮಸ್ಯೆ ಅಭೇದ್ಯವಾಗಿ, ಅತರ್ಕ್ಯವಾಗಿ, ಅವಿಜ್ಞೇಯ ವಾಗಿ ಉಳಿವುದೆಂಬುದು 'ಜ್ಞಾನನಾಸ್ತಿಕ'ರ ಮತ. ಹೃದಯ ಬುದ್ಧಿಗಳಿಗೆ ಅತೀತ

ವಾಗಿದ್ದರೂ ಸ್ವಾನುಭಾವದ ಸ್ವಯಂಪ್ರಭೆಯಲ್ಲಿ ಈ ಸಮಸ್ಯೆ ತಾನಾಗಿಯೆ ಪರಿಹಾರವಾಗುವುದೆಂಬುದು ಅನುಭಾವಿಗಳ ನಿಜನಿರ್ಣಯ.

ಭಿನ್ನಬುದ್ಧಿಯ ವಿಚ್ಛಿನ್ನವಿಚಾರಗಳ ಜಟಿಲತೆಯಿಂದ ಪಾರಾಗಿ ತನ್ನ ಗುರಿಯನ್ನು ಕಂಡುಕೊಳ್ಳುವುದು ಸಾಮಾನ್ಯ ಮಾನವರ ಬುದ್ಧಿಶಕ್ತಿಯನ್ನು ಮೀರಿದ ಮಾತು. ಅಂತೆಯೇ ಆಧ್ಯಾತ್ಮಿಕವಾದ ಈ ಪ್ರಶ್ನೆ ಧರ್ಮದ ಶ್ರದ್ಧೆಯ ಕೈಯಲ್ಲಿ ಸಿಕ್ಕಿ ಉತ್ತರವನ್ನು ಪಡೆದು ತೃಪ್ತನಾದಂತೆ ತೋರುತ್ತದೆ. ಇಲ್ಲಿ ವಿಚಾರಶಕ್ತಿ ವಿಶ್ವಾಸಭಕ್ತಿಗೆ ಎಡೆಗೊಟ್ಟು ಮಾಯವಾಗುತ್ತದೆ. ಧರ್ಮ ಸಂಪ್ರದಾಯಸಿದ್ಧವಾಗಿ, ಸಂಪ್ರದಾಯಪುಷ್ಟವಾಗಿ ಬುದ್ಧಿಯ ವಿಚಾರದಾಟವೆಲ್ಲ 'ಧರ್ಮಬಾಹಿರ'ವೆಂದು ಅದನ್ನು ಹೊರಗಿಟ್ಟು, ಅಂಧಪರಂಪರೆಯ ಸಾಮ್ರಾಜ್ಯವನ್ನು ನೆಲೆಗೊಳಿಸಿ ಮಾನವ ಜೀವನವನ್ನೇ ಕತ್ತಲೆಯ ಕೈಬೊಂಬೆ ಮಾಡಿ ಆಡಿಸಬಹುದು. ಹೀಗೆ ವಿಚಾರಾಂಧವಾಗಿ ಇಲ್ಲವೆ ವಿಶ್ವಾಸಾಂಧವಾಗಿ ಅಡಿ ಬಯಲಾಗುವ ಅಂಧಜೀವನಗಳ ಕೋಟಿಯನ್ನು ನೋಡಿ ಜೀವನದ ಪರಮಧ್ಯೇಯವನ್ನು ಕಂಡುಂಡ ಪರಂಜ್ಯೋತಿಸ್ವರೂಪರಾದ ಪ್ರಭುದೇವರು:

'ಆಯಿತ್ತೇ ಉದಯಮಾನ; ಹೋಯಿತ್ತೇ ಅಸ್ತಮಾನ.
ಅಳಿದವಲ್ಲಾ, ನೀರಲಾದ ನಿರ್ಮಿತಂಗಳೆಲ್ಲಾ!
ಕತ್ತಲೆಗವಿಯಿತ್ತು ಮೂಜಗ ಲೋಕದೊಳಗೆ.
ಇದಜಚ್ಛುಗವೇನು ಹೇಳಾ, ಗುಹೇಶ್ವರಾ?'

ಎಂದು ವಿಸ್ಮಯಗೊಂಡರು.

ಜೀವನದ ಸರ್ವಾಂಗವನ್ನು ಇನ್ನೂ ಸೂಕ್ಷ್ಮವಾಗಿ ಪರಿಶೀಲಿಸಿದರೆ ಅಜ್ಞಾನದ ತಿಮಿರ ಆವರಿಸಿರುವುದು ಬರಿಯ ಮಾನವನ ಧ್ಯೇಯವನ್ನಷ್ಟೇ ಅಲ್ಲ; ಧ್ಯೇಯದ ಸಿದ್ಧಿಗೆಂದು ಹಿಡಿದಿರುವ ಸಾಧನಮಾರ್ಗವನ್ನೂ ಈ ಕತ್ತಲೆಯ ವಿಸ್ತಾರ ಅಪ್ಪಿಕೊಂಡಿದೆ.

ಮಾನವನಿಗೆ ಸರ್ವ ಸುಖ ಬೇಕು, ಸಂಪತ್‌ಸಮೃದ್ಧಿ ಬೇಕು, ಕೀರ್ತಿ ಬೇಕು, ಅಧಿಕಾರ ಬೇಕು; ಸತ್ತ ಮೇಲೆ ಸ್ವರ್ಗ ಬೇಕು ಇಲ್ಲವೆ ಜೀವನ್ಮುಕ್ತಿಯ ನಿತ್ಯಾನಂದ ಬೇಕು. ಈ 'ಬೇಕು'ಗಳನ್ನು ಪಡೆಯಬೇಕಾದರೆ ಯಾವ ಹಾದಿಯನ್ನು ಹಿಡಿದು ಹೋಗುವುದು ಸುಗಮ ? ಯಾವ ಹಾದಿ ಸುರಕ್ಷಿತವಾಗಿ ನಮ್ಮನ್ನು ತಪ್ಪದೆ ವಾಂಛಿತಾರ್ಥದೆಡೆಗೆ ಕೊಂಡೊಯ್ಯಬಲ್ಲುದು ? ಬೇರೆ ಬೇರೆ ಊಂಗೆ

ದಾರಿ ಬೇರೆ ಬೇರೆ ಇರಬಹುದು. ಮತ್ತು ಬೇರೆ ಬೇರೆ ಕಡೆಯಿಂದ ಅದೇ ಊರಿಗೆ ಬರಲು ಹಲವು ಹಾದಿಗಳೂ ಇರಬಹುದು. ವ್ಯವಹಾರ ಹೊನ್ನನ್ನು ಗಳಿಸಿಕೊಟ್ಟರೆ ಯೌವನದ ವಿಭ್ರಮವಿಲಾಸ ಹೆಣ್ಣನ್ನು ಇಲ್ಲವೆ ಗಂಡನ್ನು ಒಲಿಸಿಕೊಡಬಹುದು. ಆದರೂ ವ್ಯವಹಾರವೊಂದೇ ಹೊನ್ನಿಗೆ ಹಾದಿಯಲ್ಲ, ವಿಲಾಸವೊಂದೇ ವಿಷಯದ ಮಾರ್ಗವಲ್ಲ. ಯಜ್ಞಯಾಗಾದಿಗಳಿಂದ ಸ್ವರ್ಗ ದೊರೆಯಬಹುದು. ವ್ರತ ನಿಯಮ ಉಪವಾಸ ತೀರ್ಥ ಯಾತ್ರೆ ಮುಂತಾದುವು ಸ್ವರ್ಗಕ್ಕೆ ರಾಜಮಾರ್ಗಗಳು, ಭಕ್ತಿಯ ಮಾರ್ಗ ಹಿಡಿದರೆ ಮುಕ್ತಿಯೂರಿಗೆ ಮುಟ್ಟಲೇ ಬೇಕು ಎಂದು ನಾನು ಹೇಳಿದರೆ 'ಜ್ಞಾನಾದೇವ ತು ಕೈವಲ್ಯಂ' ಎಂಬ ಶ್ರುತಿ ವಚನವನ್ನು ನೀವು ಕೇಳಿಲ್ಲವೇ ? ಎಂದು ಕೇಳುವ ಸಿಡಿಲಿನ ಆಕ್ಷೇಪ ನಿಮ್ಮದು. ಕಾಶಿಯಲ್ಲಿ ಸತ್ತು ನೆಟ್ಟಗೆ ಸ್ವರ್ಗಕ್ಕೆ ಹೋಗಬಹುದೆಂದು ಒಬ್ಬರು ನಿರ್ಧರಿಸಿದ್ದರೆ 'ಸ್ವರ್ಗಕಾಮೋ ಯಜೇತ' ಎಂಬುದು ಯಜ್ಞವಾದಿಗಳ ಅಚಲ ವಿಶ್ವಾಸ.

ವ್ಯಕ್ತಿಯ ಮಾತನ್ನು ಬದಿಗಿರಿಸಿ ಮಾನವ ಸಮಾಜದ, ಮಾನವ ಕುಲದ ಕ್ಷೇಮಲಾಭವನ್ನು, ಅಭ್ಯುದಯ ಪ್ರಗತಿ ಉದ್ಧಾರದ ಮಾತನ್ನೆತ್ತಿದರೆ ಇಲ್ಲಿಯೂ ನಡೆದಿರುವ ವಾದವಿವಾದಗಳ, ಕ್ರಿಯೆ ಪ್ರತಿಕ್ರಿಯೆಗಳ, ಕ್ರಾಂತಿ ಆಂದೋಲನಗಳ ಪ್ರಕ್ಷುಬ್ಧ ವಾತಾವರಣ ಜೀವನಪಥದ ಕತ್ತಲೆನ ಮತ್ತಷ್ಟು ಕರಾಳ ಸ್ವರೂಪವನ್ನು ಕೊಡುತ್ತದೆ. ಆರ್ಥಿಕ ಸುಧಾರಣೆಯೊಂದೇ ಮಾನವಕೋಟಿಯ ಕಲ್ಯಾಣಕ್ಕೆ ಮಾರ್ಗವೆಂದು ಅರ್ಥಶಾಸ್ತ್ರಜ್ಞರು ಹೇಳಿದರೆ, ಸಮತಾವಾದವೊಂದೇ ನೆಮ್ಮದಿಯ ರಾಜಮಾರ್ಗವೆಂದು ಸಮತಾವಾದಿಗಳು ಹೇಳುತ್ತಾರೆ. ಧರ್ಮ, ನೀತಿಯೇ ಭೂಮಿಯ ಮೇಲೆ ಸ್ವರ್ಗವನ್ನು ನೆಲೆಗೊಳಿಸಬಲ್ಲುದೆಂದು 'ಧಾರ್ಮಿಕ'ರು ವಾದಿಸಿದರೆ ಧರ್ಮವೇ ಮಾನವನ ಅಜ್ಞಾನಕ್ಕೆ, ಅಧೋಗತಿಗೆ ಕಾರಣವಾಗಿದೆ; ಬುದ್ಧಿ ಶಕ್ತಿಯ ಧ್ವಜದಂತಿರುವ ವಿಜ್ಞಾನವೇ ಮಾನವಕುಲವನ್ನು ದುಃಖದಿಂದ ವಿಮುಕ್ತ ಮಾಡುವ ಮಹಾಮಾರ್ಗವೆಂದು ವಿಜ್ಞಾನವಾದಿಗಳ ಅಬ್ಬರ. ಸಹಜೀವನದಿಂದ ವಿಶ್ವಶಾಂತಿ ಸಾಧ್ಯವೆಂದು ಕೆಲವರು ಸಾರಿದರೆ ಯುದ್ಧ, ಶಕ್ತಿಯೇ ಶಾಂತಿಯ ಶಾಶ್ವತಾಧಾರವೆಂದು ಆರ್ಭಟಿಸುವವರು ಹಲವರು!

ಇಂತು ವಿಭಿನ್ನ, ವಿಷಮ, ವಿರುದ್ಧ, ವಿಸಂಗತವಾದ ನೂರೆಂಟು ವಾದಗಳ ಹೊಡೆತದಿಂದ ನುಚ್ಚುನೂರಾದ ಸಾಮಾನ್ಯಮಾನವನ ಬುದ್ಧಿ ದಿಕ್ಕುಗೆಟ್ಟು ಅವಶವಾಗಿ ನೂರಾರು ಕಡೆ ಮಾನವನನ್ನು ನೂಕಿ ಗತಿಗೆಡಿಸುತ್ತಿದೆ. ನಿಷ್ಠೆ ವಿಶ್ವಾಸವಿಲ್ಲದ ಮಾನವನ ಹೃದಯ ನೆಮ್ಮದಿ, ಕ್ಷೇಮ, ಶಾಂತಿಯ ಸೀಮೆಯಿಂದ ದೂರ ದೂರವಾಗುತ್ತ ಓಡಿ ಅಶಾಂತಿಯ ಕತ್ತಲೆಗಡಲಲ್ಲಿ ಮುಳುಗಿ ಏಳುತ್ತಿದೆ.

ಅಜ್ಞಾನತಿಮಿರದ ಸಾಮ್ರಾಜ್ಯ ಇಲ್ಲಿಗೇ ಮುಗಿಯಲಿಲ್ಲ. ತಿಳಿವೆನೆಂಬ ಬುದ್ಧಿಯನ್ನು ಸರ್ವತೋಮುಖವಾಗಿ ಆವರಿಸಿ ಅದರ ವಿಸ್ತಾರ ಹರಡುತ್ತ ಹೋಗುತ್ತದೆ. ಬುದ್ಧಿಯ ಪ್ರಶ್ನೆಗಳ ಸಂಖ್ಯೆ ಕೋಟಿಗುಣಿತವಾಗುತ್ತವೆ. ಉತ್ತರಗಳ ಲೆಖ್ಖ ಕಡಮೆಯಾಗುತ್ತ ಹೋಗಿ ದೊರೆತ ಉತ್ತರಗಳೂ ಭ್ರಾಂತಿಯ ಮರಿಗಳಾಗಿ, ಸಂದೇಹದ ಶಿಶುಗಳಾಗಿ ಮಸುಕು ಮಸುಕಾಗುತ್ತವೆ. ತಾನು ಗಳಿಸಿದೆನೆಂಬ ಬುದ್ಧಿಯ ಜ್ಞಾನ ಅಜ್ಞಾನದ ಕರಗಹಿಯಾದ ಕಾಯಾಗಿ ಪರಿಣಮಿಸುತ್ತದೆ. 'ತಮಂಧ ಘನ, ಜ್ಯೋತಿ ಕಿರಿದೆನ್ನಬಹುದೇ ?' ಎಂಬ ಪ್ರಶ್ನೆಗೆ 'ತಮಂಧ ಮಹಾಘನ, ಬುದ್ಧಿಯ ಕದಿರು ಬೆಳಗು ಅತ್ಯಂತ ಕಿರಿದು,' ಎಂದು ಉತ್ತರ ಕೊಡಬೇಕಾಗುತ್ತದೆ. ಕಣ್ಣು ಮುಚ್ಚಿ ಅತ್ತಿಯ ಹಣ್ಣು ತಿಂದಂತಿದೆ ಮಾನವನ ಬಾಳುವೆ. ಹಣ್ಣಿನ ರಸಕ್ಕಿಂತ ಹಣ್ಣಿನಲ್ಲಿ ತುಂಬಿರುವ ಹುಳುಗಳ ಅಪಥ್ಯರಸವೇ ಮಾನವ ಜೀವನದ ವಿಷಮಾಹಾರವಾದಂತಿದೆ. ಬದುಕಬೇಕೆಂಬಾಶೆ ಹಣ್ಣನ್ನು ತಿಂದು, ಹುಳು ಹುಪ್ಪಡಿಗಳನ್ನು ನುಂಗಿ, ಕತ್ತಲೆಯನ್ನು ಕುಡಿದು ಮರ್ತ್ಯಜೀವನದ ಯಾತ್ರೆ ಮಾಡುತ್ತ, ಕೊನೆಗೊಮ್ಮೆ ಶಾಶ್ವತವೆನಿಸುವ ಅಸ್ತಮಾನದಲ್ಲಿ ಮಾಯವಾಗುತ್ತದೆ. ಉದಯಮಾನದ ಪೂರ್ವದ ಕತ್ತಲೆ ಅಸ್ತಮಾನದ ಕತ್ತಲೆಯಲ್ಲಿ ಬೆರೆದು ಕಗ್ಗತ್ತಲೆಯಾಗಿ ಜೀವನದೊಡನೆ ಜೀವನಸಮಸ್ಯೆಯನ್ನು ಗರ್ಭೀಕರಿಸಿಕೊಂಡು ಮೆರೆಯುತ್ತದೆ.

ಮಾನವನ ಬುದ್ಧಿಯನ್ನೆಲ್ಲ ವಿಶ್ವಾಂಧಕಾರ ವ್ಯಾಪಿಸಿದ್ದರೂ 'ಅಂಧಕಾರವಿದೆ' ಎಂಬರಿವು ಮಾನವನಿಗಿದೆ. ಇದೇ ಮಾನವನ ಹಿರಿಮೆ. ಎಲ್ಲ ಪ್ರಾಣಿಗಳಿಂದ ಮಾನವನನ್ನು ಬೇರ್ಪಡಿಸಿ ಆತನಿಗೆ ವಿಶ್ವಪ್ರಪಂಚದಲ್ಲಿ ವಿಶೇಷವಾದ ಒಂದು ಸ್ಥಾನವನ್ನು ಕಲ್ಪಿಸಿಕೊಡುವುದು ಮಾನವನ ಈ ಬುದ್ಧಿ, ಈ ಅರಿವು. ಬೆಳಗುವ ದೀಪ ತನ್ನ ಪ್ರಭಾಶಕ್ತಿಗನುಗುಣವಾಗಿ ಕತ್ತಲೆಯನ್ನು ಬೆಳಗಬಹುದು. ಆದರೆ ತನ್ನಿರವಿನರಿವು, ತನ್ನ ಪ್ರಕಾಶದರಿವು, ತನ್ನ ಬೆಳಗಿನ ಬಹಿರ್ವಲಯವನ್ನು ಮುತ್ತಿರುವ ಕತ್ತಲೆಯರಿವು ಜಡದೀಪಕ್ಕಿಲ್ಲ. ಜ್ಞಾನವನ್ನು ಕಾಣಬಲ್ಲ ಬುದ್ಧಿಯ ಅರಿವಿಗೆ ಅಜ್ಞಾನದ ಕತ್ತಲೆಯನ್ನು ನೋಡಬಲ್ಲ ಕಣ್ಣಿದೆ. ಅಂತೆಯೇ ಬುದ್ಧಿಯ ಬೆಳಗಿಸಿಂದ ಹರಿಯದೆ, ಇದಿರಿಟ್ಟು ತೋರುವ ಈ ಅಜ್ಞಾನದ ಸ್ವರೂಪವೆ ಬೇರೆ. ಅಜ್ಞಾನವೆಂದರೆ ಜ್ಞಾನದ ಅತ್ಯಂತಾಭಾವವಲ್ಲ; ಜ್ಞಾನಕ್ಕೆ ಅತ್ಯಂತ ವಿರೋಧಿಯಾದ ಶಕ್ತಿಯೂ ಅಲ್ಲ ಜ್ಞಾನಸೀಮೆಯ ಅತ್ಯಂತ ನಿಕಟವರ್ತಿಯಾದ ಗಡಿನಾಡು ಈ ಅಜ್ಞಾನ. 'ಮರಹನರಿವೆ ಮೊದಲರಿವನರಿವೆ ಬಳಿಕ...." ಎಂದು ತಮ್ಮನುಭವವನ್ನು ಬೋಧಿಸುವ ನಿಜಗುಣಶಿವಯೋಗಿಗಳ ವಚನದಲ್ಲಿ ಎಷ್ಟೊಂದು ಸತ್ಯಾರ್ಥ ತುಂಬಿ ಸೂಸುತ್ತಿದೆ! ಅರಿವನರಿವ ಮುನ್ನ ಮರಹರನರಿಯಬೇಕು. ಜ್ಞಾನಸಿದ್ಧಿಗೆ ಅಜ್ಞಾನಸಿದ್ಧಿ ಪೂರ್ವರಂಗ. ಅಜ್ಞಾನದರಿವೇ ಜ್ಞಾನಸಾಮ್ರಾಜ್ಯದ ಮಹಾದ್ವಾರ.

ಡೆಲ್ಫಿಯಲ್ಲಿ ದೇವರು ಹೇಳುವವರು: 'ಗ್ರೀಕ್ ದೇಶದಲ್ಲಿ ಎಲ್ಲರಿಗಿಂತ ನೀನೆ ಜಾಣನೆಂದು ಹೇಳುತ್ತಾರೆ. ಇದು ಹೇಗೆ?' ಎಂದು ಪ್ರಶ್ನೆ ಕೇಳಿದವರಿಗೆ ಸಾಕ್ರೆಟಿಸ್‌ನು: 'ಅವರು ಹಾಗೆ ಹೇಳುವುದು ನಿಜವಾದ ಮಾತು. ಗ್ರೀಕರಲ್ಲೆಲ್ಲ ನಾನೇ ಜಾಣ. ಯಾಕಂದರೆ ತಾವು ಎಲ್ಲವನ್ನು ತಿಳಿದವರೆಂಬ ಭ್ರಾಂತಿ ಅವರಿಗಿದೆ. ಏನೂ ತಿಳಿದಿಲ್ಲವೆಂಬ ಅರಿವು ನನಗಿದೆ. ಇದೇ ನನ್ನ ಹಿರಿಯ ಜಾಣತನದ ಕುರುಹು,' ಎಂದು ಕೊಟ್ಟ ಉತ್ತರದಲ್ಲಿ ಜ್ಞಾನದ ಪೂರ್ವಗಾಮಿ ಅಜ್ಞಾನವೆಂಬ ಸತ್ಯದ ಸಾರಾರ್ಥವಿದೆ.

ಮೂರು ಲೋಕದೊಳಗೆ ಕವಿದ ಕತ್ತಲೆಯನ್ನು ಕಂಡು ಲೋಕಕ್ಕೆ ಸಾರಿದರು ಪ್ರಭುದೇವರೇ ಮೊದಲಾದ ದಿವ್ಯಾನುಭಾವಿಗಳು. ಕತ್ತಲೆ ಕಾಣತೊಡಗಿದರೂ ಬುದ್ಧಿಯ ಅಲಸ, ಭಯ, ಉದಾಸೀನ ಮುಂತಾದ ಭಾವದಿಂದ ಹತರಾಗಿ, ಅದಕ್ಕೆ ಓರೆಯಾಗಿ ಇಲ್ಲವೆ ಕಣ್ಣುಮುಚ್ಚಿ ಪರಿಭ್ರಮಣಕ್ಕೊಳಗಾದರು ಸಾಮಾನ್ಯ ಮಾನವರು ಮತ್ತು ಅಸಾಮಾನ್ಯ ಪಂಡಿತರು. ಕಣ್ಣುಮುಚ್ಚಿ ನೆಲದಲ್ಲಿ ತಲೆ ತಗ್ಗಿಸಿದರೆ ಬಂದ ಸಂಕಟ ಬಯಲಾಗುವುದೆಂದು ನಂಬಿರುವ ಆಸ್ಟ್ರಿಚ್ ಹಕ್ಕಿಯಂತಿದೆ ಮಾನವನ ವಿಚಾರಸರಣಿ.

ಜೀವನದ ಈ ವಿಷಮಾವಸ್ಥೆಯಲ್ಲಿ ಕೈಕಾಲು ಬಿಟ್ಟು ಕಂಗೆಟ್ಟು, ಕ್ಷಣಹೊತ್ತು ಮಿಂಚಿ ಮಾಯವಾಗುವ ಮಾನವಜನ್ಮ ವ್ಯರ್ಥವೆಂದು ಬಗೆದು ನಿರಾಶೆಯ ನೆಳಲಲ್ಲಿ ನಿಸ್ಸಾರ ಜೀವನವನ್ನು ನುಗಿಸುತ್ತಿರುವ ಮಾನವ ಪ್ರಾಣಿಗೆ ಆಶೆಯ ಹೊಂಗಿರಣಗಳೂ ನೂರಾರು ಕಡೆಯಿಂದ ನುಗ್ಗುತ್ತಿವೆ. ರಭಸದಿಂದ ಮುಂದೆ ಮುಂದೆ ಸಾಗಿರುವ ಇಂದಿನ ವಿಜ್ಞಾನ ಸಾವಿರಮುಖವಾಗಿ ಹರಿದು ಜ್ಞಾನಸಾಮ್ರಾಜ್ಯವನ್ನು ಸೂರೆಗೊಳ್ಳುವ ತವಕದಲ್ಲಿದೆ; ಸರ್ವಸುಖದ ತವರಾದ ಸ್ವರ್ಗವನ್ನೆ ನೆಲದ ಮೇಲೆ ತಂದಿಡುವ ಹವಣಿಕೆಯಲ್ಲಿದೆ; ವಿಶ್ವಶಕ್ತಿಗಳನ್ನೆ ವಶಮಾಡಿಕೊಂಡು ಮಾನವನನ್ನು 'ವಿಶ್ವೇಶ'ನ ಪದವಿಯಲ್ಲಿ ಕುಳ್ಳಿರಿಸುವ ಕುತೂಹಲದಲ್ಲಿದೆ. ನಯಶಾಸ್ತ್ರ, ಅರ್ಥಶಾಸ್ತ್ರ, ಭೌತ ಶಾಸ್ತ್ರ, ರಸಾಯನ ಶಾಸ್ತ್ರ, ಭೂಗೋಳ ಖಗೋಳ ಶಾಸ್ತ್ರ, ಪ್ರಾಣಿ-ಸಸ್ಯ ಶಾಸ್ತ್ರ, ವೈದ್ಯ ಯಂತ್ರ ತಂತ್ರ, ಮನಃಶಾಸ್ತ್ರ, ಶರೀರಶಾಸ್ತ್ರ—ವಿಜ್ಞಾನದೃಷ್ಟಿಯ ಸೃಷ್ಟಿಗಳಾದ ಇಂತಹ ನೂರಾರು ಶಾಸ್ತ್ರಗಳ ಸಂಖ್ಯೆ ಬೆಳೆಯುತ್ತ ನಡೆದಿದೆ. ಈ ಶಾಸ್ತ್ರಗಳ ಶಾಖೆ ಉಪಶಾಖೆಗಳೂ ಹಬ್ಬುತ್ತ ನಡೆದಿವೆ. ವಿಜ್ಞಾನದ ಅದ್ಭುತ ವಿಜಯ ಮಾನವನ ಬುದ್ಧಿಯನ್ನೆ ದಂಗುಬಡಿಸುತ್ತಿದೆ. ವಿಶ್ವದ ಗರ್ಭವನ್ನು ಭೇದಿಸಿ ಜ್ಞಾನವನ್ನು ಶೋಧಿಸುತ್ತಿರುವ ವಿಜ್ಞಾನಿಗೆ ಅಶಕ್ಯ, ಅಸಾಧ್ಯವೆಂಬ ಶಬ್ದ

ಗಳ ಪರಿಚಯವೇ ಇದ್ದಂತೆ ತೋರುವುದಿಲ್ಲ. ಅಂತೆಯೆ ವಿಜ್ಞಾನವೇ ಇಂದಿನ ಮಾನವನ 'ಧರ್ಮ'ವಾದಂತಿದೆ.

ಆದರೆ ನಿತ್ಯ ನಿತ್ಯ ಅತ್ಯದ್ಭುತ ಪವಾಡಗಳನ್ನು ರಚಿಸುತ್ತಿರುವ ಈ 'ವಿಜ್ಞಾನ ಧರ್ಮ' ಮಾನವ ಜೀವನವನ್ನೆ ಯಂತ್ರವಾಗಿಸಿದೆ. ನಿಜ, ಸಹಜ, ನಿಸರ್ಗ, ಸತ್ಯ, ಸತ್ತ್ವ, ಆರಾಮು, ಶಾಂತಿಯು ಮಾತಿಲ್ಲ ಯಂತ್ರಸುಖದ ಯಂತ್ರಜೀವನದಲ್ಲಿ. ಕೋಟಿಕೋಟಿ ಸುಖಸೌಕರ್ಯ ಸೌಲಭ್ಯಗಳನ್ನು, ಭೋಗವಿಲಾಸಸಾಧನ ಸಾಮಗ್ರಿಗಳನ್ನು ಜಡಚೈತನ್ಯಶಕ್ತಿಗಳು ವಿಜ್ಞಾನಿಯ ಇಚ್ಛೆಯಂತೆ ಮಾನವನಿಗೆ ನೀಡುತ್ತಿದ್ದರೂ ಈ ಯಂತ್ರ ತಂತ್ರದ ಸುಖ ಮಾನವನ ಆತ್ಮಕ್ಕೆ ಪಥ್ಯಕಾರಿಯಲ್ಲ. ಸದುಹೃದಯ, ಸದ್ಬುದ್ಧಿಯಿಲ್ಲದ ಮಾನವನ ಕೈಯಲ್ಲಿ ಸಿಕ್ಕ ವಿಜ್ಞಾನ ಮಾನವನ ಪ್ರಲಯಶಕ್ತಿಯಾಗಿ ಪರಿಣಮಿಸಿದೆ. 'ರಕ್ಕಸಿ ಬಾಣತಿಯಾದರೆ ಮಕ್ಕಳಿಗಿನ್ನೆಂತೋ ?" ಎಂಬ ಪರಿಸ್ಥಿತಿಯೊದಗಿದೆ ಮಾನವಕುಲಕ್ಕೆ.

ಮಾನವನ ಭಿನ್ನಬುದ್ಧಿಯ ವಿಜ್ಞಾನಕ್ಕೆ 'ಪೂರ್ಣ'ದ ಕಲ್ಪನೆಯಿಲ್ಲ, ಅರಿವಿಲ್ಲ, ಅನುಭವವಿಲ್ಲ. ತನ್ನಂತರಂಗವನ್ನು ಬೆಳಗಿ ವಿಶ್ವಾಂಧಕಾರವನ್ನೆಲ್ಲ ಕೆಡೆನೂಕಿ ಸ್ವಯಂಪ್ರಭೆಯಿಂದ ವಿಶ್ವವನ್ನೇ ದೀಪಿಸುವ 'ಸಾತಿಶಯದ ನಿರುಪಾಧಿಕ ನಿರ್ಮಲ'ವಾದ ಪರಂಜ್ಯೋತಿಯ ಪರಿಚಯವಿಲ್ಲ ದ್ವೈತಜ್ಞಾನದ ಬುದ್ಧಿಗೆ. ಮಾನವನೇ ಪ್ರಯೋಗಶಾಲೆಯಾಗಿ, ನಿಜಾಂತರಂಗದ ಸಂಶೋಧನೆ ನಡೆದು, ಮಾನವನ ಪರಮಾದ್ಭುತ ದಿವ್ಯ ಸ್ವರೂಪವನ್ನು ಸಾಧಿಸಿದರೆ ವಿಜ್ಞಾನಿ ತತ್ತ್ವಜ್ಞಾನಿಯಾಗಿ, ತತ್ತ್ವದರ್ಶಿಯಾಗಿ, ಆತ್ಮಕಲ್ಯಾಣದ ಪಾರಮ್ಯವನ್ನು ಮುಟ್ಟಿ ವಿಶ್ವಕಲ್ಯಾಣವನ್ನು ಮಾಡಬಲ್ಲ.

ಹಳದೆಲ್ಲ ಕೊಳೆಯೆಂಬ ಮನೋಭಾವ ವಿಜ್ಞಾನಿಗೆ ಹೊಲ್ಲ. ಹೊಸತೆಲ್ಲ ಹೊನ್ನೆಂಬ ಭಾವವೂ ಸತ್ಯಾರ್ಥಿಗೆ ಸಲ್ಲದು. ಹಿಂದಿನ ಹಿರಿಯರ ವಿಜ್ಞಾನ ಬಾಲಿಶ ವಿಜ್ಞಾನವಿರಬಹುದು. ಆದರೆ ಅವರು ಹಲವಾರು ಕ್ಷೇತ್ರಗಳಲ್ಲಿ ದುಡಿದು ನಿತ್ಯೋಜ್ವಲವಾದ ಸತ್ಯಜ್ಞಾನದ ಭಾಂಡಾರವನ್ನು ಮಾನವಸಂತತಿಗೆ ನೀಡಿದ್ದಾರೆಂಬ ಮಾತು ನಾವೆಂದೂ ಮರೆಯುತಕ್ಕುದಲ್ಲ. ಬಾಯಿಬಲ್ ಭಗವದ್ಗೀತೆ ಮುಂತಾದ ಗ್ರಂಥಗಳಲ್ಲಿ, ದೇಶದೇಶಗಳಲ್ಲಿ ಆಗಿ ಹೋದ ಅನುಭಾವಿಗಳ 'ಮಾತೆಂಬ ಜ್ಯೋತಿರ್ಲಿಂಗ'ಗಳಲ್ಲಿ ವಿಜ್ಞಾನಿ ಎಂದೂ ಕಾಣಬಾರದ ಸತ್ಯಜ್ಞಾನದ ಪರಮಸಂಪದವಿದೆ. ವಿಜ್ಞಾನಿಯ ಗಮನವಿನ್ನೂ ಈ ಕಡೆ ಹರಿದಿಲ್ಲ. ತನಗರ್ಥವಾಗದ ಈ ಜ್ಞಾನ ಸಂಪತ್ತಿಯಿಂದ ಯಾವ ಪ್ರಯೋಜನವೂ ಇಲ್ಲವೆಂಬ ಭಾವನೆ ವಿಜ್ಞಾನಿಗೆ. 'ತಿಳಿವು

ದಿಲ್ಲ, ಆದ್ದರಿಂದ ಅರ್ಥವಿಲ್ಲ'ವೆಂಬ ಬುದ್ಧಿ ಸಂಕುಚಿತ ಬುದ್ಧಿ. ಕಣ್ಣಿಗೆ ಕಾಣದ ವಸ್ತುವಿನ ಅಸ್ತಿತ್ವವನ್ನು ಅಲ್ಲಗಳೆಯಲಿಕ್ಕಾದೀತೆ? ನನ್ನ ಕಿವಿ ಕೇಳದ ಇಂಪು ನಿಮ್ಮ ಕಿವಿಗೂ ಕೇಳದೆಂದು ವಾದಿಸುವುದು ಬುದ್ಧಿವಂತರ ಮಾತಲ್ಲ. ಸಾಪೇಕ್ಷ ವಾದ ಇಲ್ಲವೆ 'ಕ್ವಾಂಟಮ್' ವಾದ ನನ್ನ ಬುದ್ಧಿಗೆ ಗೃಹ್ಯವಾಗದಿದ್ದರೆ, ಅವು ಸುಳ್ಳು ಎಂಬ ಸಿದ್ಧಾಂತಕ್ಕೆ ಒರುವ ಅಧಿಕಾರ ನನ್ನ ತಲೆಗಿಲ್ಲ.

'ಕಾಯುವೆಂಬ ಕದಳಿಯನ್ನು ಹೊಕ್ಕು ಸುಳಿದಾಡಬಲ್ಲ ಮಹಿಮ'ರಾದ ಜಾಗತಿಕ ಅನುಭಾವಿಗಳು ಕಾಯುವನ್ನೆ ಪ್ರಯೋಗಶಾಲೆ ಮಾಡಿ, ನಿಜಾನುಭೂತಿಯಲ್ಲಿ ನಿಂದು, ತಮ್ಮ ಸತ್ಯಜ್ಞಾನದಿಂದ ಮಾನವ ಜನ್ಮದ ಕತ್ತಲೆಯನ್ನೆಲ್ಲ ಕಳೆದೊಗೆದು, ದಿವ್ಯಪರಂಜ್ಯೋತಿಯಲ್ಲಿ ದಿವ್ಯ ಜೀವನಲೀಲಾವಿಲಾಸವನ್ನಾಡಿ, ನಿಜಾನಂದ ಸಾಮ್ರಾಜ್ಯದ ಸಾರ್ವಭೌಮರಾಗಿ ಶೋಭಿಸುತ್ತಿದ್ದಾರೆ. 'ಮರ್ತ್ಯಕ್ಕೆ ಮಹವ ತಂದ' ಈ ಮಹಾಮಹಿಮರ ಜೀವನಯಾತ್ರೆ ದಿವ್ಯದತ್ತ ಸಾಗಿ ದಿವ್ಯವನ್ನು ಸಂಪಾದಿಸಿದ ಮಹಾಯಾತ್ರೆ. ಇಂತಹ ಸ್ವಯಂಜ್ಯೋತಿಗಳ ಪ್ರಜ್ವಲಿಸುವ ವಚನಗಳು ಮಾನವ ಜೀವನದ ಪರಮರಹಸ್ಯವನ್ನು ಪ್ರಕಾಶಪಡಿಸಿ ಮಾನವ ಕುಲಕೋಟಿಯ ವಿಶ್ವತೋಮುಖವಾದ ಕಲ್ಯಾಣಕ್ಕೆ ಮಾರ್ಗಮಾಡಿಕೊಟ್ಟಿವೆ.

ಹದಿನೈದನೆಯ ಶತಮಾನದಲ್ಲಿದ್ದ ಕಲ್ಲಮಠದ ಪ್ರಭುದೇವರ ಲಿಂಗಲೀಲಾವಿಲಾಸಚಾರಿತ್ರ 'ಮರಣವ ಗೆಲಿದ ಮಹಾಂತ'ರಾದ ದಿವ್ಯಾನುಭಾವಿಗಳ ಅನುಭವವನ್ನು ಒಂದು ಕ್ರಮದಲ್ಲಿ ಹೆಣೆದು ಸಕಲಜೀವಾತ್ಮರ ಕಲ್ಯಾಣವಾಗಲೆಂದು ಜಗತ್ತಿಗೆ ನೀಡಿದೆ. ಲಿಂಗಲೀಲಾವಿಲಾಸಚಾರಿತ್ರದ ಭಾಷೆ ಕನ್ನಡ. ಆದರೆ ಅಲ್ಲಿ ಪ್ರಜ್ವಲಿಸಿ ತೊಳಗಿ ಬೆಳಗುವ ದಿವ್ಯ ಭಕ್ತಿ, ದಿವ್ಯಜ್ಞಾನ, ದಿವ್ಯಾನಂದದ ಅನುಭವ ಕೇವಲ ಕನ್ನಡಿಗರ ಸೊತ್ತಲ್ಲ. ನಿಜವನರಿದು ಅನುಭವಿಸುವೆನೆಂಬ ಮಾನವ ಕೋಟಿಯ ದಿವ್ಯಸಂಪದವದು. ವಿಶ್ವನಾಥನ ದರ್ಶನ ಬೇಕಾದರೆ ಕಾಶಿಗೆ ಹೋಗಬೇಕು. ವಿರೂಪಾಕ್ಷನ ದರ್ಶನ ಬೇಕಿದ್ದರೆ ಹಂಪೆಗೆ ಬರಬೇಕು. ಜ್ಞಾನದ ತೃಷ್ಣೆ, ಕಾವ್ಯಾನಂದದ ಹಸಿವಿನಿಂದ ಸಂಸ್ಕೃತ, ಆಂಗ್ಲ, ಗ್ರೀಕ್, ಲ್ಯಾಟಿನ್, ಜರ್ಮನ್ ಫ್ರೆಂಚ್ ಮುಂತಾದ ಜಗತ್ತಿನ ಭಾಷೆಗಳ ಅಭ್ಯಾಸವನ್ನು ನಾವು ಮಾಡುತ್ತಿಲ್ಲವೆ? ಅಂತೆಯೆ ಕನ್ನಡ ಸಾಹಿತ್ಯದಲ್ಲಿ ನಿತ್ಯೋಜ್ವಲವಾಗಿ ಬೆಳಗುವ 'ಕಾವ್ಯ'ವನ್ನ ಸತ್ಯಾನಂದಭರಿತವಾದ 'ಶಿವಾನುಭಾವ'ವನ್ನು ಪಡೆಯಬೇಕಾದರೆ ಕನ್ನಡ ಭಾಷೆಯನ್ನು ಕಲಿಯಬೇಕು. ನಮ್ಮ ಅಭಿಪ್ರಾಯದಂತೆ ಲಿಂಗಲೀಲಾವಿಲಾಸ ಚಾರಿತ್ರದಂತಹ ಕನ್ನಡ ಗ್ರಂಥಗಳ ಅಭ್ಯಾಸವನ್ನು ಕೇವಲ ಕನ್ನಡಿಗರಗಷ್ಟೇ ಅಲ್ಲ, ಸ್ವಾನುಭಾವದ ಪ್ರಸನ್ನ ಮತ್ತು ಪ್ರಸ್ಫುಟವಾದ ಪ್ರಕಾಶವನ್ನು ಪಡೆಯಲಿಚ್ಛಿಸುವವ

ರೆಲ್ಲ ಮಾಡಬೇಕು. ಹೀಗಳೆವ ಮನಃಪ್ರವೃತ್ತಿಗೆ 'ಭೂಮ'ದ ದರ್ಶನವೆಂದೂ ಇಲ್ಲ. ಭಾಷೆ ಯಾವುದೇ ಇರಲಿ, ಸತ್ಯಜ್ಯೋತಿ ಹುದುಗಿದ ಸಾಹಿತ್ಯವೆಲ್ಲ ಜಗನ್ಮಾನ್ಯ, ಜಗತ್ಪೂಜ್ಯ.

ಲಿಂಗಲೀಲಾವಿಲಾಸಚಾರಿತ್ರವನ್ನು ಬರೆದವರು ಕಲ್ಲಮಠದ ಪ್ರಭುದೇವರು ಎಂಬುದಕ್ಕೆ ಈ ಗ್ರಂಥವೇ ಪ್ರಮಾಣ. ಲಿಂಗಲೀಲಾವಿಲಾಸಚಾರಿತ್ರದ ಪೀಠಿಕಾ ಸೂತ್ರದಲ್ಲಿ ಬರುವ ಈ ಹೇಳಿಕೆ:

> ೧. ಆ ಷಟ್ಸ್ಥಲ ಮಾರ್ಗವೇ ಲಿಂಗಲೀಲಾವಿಲಾಸಚಾರಿತ್ರವೆಂದು ನಿರೂಪಿಸಿದ ಗುರುವಚನವಿಡಿದು, ಗುರುಪ್ರಸಾದಜ್ಞಾನದಿಂದ ವಿದ್ಯಾನಗರದ ಕಲ್ಲಮಠದ ಪ್ರಭುದೇವಾರ್ಯನು ಪುರಾತನರ ವಚನಂಗಳಲ್ಲಿಯೂ ಸಾರವಾದ ವಚನಂಗಳ ತೆಕ್ಕೊಂಡು ಷೋಡಶ ಸ್ಥಲ ಪರಿಕ್ರಮದಿಂದ ಸೇರಿಸಿ ಅರ್ಥೈಸಿದ ವಚನಾಗಮವಿದು.
>
> ಲಿಂ. ಲೀ. ವಿ. ಚಾ. ಪು. ೩

ಮತ್ತು ಗ್ರಂಥಸಮಾಪ್ತಿಯಲ್ಲಿ ಬರುವ,

> ೨. ಈ ಲಿಂಗಲೀಲಾವಿಲಾಸಚಾರಿತ್ರವೇ ಶರಣಚಾರಿತ್ರವೆಂದು ಪುರಾತರ ವಚನಗಳಿಂದ ಕಾಣಲಾಯಿತ್ತಾಗಿ, ಮಿಕ್ಕಿನ ವೇದಾಗಮಂಗಳು ಜಡ್ಡುಗೊಜಡೆಂದು ಅವ ಬಿಟ್ಟು, ಪುರಾತರ ವಚನ [1]ಏಳುನೂಱ ಎಪ್ಪತ್ತ[1] ತೆಗೆದುಕೊಂಡು, ಷೋಡಶಸ್ಥಲ ಪರಿಕ್ರಮದಿಂದ ಸೇರಿಸಿ, ವ್ಯಾಖ್ಯಾನವ ಮಾಡಿದ [2]ವಿದ್ಯಾನಗರದ ಕಲ್ಲಮಠದ ಪ್ರಭುದೇವಾರ್ಯನು[2]. ಇದಱ ನಾಮ ಲಿಂಗಲೀಲಾಸಚಾರಿತ್ರ.
>
> ಲಿಂ. ಲೀ. ವಿ. ಚಾ. ಪು. ೪೧೯

ಈ ಹೇಳಿಕೆ ಲಿಂಗಲೀಲಾಸಚಾರಿತ್ರವನ್ನು ಬರೆದವರು ಕಲ್ಲಮಠದ ಪ್ರಭುದೇವಾರ್ಯರು ಎಂಬ ಸಂಗತಿಯನ್ನು ಸಂದೇಹಕ್ಕೆ ಎಳ್ಳಷ್ಟು ಎಡೆಗೊಡದೆ ಸುಸ್ಪಷ್ಟವಾಗಿ ಸಾರುತ್ತವೆ. ಮತ್ತು ಈ ಹೇಳಿಕೆಗಳೆ ಕಲ್ಲಮಠದ ಪ್ರಭುದೇವರ ವಾಸಸ್ಥಳ

೧ ಏಳನೂಱೆಪ್ಪತ್ತೈದ (ಹು.)
೨ ಕಲ್ಲಮಟದ ಪ್ರಭುದೇವಾರ್ಯರು (ಎ.)

ವಿಜಯನಗರವೆಂದು ಪ್ರಸಿದ್ಧವಿರುವ ವಿದ್ಯಾನಗರವೆಂಬುದನ್ನು ಸ್ಪಷ್ಟಪಡಿಸುತ್ತವೆ. ಅಲ್ಲಮಪ್ರಭುದೇವರ ಮಂತ್ರಗೋಪ್ಯವೆಂಬ ಗ್ರಂಥಕ್ಕೆ ಟೀಕೆ ಬರೆದ 'ಕಲ್ಲಮಠದ ಪ್ರಭು' ಇದೇ ವಿದ್ಯಾನಗರದ ಕಲ್ಲಮಠದ ಪ್ರಭುದೇವರೆಂದು ಇತಿಹಾಸ ನಂಬಿ ಕೊಂಡು ಬಂದಿದೆ. ಈ ನಂಬುಗೆ ಸತ್ಯಾರ್ಥವೆಂದು ಬುದ್ಧಿಯೂ ಒಪ್ಪುವಂತಿದೆ.

ಲಿಂಗಲೀಲಾವಿಲಾಸಚಾರಿತ್ರವಾಗಲಿ ಮಂತ್ರಗೋಪ್ಯವಾಗಲಿ ಕಲ್ಲಮಠದ ಪ್ರಭುದೇವರ ಕಾಲವನ್ನು ನಿರ್ಣಯಿಸಲು ಯಾವ ಅಂತರ ಪ್ರಮಾಣವನ್ನೂ ಒದಗಿಸಿ ಕೊಟ್ಟಿಲ್ಲ. ಗ್ರಂಥಗಳ ವಿಷಯ, ಭಾಷೆಗಳನ್ನು ಪ್ರಮಾಣವೆಂದಿಟ್ಟುಕೊಳ್ಳುವುದು ಅಷ್ಟೊಂದು ಯುಕ್ತಿಯುಕ್ತವಲ್ಲ. ಈ ಪರಿಸ್ಥಿತಿಯಲ್ಲಿ ಪ್ರಭುದೇವರ ಕಾಲನಿರ್ಣಯಕ್ಕೆ ಬಾಹ್ಯಪ್ರಮಾಣಗಳೇ ಶರಣು.

ನಮಗೆ ತಿಳಿದಮಟ್ಟಿಗೆ ಕಲ್ಲಮಠದ ಪ್ರಭುದೇವರ ಹೆಸರನ್ನು ಮೂವರು ಕವಿಗಳು ತಂತಮ್ಮ ಕೃತಿಗಳಲ್ಲಿ ಎತ್ತಿಕೊಂಡಿದ್ದಾರೆ.

೧. ಜಕ್ಕಣಾಚಾರ್ಯನು (ಕ್ರಿ. ಶ. ಸು. ೧೪೩೦) ರಚಿಸಿದ ಏಕೋತ್ತರ ಶತಸ್ಥಲವೆಂಬ ಗ್ರಂಥವನ್ನು ಮೆರೆಸುವಾಗ ೧೦೧ ವಿರಕ್ತರಲ್ಲಿ ಒಬ್ಬರಾದ ಕಲ್ಲಮಠದ ಪ್ರಭುದೇವರೂ ಇದ್ದರೆಂದು ಅದೃಶ್ಯಕವಿ (ಕ್ರಿ. ಶ. ಸು. ೧೫೮೦) ತನ್ನ ಪ್ರೌಢರಾಯನ ಕಾವ್ಯದಲ್ಲಿ[೧] ತಿಳಿಸುತ್ತಾನೆ.

ಹರರೂಪವಾದ ನೂರೊಂದು ಸುವಿರಕ್ತರುರೆ
ಕರಸ್ಥಲದ ನಾಗಿದೇವನು ಕಲ್ಲಮಠದ ಪ್ರಭು
ವರನು ವೀರಣ್ಣೊಡೆಯರುಂ ಚಾಮರಸರಾದಿ
ಶಿವಭಕ್ತತತಿಯು ನೆರೆದು
ಭರದಿಂದ ಭೋರ್ಗರೆವ ಭೇರಿ ನಿಸ್ಸಾಳ್ಗಳಿಂ
ತರತರದೊಳೊದರುತಿಹ ಕಹಳೆ ಕೌಸಾಳ್ಗಳಿಂ
ಧರೆಯೊಳಚ್ಚರಿಯೆನಿಸಿ ಮೆರೆಯಿಸಿದರಾಯಿರುಳು
ಏಕೋತ್ರಶತಸ್ಥಲವನು

ಈ ಮೆರೆವಣಿಗೆಯಲ್ಲಿ ಜಕ್ಕಣಾಚಾರ್ಯನೂ ಭಾಗವಹಿಸಿದ ಸಂಗತಿ ಅದೇ ಕಾವ್ಯದಿಂದ ತಿಳಿದುಬರುತ್ತದೆ. ಈ ಸಂಗತಿ ಗಮನಾರ್ಹವಾಗಿದೆ.

೧ ಸಂ. ೧. ಪ. ೪೨

೨. ಸಿದ್ಧನಂಜೇಶನು (ಕ್ರಿ.ಶ.ಸು. ೧೬೦೦) [1]— ಈತನಿಗೆ ಚಿಕ್ಕ ನಂಜೇಶನೆಂಬ ಹೆಸರೂ ಉಂಟು—ತನ್ನ ರಾಘವಾಂಕ ಚರಿತೆಯಲ್ಲಿ[2]

ಹರಿದೇವ ಕೆರೆಯ ಪದ್ಮರಸ ರಾಘವದೇವ
ವರ ಜಕ್ಕಣಾಚಾರ್ಯ ಚಾಮರಸ ಭೀಮರಸ
ಗುರು ಮೊಗ್ಗೆಯಾಚಾರ್ಯ **ಕಲ್ಲಮಠದಾಚಾರ್ಯ**
ಸಿಂಗಿರಾಜಾಚಾರ್ಯರು
ಪರಮ ಪಾಲ್ಕುರಿಕೆ ಸೋಮನಾಂಕ ಶುದ್ಧಪ್ರಸಾ-
ದ್ಯರು ಮಹಾದೇವಯ್ಯರೆನಿಪ ಸದ್ಬ್ರಾಹ್ಮಣ್ಯ
ದಿರವಾದಗಣ್ಯಪುಣ್ಯರ ಚರಣಕೆನ್ನೆರ್ದೆಯನೊಸೆದು
ಪಾದುಕೆಗೆಯ್ದೆನು

ಎಂದು ಹರಿಹರ ರಾಘವಾಂಕ ಮೊದಲಾದ ಪುರಾತನ ಕವಿಗಳ ಪಂಕ್ತಿಯಲ್ಲಿ ಕಲ್ಲಮಠದಾಚಾರ್ಯರನ್ನು ಕುಳ್ಳಿರಿಸಿ ತನ್ನ ವಿನಮ್ರ ಭಕ್ತಿಯನ್ನರ್ಪಿಸಿದ್ದಾನೆ.

೩. ಶಾಂತಲಿಂಗದೇಶಿಕನು (ಕ್ರಿ. ಶ. ೧೬೭೨) ತನ್ನ ಭೈರವೇಶ್ವರಕಾವ್ಯದ ಕಥಾಸೂತ್ರರತ್ನಾಕರದ ೨೭ ನೆಯ ಕಥೆಯಲ್ಲಿ ಏಕೋತ್ತರಶತಸ್ಥಲದ ಮೆರೆವಣಿಗೆಯ ಸಂದರ್ಭವನ್ನೇ ಎತ್ತಿಕೊಂಡು,

....ಜಕಣ್ಣದಂಡೇಶಮಂತ್ರಿಯು, **ಕಲ್ಲಮಠದ ಪ್ರಭುದೇವಾಚಾರ್ಯನು**, ಚಾಮರಸಯ್ಯನೆಂಬಾರಾಧ್ಯರು, ಕರಸ್ಥಲದ ನಾಗಿದೇವರು, ವೀರಣ್ಣ ಒಡೆಯದೇವರು ಮುಖ್ಯವಾದ ನೂರೊಂದು ವಿರಕ್ತರು ಭಕ್ತರು ಸಹವಾಗಿ ಏಕೋತ್ತರಶತಸ್ಥಲವಂ ಪುಷ್ಪಕದೊಳಗಿಟ್ಟು ಸರ್ವಸಂಭ್ರಮದಿಂದೆ ರಾತ್ರೆಯಲ್ಲಿ ಮೆರವಣಿಗೆಯಂ ಮಾಡಲು....

ಮತ್ತು ಚಾಮರಸನ ಪ್ರಭುಲಿಂಗಲೀಲೆಯ ಮೆರೆವಣಿಗೆಯಾದಮೇಲೆ,

....ಇತ್ತ ಜಕ್ಕಣ್ಣಾಚಾರ್ಯರು **ಕಲ್ಲಮಠದ ಪ್ರಭುದೇವರು**

೧ ಗುರುರಾಜಚಾರಿತ್ರದ ಪ್ರಸ್ತಾವನೆ **ನೋಡಿರಿ.**
೨ ಸಂ. ೧. ಪ. ೧೨

ಚಾಮಯ್ಯ ಮೊದಲಾದ ಶಿವಭಕ್ತರು ಪ್ರಭುಲಿಂಗಲೀಲೆಯ ಮೆರವಣಿಗೆಯಂ ಮಾಡಿ ಸುಖದಲ್ಲಿರ್ದರು....

ಎಂದು ಹೇಳಿ ಪ್ರೌಢದೇವರಾಯನ (ಕ್ರಿ. ಶ. ೧೪೧೯-೧೪೪೬) ಕಾಲದಲ್ಲಿಯೆ ನಡೆದ ಏಕೋತ್ತರ ಶತಸ್ಥಲ ಮತ್ತು ಪ್ರಭುಲಿಂಗ ಲೀಲೆಯ ಮೆರೆವಣಿಗೆಯಲ್ಲಿ ಜಕ್ಕಣ್ಣದಂಡೇಶನೊಡನೆ ಕಲ್ಲಮಠದ ಪ್ರಭುದೇವರೂ ಭಾಗವಹಿಸಿದ್ದರೆಂಬುದನ್ನು ಸ್ಪಷ್ಟವಾಗಿ ಹೇಳಿದ್ದಾನೆ.

ಮೇಲೆ ತಿಳಿಸಿದ ಸಂಗತಿಗಳನ್ನೆಲ್ಲ ವಿವರಿಸಿ ನೋಡಿದರೆ ಕಲ್ಲಮಠದ ಪ್ರಭುದೇವರು ೧೬ ನೆಯ ಶತಮಾನಕ್ಕಿಂತ ಪೂರ್ವದಲ್ಲಿದ್ದವರು ಮತ್ತು ಜಕ್ಕಣ್ಣದಂಡೇಶ, ಚಾಮರಸ, ಕರಸ್ಥಲದ ವೀರಣ್ಣೊಡೆಯರು ಮುಂತಾದವರ ಸಮಕಾಲೀನರೆಂದು ತಾನೇ ಗೊತ್ತಾಗುತ್ತದೆ. 'ಭಕ್ತಿಭಾಂಡಾರಿ' ಎಂಬ ಬಿರುದಿದ್ದ ಈ ಜಕ್ಕಣಾಚಾರ್ಯ ವಿಜಯನಗರದ ಪ್ರೌಢದೇವರಾಯನಲ್ಲಿ (ಕ್ರಿ. ಶ. ೧೪೧೯-೧೪೪೬) ದಂಡನಾಯಕನಾಗಿದ್ದ[1] ಸಂಗತಿ ಶುದ್ಧ ಇತಿಹಾಸ. ಈ ಸಂಗತಿಯನ್ನೆ ಆಧಾರವಾಗಿಟ್ಟುಕೊಂಡು ಕವಿಚರಿತೆಕಾರರು ಪ್ರೌಢದೇವರಾಯ ಮತ್ತು ಜಕ್ಕಣಾಚಾರ್ಯರ ಸಮಕಾಲೀನರಾದ ಕಲ್ಲಮಠದ ಪ್ರಭುದೇವರ ಕಾಲ ಕ್ರಿ. ಶ. ಸು. ೧೪೩೦ ಎಂದು ಸೂಚಿಸಿದ್ದಾರೆ. ಈ ಕಾಲವನ್ನಿಟ್ಟುಕೊಳ್ಳಲು ಯಾವ ಬಾಧಕ ಪ್ರಮಾಣವೂ ಇಲ್ಲಿಯವರೆಗೆ ದೊರೆತಿಲ್ಲ. ಅಂತೆಯೇ ಕಲ್ಲಮಠದ ಪ್ರಭುದೇವರು ೧೫ ನೆಯ ಶತಮಾನದ ಪೂರ್ವಾರ್ಧದಲ್ಲಿ ಪ್ರೌಢದೇವರಾಯನ ವಿಜಯನಗರದಲ್ಲಿ ಬಾಳಿ ಬದುಕಿದರೆಂಬ ಸಂಗತಿ ಇತಿಹಾಸ ಮನ್ನಿಸತಕ್ಕುದೆ.

ಲಿಂಗಲೀಲಾವಿಲಾಸಚಾರಿತ್ರದಲ್ಲಿ ೧೬ ಸ್ಥಲಕಟ್ಟುಗಳಿವೆ; ಸುಮಾರು ಮೂವತ್ತಾರು ವಚನಕಾರರಿಂದ ಆಯ್ದುಕೊಂಡ ೭೭೯ ವಚನಗಳಿವೆ;[2] ಮತ್ತು

೧ ಕ. ಕ. ಚ. ಸಂ. ೨ ಪು. ೫೬.

೨ ಸಮಾಪ್ತಿಯ ಭಾಗವು ತಿಳಿಸುವಂತೆ ಈ ಗ್ರಂಥದಲ್ಲಿ 'ಏಳು ನೂಱ ಎಪ್ಪತ್ತು' ಇಲ್ಲವೆ 'ಏಳನೂಱೆಪ್ಪತ್ತೈದು' ವಚನಗಳಿರಬೇಕು. ೭೭೦ ಈ ಸಂಖ್ಯೆ ವೀರಶೈವರಲ್ಲಿ ಪ್ರಸಿದ್ಧರಾದ ಅಮರಗಣಂಗಳ ಸಂಖ್ಯೆ. ಕಲ್ಲಮಠದ ಪ್ರಭುದೇವರು ಈಸಂಖ್ಯೆಯೇ ಶುಭವೆಂದು ತಮ್ಮ ಗ್ರಂಥದಲ್ಲಿ ೭೭೦ ವಚನಗಳನ್ನೇ ಸೇರಿಸಿಕೊಂಡಿರಬಹುದು. ಉಳಿದ ವಚನಗಳು ಹೇಗೆ ಗ್ರಂಥದಿಂದ ಜಾರಿದುವೆಂದೂಹಿಸುವುದು ಕಷ್ಟ.

೧೩೫ ಸಂಸ್ಕೃತ ಶ್ಲೋಕಗಳಿವೆ. ವಚನ ಮತ್ತು ಶ್ಲೋಕಗಳಿಗೆಲ್ಲ ವ್ಯಾಖ್ಯಾನ ಬರೆದಿದ್ದಾರೆ ಕಲ್ಲಮಠದ ಪ್ರಭುದೇವರು. ಕಾಣಬಂದರ್ಥದ ವಚನಗಳಿಗೆ ಮಾತ್ರ ವ್ಯಾಖ್ಯಾನವಿಲ್ಲ. ಚಾರಿತ್ರವನ್ನು ಮೊದಲುಮಾಡುವ ಪೀಠಿಕಾಸೂತ್ರದಲ್ಲಿ ಪ್ರಭುದೇವರು ತಾವು ಕಂಡ ಲಿಂಗಲೀಲಾವಿಲಾಸಚಾರಿತ್ರದ ದಿವ್ಯದರ್ಶನದ ಸಾರೋಜ್ವಲವಾದ ಬಾಹ್ಯರೇಖೆಯನ್ನು ತೋರಿದ್ದಾರೆ.

ಪ್ರಭುದೇವರೇ ಹೇಳುವಂತೆ ಲಿಂಗಲೀಲಾವಿಲಾಸಚಾರಿತ್ರವೆಂದರೆ ಶರಣ ಚಾರಿತ್ರ, ಶರಣಮಾರ್ಗ. ಅದೇ ಕರ್ಮಕಾಂಡವನ್ನುಳಿದು ಜ್ಞಾನದಿಂದುತ್ತರವಾದ ಭಕ್ತಿಕಾಂಡವನ್ನು ನಿರೂಪಿಸುವ ಷಟ್ಸ್ಥಲಮಾರ್ಗ. ಈ ಷಟ್ಸ್ಥಲಮಾರ್ಗ ವೇದಾಗಮಗಳಿಗೆ ಅಗೋಚರ. ಪ್ರಭುದೇವರು ಬಸವಣ್ಣ ಚೆನ್ನಬಸವಣ್ಣ ಮಹಾದೇವಿಯಕ್ಕ ಮುಂತಾದ ಪುರಾತನ ಶರಣರ ವಚನಗಳಿಂದ ಮಾತ್ರ ಕಾಣಲಾದ ಮಾರ್ಗ ಈ ಷಟ್ಸ್ಥಲ ಮಾರ್ಗ. ಅಂತೆಯೆ ವೇದಾಗಮಗಳು 'ಜಡ್ಡು ಗೋಜಡ'ೆಂದು ಅವನ್ನು ಬಿಟ್ಟು ಪುರಾತನರ ಸಾರವಚನಗಳನ್ನು ತೆಗೆದುಕೊಂಡು ಷೋಡಶಸ್ಥಲ ಪರಿಕ್ರಮದಿಂದ ಸೇರಿಸಿ ಅರ್ಥಯಿಸಿದ ವಚನಾಗಮ ಈ ಲಿಂಗಲೀಲಾವಿಲಾಸ ಚಾರಿತ್ರವೆಂಬ ನವ್ಯದರ್ಶನ ಗ್ರಂಥ.

ಪರಮೋತ್ಕೃಷ್ಟವಾದ ಈ ನವ್ಯದರ್ಶನಕ್ಕೆ ಶರಣರ ನಿಜಾನುಭಾವವೇ ಪರಮ ಪ್ರಮಾಣ. ಈ ಪರಮಾನುಭಾವದ ನಿರ್ಭರಾನಂದವೇ ಉಕ್ಕಿ ನುಡಿದ ನುಡಿ ಶರಣರ ವಚನ; ಅವೇ 'ಗುರುವಚನ'. 'ಆ ಗುರುವಚನಂಗಳಾವುವಯ್ಯಾ ಎಂದೊಡೆ ವೀರಶೈವ ಷಟ್ಸ್ಥಲ ಜ್ಞಾನಾಚಾರ್ಯರಪ್ಪ ಪ್ರಭುದೇವರು ಬಸವಣ್ಣ ಚೆನ್ನಬಸವಣ್ಣ ಮಹದೇವಿಯಕ್ಕಗಳು ಮುಖ್ಯವಾದ ಶಿವಾನುಭಾವಿಗಳು ಶಿವಸುಖವ ನನುಭವಿಸಿ ತೃಪ್ತಿವಡೆದ ಸಂತುಷ್ಟಿ ನಿರ್ಮಿಮ ವಾಙ್ಮನದಿಂದುಕ್ಕಿ ನುಡಿದ ನುಡಿಯೇ ಗುರುವಚನ.' ಶರಣರ ಶಿವಜ್ಞಾನ ಅನುಭವ ಆನಂದ ತಂತಾವೆ ಆವಿರ್ಭವಿಸುವ ಸಹಜಲೀಲೆಯನ್ನು ಕಲ್ಲಮಠದ ಪ್ರಭುದೇವರು ಅಲ್ಲಮಪ್ರಭು ದೇವರ ಮಂತ್ರಗೋಪ್ಯದ 'ಅಮೃತಫಳ ರಸ ತುಂಬಿ ತೊಟ್ಟಿಟ್ಟುದು,' ಎಂಬ ನುಡಿಯನ್ನು ಅರ್ಥಯಿಸುವಲ್ಲಿ ಮತ್ತೂ ಸ್ಫುಟವಾಗಿ ಕಾಣಬಹುದು. '....ಗುರುಕರುಣದಿಂದ ಸಮ್ಯಗ್‌ಜ್ಞಾನೋದಯವಾದ ಶರಣನ ದೇಹದಲ್ಲಿ ಅಖಂಡ ಚಿದಮೃತ ರಸೋತ್ತಮವಪ್ಪ ಲಿಂಗಕಳೆಯು ತುಂಬಿತ್ತೆಂಬುದೀಗ, ಅಮೃತಫಳ ರಸ ತುಂಬಿ ಎಂಬ ಶಬ್ದಕ್ಕರ್ಥ. ಅಂತು ಅಖಂಡ ಚಿದಮೃತರಸವ ದಣಿಯುಂಡುಂಡು ಶಿವೋಹಂ ಶಿವೋಹಂ ಎಂಬ ಶರಣನ ಸುಖವರ್ತನೆಯು ಆ ಜ್ಞಾನದಿಂದ ಸೂಸಿ ಶಿವಾಪೇಕ್ಷರುಗಳ ಅರುವಿನ ಆಪ್ಯಾಯನಕ್ಕೆ ಬೋಧಾಮೃತವಾಯಿತ್ತೆಂಬುದೀಗ

ತೊಟ್ಟಿಟ್ಟುದು ಎಂಬ ಶಬ್ದಕ್ಕರ್ಥ.' ಚಂದ್ರಮನುಕ್ಕಿ ಬೆಳುದಿಂಗಳಾಗಿ ಸೂಸಿದರೆ ಲೋಕಕ್ಕೆಲ್ಲ ಬೆಳಗು, ತಂಪು, ಆನಂದ, ಕಲ್ಯಾಣ. ಚಂದ್ರಮನನ್ನು ಬಿಟ್ಟು ಬೆಳುದಿಂಗಳಿಲ್ಲ. ಸತ್ಯಶರಣರ ನಿಜಾನುಭವ ನಿಜಜ್ಞಾನ ನಿಜಾಚರಣೆಗೆ ಹೊರತಾದ ಶರಣರ ವಚನವಿಲ್ಲ. ಅಂತರಂಗದ ಪರಮಜ್ಯೋತಿಯೆ ಬಹಿರಂಗದ 'ಮಾತೆಂಬ ಜ್ಯೋತಿರ್ಲಿಂಗ'ವಾಗಿ ಪ್ರಕಾಶಿಸುತ್ತಿವೆ ಈ ಗುರುವಚನಗಳು. ಈ ವಚನ ಮಾತಿನ ಮಥನವಲ್ಲ, 'ಹೂಸಿ ಹುಂಡನೆ' ಮಾಡಿದ ವಿಚಾರದ ಡಂಭ, ಆಡಂಬರವಲ್ಲ.

ಶರಣರ ವಚನಗಳು ಪ್ರತಿಪಾದಿಸುವ ಷಟ್ಸ್ಥಲಮಾರ್ಗ ತನ್ನ 'ನಿಜವ ನೆಯ್ದುವ ಮಾರ್ಗ.' ತನ್ನ ನಿಜವೇ ಮಾನವನು ಸರ್ವಪ್ರಯತ್ನದಿಂದ ಸಾಧಿಸಲರ್ಹವಾದ ಪರಮಸಿದ್ಧಿ, ಅದೇ ಪರಮಪದ. ಮಾನವಜೀವನದ ಪರಮಪುರುಷಾರ್ಥ ತಾನೆ ತಾನಾದ ತನ್ನ ನಿಜ. ನಾನೆಂಬ ಮಾನವ ತನ್ನ ನಿಜಭಾವದಲ್ಲಿ ನಿಂದರೆ ಮರ್ತ್ಯಜೀವನದ ಮಣಿಹ ಪೂರೈಸಿದಂತೆ. ಮಾನವ ಜೀವನವನ್ನು ಸರ್ವತೋಮುಖವಾಗಿ ಬೆಂಬತ್ತಿರುವ 'ಮರ್ತ್ಯ'ವನ್ನು ಹುಟ್ಟುಹೊಂದಿಲ್ಲದ ತನ್ನ ನಿಜದರಿವಿನ ಪರಂಜ್ಯೋತಿಯ ಪ್ರಭೆಯಿಂದ ಬೆಳಗಿ, ಮರ್ತ್ಯದ ಗರ್ಭದಿಂದಲೆ ಒಗೆದ ಅನಂತ, ಅಪಾರ, ಅದ್ವಿತೀಯ, ಏಕಮೇವ, ಅಖಂಡ ಅನಘ, ನಿರ್ಮಲ ನಿರೀಹ ನಿರಂಜನ, ನಿತ್ಯಪರಿಪೂರ್ಣವಾದ ಸತ್ಯಜ್ಞಾನ ಆನಂದದ ಪರಮಾಮೃತ ಮಹಾಸಾಗರವೆ ತಾನಾಗಿ ನಿಂದ ಮಹಾಂತನಿಲವೇ ಮಾನವನ ಮಹಾಸಿದ್ಧಿ. ಮರ್ತ್ಯಕ್ಕೆ ಗೂಡಾದ ಮಾನವನ ದೇಹದಲ್ಲಿ ವಿಶ್ವತತ್ತ್ವಗಳನ್ನೊಳಗೊಂಡ ಪರಮಾಮೃತತತ್ತ್ವ ಹುದುಗಿಕೊಂಡಿದ್ದು ಬಹಿರ್ದೃಷ್ಟಿಯ ಮಾನವನ ಭಿನ್ನ ಬುದ್ಧಿಗೆ ಮಾಯಾಜಾಲವನ್ನು ಬೀಸಿ 'ನೆಲದ ಮರೆಯ ನಿಧಾನದಂತೆ' ಕಾಣದಾಗಿದೆ. 'ಅಖಂಡ ಪರಿಪೂರ್ಣ ಲಿಂಗಕಳೆ ಸಮಸ್ತ ದೇಹಿಗಳ ಬ್ರಹ್ಮರಂಧ್ರದಲ್ಲಿ ಬೆಳಗುತ್ತಿಪ್ಪುದು.'[೧] 'ಶಿವಂ ಸಕಲಜಂತು ಶರೀರದೊಳಿರ್ಪನ್.'[೨] 'ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ.'[೩] ಅದೇ 'ಪಿಂಡಾಂಡದೊಳಗಿರ್ಪ ಖಂಡತೇಜ.'[೪] ಅದೇ 'ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ.'[೫] ಅದೇ 'ಆತ್ಮ ಪ್ರಕಾಶವ ಪ್ರಕಾಶಿಸಿದ ಮೂಲ ಪ್ರಕಾಶವೆ ಶಿವ ಪ್ರಕಾಶ.'[೬] ಆದರೆ 'ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್.'[೭] 'ಹೊಱಗೊಳಗೆ ತಾನಾಗಿದ್ದು ತಲೆದೋಱದಿಪ್ಪುದು ಗೊಹೇಶ್ವರಾ ನಿಮ್ಮ ನಿಲವು ನೋಡಾ.'[೮]

೧ ಸಿ. ಸಾ. ಸಂ. ಪು. ೧೬೫
೨ ಶ. ತ್ರ. ಶಿ. ಪ.೩೪
೩ ಭ. ಗೀ. ಅ. ೧೮, ಶ್ಲೋ. ೬೧
೪ ಕೈ. ಕ. ಯೋ. ವ. ೧೯
೫ ಕೇ. ಉ. ಮಂ. ೫
೬ ಲಿಂ. ಲೀ. ವಿ. ಚಾ. ಪು. ೮೯
೭ ಕ. ಉ. ಅ. ೨, ವ. ೬, ಮಂ.೯
೮ ಲಿಂ. ಲೀ. ವಿ. ಚಾ. ಪು. ೭೧

ಮಾನವನ ಕಣ್ಣಿಗೆ ಕಾಣಬಾರದ ಗೊಹೇಶ್ವರನ ನಿಲವೇ ಮಾನವನ ನಿಜದ ನಿಲವು. ಅದೇ ಮಾನವ ಕುಲದ ಪರಮಸ್ಥಲ, ಅದೇ ಅಖಂಡಿತ ಪರಿಪೂರ್ಣ ಸಿದ್ಧಿ. ಏನಿದ್ದರೂ ಮೈಯಲ್ಲಿ ಸೊಗಸಿಲ್ಲದ ಮಾನವನ ಅವಿಚ್ಛಿನ್ನವಾದ ಅತೃಪ್ತಿ ಏನು ಮಾಡಿದರೂ ಹತ್ತಿಕ್ಕಬಾರದ ಆತನ ನಿಜಸಿದ್ಧಿಯ ಶಿವಾಪೇಕ್ಷೆಯು ಹೆಗ್ಗುರುಹು. ತನಗೆ ತಗದ, ತನ್ನ ನಿಜಭಾವಕ್ಕೆ ಅಸ್ವಾಭಾವಿಕವಾದ ಅನಂತಸಿದ್ಧಿಗಳು ಮಾನವನ ಅಸ್ವಸ್ಥತೆಯನ್ನು ನಿವಾರಿಸಲಿಲ್ಲ. ಸಮಾಜಸುಧಾರಣೆ ನೈತಿಕೋದ್ಧಾರ, ಆರ್ಥಿಕ ಅಭ್ಯುದಯ ವೈಜ್ಞಾನಿಕ ಪ್ರಗತಿ, ಹೊನ್ನು ಹೆಣ್ಣು ಮಣ್ಣಿನ ಸರ್ವಸಂಪದ ಭೋಗ ವಿಲಾಸ, ವಾರ್ತೆ ಕೀರ್ತಿ, ಅಧಿಕಾರ ಶಕ್ತಿ, ಸಕಲಕಲಾಪಾಂಡಿತ್ಯ ಪ್ರಾವೀಣ್ಯ, ಪುರುಷಾರ್ಥ ಚತುಷ್ಟಯ, ಪುಣ್ಯ ಹಡೆವ ಸಾಲೋಕ್ಯ ಮುಂತಾದ ಫಲಪದವಿ—ಇಂತಹ ಸಿದ್ಧಿಸಿದ್ಧಿಗಳು ಮಾನವನೆದೆಯ ನಿತ್ಯ ಗಭೀರ ಅತೃಪ್ತಿಯನ್ನು ಆರಿಸಲಿಲ್ಲ, ಮಾನವ ಕುಲದಲ್ಲಿ ಶಾಶ್ವತ ಸುಖಶಾಂತಿಯನ್ನು ಬಿತ್ತಿ ಬೆಳೆಯಲಿಲ್ಲ. ಇಂತಹ ಸಿದ್ಧಿಗಳ ಮೇಲೆ ಸ್ವರ್ಗವನ್ನೆ ಕಟ್ಟುವೆನೆಂಬ ಮಾನವನ ಕನಸು ನನಸಾದರೂ ಈ ಸ್ವರ್ಗ ಮಾನವನ ಅಂತರಂಗದ ಗಂಭೀರ ಪ್ರಶ್ನೆಗೆ ಸಂಪೂರ್ಣ ಸಮಾಧಾನವನ್ನು ತರುವ ಉತ್ತರವಲ್ಲ. ಪ್ರತಿನಿತ್ಯದ ಜೀವನ ನೀಡುತ್ತಿರುವ ಸುಖ ಸೌಕರ್ಯಗಳು, ವಿಲಾಸ ಭೋಗಗಳು, ಅನುಭವದ ಈ ಅಣುಸ್ವರ್ಗಗಳು ಕನಸಿನ ಸ್ವರ್ಗದ ಸ್ವರೂಪವನ್ನು, ಅದರ ಸುಸ್ಪಷ್ಟ ಕಲ್ಪನೆಯನ್ನು ಪ್ರತಿನಿತ್ಯ ಮಾಡಿಕೊಡುತ್ತಿವೆ. ಈ ಸಿದ್ಧಿಗಳ ಸ್ವರ್ಗ ದೂರದ ಗುಡ್ಡ, ಕಣ್ಣಿಗೆ ಚೆಂದ.

ಇಂತಹ ಸಿದ್ಧಿಗಳೇ ಬೇಡವೆಂಬುದು ಶರಣರ ಮತವಲ್ಲ. ಇವು ಬೇಕು, ಅವಶ್ಯ ಬೇಕು. ಆದರೆ ಈ ಸಿದ್ಧಿಗಳಿಗೆಲ್ಲ ಪ್ರಾಣಚೈತನ್ಯವನ್ನು ದಯಪಾಲಿಸುವ, ಸತ್ತ್ವಸಾರ ತುಂಬಿ ಅರ್ಥಪೂರ್ಣ ಮಾಡುವ ಪರಮಸಿದ್ಧಿಯಿಲ್ಲದೆ 'ಕಾನನದ ಬೆಳುದಿಂಗಳಂತೆ' ಇವೆಲ್ಲ ನಿಷ್ಫಲ, ನಿಸ್ಸಾರ, ಅಲ್ಪ, ಕ್ಷಣಿಕ. ಈ ಅಲ್ಪ ಸಿದ್ಧಿಗಳ ಸಾಕ್ಷಾತ್ಕಾರವಾದರೂ ಮಾನವನ ಹೃದಯದಲ್ಲಿ ಎಂದೆಂದಿಗು ಪ್ರಜ್ವಲಿಸುತ್ತಿರುವ ನಿಜಸಿದ್ಧಿಯ ಶಿವಾಪೇಕ್ಷೆ ಮುಂದೆ ಮುಂದೆ ಕೈಚಾಚುತ್ತದೆ. ಈ ಅಪೇಕ್ಷೆ ಹಲವರಲ್ಲಿ ಮಲಗಿರಬಹುದು; ಕೆಲವರಲ್ಲಿ ಸ್ವಪ್ನಾವಸ್ಥೆಯಲ್ಲಿರಬಹುದು; ಕೋಟಿಗೊಬ್ಬರಾದ 'ಕಶ್ಚಿದ್ ಧೀರ' ರಲ್ಲಿ, 'ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ ಯತತಿ ಸಿದ್ಧಯೇ'[೧] ಎಂಬ 'ಸಾವಿರಕ್ಕೊಬ್ಬ ಸತ್ಯ' ರಲ್ಲಿ ಜಾಗ್ರದವಸ್ಥೆಯಲ್ಲಿರಬಹುದು. ಶಿವಾಪೇಕ್ಷೆ ಯಾವಾಗಲು ಎಚ್ಚತ್ತಿರುವ ಎದೆಯೇ ಶರಣಗುಣ. ಅದು ಮಲಗಿದೆದೆಯೇ ಮಾನವಗುಣ. ಮಾನವನೆದೆಯಲ್ಲಿ ಶಿವಾಪೇಕ್ಷೆ ಮಲಗಿದ್ದರೂ 'ಅದು

೧ ಭ. ಗೀ. ಅ. ೭, ಶ್ಲೋ. ೩

ಅಲ್ಲಿದೆ' ಎಂಬ ಮಾತು ಮರೆಯುತಕ್ಕುದಲ್ಲ. ಅಂತೆಯೇ ಮಾನವಕೋಟಿಯಲ್ಲಿರುವ ಸುಪ್ತಶರಣ ಬೆಳಕುಗಂಡು ಏಳಲೆ ಬೇಕು. ಎದ್ದ ಶರಣ ತನ್ನ ನಿಜಸಿದ್ಧಿಗಾಗಿ ಯತ್ನಿಸಲೆ ಬೇಕು. ಮಾನವನೆದೆಯ ಶರಣ ಸತ್ತಿಲ್ಲ, ಸಾವಿಗೊಳಗಾದವನೂ ಅಲ್ಲ, ತನ್ನ ನಿಜವನೆಯ್ದದೆ ವಿಶ್ರಮಿಸುವವನೂ ಅಲ್ಲ. 'ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ.' ಶರಣನಿಗೆ ತನ್ನ ಬೆಳಗಿನ, ಅಖಂಡ ಸತ್ಯ ನಿತ್ಯ ಪರಿಪೂರ್ಣವಾದ ತನ್ನ ಇರವು ಅರಿವು ಆನಂದದ ನಿತ್ಯ ಚಿಂತೆ.

> 'ವನದ ಕೋಗಿಲೆ ಮನೆಗೆ ಬಂದರೆ ತನ್ನ ವನವ ನೆನೆವುದ ಮಾಣ್ಬುದೇ? ಮಲೆಯ ಗಜವು ಮನೆಗೆ ಬಂದರೆ ತನ್ನ ಮಲೆಯ ನೆನೆವುದ ಮಾಣ್ಬುದೇ? ಕೂಡಲಸಂಗನ ಶರಣರು ಮಱೆದು ಮರ್ತ್ಯಕ್ಕೆ ಬಂದರೆ ತಮ್ಮ ಆದಿ ಮಧ್ಯಾಂತರಂಗದ ಲಿಂಗವ ನೆನೆವುದ ಮಾಣ್ಬರೇ?'
>
> ಲಿಂ. ಲೀ. ವಿ. ಚಾ. ಪು. ೯೭

ಮನೆಯ ಕೋಗಿಲೆ ಮೊದಲು ವನದ ಕೋಗಿಲೆಯೆ. ಬಂಧನವಡೆದ ಮನೆಯ ಗಜ ಈ ಮೊದಲು ಮಲೆಯ ಗಜವೆ. ಮನೆಯ ಗಜ ಇಲ್ಲವೆ ಮನೆಯ ಕೋಗಿಲೆಯಲ್ಲಿ ಎರಡು ಬಗೆ. ಹಾಕಿದನ್ನವನುಂಡು, ಕೊಟ್ಟ ನೀರು ಕುಡಿದು ಬಂಧನದ ಮನೆಯೆ ಸಹಜವೆಂದಿರುವ ಮನೋಭಾವ ಒಂದಕ್ಕೆ. 'ಎಂದಿರ್ಪೆನೊ ನಿಜಸುಖದಲ್ಲಿ ಬಹು ದಂದುಗವೆಲ್ಲವನಳಿದುಳಿದು?' ಎಂದು ಹಾರೈಸಿ ಹಂಬಲಿಸಿ, ತನಗೆ ಸಹಜವಲ್ಲದ, ಕೃತ್ರಿಮವಾದ ಬಂಧನಜೀವನದಿಂದ ಪಾರಾಗಿ ವಿಶಾಲ ವನದ ಅನಂತ ವಿಸ್ತಾರದಲ್ಲಿ ಹಾರಾಡಿ, ತನ್ನ ಪಂಚಮದಿಂಚರವನ್ನು ಬನರಾಣಿಗೆ ಅರ್ಪಿಸಿ, ಬನದೇವಿ ನೀಡುವ ಪ್ರಸಾದವನ್ನು ಸ್ವೀಕರಿಸಿ, ನಿಜ ಸುಖದಲ್ಲಿರುವ ಸಹಜ ಜೀವನದ ಹಂಬಲ ಮತ್ತೊಂದಕ್ಕೆ. ವನದ ನೆನಪಿಲ್ಲದ ಮನೆಯ ಕೋಗಿಲೆ ಮರವೆಯಲ್ಲಿದ್ದ ಮಾನವ. ಮನೆಯನ್ನು ಹರಿದು ವನದಲ್ಲಿ ಬದುಕುವೆನೆಂಬ ಕೋಗಿಲೆ ತನ್ನ ನೆನಪಿನಲ್ಲಿದ್ದ ಅರಿವಿನ ಶರಣ. ಎಚ್ಚತ್ತ ಮಾನವರು ಅಂದರೆ ಕೂಡಲಸಂಗನ ಶರಣರು ಮರೆದು ಮರ್ತ್ಯಲೋಕದ ಮನೆಯಲ್ಲಿ, ಪ್ರಕೃತಿಯ ಕುಂಭದಲ್ಲಿ ಸಿಲುಕಿದರೇನಾಯ್ತು? 'ತಮ್ಮ ಆದಿ ಮಧ್ಯಾಂತರಂಗದ ಲಿಂಗವ ನೆನೆವುದ ಮಾಣ್ಬರೇ?' ಏಕೆಂದರೆ ಕೋಗಿಲೆಗೆ ವನ ಸಹಜ. ತನಗೆ ಸಹಜವಲ್ಲದ ಸಿದ್ಧಿ ಸಾವಿರವಾದರೇನು? ಕೋಟಿಯಾದರೇನು?

'ವನದ ಕೋಗಿಲೆ ಮನೆಗೆ ಬಂದರೆ'—ಸತ್ಯಸೌಂದರ್ಯವನ್ನು ಸೂಸುವ ಅಮೃತವಚನ. ಈ ವಚನದ ಅಂತರಂಗವನ್ನು ತೆರೆದು ತೋರುವ ಪ್ರಭುದೇವರ ವ್ಯಾಖ್ಯಾನವಿದು :

ಆನೆಗಳು ಕೋಗಿಲೆಗಳು ತಮ್ಮ ನಿಜ ಜನನಸ್ಥಲವನಗಲಿ
ಬಂಧನಕ್ಕೆ ಬಂದಲ್ಲಿ ತಮ್ಮ ನಿಜಸ್ಥಲವನೆ ಚಿಂತಿಸುತಿ
ಪ್ಪಂತೆ ಶಿವನ ಚಿದಂಶವಾದ ಶರಣರು ಶಿವಾಜ್ಞೆಯಿಂದ
ತಮ್ಮ ನಿಜವ ಮಱೆದು ಮಾಯಾದೇಹ ಸಂಸಾರಯುಕ್ತ
ವಾಗಿ ಮರ್ತ್ಯಕ್ಕೆ ಬಂದಲ್ಲಿ ಶಿವಜ್ಞಾನೋದಯದಿಂದ
ತಮ್ಮ ನಿಜಸ್ವರೂಪವೆ ಲಿಂಗವೆಂದಱಿದು ಅಂತ
ರಂಗದ ಅಱಿವೆಲ್ಲಾ ಲಿಂಗವ ಬೆರಸುವ ನೆನಹಿನ
ಚಿಂತನೆಯ ಆತುರಗುಂದದೆ ಇಪ್ಪರು ಶರಣರೆಂಬುದೀ
ವಚನದ ತಾತ್ಪರ್ಯಾರ್ಥ.

ಲಿಂ. ಲೀ. ವಿ. ಚಾ. ಪ್ರ. ೯೭

ಶಿವನೇ ಅನಂತ ವಿಸ್ತಾರವನೊಳಕೊಂಡಿರ್ದ ವನ. ಶಿವನ ಚಿದಂಶವೆ ಶರಣ, ಅದೇ ವನದ ಕೋಗಿಲೆ. ಸ್ವಲೀಲಾವಿಲಾಸದಿಂದ ಪ್ರೇರಿತವಾದ ಶಿವಾಜ್ಞೆಯಿಂದ ನಿಜಸ್ಥಲದ ಮರವೆ ಘಟಿಸಿ ಮಾಯಾದೇಹಸಂಸಾರಯುಕ್ತವಾದ ಮರ್ತ್ಯದ ಮನೆಯಲ್ಲಿಳಿದು ಅದೇ ತನ್ನ '**ವಶ**' ವೆಂದಿರುವ ಮನೆಯ ಕೋಗಿಲೆ, ಮಾನವ. ನಿಜವನದ ನೆನಹು ಘನವಾಗಿ, ಶಿವಾಪೇಕ್ಷೆ ಬಲವಾಗಿ, ಚಿದಂಶದ ಚಿಜ್ಜ್ಯೋತಿಯ ಕಂಪೆರಪಿಯೆ ಸುಜ್ಞಾನೋದಯ. ಮೆಲ್ಲನೆ ಬೆಳಗಾದಂತೆ, ಕತ್ತಲೆಯಲ್ಲಿ ನಿಜನಿವಾಸವೆಂದು ಭ್ರಮೆ ಹುಟ್ಟಿಸಿದ ಮನೆ ದೇಹವೆಂಬ ಮಾಯಾಮಂದಿರ—ಆ ಮನೆ ತನ್ನದೆಂಬ ತಾನೆಂಬ ಮನೆಗೋಗಿಲೆಯಾದ ಮಾನವನ ಭ್ರಾಂತಿಯ ಕತ್ತಲೆ ಬೆಳಗಿನ ಆಲಿಂಗನದಿಂದ ಮೆಲ್ಲನೆ ಬಯಲಾಗುತ್ತದೆ. ಆದರೆ ಬೆಳಗಾಗದ ಮುನ್ನ ಮನೆಗೋಗಿಲೆಗೆ ತಾನು ಮನೆಗೋಗಿಲೆಯೆ ಎಂಬ ಭ್ರಾಂತಿ ಸತ್ಯಜ್ಞಾನವೆ. ಬೆಳಗುವ ಬಯಲು ಇಲ್ಲಿಯ ವರೆಗೆ ಮನೆಗತ್ತಲೆಯಲ್ಲಿ ಬಾಳಿದ ಕೋಗಿಲೆಗೆ ತನ್ನ 'ಜನನಸ್ಥಲ'ವಾದ ವನದ ವೈಶಾಲ್ಯವನ್ನು ತೋರುತ್ತದೆ. ತನ್ನ ಜನ್ಮಭೂಮಿಯ, ತನ್ನ ನಿಜಸ್ಥಲದ, 'ನಿಷ್ಕಲಲಿಂಗಸ್ಥಲ'ದ ದರ್ಶನವನ್ನು ಪಡೆದ ಚಿದಂಶಿಕನಾದ ಮಾನವ ದೇಹದ ಬಂಧನವನ್ನು ಬಿನ್ನಾಣದಿಂದ ಬಿಚ್ಚಿ, ಪಾರಾಗಿ ನಡೆದು, ತನ್ನ ನಿಲುಕಡೆಯ ಸ್ಥಲವಾದ ನಿಷ್ಕಲಲಿಂಗದಲ್ಲಿ ನೆಲೆಯಾಗಿ ನಿಂದು, ಮಹಾಬೆಳಗಿನ ನಿರವಯಲಲ್ಲಿ ಸ್ವಲೀಲಾನಂದವಿಲಾಸ ಬೀರುತ್ತ ಬೆಳಗುತ್ತಾನೆ; ಇಲ್ಲವೆ ಶಿವನ ಚಿದಂಶ ಶಿವನಲ್ಲಿ ಬೇರಿಲ್ಲದಂತೆ ಬೆರೆದು ಶಿವನಾಗಿ ಲೀಲೆಯಾಡುತ್ತ ಬೆಳಗುತ್ತದೆ.

ಸುಜ್ಞಾನೋದಯವಾದ ಚಿದಂಶಕ್ಕೆ ತನಗಂಟಿದ ಜಡದೇಹಸಂಸಾರದ ಕತ್ತಲೆಯ ನೆಯ್ಗೆ ಇದಿರಿಟ್ಟು ತೋರಿ, ತನ್ನ ನಿರಿ ನಿರಿಗೆಯನ್ನು ಬಿಚ್ಚುತ್ತ ತನ್ನ

ಸ್ವರೂಪದರ್ಶನವನ್ನು ಪ್ರತ್ಯಕ್ಷ ಮಾಡಿ ಕೊಡುತ್ತದೆ. ದೇಹವೆಂಬ ಪ್ರಯೋಗ ಶಾಲೆಯಲ್ಲಿ ಚಿದಂಶ ಎಂದರೆ ಚಿದಂಶಿಕನಾದ ಶರಣ ನಡೆಸಿದ, ತನ್ನನ್ನೇ ತಾನು ಬಿಚ್ಚಿ ನೋಡುವ ಈ ಕ್ರಿಯೆಯನ್ನು ನೋಡಬೇಕು. 'ನೋಡುವುದು, ನೋಡುವುದು. ನೋಡಲರಿಯದೆ ಕೆಟ್ಟಿತೀ ಲೋಕವೆಲ್ಲಾ.' ಅಂತರ್ಮುಖಿಯಾಗಿ ತನ್ನ ತಾ ವಿವರಿಸಿ ನೋಡದೆ 'ನಾನ್ಯಃ ಪಂಥಾ ವಿದ್ಯತೇಽಯನಾಯ.'

ಚಂದಿಮರಸರು ಕಂಡ ಜೀವಾತ್ಮನ, ಜೀವಹಂಸದ, ಮನೆಗೋಗಿಲೆಯ ಮನೋಹರ ಚಿತ್ರ ಅವರ ಈ ವಚನ:

ಎಲುವಿನ ಹಂಜರ, ಕರುಳಿನ ಜಾಳಿಗೆ, ಅಮೇಧ್ಯದ
ಹುತ್ತು, ಮೂತ್ರದ ಬಾವಿ, ಶ್ಲೇಷ್ಮದ ಕೆಸರು, ಕೀವಿನ ಸೋನೆ,
ನೆತ್ತರ ಮಡು, ನಾಡಿಗಳ ಸುತ್ತುವಳಿ, ನರವಿನ ನೆಣಜಂತ್ರ,
ಮಾಂಸದ ಪುಟ್ಟಿಯ ತೆಪ್ಪ, ಕಿಸುಕುಳಿನ ಹೇಸಿಕೆ, ಅತಿಹೇಯದ
ಮಲಿನ, ಅಸ್ಥಿರೋಮ ತೊಗಲ ಪಾಕುಳ, ಕ್ರಿಮಿಯ ಸಂಕುಳ,
ಉತ್ಪತ್ತಿ ಸ್ಥಿತಿಲಯದ ಬೀಜ, ರೇತರಜಸ್ಸಿನಲ್ಲಿ ಜನಿತ,
ಆಧಿವ್ಯಾಧಿಯ ತವರು ಮನೆ, ವಿಷಯದ ಭಯ,
ದುಃಖದಾಗರ, ಮೋಹದ ಬಲೆ, ತೋರಿ ಕೆಡುವ
ತನು ಇದು ನೀನೆಂದು ನಿನ್ನದೆಂದು ಮಾಡಬಾರದ
ಪಾಪವ ಮಾಡಿ ಮುಚ್ಚಿ ಹೂಸಿ ಹೊದಸಿ ಈ
ದೇಹಂಗಂಡು ಮರುಗುವೆ. ಅಘೋರ ನರಕದಲ್ಲಿ
ಕ್ಕುವಾಗ ಅಡ್ಡ ಬಪ್ಪರಾರೋ ? ಅಹಂ ಮಮತೆಯ
ಬಿಟ್ಟು ಸೋಹಂ ಬ್ರಹ್ಮಾಸ್ಮಿ ಎಂಬ ಕೇಡಿಲ್ಲದ
ಪದವಿಯ ಮಾಡಿಕೊಳ್ಳಾ ಮರುಳೇ ! ಬೇಡ, ಕೆಡುವೆ.
ನಿನ್ನ ನೀ ತಿಳಿದು ನೋಡಾ ಚಿಮ್ಮಲಿಗೆಯ ಚೆನ್ನರಾಮಾ.

ಲಿಂ. ಲೀ. ವಿ. ಚಾ. ಪು. ೧೦೦

ಮರ್ತ್ಯಮಂದಿರ ದೇಹ. ವಿವರಿಸಿ ನೋಡಿದರೆ ಹುರುಳಿಲ್ಲ. ಕೆಡುವ ಈ ಒಡಲು ನನ್ನದೆಂಬ ಮಮತೆ ಮರುಳತನ. 'ದೇಹೋಹಂ' ಎಂಬ ದೇಹಭಾವ ವಂತೂ ತೀರ ಮರುಳತನ. ಇದು ಮರ್ತ್ಯಕೋಟಿಯನ್ನಾವರಿಸಿದ ಮಾಯಾಜಾಲ. ಈ ಮಾಯಾಜಾಲವನ್ನು ತನ್ನ ತಾನೆ ನೋಡಬೇಕಲ್ಲದೆ ತನಗೆ ಬೇರೆ ಮಾರ್ಗವಿಲ್ಲ. ತಿಳಿದುನೋಡುವ ಎಚ್ಚತ್ತ ಮಾನವ ನಿಜವಾಗಿ ನೋಡಿದರೆ ಚಿದಂಶಿಕನಾದ ಶರಣ.

ಆ ಚಿದಂಶ ಚಿಮ್ಮಲಿಗೆಯ ಚೆನ್ನರಾಮನ ಅಂಶವೇ. ಅಂತೆಯೇ ಚಂದಿಮರಸರು ಹೇಳುವುದು 'ನಿನ್ನ ನೀ ತಿಳಿದು ನೋಡಾ ಚಿಮ್ಮಲಿಗೆಯ ಚೆನ್ನರಾಮಾ', ಎಂದು. ತನ್ನ ನಿಜ ಸ್ವರೂಪವನ್ನು ಮರೆದು ಮರುಳಾದ ಚೆನ್ನರಾಮನೇ ಮಾನವ. ಮಾನವ್ಯದ ಹೊದಿಕೆಯನ್ನು ತೆಗೆದೊಗೆದ ಮಾನವನೆ ತನ್ನ ಚಿಜ್ಯೋತಿಯಲ್ಲಿ ನಿಂದ ನಿರಾಳ ಚೆನ್ನರಾಮ.

ಎಚ್ಚತ್ತ ಮಾನವನ ಆತ್ಮದರ್ಶನ ಅತ್ಯದ್ಭುತ, ಅತಿ ವಿಚಿತ್ರ. ಕತ್ತಲೆಯಲ್ಲಿ ನನಗೆ ನಾನು ಕಂಡುದಿಲ್ಲ; ಸುತ್ತುಮುತ್ತಿದ ಪ್ರಪಂಚವೂ ಕಂಡುದಿಲ್ಲ. ಸುಜ್ಞಾನೋದಯದ ಅಖಂಡಿತ ದಿವ್ಯಪ್ರಕಾಶದಲ್ಲಿ ನನ್ನ ನಿಜರೂಪ ನನಗೆ ಕಾಣಬಂದಿತ್ತು: ಸುತ್ತಣ ವಿಶ್ವಸ್ವರೂಪವೂ ಪ್ರತ್ಯಕ್ಷವಾಯಿತ್ತು. ಈ ಪರಮಾದ್ಭುತ ದರ್ಶನದ ದಿವ್ಯಾನುಭವ ಅಲ್ಲಮ ಪ್ರಭುದೇವರ ಈ ವಚನ:

> ಸತ್ತ ಕೋಳಿಯೆದ್ದು ಕೂಗಿತ್ತ ಕಂಡೆ! ಮೊತ್ತದ ಮಾಮರ
> ಉಲಿಯಿತ್ತ ಕಂಡೆ! ಕತ್ತಲೆ ಬೆಳಗಾಯಿತ್ತ ಕಂಡೆ!
> ಹೊತ್ತಾಱಿಯೆದ್ದು ಹೊಲಬುದಪ್ಪಿತ್ತ ಕಂಡೆ!
> ಇದೇನು·ಹತ್ತಿತ್ತೆಂದಱಿಯೆ ಗೊಹೇಶ್ವರಾ ?

ಲಿಂ. ಲೀ. ವಿ. ಚಾ. ಪು ೯೧

ಶಿವಜೀವ ಸಂಯೋಗದ, ಲಿಂಗಾಂಗ ಸಂಬಂಧದ ಪರಿಣಾಮವೇ ಈ ಸ್ವಾನುಭಾವ. ಇದೇ ಜೀವನದ ಕತ್ತಲೆಯನ್ನು ಪರಿಹರಿಸಿ ನಿಜದ ನಿರಾಳದಲ್ಲಿ ನಿಲಿಸುವ ಷಟ್ಸ್ಥಲಮಾರ್ಗ. ಶರಣರ ಅಭಿಮತದಂತೆ ಇದೇ ಮಾನವನನ್ನು ಕೇಡಿಲ್ಲದ ಪದವಿಯಾದ ನಿಜಸ್ಥಲಕ್ಕೆ ಮುಟ್ಟಿಸುವ ಮಾರ್ಗ.

ಚಿದಂಶನಾದ ಆತ್ಮನಿಗೆ ಸುಜ್ಞಾನೋದಯವಾಗಿ ತನ್ನ ನಿಜವಾದ 'ನಿಷ್ಕಲ ಲಿಂಗಸ್ಥಲ'ದಲ್ಲಿ ನೆಲೆಯಾಗಿ ನಿಲ್ಲುವೆನೆಂದರೆ ಶರಣರೊಪ್ಪದ ಮಾತು. ಕೇವಲ ಜ್ಞಾನಾದ್ವೈತ ಇಲ್ಲವೆ ಭಾವಾದ್ವೈತ ಷಟ್ಸ್ಥಲಮಾರ್ಗದ ಚರಮಸಿದ್ಧಿಯಲ್ಲ. ದೇಹ ನಾನಲ್ಲ, ಪ್ರಾಣ ನಾನಲ್ಲ, ಕರಣೇಂದ್ರಿಯ ನಾನಲ್ಲವೆಂದು ದೇಹಸಂಸಾರವನ್ನೆಲ್ಲ ನೇತಿಗಳೆದು, ಇವೆಲ್ಲ ಜಡ, ಮಿಥ್ಯೆ, ಮಾಯೆಯೆಂದು ನಿರಾಕರಿಸುವ ಜೀವಪರಮರ ಐಕ್ಯ ಶರಣಚಾರಿತ್ರದ ಕೊನೆಯ ಮಂಗಲಪಾಠವಲ್ಲ. ದೇಹಾದಿಗಳನ್ನು ಮಾಯೆಯೆಂದು ಅಲ್ಲಗಳೆದು ನಡೆವ ಸನ್ಯಾಸಿಯ ಕೇವಲಾದ್ವೈತಮಾರ್ಗ ಶರಣಸಮ್ಮತ ಮಾರ್ಗವಲ್ಲ. ಶರಣಮಾರ್ಗ 'ನಿರಾಸ'ದ ಮಾರ್ಗವಲ್ಲ. ವನದ ಕೋಗಿಲೆ

ಮನೆಯನ್ನು ಬಿಟ್ಟು ಹಾರಬಹುದು. ಅದು ಸುಲಭ. ಆದರೆ ಮನೆಯನ್ನು ಕಟ್ಟಿಕೊಂಡು ಹಾರಿ ಮನೆಯನ್ನು ವನವನ್ನಾಗಿಸುವುದು ಅತ್ಯಂತ ದುಷ್ಕರ. ದುಷ್ಕರವಾದ ಈ ಕಾರ್ಯವನ್ನೇ ಅತ್ಯಂತ ಸುಕರಗೊಳಿಸುವುದು ಜ್ಞಾನದಿಂದುತ್ತರವಾದ, ಸುಜ್ಞಾನ ಪ್ರಕಾಶದಲ್ಲಿ ನಡೆವ ಭಕ್ತಿಮಾರ್ಗ, ಅದೇ ಷಟ್ಸ್ಥಲ ಮಾರ್ಗ, ಅದೇ ಶರಣಮಾರ್ಗ.

ಶರಣನ ಅಪರೋಕ್ಷಾನುಭೂತಿಯ ದೃಷ್ಟಿಗೆ ನಾಮರೂಪ ಕ್ರಿಯಾತ್ಮಕವಾದ ವಿಶ್ವಪ್ರಪಂಚ, ದೇಹ ಪ್ರಾಣ ಕರಣ ಇಂದ್ರಿಯಗಳೆಲ್ಲ ಹುಸಿಯಲ್ಲ, ಮಾಯೆಯಲ್ಲ. ಲಿಂಗಮುಖದಲ್ಲಿ ಉದಯವಾದ ಪೃಥ್ವಿ ಮುಂತಾದ ಪಂಚಭೂತಗಳು, ಪಂಚೀಕರಣವನೆಯ್ದಿದ ಪಂಚವಿಂಶತಿ ತತ್ತ್ವಗಳಿಂದ ನಿರ್ಮಿತವಾದ ದೇಹಾದಿಗಳು ತತ್ತ್ವತಃ ಲಿಂಗವಲ್ಲದೆ ಭಿನ್ನವಲ್ಲ. ಘನಗಂಭೀರ ಸಾಗರದ ನೊರೆ ತೆರೆ ಸೀಕರ ಬುದ್ಬುದವೆಲ್ಲ ಸಾಗರವಲ್ಲದೆ ಮತ್ತೇನು ? ಅಂತೆಯೆ ಶರಣ ತನ್ನ ಗೂಡಾದ ತನು ಕರಣಾದಿಗಳನ್ನು ನಿರಾಕರಿಸಲಿಲ್ಲ. ಅವನ್ನೂ ಮೇಲಕ್ಕೆತ್ತಬೇಕು; ಲಿಂಗಮುಖದ ಉದಯವಾದ ಅವನ್ನು ಲಿಂಗಜ್ಯೋತಿಯಿಂದ ಬೆಳಗಬೇಕು; ಅವುಗಳ ಗುಣಧರ್ಮ ಕರ್ಮ ವಾಸನೆಯನ್ನು ಸುಡಬೇಕು; ಲಿಂಗಕ್ಕೆ ಅರ್ಪಿತ ಮಾಡಬೇಕು. ಅಜ್ಞಾನದಲ್ಲಿ ಅಧೋಮುಖವಾಗಿ ಹರಿವ ಪಂಚಭೌತಿಕ ದೇಹ ಹೇಯ. ಆದರೆ ಸುಜ್ಞಾನದ ಮುಖದಲ್ಲಿ ಊರ್ಧ್ವಮುಖವಾಗಿ ನಿಜಸ್ಥಲದೆಡೆಗೆ ನಡೆವ ಕಾಯ ಕೈಲಾಸ.

> 'ಆ ಲಿಂಗದಿಂದೊಗೆದ ದೇಹೇಂದ್ರಿಯ ಮನಃಪ್ರಾಣಾದಿಗಳೆಲ್ಲಾ
> ಆ ಲಿಂಗದ ಉಪಕರಣಂಗಳಾದ ಕಾರಣ ದೇಹೇಂದ್ರಿಯ
> ಮನಃಪ್ರಾಣಾದಿಗಳೆಲ್ಲಾ ಆ ಪರವಸ್ತುವಿಂಗೆ
> ಭಿನ್ನವೆಂಬ ಅಜ್ಞಾನಿಯ ಮೆಚ್ಚ ಕೂಡಲಸಂಗಯ್ಯ.'

ಲಿಂ. ಲೀ. ವಿ. ಚಾ. ಪು. ೧೯೩

ಪರವಸ್ತುವಿನ ಸೊಮ್ಮಾದ ದೇಹೇಂದ್ರಿಯಾದಿಗಳು ಪರವಸ್ತುವಿಗೆ ಸಲ್ಲತಕ್ಕುವು. ಪರವಸ್ತುವಿನಲ್ಲಿ ಕಾಯಾರ್ಪಣ ಕರಣಾರ್ಪಣ ಭಾವಾರ್ಪಣವಾಗಬೇಕು. ಮಾನವ ದೇಹಧಾರಿಯಾದ ಚಿದಂಶ ಶರಣನ ಸರ್ವಾಂಗ ಸಚ್ಚಿದಾನಂದ ನಿತ್ಯಪರಿಪೂರ್ಣವೆ ಸ್ವಭಾವವಾದ 'ನಿಷ್ಕಲಲಿಂಗ'ದಲ್ಲಿ ಲೀಯವಾಗಿ ನಿಜಲೀಲೆಯ ಸಹಜ ವಿಲಾಸವನ್ನು ಬಿತ್ತರಿಸಬೇಕು. ಈ ಸಹಜವಿಲಾಸ ಸುಜ್ಞಾನೋದಯವಾದ ಶರಣನಾಚರಿಸುವ ಸದ್ಭಕ್ತಿಯ ಪರಮಫಲ. ಈ ಭಕ್ತಿ ಭಿನ್ನಭಕ್ತಿಯಲ್ಲ. ಈ ಭಕ್ತಿಯಪೂಜೆತನಗನ್ಯ ಭಿನ್ನವಾದ ವಸ್ತುವಿನ ಭಿನ್ನಪೂಜೆಯಲ್ಲ. ಶರಣನ ಭಕ್ತಿ

ಶಿವಾದ್ವೈತ ಭಕ್ತಿ. ಶರಣನ ಪೂಜೆ ಆತ್ಮಪೂಜೆ, ತನ್ನ ನಿಜಸ್ಥಲದ ಪರಮಾತ್ಮನ ಪೂಜೆ.

ಶಿವಜ್ಞಾನ ಪ್ರಕಾಶದಲ್ಲಿ ನಡೆವ ಈ ಶಿವಾದ್ವೈತ ಭಕ್ತಿಯ ರಹಸ್ಯದರ್ಶನವನ್ನು 'ಗುರುಕಾರುಣ್ಯ ಸ್ಥಲ'ದಲ್ಲಿಯೇ ಸ್ಪಷ್ಟವಾಗಿ ಪಡೆಯಬಹುದು. ಅದೋ ನೋಡಿ, ಗುರುಕರುಣದಲ್ಲಿ ಬೆಳಗಾಗುತ್ತಿರುವ ಶರಣನ ದೇಹೇಂದ್ರಿಯ ಪ್ರಾಣಕರಣ ಹೃದಯ ಭಾವಗಳನ್ನು:

'ಅಯ್ಯಾ ಎನ್ನ ಹೃದಯದಲ್ಲಿ ನ್ಯಸ್ತವಾಗಿಹ ಪರಮ
ಚಿದ್ಬೆಳಗ ಹಸ್ತಮಸ್ತಕಸಂಯೋಗದಿಂದೊಂದುಗೂಡಿ
ಮಹಾಬೆಳಗ ಮಾಡಿದಿರಲ್ಲಾ! ಅಯ್ಯಾ ಎನ್ನ ಮಸ್ತಕ
ದೊಳೊಂದುಗೂಡಿದ ಮಹಾಬೆಳಗ ತಂದು ಭಾವದೊಳ
ಗಿಂಬಿಟ್ಟಿರಲ್ಲಾ ! ಅಯ್ಯಾ ಭಾವದೊಳಗೆ ಕೂಡಿದ
ಮಹಾಬೆಳಗ ತಂದು ಮನಸ್ಸಿನೊಳಗಿಂಬಿಟ್ಟಿರಲ್ಲಾ !
ಅಯ್ಯಾ ಎನ್ನ ಮನಸ್ಸಿನೊಳು ಕೂಡಿದ ಮಹಾಬೆಳಗ
ತಂದು ಎನ್ನ ಕಂಗಳೊಳಗಿಂಬಿಟ್ಟಿರಲ್ಲಾ ! ಅಯ್ಯಾ ಎನ್ನ
ಕಂಗಳೊಳು ಕೂಡಿದ ಮಹಾಬೆಳಗ ತಂದು ಕರಸ್ಥಲ
ದೊಳಿಂಬಿಟ್ಟಿರಲ್ಲಾ ! ಅಯ್ಯಾ ಎನ್ನ ಕರಸ್ಥಲದಲ್ಲಿ
ಥಳಥಳಿಸಿ ಬೆಳಗಿ ಹೊಳೆವುತ್ತಿಪ್ಪ ಅಖಂಡ ತೇಜವನೆ
ಇಷ್ಟಲಿಂಗವೆಂಬ ದೃಷ್ಟವ ತೋಱಿ ನಿಶ್ಚಯವ
ಶ್ರೋತ್ರದಲ್ಲಿ ಸೃಜಿಸಿದಿರಲ್ಲಾ ! ಅಯ್ಯಾ ಶ್ರೋತ್ರದಲ್ಲಿ
ಸೃಜಿಸಿದ ಸುಮಂತ್ರದೊಳಗೆ ನೀವು ನಿಮ್ಮ ಮಹತ್ವವ
ಹುದುಗಿದಿರಲ್ಲಾ ! ಅಯ್ಯಾ ಎನ್ನ ಆರಾಧ್ಯ ಕೂಡಲಸಂಗಮ
ದೇವಾ, ಎನ್ನೊಳಗೆ ನಿಮ್ಮಿರವ ಈ ಪರಿಯಲ್ಲಿ ಕಾಣಿಸುತ್ತಿರ್ದಿರಲ್ಲಾ !

ಲಿಂ. ಲೀ. ವಿ. ಚಾ. ೧೪೨

ಗುರುಕಾರುಣ್ಯ ಪಡೆದ ಶಿಷ್ಯನ ಮಸ್ತಕದ ಚಿತ್‌ಕಳೆಯೆ 'ಪರಂಜ್ಯೋತಿರ್ಲಿಂಗ'ವಾದ ಸದ್ಗುರುವಿನ ಹಸ್ತಸಂಯೋಗದಿಂದ ಮಹಾಬೆಳಗಾಗಿ ಪ್ರಭಾವಿಸಿ, ಅದೇ ಮಹಾಬೆಳಗು ಭಾವವನ್ನು ಇಂಬುಗೊಂಡು, ಅದೇ ಮಹಾಬೆಳಗು ಮನವನಿಂಬುಗೊಂಡು, ಕಂಗಳನಿಂಬುಗೊಂಡು, ಕಂಗಳಿಂದವತರಿಸಿ ಕರಸ್ಥಲದಲ್ಲಿ ಥಳಥಳಿಸಿ ಬೆಳಗಿ ಹೊಳೆವುತ್ತಿಪ್ಪ ಅಖಂಡ ತೇಜವೆ ಇಷ್ಟಲಿಂಗದಲ್ಲಿ ದೃಷ್ಟವಾಗಿ ತೋರುತ್ತದೆ.

ಶರಣನ ಇಷ್ಟಲಿಂಗದ ಪೂಜೆ ಮೊದಲು ತನ್ನ ಹೃದಯದಲ್ಲಿ ನ್ಯಸ್ತವಾಗಿದ್ದು ಗುರುಕಾರುಣ್ಯದಿಂದ ಪ್ರದೀಪ್ತವಾಗಿ ಪ್ರಜ್ವಲಿಸಿದ ತನ್ನ ಮಹಾಬೆಳಗಿನ ಪೂಜೆ. ಇಲ್ಲಿಯ ಭಕ್ತಿರತಿ ತನ್ನ ನಿಜವಾದ ಮಹಾಬೆಳಗನೊಡಗೂಡಬೇಕೆಂಬ ಪರಮಾತ್ಮ ರತಿ. 'ಪೂಜಿಸುವ ಭಕ್ತನೂ ಪೂಜಿಸಿಕೊಂಬ ವಸ್ತುವೂ ಈ ಉಭಯವೂ ಸಧಾಶಿವಮೂರ್ತಿ ಲಿಂಗವು ತಾನು ತಾನೆ.'[೧] ಲಿಂಗಾಂಗವೊಂದೆಂಬ ಶಿವಾದ್ವೈತ ಜ್ಞಾನ ಮತ್ತು ಈ ಐಕ್ಯಜ್ಞಾನದ ಪ್ರಕಾಶದಲ್ಲಿ ಅರಳುವ ಶಿವಾದ್ವೈತ ಭಕ್ತಿಯ ಸರಸ ಸಮನ್ವಯ ಈ ಶರಣಮಾರ್ಗದ ನವ್ಯಾನುಭವ. ಅಂತರಂಗದ ಅರಿವೇ ಆಚಾರವಾಗಿ ಹರಿವ ಈ ಮಾರ್ಗದಲ್ಲಿ ಕ್ರಿಯಾಜ್ಞಾನಗಳ ಸಾಮರಸ್ಯ ಮೊದಲಿಂದ ಕೊನೆಯವರೆಗೆ ಕಂಡುಬರುತ್ತದೆ. ಸುಜ್ಞಾನೋದಯದಲ್ಲಿ ಜೀವಭಾವವಳಿದು ಶಿವಭಾವ ಪ್ರಕಾಶವಾಗುವಂತೆ ಸದ್ಭಕ್ತಿಯ ಉದಯೋನ್ಮುಖದಲ್ಲಿ ದೇಹ ಪ್ರಾಣ ಕರಣೇಂದ್ರಿಯಾದಿಗಳ ಗುಣಧರ್ಮಕರ್ಮವೆಲ್ಲ ಸುಟ್ಟು ಅಂಗವನ್ನೆಲ್ಲ ಬಸವಣ್ಣನವರು ಹೇಳುವ 'ಮಹಾಬೆಳಗು' ಆವರಿಸುತ್ತದೆ. ಈ ಬೆಳಗು ಶರಣನ ಸರ್ವಾಂಗದಲ್ಲಿ ವೇಧಿಸಿದರೆ ಸರ್ವಾಂಗವೆಲ್ಲ ಪ್ರಜ್ವಲಿಸಿ ತೊಳಗಿ ಬೆಳಗುವ ಲಿಂಗವಾಗುತ್ತದೆ.

> ಕರಸ್ಥಲದ ಲಿಂಗವು ಕಾಯಕ್ಕೆ ವೇಧಿಸಿದಲ್ಲಿ ಕಾಯ
> ಲಿಂಗವಾಯಿತ್ತು. ಅಂತಾದ ಮಹಾಘನಲಿಂಗವೇ ಪ್ರಾಣಕ್ಕೆ
> ವೇಧಿಸಿದಲ್ಲಿ ಪ್ರಾಣ ಲಿಂಗವಾಯಿತ್ತು. ಅಂತಾದ ಮಹಾ
> ಘನಲಿಂಗವೇ ಭಾವಕ್ಕೆ ವೇಧಿಸಿದಲ್ಲಿ ಭಾವ ಲಿಂಗವಾಯಿತ್ತು.
> ಅಂತಾದ ಮಹಾಘನಲಿಂಗವೇ ಜ್ಞಾನಕ್ಕೆ ವೇಧಿಸಿದಲ್ಲಿ
> ಜ್ಞಾನ ಲಿಂಗವಾಯಿತ್ತು. ಅಂತಾದ ಕಾರಣ ನಮ್ಮ
> ಗುಹೇಶ್ವರನ ಶರಣಂಗೆ ಆಜಿವಬಿತು ಕುರುಹು ನಿಷ್ಪತ್ತಿ
> ಯಾಗಿ ತಾನೆಂಬ ಭಾವವು ಉರಿಯುಂಡ ಕರ್ಪುರದಂತಾಯಿತ್ತು !

ಲಿಂ. ಲೀ. ವಿ. ಚಾ. ಪು. ೩೭೩

ಅಂತೆಯೆ ಶರಣ ಸರ್ವಾಂಗಲಿಂಗಿ. ಮಾನವನ ದೇಹಕರಣಾದಿಗಳಲ್ಲಿ ತೋರುವ ಈ ಅದ್ಭುತಪರಿವರ್ತನೆ ಶರಣಮಾರ್ಗಕ್ಕೆ ವಿಶಿಷ್ಟವಾದ ಶಿವಯೋಗದ ಪರಿಣಾಮ. ಲಿಂಗಾಂಗ ಸಮರಸವಾದ, ಏಕಾರ್ಥವಾದ ಅರಿವು ಮತ್ತು ಲಿಂಗದ ಕುರುಹು ನಿಷ್ಪತ್ತಿಯಾಗಿ, ತಾನು ಲಿಂಗವೆಂಬ ಭಾವ 'ಉರಿಯುಂಡ ಕರ್ಪುರದಂತೆ' ಬಯಲಾಗಿ

೧ ಲಿಂ. ಲೀ. ವಿ. ಚಾ. ಪು. ೧೮೩

ಬೆಳಗುತ್ತದೆ. ಇಂತಹ ಶರಣ, ಶಿವಯೋಗಿ ಉದಯಕ್ಕೆ ಹುಟ್ಟಲಿಲ್ಲ, ಅಸ್ತಮಾನಕ್ಕೆ ಅಳಿಯಲಿಲ್ಲ. ಮಾನವನ ದೇಹದ ಕತ್ತಲೆ, ಪ್ರಾಣದ ಕತ್ತಲೆ, ಕರಣೇಂದ್ರಿಯಗಳ ಕತ್ತಲೆ, ಹೃದಯ ಬುದ್ಧಿ ಭಾವದ ಕತ್ತಲೆ, ಸರ್ವಸಂಶಯ ಸಮಸ್ಯೆ ಪ್ರಶ್ನೆಗಳನ್ನೆಲ್ಲ ಎದುರಿಸಿ ಬಿನ್ನಾಣದಿಂದ ಪರಿಹರಿಸಿ ನಿಜಸ್ಥಲದಲ್ಲಿ ನಿಂದ ಈ ನಿರಾಳದ ನಿಲವಿಗೆ ಇದಿರೆಂಬುದಿಲ್ಲ, ತಾನೆಂಬುದೂ ಇಲ್ಲ; ಬೇಕೆಂಬುದಿಲ್ಲ, ಬೇಡವೆಂಬುದೂ ಇಲ್ಲ; ಇಹಪರವಿಲ್ಲ; ಪುಣ್ಯಪಾಪದ ಫಲಪದವಿಗಳಿಲ್ಲ.

'ಉದಯಾಸ್ತಮಾನವೆಂಬೆರಡಳಿದ ಶಿವಯೋಗಿ
ಸದಮಲದ ಬೆಳಗಿನ ಬೆಳಗಿನೊಳಗೆ
ಫಲಪದವನೊದೆದು ನಿಜದಲ್ಲಿ ನಿರ್ವಯಲಾದ
ಚಿದ್ರೂಪ ಚಿನ್ಮಯನು ಚಿತ್‌ಪ್ರಕಾಶನು'[೧]

'ಚಿದ್ರೂಪ ಚಿನ್ಮಯ ಚಿತ್‌ಪ್ರಕಾಶ'ನಾದ ಶರಣನ ಈ ಮಾರ್ಗದಲ್ಲಿ ಮಾನವನ ಸರ್ವಾಂಗವೆಲ್ಲ 'ನಿಜದಲ್ಲಿ ನಿರವಯಲ'ನೆಯ್ದುವ ವಿಶ್ವಾದ್ಭುತವಾದ ಪರಮಸಿದ್ಧಿಯಿದೆ. ಈ 'ನಿರವಯಲಿ'ನ ರಹಸ್ಯವನ್ನು 'ನಿಂದಡೆ ನೆಳಲಿಲ್ಲ, ನಡೆದರೆ ಹಜ್ಜೆಯಿಲ್ಲ'ದ ಅಲ್ಲಮಪ್ರಭುದೇವರ ದಿವ್ಯಜೀವನ ಲೀಲಾವಿಲಾಸವನ್ನು ಚಿತ್ರಿಸುವ ಚಾಮರಸನ ಪ್ರಭುಲಿಂಗಲೀಲೆ ಕನ್ನಡಿಸುವಂತಿದೆ. ತಮ್ಮ ಗುರುವಾದ ಸಿದ್ಧರಾಮನನ್ನು 'ಒಡ್ಡರಾಮ'ನೆಂದು ಕರೆದ ಅಲ್ಲಮಪ್ರಭುವನ್ನು ತಕ್ಕೆಯಲ್ಲಿ ಬಂಧಿಸಲೆಂದು ಯತ್ನಿಸಿದ ಗುಡ್ಡಗಳ ಹಿಡಿತಕ್ಕೊಳಗಾಗದ ಪ್ರಭುವಿನ ಬಯಲೊಡಲು, ಗೋರಕ್ಷನ ಖಡ್ಗ ಅಪ್ಪಲರಿಯದ ಅದೇ ಪ್ರಭುಲಿಂಗನ ಬಯಲುದೇಹ, ತನ್ನ ನಿಜದಲ್ಲಿ ನಿರವಯಲಾದ ಶರಣನ ನಿಜಸ್ಥಲದ ನಿಲವಿಗೆ ಸ್ಪಷ್ಟವಾದ ನಿದರ್ಶನದಂತಿದೆ. ಹಲವಾರು ಶರಣರು ನಿರವಯಲನೆಯ್ದಿದ ಸಂಗತಿ ಅವರ ಚರಿತೆಗಳಿಂದ ತಿಳಿದುಬರುತ್ತದೆ. ಜಾಗತಿಕ ಅನುಭವ ಸಾಹಿತ್ಯದಲ್ಲಿ, ಅನುಭವ ಕ್ಷೇತ್ರದಲ್ಲಿ ಅತ್ಯಪೂರ್ವವಾದ ನಿಜಸ್ಥಲದ ನಿರವಯಲು ಅತ್ಯಂತ ಗಮನಾರ್ಹವಾದ ಸಂಗತಿ.

ಮಹಾಬೆಳಗನೊಳಕೊಂಡು ನಿರವಯಲಾದ ಶರಣನ ಲೋಕವಿಲಕ್ಷಣವಾದ ಮೂರ್ತಾಮೂರ್ತ ಸ್ವರೂಪವನ್ನು ಚೆನ್ನಬಸವಣ್ಣನವರು ಹೀಗೆ ಹಾಡುತ್ತಾರೆ.[೨]

೧ ಸಿ. ಸಾ. ಸಂ. ಪು. ೧೫೧

೨ ಸಿ. ಸಾ. ಸಂ. ಪು. ೨೨೨

ಎಲೆಯಿಲ್ಲದ ವೃಕ್ಷ ಫಲವಿಲ್ಲದ ಹಣ್ಣು
ಮೆಲಲಿಲ್ಲದ ರುಚಿಯು ಸವಿದು ಸವಿದು ॥ಪಲ್ಲ॥
ಸುಲಲಿತ ಸೂಕ್ಷ್ಮದ ನಿಲವು ನಿಜದೊಳಗಡಗಿ
ಉಲುಹಡಗಿ ಉನ್ಮನಿಯು ಸ್ಥಾನದೊಳಗೆ
ನೆನಹಳಿದು ಮನವಳಿದು ತಾನು ತಾನಾದಲ್ಲಿ
ವಾಙ್ಮನಕಗೋಚರವು ನಿರ್ವಯಲಾದುದು ॥೧॥

ಸಾಕಾರ ನಿರಾಕಾರಗಳ ಸಮರಸೈಕ್ಯದ ಶರಣಲಿಂಗ 'ಎಂತಿರುತಿರ್ದೊಡಂತೆ' ಲಿಂಗಪೂಜೆ, ಲಿಂಗಾರ್ಪಣ. ಲಿಂಗೈಕ್ಯಸಂಪದ. 'ಮಂಜಿನ ಮಳೆಯಂತೆ, ಬಿಸಿಲ ಕುದುರೆಯಂತೆ, ಬೆಟ್ಟದ ಶಬ್ದದಂತೆ' ಸುಳಿವ 'ಶರಣನ ಸುಳುಹಿನ ಸೊಗಸನುಪ ಬಾರದು.'

ಕಂಡುದೆಲ್ಲಾ ಪಾವನ, ಕೇಳುವುದೆಲ್ಲಾ ಪರಮ ಬೋಧೆ.
ಮುಟ್ಟಿತೆಲ್ಲಾ ಪರುಷದ ಸೋಂಕು, ಒಡನೆ ನುಡಿ
ದವರೆಲ್ಲರೂ ಸದ್ಯೋನ್ಮುಕ್ತರು. ಸುಳಿದ ಸುಳುಹೆಲ್ಲಾ
ಜಗತ್ಪಾವನ. ಮುಟ್ಟಿದ ಧರೆಯೆಲ್ಲವೂ ಅವಿಮುಕ್ತಿ
ಕ್ಷೇತ್ರ. ಸೋಂಕಿದ ಜಗವೆಲ್ಲವೂ ಪುಣ್ಯತೀರ್ಥಂಗಳು.
ಶರಣೆಂದು ಭಕ್ತಿ ಮಾಡಿದವರೆಲ್ಲರೂ ಸಾಯುಜ್ಯರು.
ಗೊಹೇಶ್ವರನ ಶರಣನ ಸುಳುಹಿನ ಸೊಗಸನುಪಮಿಸಬಾರದು.

ಲಿಂ. ಲೀ. ವಿ. ಚಾ. ಪು. ೪೧೪

ಮರ್ತ್ಯದ ಕತ್ತಲೆಯ ದಸರಿದೊಡಕಿನಲ್ಲಿ ಎಡೆಯಾಡುವ ಮಾನವ ಕೋಟಿಗೆ ಆತ್ಯಂತಿಕವಾದ, ಸಹಜವಾದ, ನಿಜವಾದ, ಸತ್ಯಸ್ವಭಾವವಾದ, ಪರಮಪದವಿಯಾದ ಈ ಲಿಂಗಲೀಲಾವಿಲಾಸದ ನವ್ಯದರ್ಶನವನ್ನು ಮಾಡಿಕೊಡುವ ಶರಣರ ಚಾರಿತ್ರ ವಾಙ್ಮನಕ್ಕೆ ಅಗೋಚರವಾದರೂ ನಿಜಾನುಭೂತಿಯ ದೃಷ್ಟಿಗೆ ಪ್ರತ್ಯಕ್ಷವೆಂಬುದನ್ನು ಅರ್ಥಯಿಸಿ ತೋರಿದ ಕಲ್ಲಮಠದ ಪ್ರಭುದೇವರು ಮಾನವಕೋಟಿಗೆ ಪರಮಕಲ್ಯಾಣವನ್ನು ನೀಡಿ ತಮ್ಮ ಮಣಿಹವನ್ನು ಪೂರೈಸಿದ್ದಾರೆ. ಅತ್ಯಪೂರ್ವವಾದ ಮಹಾಮಂಗಲ ಮಾನವ ಜೀವನದ ಬವ್ಯ ಭವಿಷ್ಯವೆಂದು ಲಿಂಗಲೀಲಾವಿಲಾಸಚಾರಿತ್ರದ ಮುಖಾಂತರ ಸಾರಿ ಕನ್ನಡಸಾಹಿತ್ಯದ ಪ್ರಜ್ವಲಿಸುವ ಪ್ರಭೆಯನ್ನು ಜಗತ್ತಿಗೆ ಬೀರಿದ್ದಾರೆ. ಅನುಭವದ ಸತ್ಯಾನಂದಜ್ಯೋತಿ ಸಾಕಾರಸಾಹಿತ್ಯವಾದರೆ ಅದು ಮಹಾಸಾಹಿತ್ಯವಲ್ಲದೆ ಮತ್ತೇನು ?

ಲಿಂಗಲೀಲಾವಿಲಾಸಚಾರಿತ್ರವನ್ನು ನಾಲ್ಕು ತಾಡವೋಲೆಯ ಪ್ರತಿಗಳನ್ನಿಟ್ಟು ಕೊಂಡು ಸಂಸ್ಕರಿಸಲಾಗಿದೆ. ಈ ಪ್ರತಿಗಳನ್ನು ದಯಪಾಲಿಸಿದ ಮಹಾಶಯರಿಗೆ ಹೃದಯದ ಅಭಿವಂದನೆಗಳು. ಮುದ್ರಣಪ್ರತಿಯನ್ನು ಸಿದ್ಧಮಾಡಿಕೊಟ್ಟವರು ಶ್ರೀ ಕೆ. ಎಸ್. ಪಾಟೀಲ ಅವರು. ಅತ್ಯಂತ ಶ್ರದ್ಧೆ ಮತ್ತು ಶ್ರಮವಹಿಸಿ ಫಲಾಪೇಕ್ಷೆಯಿಲ್ಲದೆ ಇಂತಹ ಹಲವಾರು ಉದ್‌ಗ್ರಂಥಗಳ ಮುದ್ರಣ ಪ್ರತಿಗಳನ್ನು ಮಾಡಿ ಕೊಟ್ಟ ಶ್ರೀ ಪಾಟೀಲ ಅವರು ಒಂದು ರೀತಿಯ ಕರ್ಮಯೋಗಿಗಳು. ಅವರನ್ನು ಮನವಾರೆ ಅಭಿನಂದಿಸುವುದೊಂದು ಆನಂದ. ಇವರು ಮತ್ತು ನಿವೃತ್ತ ಮುಖ್ಯಾಧ್ಯಾಪಕರಾದ ಶ್ರೀ ಗುರುಸಿದ್ಧಯ್ಯ ಜೆ. ಹಿರೇಮಠ ಅವರು ಗ್ರಂಥವನ್ನು ಸಂಸ್ಕರಿಸುವಲ್ಲಿ ತಮ್ಮ ವಿದ್ಯೆ ಮತ್ತು ಅನುಭವದಿಂದ ಹೊಮ್ಮುವ ಸಲಹೆ ಸೂಚನೆಗಳನ್ನಿತ್ತು ಹೃತ್‌ಪೂರ್ವಕಸಹಕರಿಸಿದ್ದಾರೆ. ಇವರಿಗೆ ನಾವು ಕೃತಜ್ಞತೆಯನ್ನು ವ್ಯಕ್ತಪಡಿಸುತ್ತೇವೆ. ಕೈಕೊಂಡ ಈ ಮಹತ್‌ಕಾರ್ಯವನ್ನು ಸಂಪೂರ್ತಿಗೊಳಿಸಿದ ಪ್ರಬಲವಾದ ಪ್ರಚೋದಕ ಶಕ್ತಿಯೆಂದರೆ ಇಂದು ರಾವೂರಿನ ಮತ್ತು ಆದವಾನಿಯ ಮಠಾಧ್ಯಕ್ಷರಾದ ಶ್ರೀ. ನಿ. ಪ್ರ. ಸ್ವ. ಬೋಳಬಸವ ಮಹಾಸ್ವಾಮಿಗಳು. ಯಾವ ಮಣಿದು ತನ್ನ ಭಾಷೆಯಲ್ಲಿ ಕೃತಜ್ಞತೆಯನ್ನು ಸಲ್ಲಿಸಬೇಕು ಈ ಮಹನೀಯರಿಗೆ.

ಶರಣಮಾರ್ಗದಲ್ಲಿ ನಡೆದು ಜೀವನದ ಬೆಳಗನ್ನು ಕಂಡು ಲಿಂಗೈಕ್ಯರಾದರು ಶ್ರೀಮದಥಣಿ ಮುರುಘೇಂದ್ರ ಮಹಾಶಿವಯೋಗಿಗಳು. ತ್ರಿಕರಣಪೂರ್ವಕವಾಗಿ ತಮ್ಮ ಸದ್ಭಕ್ತಿಯ ಸೇವೆಯನ್ನು ಸಲ್ಲಿಸಿ ಅವರ ಚೈತನ್ಯ ಪ್ರಭೆಯಿಂದ ಜೀವನವನ್ನು ಪ್ರಕಾಶಿಸಿಕೊಂಡವರು ಧಾರವಾಡದ ಇಂದಿನ ಶ್ರೀ. ನಿ. ಪ್ರ. ಸ್ವ. ಮೃತ್ಯುಂಜಯ ಮಹಾಸ್ವಾಮಿಗಳು. ಲಿಂಗಲೀಲಾವಿಲಾಸಚಾರಿತ್ರದ ಘನತೆಯನ್ನು ಕಂಡು ಈ ಮಹಾಕೃತಿ ಪ್ರಕಟವಾಗಲೆ ಬೇಕೆಂದು ಅವರು ಇಚ್ಛಿಸಿದರು. ಅವರ ಇಚ್ಛೆಯ ಅರ್ಥ ಕ್ರಿಯೆ. ಅವರಪ್ಪಣೆಯಂತೆ ಕೈಕೊಂಡ ಈ ಕಾರ್ಯ ಮಂಗಲವಾಯ್ತು. ಶರಣರ ಸಂಪ್ರದಾಯ ಸಾಹಿತ್ಯ ಸಂಸ್ಕೃತಿಗಳನ್ನು ಎಲ್ಲಂದದಿಂದ ಉಳಿಸಿ ಬೆಳೆಸಿ ಕೊಂಡು ಹೋಗುತ್ತಿರುವ ಮಹಾಸ್ವಾಮಿಗಳ ಜೀವನ ಲೋಕಕಲ್ಯಾಣಕ್ಕೆ ಅರ್ಪಿತವಾದ ಕಲ್ಯಾಣಜೀವನ. ಇವರನ್ನು ಭಾವ ಉಪಚರಿಸಲಿಲ್ಲ, ಶಬ್ದ ಹೊಗಳಲಿಲ್ಲ. ಇಲ್ಲಿ ಶಬ್ದ ಮುಗ್ಧ. ಹೃದಯ ಮಹಾಮಂಗಲವಾದ ಮೌನ.

ಲಿಂಗರಾಜ ಕಾಲೇಜ
ಬೆಳಗಾವಿ
ದಿ. ೧-೧-೧೯೫೫

ಸಂ. ಶಿ. ಭೂಸನೂರಮಠ

ಕಲ್ಲಮಠದ ಪ್ರಭುದೇವರು

ವಿರಚಿಸಿದ

# ಲಿಂಗಲೀಲಾವಿಲಾಸಚಾರಿತ,



ಶ್ರೀಗುರುಬಸವಲಿಂಗಾಯ ನಮಃ

# ಲಿಂಗಲೀಲಾವಿಲಾಸಚಾರಿತ್ರ

## ಪೀಠಿಕೆ

ಈ ಲಿಂಗಲೀಲಾವಿಲಾಸ ಚಾರಿತ್ರದ ಪರಿಯಾಯವೆಂತೆಂದೊಡೆ: ಪ್ರಥಮದಲ್ಲಿ ನಿಷ್ಕಲಲಿಂಗಸ್ಥಲ, ದ್ವಿತೀಯದಲ್ಲಿ ಮಹಾಲಿಂಗಸ್ಥಲ, ತೃತೀಯದಲ್ಲಿ ಲಿಂಗಮೂರ್ತಿಸ್ಥಲ, ಚತುರ್ಥದಲ್ಲಿ ಅಂಗಸ್ಥಲ, ಪಂಚಮದಲ್ಲಿ ಸಂಸಾರಸಂಬಂಧಸ್ಥಲ, ಷಷ್ಠಮದಲ್ಲಿ ಪಿಂಡಸ್ಥಲ, ಸಪ್ತಮದಲ್ಲಿ ಪಿಂಡಜ್ಞಾನಸ್ಥಲ, ಅಷ್ಟಮದಲ್ಲಿ ಸಂಸಾರಹೇಯಸ್ಥಲ, ನವಮದಲ್ಲಿ ಗುರುಕರುಣಸ್ಥಲ, ದಶಮದಲ್ಲಿ ಭಕ್ತಿಸ್ಥಲ, ಏಕಾದಶದಲ್ಲಿ ಮಾಹೇಶ್ವರಸ್ಥಲ, ದ್ವಾದಶದಲ್ಲಿ ಪ್ರಸಾದಿಸ್ಥಲ, ತ್ರಯೋದಶದಲ್ಲಿ ಪ್ರಾಣಲಿಂಗಿಸ್ಥಲ, ಚತುರ್ದಶದಲ್ಲಿ ಶರಣಸ್ಥಲ, ಪಂಚದಶದಲ್ಲಿ ಐಕ್ಯಸ್ಥಲ, ಷೋಡಶದಲ್ಲಿ ಸ್ವಲೀಲಾನಂದಭಕ್ತಿಸ್ಥಲ, ಇಂತು ಹದಿನಾಱಱಲ್ಲಿ ಲಿಂಗಲೀಲಾವಿಲಾಸಚಾರಿತ್ರ ಸಂಪೂರ್ಣ.

ಈ ಲಿಂಗಲೀಲಾವಿಲಾಸಚಾರಿತ್ರದ ಸ್ಥಳಕುಳ ಲಿಂಗಾಂಗಸಂಬಂಧದ ನಿರ್ಣಯದ ಪರಿಕ್ರಮವೆಂತೆಂದೊಡೆ : ಪ್ರಥಮದಲ್ಲಿ ವಾಙ್ಮನಕ್ಕೆ ಬಾರದ ಅಖಂಡಾದ್ವಯ ನಿತ್ಯ ನಿರವಯ ಪರಿಪೂರ್ಣಚೈತನ್ಯಜ್ಞಾನಪ್ರಭಾಬೆಳಗಿನಿಂದೊಪ್ಪುತ್ತಿಪ್ಪುದು ನಿಷ್ಕಲಪರಶಿವಲಿಂಗವು. ಅಂತಿಪ್ಪ ನಿಷ್ಕಲಪರಶಿವಲಿಂಗದ ಸ್ವಭಾವವೆಂತೆಂದೊಡೆ ಆ ಅಖಂಡ ನಿರವಯ ಪರಿಪೂರ್ಣಚೈತನ್ಯಜ್ಞಾನವೆ ಸತ್ತುವೆನಿಸಿದ ಲಿಂಗವು. ಆ ಚೈತನ್ಯಜ್ಞಾನಪ್ರಭಾಸಾಮರ್ಥ್ಯದ ಬೆಳಗೆ ಚಿತ್ತುವೆನಿಸಿದ ಶಕ್ತಿ. ಅಂತಿಪ್ಪ ಸತ್ತುಚಿತ್ತಾನಂದಲಿಂಗವು ತನ್ನ ಜ್ಞಾನವಿಲಾಸಾನಂದಲೀಲೆಯಿಂದ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಯಿತ್ತು. ಅಂತಾದ ಮಹಾಲಿಂಗವು ತನ್ನ ಚಿದ್ವಿಲಾಸಲೀಲೆಯಿಂದವೆ ಪಂಚಮುಖವನೆಯ್ದಿ ಪಂಚಸಾದಾಖ್ಯಲಿಂಗಮೂರ್ತಿಯಾಯಿತ್ತು. ಅಂತಾದ ಮಹಾಲಿಂಗವಾದಿಯಾಗಿ ಷಡ್ವಿಧಲಿಂಗವಾಯಿತ್ತು. ಅಂತು ಮಹಾಲಿಂಗವಾಜುಮುಖವಾದಲ್ಲಿ ಆ ಮಹಾಲಿಂಗದ ಚಿತ್ಪ್ರಭಾಕಲಾಶಕ್ತಿಯೂ ಆಱಾಯಿತ್ತು. ಅಂತಾದ ಅಖಂಡಪರಂಜ್ಯೋತಿರ್ಲಿಂಗವು ತನ್ನ ಸ್ವಲೀಲಾಸ್ವತಂತ್ರತೆಯಿಂದ ತನ್ನ ತಾನರ್ಚಿಸಿ ಪೂಜಿಸಿಕೊಂಬುದೊಂದು ಲೀಲಾವಿಲಾಸದಿಂದ ತನ್ನ ಅಖಂಡ ಚಿಚ್ಚೈತನ್ಯ ಶಕ್ತಿಯ ಸಹಸ್ರಾಂಶದೊಳೊಂದಂಶಮಂ ಬೇರ್ಪಡಿಸಿ ಆತ್ಮನೆಂಬ ಅಂಗವಾಯಿತ್ತು. ಅಂತಾದ ಆತ್ಮಂಗೆ ಪಂಚವಿಂಶತಿ ತತ್ತ್ವದೇಹಮಂ ತನ್ನಲ್ಲಿಯೆ ಪುಟ್ಟಿಸಿ ಆ ಆತ್ಮಂಗೆ ದೇಹಸಂಬಂಧಮಂ ಸಂಬಂಧಿಸಿ, ಆ ಸಂಬಂಧಿಸಿದ ದೇಹಕರಣಂಗಳಲ್ಲಿ ಅಹಂ ಮಮತೆಯನೆಯ್ದಿಪ್ಪ ಅಜ್ಞಾನಮಂ ಪುಟ್ಟಿಸಿ ಜೀವನೆಂದೆನಿಸಿ, ಆ ಜೀವಂಗೆ ಪುಣ್ಯಪಾಪವೆಂಬ ಕರ್ಮದುದ್ಯೋಗಮಂ ಕೊಟ್ಟು, ಸುಖದುಃಖ ಬಂಧಮೋಕ್ಷ ಜನನಮರಣಂಗಳೆಂಬ ಭವಮಾಲೆಗೊಳಗುಮಾಡಿ, ಜೀವರನಾಡಿಸಿ ನೋಡುತ್ತಿಪ್ಪನು ಆ ಮಹಾಲಿಂಗವು ತನ್ನ ಲೀಲಾವಿಲಾಸದಿಂದ. ಅಂತು ತನ್ನ ಲೀಲಾವಿಲಾಸದಿಂದ ಲಿಂಗವು ಆತ್ಮಂಗೆ ದೇಹ ಸಂಸಾರ ಭವದುಃಖ ನಿಗ್ರಹಮಂ ಕೊಟ್ಟು, ಆ ನಿಗ್ರಹದಿಂದ ತನ್ನಲ್ಲಿಯ ಭಕ್ತಿರತಿಯಂ ಪುಟ್ಟಿಸಿ, ತನ್ನಲ್ಲಿ ಕೂಡಿಸಿಕೊಳುತ್ತಿಹನಾ ಲಿಂಗವು. ಅದು ಹೇಗೆಂದೊಡೆ ತಾನು ಶಿವನೆಂಬ ನಿಜವ ಮಱೆದಿಪ್ಪ ಜೀವನ ಅಜ್ಞಾನಮಂ ಪರಿಹರಿಸಿ, ಸಮ್ಯಗ್‍ಜ್ಞಾನಮಂ ಪ್ರಕಾಶಿಸಿ ಕೊಟ್ಟು ಮೋಕ್ಷಾಪೇಕ್ಷನಂ ಮಾಡಿ ಆ ಮೋಕ್ಷಾಪೇಕ್ಷನಾದಾತ್ಮಂಗೆ ಗುರುವಾಗಿ ತಾನೆ ಬಂದು, ಪರಂಜ್ಯೋತಿರ್ಲಿಂಗಮಂ ಕರದಲ್ಲಿ ಕೊಟ್ಟು, ಆ ನಿನ್ನ ಪರಂಜ್ಯೋತಿರ್ಲಿಂಗದ ಕಳೆಯೆಲ್ಲಾ ನೀನೆಯೆಂದು ತಿಳುಹಿಕೊಟ್ಟು,ಆ ನಿನ್ನ ಪರಂಜ್ಯೋತಿರ್ಲಿಂಗದ ಪರಮಚೈತನ್ಯಜ್ಞಾನವಪ್ಪ ಪರಬ್ರಹ್ಮವೇ ಜಂಗಮವೆಂದಱುಹಿಕೊಟ್ಟು, ಆ ಜಂಗಮದ ಷಡ್ವಿಧಮುಖವೇ ಷಡ್ವಿಧಲಿಂಗವೆಂದು, ಆ ಷಡ್ವಿಧಲಿಂಗಮುಖಂಗಳಿಂದ ಆತ್ಮ ಮೊದಲಾಗಿ ಪಂಚಭೌತಿಕಂಗಳು ಕೂಡಿ ಷಡ್ವಿಧ ಅಂಗವಾದವೆಂದು ನಿರೂಪಿಸಿ,

ಆ ಷಡ್ವಿಧ ಅಂಗಮಂ ಷಡ್ವಿಧಲಿಂಗಮುಖಕ್ಕೆ ಷಡ್ವಿಧಭಕ್ತಿಯಿಂದ ಅರ್ಪಿತವ ಮಾಡುವುದೇ ಭಕ್ತಿ. ಆ ಭಕ್ತಿಯೆಂಬುದೇ ಎರಡಿಲ್ಲದ ಕೂಟ. ಆ ಎರಡಿಲ್ಲದ ಕೂಟವೇ ಮುಕ್ತಿ. ಆ ಮುಕ್ತಿಸ್ವರೂಪವೇ ಮಹಾಘನಲಿಂಗವೆಂದು, ಆ ಮಹಾಘನಲಿಂಗವೇ ಅಖಂಡಪರಿಪೂರ್ಣಚೈತನ್ಯಚಿತ್ಸ್ವರೂಪು, ಆ ಚಿಚ್ಚೈತನ್ಯ ಚಿತ್ಸ್ವರೂಪದ ಚಿದಾಂಶಿಕನಪ್ಪ ಚಿತ್ಸ್ವರೂಪೇ ನೀನೆಂದು, ನಿನ್ನ ನಿಜವನೆಯ್ದುವ ಮಾರ್ಗವೀ ಷಡ್ವಿಧ ಭಕ್ತಿಯೆಂದು ಉಪದೇಶಿಸಿದ ಗುರುವಾಗಿ ಶಿವ ತಾನೇ ಬಂದು. ಅಂತು ಷಡ್ವಿಧಲಿಂಗಮುಖದಲ್ಲಿ ಷಡ್ವಿಧ ಅಂಗವಾದುದನಱಿದು, ಈ ಷಡ್ವಿಧ ಅಂಗವನು ಷಡ್ವಿಧ ಲಿಂಗಮುಖದಲ್ಲಿ ಅಡಗಿಸಿದರೆ ಆತ್ಮಂಗೆ ಮುನ್ನಿನ ಶಿವತತ್ವವಪ್ಪುದು ತಪ್ಪದು. ಅಂತು ಲಿಂಗವು ತನ್ನ ಸ್ವಲೀಲೆಯಿಂದ ತಾನೆ ಲಿಂಗಾಂಗವೆರಡಾಗಿ ಸೇವ್ಯಸೇವಕನಾಗಿ ಪೂಜ್ಯಪೂಜಕನಾದ ಭೇದದಿಂದ, ಲಿಂಗವಾಱೆಂದು ಅಂಗವಾಱೆಂದು ಗುರುವೆಂದು ಲಿಂಗವೆಂದು ಜಂಗಮವೆಂದು ಭಕ್ತನೆಂದು ಪದಾರ್ಥವೆಂದು ಅರ್ಪಿತವೆಂದು ಪ್ರಸಾದವೆಂದು, ಈ ಭೇದಾಭೇದವಾದುದು ಒಂದೆ ವಸ್ತುವೆಂದುದು ಗುರುವಚನ. ಇಂತು ಗುರುವಚನದಿಂದ ಎರಡಳಿದು ಪೂಜ್ಯನಾದ ಲಿಂಗವು, ಪೂಜಿಸುವ ಭಕ್ತನು ಒಂದೆ ವಸ್ತುವೆಂದಱಿದು ಆಚರಿಸುವ ಷಟ್‌ಸ್ಥಲಮಾರ್ಗವೇ ಶರಣಮಾರ್ಗ. ಈ ಶರಣ ಮಾರ್ಗವೆಂಬುದು ವೇದಾಗಮಂಗಳಿಗೆ ಅಗೋಚರ. ಮತ್ತಾರಿಂದಱಿಯಬಹುದಯ್ಯಾ ಎಂದೊಡೆ ಗುರುವಚನದಿಂದಲಱಿಯತಕ್ಕುದು. ಆ ಗುರುವಚನಂಗಳಾವಾವುವಯ್ಯಾ ಎಂದೊಡೆ ವೀರಶೈವ ಷಟ್‌ಸ್ಥಲ ಜ್ಞಾನಾಚಾರ್ಯರಪ್ಪ ಪ್ರಭುದೇವರು ಬಸವಣ್ಣ ಚೆನ್ನಬಸವಣ್ಣ ಮಹದೇವಿಯಕ್ಕಗಳು ಮುಖ್ಯವಾದ ಶಿವಾನುಭಾವಿಗಳು ಶಿವಸುಖವನನುಭವಿಸಿ ತೃಪ್ತಿವಡೆದ ಸಂತುಷ್ಟಿ ನಿಮಿರ್ದು ೧ವಾಙ್ಮನದಿಂದುಕ್ಕಿ೧ ನುಡಿದ ನುಡಿಯೇ ಗುರುವಚನ. ಅಂತಪ್ಪ ಗುರುವಚನಂಗಳಲ್ಲಿ ಕರ್ಮ ಜ್ಞಾನ ಭಕ್ತಿಯೆಂಬ ಮೂಱಱೊಳಗೆ ಕರ್ಮವಂ ಬಿಟ್ಟು ಜ್ಞಾನದಿಂದಲುತ್ತರವಾದುದು ಭಕ್ತಿಕಾಂಡವೆಂದು ನಿರೂಪಿಸಿದ ಭಕ್ತಿಕಾಂಡವೇ ಷಟ್‌ಸ್ಥಲ ಮಾರ್ಗ. ಆ ಷಟ್‌ಸ್ಥಲ ಮಾರ್ಗವೇ ಲಿಂಗಲೀಲಾವಿಲಾಸಚಾರಿತ್ರವೆಂದು ನಿರೂಪಿಸಿದ ಗುರುವಚನವಿದಿದು, ಗುರುಪ್ರಸಾದಜ್ಞಾನದಿಂದ ವಿದ್ಯಾನಗರದ ಕಲ್ಲಮಠದ ಪ್ರಭುದೇವಾರ್ಯನು ಪುರಾತನರ ವಚನಂಗಳಲ್ಲಿಯೂ ಸಾರವಾದ ವಚನಂಗಳ ತೆಕ್ಕೊಂಡು ಷೋಡಶಸ್ಥಲಪರಿಕ್ರಮದಿಂದ ಸೇರಿಸಿ ಅರ್ಥೈಸಿದ ವಚನಾಗಮವಿದು. ಇದು ಷಟ್‌ಸ್ಥಲ ಲಿಂಗಾಂಗಸಂಬಂಧ ಜ್ಞಾನಕ್ರಿಯಾಯುಕ್ತವಾದ ಶರಣಮಾರ್ಗ. ಈ ಶರಣಮಾರ್ಗವೆಂಬುದು ಶಿವರಹಸ್ಯಾನುಭಾವ.

೧ ವಾಗ್ಜ್ಞಾನಾನಂದದಿಂದುಕ್ಕಿ (ಎ)

ಈ ಶಿವರಹಸ್ಯಾನುಭಾವದ ವಿಸ್ತಾರಮಂ ಪುರಾತನರ ವಚನಂಗಳಿಂದ ವಿಸ್ತರಿಸಿ ಸ್ಥಲಪರಿಕ್ರಮದಿಂದ ಪೇಳಲಾದುದಾಗಿ, ಈ ಪೀಠಿಕಾ ಸೂತ್ರದಲ್ಲಿ ಲಿಂಗಸ್ಥಲ ಅಂಗಸ್ಥಲ ಸಂಬಂಧಸ್ಥಲಂಗಳಂ ಸಂಕೋಚಿಸಿ ಹೇಳಲಾಯಿತ್ತು. ಈ ಸಂಕೋಚಿಸಿ ಹೇಳಿದ ಲಿಂಗಾಂಗ ಸಂಬಂಧದ ಸ್ಥಳಕುಳನಿರ್ಣಯಮಂ ಜ್ಞಾನದಿಂದ ಉತ್ತರ ಭಕ್ತಿಯೆಂಬುದಂ ವಿಸ್ತರಿಸಿದ ಈ ಪೀಠಿಕಾಸೂತ್ರಕ್ಕೆ ಸಾಕ್ಷಿ:

## ಅಕ್ಕಗಳ ವಚನ

ಆದಿಯನಾದಿಯ ನಿತ್ಯಾನಿತ್ಯವ ತಿಳಿಯಲರಿಯದೆ ವಾಯಕ್ಕೆ ಪರಬ್ರಹ್ಮವ ನುಡಿವ ವಾಯುಪ್ರಾಣಿಗಳವರೆತ್ತ ಬಲ್ಲರೋ? ಆ ಪರಬ್ರಹ್ಮದ ನಿಜದ ನಿಲವದೆಂತೆಂದೊಡೆ: ಆದಿಯೇ ದೇಹ, ಅನಾದಿಯೇ ನಿರ್ದೇಹ. ಆದಿಯೇ ಸಕಲ, ಅನಾದಿಯೇ ನಿಷ್ಕಲ. ಆದಿಯೇ ಜಡ, ಅನಾದಿಯೇ ಅಜಡ. ಆದಿಗೆ ಒಡಲುಂಟು, ಅನಾದಿಗೆ ಒಡಲಿಲ್ಲ. ಆದಿಯೇ ಕಾಯ, ಅನಾದಿಯೇ ಪ್ರಾಣ. ಈ ಎರಡರ ಯೋಗವ ಭೇದಿಸಿ, ತನ್ನಿಂ ತಾನೆ ತಿಳಿದು ನೋಡಲು ಆದಿ ಸಂಬಂಧವಪ್ಪ ಭೂತಂಗಳು ನಾನಲ್ಲ. ದಶವಿಧೇಂದ್ರಿಯಂಗಳು ನಾನಲ್ಲ. ದಶವಾಯುಗಳು ನಾನಲ್ಲ. ಅಷ್ಟಮದಂಗಳು ಅರಿಷಡ್ವರ್ಗಂಗಳು ಷಡೂರ್ಮಿಗಳು ಷಡ್ಭಾವ ವಿಕಾರಂಗಳು ಷಟ್ಕರ್ಮಂಗಳು ಷಡ್ಧಾತುಗಳು ಸಪ್ತವ್ಯಸನಂಗಳು ತನುತ್ರಯಂಗಳು ಜೀವತ್ರಯಂಗಳು ಮನತ್ರಯಂಗಳು ಮಲತ್ರಯಂಗಳು ಗುಣತ್ರಯಂಗಳು ಭಾವತ್ರಯಂಗಳು ತಾಪತ್ರಯಂಗಳು ಅಂತಃಕರಣಂಗಳು ಇಂತಿವಾದಿಯಾಗಿ ತೋರುವ ತೋರಿಕೆಯೇನೂ ನಾನಲ್ಲ, ನನ್ನವಲ್ಲ. ಎಲ್ಲವೂ ನನ್ನಾಧೀನವಾಗಿಪ್ಪವು; [೧]ನಾನವರಾಧೀನವಲ್ಲ.[೧] ನಾನು ತುರಿಯ ತುರಿಯಾತೀತವಪ್ಪ ಸತ್ತು ಚಿತ್ತಾನಂದ ನಿತ್ಯಪರಿಪೂರ್ಣವೆ ತನ್ನಿರವೆಂದು ತಿಳಿಯೆ, ಆ ತಿಳಿದ ಮಾತ್ರದಲ್ಲಿಯೇ ಅನಿತ್ಯದ ಬೆಸುಗೆ ಬಿಟ್ಟು ನಿರಾಳದಲ್ಲಿ [೨]ನಿರವಯವನ್ನರಿಯಲರಿಯದೆ[೨] ಮತ್ತೆಯು ಭೌತಿಕತತ್ವಸಂಬಂಧವಾಗಿ ಇರುತ್ತಿರಲು ಈ ತತ್ವದಾದಿ ತಾನೆಂತೆನಲು ಆ ಪರಬ್ರಹ್ಮವಪ್ಪ ನಿತ್ಯ ನಿರಾಳ ನಿಶ್ಶೂನ್ಯ ಲಿಂಗವೇ ತನ್ನ ಲೀಲಾವಿಲಾಸದಿಂದ ತಾನೆ ಸುನಾದಬಿಂದು ಪ್ರಕಾಶತೇಜೋಮೂರ್ತಿಯಾಗಿ ನಿಂದು ಮಹಾಲಿಂಗವೆನಿಸಿತ್ತು. ಆ ಮಹಾಲಿಂಗವೇ ಪಂಚ ಸಾದಾಖ್ಯವೆನಿಸಿತ್ತು. ಆ ಪಂಚ ಸಾದಾಖ್ಯವೇ ಪಂಚ

ನಾನಿವರಾಧೀನದವನಲ್ಲ (ಎ)   ೨ ನಿಜವನರಿಯಲರಿಯದೆ (ಎ)

ಲಿಂಗಪ್ರಕಾ[೧]ಶ[೧]ವೆಂದೆನಿಸಿತ್ತು. ಆ ಪಂಚಲಿಂಗಪ್ರಕಾ[೨]ಶ[೨]ವೇ ಪಂಚಮುಖವೆಂದೆನಿಸಿತ್ತು. ಆ ಪಂಚಮುಖದಿಂದವೆ ಪಂಚಾಕ್ಷರೋತ್ಪತ್ತಿ. ಆ ಪಂಚಾಕ್ಷರಿಯಿಂದವೆ ಪಂಚಕಲೆಗಳುತ್ಪತ್ತಿ. ಆ ಪಂಚಕಲೆಗಳಿಂದವೆ ಪಂಚಶಕ್ತಿಗಳುತ್ಪತ್ತಿ. ಆ ಪಂಚಶಕ್ತಿಗಳಿಂದವೆ ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರಂಗಳ ಜನನ. ಆ ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರಂಗಳಿಂದವೆ ತನ್ಮಾತ್ರಂಗಳುತ್ಪತ್ತಿ. ಆ ತನ್ಮಾತ್ರಂಗಳಿಂದವೆ ಪಂಚಭೂತಂಗಳುತ್ಪತ್ತಿ. ಆ ಪಂಚಭೂತಂಗಳೇ ಪಂಚೀಕರಣವನೆಯ್ದಿ ಆತ್ಮಂಗೆ ಅಂಗವಾಯಿತ್ತು. ಆ ಅಂಗಕ್ಕೆ ಜ್ಞಾನೇಂದ್ರಿಯಂಗಳು ಕರ್ಮೇಂದ್ರಿಯಂಗಳು ಪ್ರತ್ಯಂಗವೆಂದೆನಿಸಿತ್ತು. ಇಂತು ದೇಹಸಂಬಂಧಮಂ ಶಿವ ತನ್ನ ಚಿದಾಂಶಿಕನಪ್ಪ ಆತ್ಮಂಗೆ ಸಂಬಂಧಿಸಿದನಾಗಿ ಆ ಸಂಬಂಧಿಸಿದ ಕಾಯದ ಪೂರ್ವಾಶ್ರಯವು ಎಲ್ಲಿಯಾಯಿತ್ತು ಅಲ್ಲಿಯೇ ಅಡಗಿಸಿ, ಆ ಕಾಯಾಶ್ರಯವನಳಿದು, ಮಹಾಘನಲಿಂಗವ ವೇಧಿಸಿಕೊಟ್ಟು, ಶಿವ ತಾನೆ ಗುರುವಾಗಿ ಬಂದು, ಆ ಗುರು ತಾನೆ ಮಹಾಘನಲಿಂಗವ ವೇಧಿಸಿಕೊಟ್ಟ ಪರಿಯೆಂತೆಂದೊಡೆ ಆತ್ಮಗೂಡಿ ಪಂಚಭೂತಂಗಳನೆ ಷಡಂಗವೆಂದೆನಿಸಿ, ಆ ಅಂಗಕ್ಕೆ ಕಲೆಗಳನೆ ಷಡ್ವಿಧಶಕ್ತಿಗಳೆಂದೆನಿಸಿ, ಆ ಶಕ್ತಿಗಳಿಗೆ ಷಡ್ವಿಧ ಭಕ್ತಿಯನಳವಡಿಸಿ, ಆ ಭಕ್ತಿಗಳಿಗೆ ಭಾವ ಜ್ಞಾನ ಮನ ಬುದ್ಧಿ ಚಿತ್ತ ಅಹಂಕಾರಂಗಳನೆ ಷಡ್ವಿಧಹಸ್ತಂಗಳೆಂದೆನಿಸಿ, ಆ ಹಸ್ತಂಗಳಿಗೆ ಮಹಾಲಿಂಗವಾದಿಯಾದ ಪಂಚಲಿಂಗಂಗಳನೆ ಷಡ್ವಿಧ ಲಿಂಗಂಗಳೆಂದೆನಿಸಿ, ಆ ಲಿಂಗಂಗಳಿಗೆ ಷಡಕ್ಷರಿಯನೇ ಷಡ್ವಿಧ ಮಂತ್ರವೆಂದೆನಿಸಿ, ಆ ಮಂತ್ರಲಿಂಗಂಗಳಿಗೆ ಹೃದಯಗೂಡಿ ಪಂಚೇಂದ್ರಿಯಂಗಳನೆ ಷಡ್ವಿಧ ಮುಖಂಗಳೆಂದೆನಿಸಿ ಆ ಮುಖಂಗಳಿಗೆ ತನ್ಮಾತ್ರಂಗಳನೆ ದ್ರವ್ಯಪದಾರ್ಥಂಗಳೆಂದೆನಿಸಿ, ಆ ದ್ರವ್ಯಪದಾರ್ಥಂಗಳ ಆಯಾಾಯ ಮುಖದ ಲಿಂಗಂಗಳಲ್ಲಿ ನಿರಂತರ [೩]ಸಾವಧಾನದಿಂದ[೩] ಅರ್ಪಿತವಾಗಿ ಬೀಗಲೊಡನೆ, ಅಂಗಸ್ಥಲಂಗಳಡಗಿ, ತ್ರಿವಿಧ ಲಿಂಗಾಂಗಸ್ಥಲಂಗಳುಳಿದು. ಕಾಯ ಗುರು, ಪ್ರಾಣ ಲಿಂಗ, ಜ್ಞಾನ ಜಂಗಮ, ಗುರುವಿನಲ್ಲಿ ಶುದ್ಧಪ್ರಸಾದ ಲಿಂಗದಲ್ಲಿ ಸಿದ್ಧಪ್ರಸಾದ. ಜಂಗಮದಲ್ಲಿ ಪ್ರಸಿದ್ಧಪ್ರಸಾದ ಇಂತೀ ತ್ರಿವಿಧಪ್ರಸಾದ ಏಕಾರ್ಥವಾಗಿ ಮಹಾಘನಲಿಂಗ ಪರಿಪೂರ್ಣಪ್ರಸಾದ ಅಳವಟ್ಟ ಶರಣ ಜ್ಞಾನಿಯಲ್ಲ, ಅಜ್ಞಾನಿ ಮುನ್ನವೆಯಲ್ಲ. ಶೂನ್ಯನಲ್ಲ, [೪]ನಿಶ್ಶೂನ್ಯನಲ್ಲ[೪]. ದ್ವೈತಿಯಲ್ಲ, [೫]ಅದ್ವೈತಿಯಲ್ಲ.[೫]

೧-೨ ರ (ಮು) ೩ ಸಾವಧಾನ ಮುಖದಿಂದ (ಎ).
೪ ನಿಶ್ಶೂನ್ಯಮುನ್ನವೆಯಲ್ಲ (ಎ) ೫ ಅದ್ವೈತಿ ಮುನ್ನವೆಯಲ್ಲ (ಎ).

ಇಂತೀ ಉಭಯಾತ್ಮಕ ತಾನೆಯಾಗಿ, ಇದುಕಾರಣ ಇದರ ಆಗು ಹೋಗು ಸಕೀಲ ಸಂಬಂಧವ ಚೆನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರೆ ಬಲ್ಲರು.

ಅಕ್ಕಗಳ ವಚನ ಸಂಪೂರ್ಣ

ಇಂತೀ ಗುರುವಚನದಿಂದ ನಿರೂಪಿಸಿದ ಲಿಂಗದ ಅಂಗದ ಯೋಗದ ವಿಯೋಗದ ಸಂಬಂಧವ ಹೇಳುವಲ್ಲಿ ಸ್ಥಲವಿಟ್ಟು ಹೇಳಲಾಯಿತ್ತು. ಹೇಳುವ ಸ್ಥಲಂಗಳ ವಿವರ : ಪ್ರಥಮದಲ್ಲಿ ನಿಷ್ಕಲಲಿಂಗಸ್ಥಲ ಹೇಳಲಾಯಿತ್ತಾಗಿ ಆ ನಿಷ್ಕಲಲಿಂಗಸ್ಥಲವೆಂತೆಂದೊಡೆ :

# ೧. ನಿಷ್ಕಲಲಿಂಗಸ್ಥಲ

❋

ಅಖಂಡಾದ್ವಯನಿತ್ಯನಿರವಯಪರಿಪೂರ್ಣಸಚ್ಚಿದಾನಂದವಪ್ಪ ನಿಷ್ಕಲವಸ್ತು ತಾನೊಂದೆಯಲ್ಲದೆ ಅನ್ಯವಾಗಿ ತೋಱುವ ತತ್ವಂಗಳೇನೂ ಇಲ್ಲದೆ ಸರ್ವವೂ ಶೂನ್ಯವಾಗಿ ಮತ್ತೇನೂ ಏನೂ ಇಲ್ಲದೆ ತಾನು ತಾನೆಯಾಗಿ, ತಾನೆಂಬ ಅಱಿವಿನ ತೋಱಿಕೆ ತೋಱದೆ ತನ್ನ ನಿಜಸ್ವಭಾವದಲ್ಲಿಪ್ಪ ನಿಶ್ಶೂನ್ಯವಸ್ತುವನು ನಿಷ್ಕಲಲಿಂಗಸ್ಥಲವೆಂದು ಹೇಳಲಾಯಿತ್ತು.

**ನಿಷ್ಕಲಲಿಂಗಸ್ಥಲಕ್ಕೆ ಶ್ಲೋಕ :**

ಅಲಕ್ಷ್ಯಮದ್ವಯಂ ಶೂನ್ಯಮಮೂರ್ತಂ ಪರಮವ್ಯಯಮ್
ಅನಾಮಮಕುಲಂ ಶುದ್ಧಂ ಅನಾದ್ಯಂ ಶಿವಮುಚ್ಯತೇ
ಅಕಾರಣಮಕಾರ್ಯಂಚ ಮನೋವಾಚಾಮಗೋಚರಮ್
ಆದಿಮಧ್ಯಾಂತಶೂನ್ಯಂ ಚ ವ್ಯೋಮಾವ್ಯೋಮವಿವರ್ಜಿತಮ್
ಧ್ಯಾನಜ್ಞಾನದ್ವಯೋರ್ಹೀನಂ[೧] ಶೂನ್ಯಲಿಂಗಮನಾಶ್ರಯಮ್

೧ ಮನೋಹೀನಂ (ಎ).

## ನಿಷ್ಕಲಲಿಂಗಸ್ಥಲಕ್ಕೆ ವಚನ :

ವೇದಾತೀತ ಷಡುವರ್ಣರಹಿತ ಅಷ್ಟತ್ರಿಂಶತ್ಕಳಾತೀತ ವ್ಯೋಮಾತೀತ ಕೂಡಲ ಸಂಗಮದೇವಾ

**ಟೀಕು.** ವೇದಶ್ರುತಿಗಳಿಂದ ವಚಿಸಿ ಹೇಳಬಾರದ ವಾಙ್ಮನಕ್ಕಗೋಚರವಾಗಿಪ್ಪುದು ಆ ಪರಬ್ರಹ್ಮವೆಂಬುದೀಗ ' ವೇದಾತೀತ ' ವೆಂಬ ಶಬ್ದಕ್ಕರ್ಥ. ನಾದಾಕ್ಷರ ಸ್ವರೂಪಾದ ಷಡುವರ್ಣಂಗಳಿಲ್ಲದ ಅನಕ್ಷರಸ್ವರೂಪೇ ಪರಬ್ರಹ್ಮವೆಂಬುದೀಗ 'ಷಡುವರ್ಣರಹಿತ' ನೆಂಬ ಶಬ್ದಕ್ಕರ್ಥ. ಮೂವತ್ತೆಂಟು ಕಲಾಸ್ವರೂಪನಪ್ಪ ಪಂಚ ಸಾದಾಖ್ಯಮೂರ್ತಿಯಾಗದೆ ಇದ್ದ ನಿಷ್ಕಲವೇ ಪರಬ್ರಹ್ಮವೆಂಬುದೀಗ ' ಅಷ್ಟ ತ್ರಿಂಶತ್ಕಳಾತೀತ ' ನೆಂಬ ಶಬ್ದಕ್ಕರ್ಥ. ಆಕಾಶಾದಿ [೧]ತತ್ವಂಗಳಿಲ್ಲದ[೧] ಅಖಂಡವೇ ಪರಬ್ರಹ್ಮವೆಂಬುದೀಗ ' ವ್ಯೋಮಾತೀತ ' ನೆಂಬ ಶಬ್ದಕ್ಕರ್ಥ. ಇಂತು ಉಪಮಿಸಬಾರದ ಅನುಪಮವಸ್ತುಭಕ್ತದೇಹಿಕದೇವನಾಗಿ ಕೂಡಿಹ ಕೂಟದಲ್ಲಿ ವಿಯೋಗವಿಲ್ಲದೆ ಸದಾಸಂಯೋಗಿಯಾಗಿಹನೆಂಬುದೀಗ ' ಕೂಡಲ ಸಂಗಮದೇವ ' ಎಂಬ ಶಬ್ದಕ್ಕರ್ಥ. ೧

**ವ.** ನಾಮ ಅನಾಮವಿಲ್ಲ. [೨]ನಾನು[೨] ತಾನು ಮುನ್ನವೆ ಇಲ್ಲ. ಈ ಉಭಯ ನಾಮವಾವ ಸೀಮೆಯೊಳಗು ಇಲ್ಲ. ಒಡಲು ಇಲ್ಲ ನೆಳಲು ಇಲ್ಲ. ಏನೆಂಬುದೇನು ತಾನು ಮುನ್ನಿಲ್ಲ. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ನಾನು ಇಲ್ಲ ನೀನುಇಲ್ಲ.

**ಟೀ.** ಲಿಂಗಾಂಗವೆಂದೆರಡಾಗಿ ತೋಱದಂದು, ನಾ ನೀನೆಂಬುದಿಲ್ಲದೆ ನಿಷ್ಕಲನಾಗಿರ್ದ ನಿಜವಸ್ತುವಿಂಗೆ ನಾಮಸೀಮೆಯಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೨

**ವ.** ಏನೆಂದೆನಲಿಲ್ಲ. ನುಡಿದು ಹೇಳಲಿಕಿಲ್ಲ. ನಿಜದಲ್ಲಿರ್ದ ಬೆಱಗ ಕುಱುಹು ಅಱಿವುದೇ ? ಅದು ತನ್ನಲ್ಲಿ ತಾನಿಲ್ಲ. ಏನೆಂದೆನಲಿಲ್ಲದ ಬಯಲು. ಅಲ್ಲಿ ಏನನೂ ಅಱಸಲಿಲ್ಲ. ಇದಿರಿಲ್ಲ, ತಾನಿಲ್ಲ. ಚಿಕ್ಕಯ್ಯಪ್ರಿಯ ಸಿದ್ಧ ಲಿಂಗ ಇಲ್ಲ ಇಲ್ಲ.

**ಟೀ.** ನಾ ನೀನೆಂಬ ಲಿಂಗಾಂಗವೆರಡಾಗಿ ತೋಱದೆ ನಿಷ್ಕಲವಾಗಿರ್ದ ನಿಜವಸ್ತುವ ಉಪಮಿಸಿ ಹೇಳಬಾರದೆಂಬುದೀ ವಚನದ ತಾತ್ಪರ್ಯಾರ್ಥ.

೧ ತತ್ವಗಳನೊಳಕೊಂಡಿಪ್ಪ (ಎ). ೨ ತಾನು (ಮು).

**ವ.** ಅಸುರಮಾಲೆಗಳಿಲ್ಲ. ತ್ರಿಶೂಲ ಡಮರುಗವಿಲ್ಲ. ಬ್ರಹ್ಮಕಪಾಲವಿಲ್ಲ. ಭಸ್ಮಭೂಷಣನಲ್ಲ. ವೃಷಭವಾಹನವಿಲ್ಲ. ಋಷಿಯ ಮಗಳೊಡನೆ ನಿರ್ದಾತನಲ್ಲ. ಎಸಗುವ ಸಂಸಾರದ ಕುರುಹಿಲ್ಲದಾತಂಗೆ ಹೆಸರಾವು ದೆಂದನಂಬಿಗರ ಚೌಡಯ್ಯ.

**ಟೀ.** ಶಿವನು ತನ್ನ ಚಿದ್ವಿಲಾಸದಿಂದ ಮೂರ್ತಿಯಾದಲ್ಲಿ ನಾಮವಾಯಿ ತ್ತಲ್ಲದೆ ಅಮೂರ್ತಿಯಾಗಿರ್ದ ನಿಷ್ಕಲವಸ್ತುವಿಂಗೆ ಹೆಸರಿಲ್ಲವೆಂಬುದೀವಚನದ ತಾತ್ಪರ್ಯಾರ್ಥ.

**ವ.** ಆದಿಯಾಧಾರವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು, ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಶ್ಶೂನ್ಯವಿಲ್ಲದಂದು, ಸಚರಾಚರವೆಲ್ಲಾ ರಚನೆಗೆ ಬಾರದಂದು ಗುಹೇಶ್ವರಾ ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ.

**ಟೀ.** ನಾದ ಬಿಂದುಗಳಿಲ್ಲದಂದು ಎಂಬುದೀಗ 'ಆದಿಯಾಧಾರವಿಲ್ಲದಂದು' ಎಂಬ ಶಬ್ದಕ್ಕರ್ಥ. ಅಹಂ ಮಮತೆಗಳಿಲ್ಲದಂದು ಎಂಬುದೀಗ 'ಹಮ್ಮು ಬಿಮ್ಮು ಗಳಿಲ್ಲದಂದು' ಎಂಬ ಶಬ್ದಕ್ಕರ್ಥ. ಸಾಕಾರ ನಿರಾಕಾರವಿಲ್ಲದಂದು ಎಂಬುದೀಗ 'ಸುರಾಳ ನಿರಾಳ ವಿಲ್ಲದಂದು' ಎಂಬ ಶಬ್ದಕ್ಕರ್ಥ. ಅನಿತ್ಯ ದೇಹದಲ್ಲಿ ದೇಹಿ ಯಾಗಿಪ್ಪ ಅನಿತ್ಯದ ಜೀವನೇ ಶೂನ್ಯನು. ದೇಹ ಕರಣಂಗಳಿಲ್ಲದ ಪರಮಾತ್ಮನೇ ನಿಶ್ಶೂನ್ಯನು. ಅಂತಪ್ಪ ಜೀವಪರಮರಿಲ್ಲದಂದು ಎಂಬುದೀಗ 'ಶೂನ್ಯ ನಿಶ್ಶೂನ್ಯವಿಲ್ಲ ದಂದು' ಎಂಬ ಶಬ್ದಕ್ಕರ್ಥ. ಅಂತು ಸಚರಾಚರಂಗಳು ಸಕಲ ತತ್ವಂಗಳು ತೋರಿಕೆ ತೋರಿಕೆಯೇನೂ ಇಲ್ಲದೆ ಇದ್ದಂದು ಪರಶಿವನು ತಾನೊಬ್ಬನೇ ನಿಷ್ಕಲವಾಗಿರ್ದ ನೆಂಬುದೀಗ 'ಸಚರಾಚರವೆಲ್ಲಾ ರಚನೆಗೆ ಬಾರದಂದು ಗುಹೇಶ್ವರಾ ನೀನೊಬ್ಬನೇ ಇದ್ದೆಯಲ್ಲಾ ಇಲ್ಲದಂತೆ' ಎಂಬ ಶಬ್ದಕ್ಕರ್ಥ. ೨

**ವ.** ಆದಿಯನಾದಿಯಿಲ್ಲದಂದು, ಮಹಾಶೂನ್ಯವಿಲ್ಲದಂದು, ಸಾಧ್ಯಅಸಾಧ್ಯ ವಿಲ್ಲದಂದು, ರೂಪು ನಿರೂಪಿಲ್ಲದಂದು, ಸ್ಥೂಲ ಸೂಕ್ಷ್ಮವಿಲ್ಲದಂದು, ಸಾಕಾರ ನಿರಾಕಾರವೆಂಬ ವಾಕು ಹುಟ್ಟದಂದು, ದ್ವೈತಾದ್ವೈತವಾಗ ದಂದು, ಶಂಕರ ಶಶಿಧರ ಈಶ್ವರರೆಂಬ ಗಣಾಧೀಶ್ವರರಿಲ್ಲದಂದು, ವರ್ತನೆ ನಿವರ್ತನೆಯಿಲ್ಲದಂದು, ಉಮೆಯ ಕಲ್ಯಾಣವಾಗದಂದು, ಇವರಾರೂ ಒಬ್ಬರ ನಾಮನೀಮೆಯಿಲ್ಲದಂದು ನೀನು ಉಲುಹಡಗಿರ್ದೆ ಯಲ್ಲಾ ೧ಕಲಿದೇವಯ್ಯಾ೧

೧ ಕಲಿದೇವರ ದೇವಯ್ಯಾ (ಎ, ಮು)

ಟೀ. ಆದಿಯೆಂದರೆ ದೇಹ, ಅನಾದಿಯೆಂದರೆ ಆತ್ಮನು. ಮಹಾಶೂನ್ಯವೆಂದರೆ ಪರಮಾತ್ಮನು. ಇಂತೀ ಜೀವ-ಪರಮ ಸ್ಥೂಲ-ಸೂಕ್ಷ್ಮ ಸಾಕಾರ-ನಿರಾಕಾರವೆಂಬ ಸಕಲ ತತ್ತ್ವಂಗಳ ತೋಜಿಕೆಯ ಪ್ರವರ್ತನೆ ನಿವರ್ತನೆಗಳೇನೂ ಇಲ್ಲದೆ ಶಿವನ ಲೀಲಾವಿಗ್ರಹವಾದ ಮೂರ್ತಿಗಳಿಲ್ಲದೆ ಇದ್ದಂದು ನಾದ ಬಿಂದು ಕಳೆಗಳಿಲ್ಲದೆ ನಿಶ್ಶಬ್ದವಾಗಿದ್ದಿತ್ತು ನಿಷ್ಕಲ ಪರಬ್ರಹ್ಮವೆಂಬುದೀ ವಚನದ ತಾತ್ಪರ್ಯಾರ್ಥ. ೬

ವ. ಶೂನ್ಯ ಹುಟ್ಟದಂದು, ನಿಶ್ಶೂನ್ಯವಿಲ್ಲದಂದು, ಬ್ರಹ್ಮ ವಿಷ್ಣು ಮಹೇಶ್ವರರಿಲ್ಲದಂದು, ಹದಿನಾಲ್ಕು ಭುವನ ದಿಕ್ಕು ವಿದಿಕ್ಕು ವಳಯಂಗಳಿಲ್ಲದಂದು, ಕೂಡಲಚೆನ್ನಸಂಗಯ್ಯ ಹೆಸರಿಲ್ಲದಿರ್ದನಂದು.

ಟೀ. ಶೂನ್ಯವೆಂಬುದೇ ಬಿಂದು, ನಿಶ್ಶೂನ್ಯವೆಂಬುದೇ ನಾದ. ಅಂತಪ್ಪ ನಾದ ಬಿಂದುಗಳು ಅಷ್ಟಮೂರ್ತಿ ತ್ರಿದೇವತೆಗಳು ಬ್ರಹ್ಮಾಂಡ ದಿಕ್ಕು ವಿದಿಕ್ಕು ವಳಯಂಗಳು ರಚಿಸದಂದು ನಿಷ್ಕಲವಾಗಿರ್ದ ಪರಬ್ರಹ್ಮಕ್ಕೆ ಬ್ರಹ್ಮವೆಂಬ ನಾಮವಿಲ್ಲ, ನಾಮವಿಟ್ಟು ಕರೆವವರಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೭

ವ. ದೇವಿಯರಿಬ್ಬರು ಇಲ್ಲದಂದು, ಪ್ರಧಾನ ಮಂತ್ರಿಗಳು ಇಲ್ಲದಂದು, ಆರು ಆರು ಇಲ್ಲದಂದು, ಸಂಕಲ್ಪ ವಿಕಲ್ಪವಿಲ್ಲದಂದು, ಆವ ಉತ್ಪತ್ತ್ಯಂಗಳಿಲ್ಲದಂದು ನಿನ್ನಲ್ಲಿ ನೀನಾನೆಂಬುದು ಶೂನ್ಯವಾಗಿದ್ದೆ ಎನ್ನ ೧ಕಪಿಲಸಿದ್ಧಮಲ್ಲಿಕಾರ್ಜುನಾ೧.

ಟೀ. ಶಿವನು ಸಾಕಾರನಾಗಿ ಗಂಗೆ ಗೌರೀವಲ್ಲಭನಾಗದಂದು, ಬ್ರಹ್ಮ ವಿಷ್ಣುಗಳಿಲ್ಲದೆ, ಸಕಲ ಜೀವ ಜಗತ್ತುಗಳೇನು ಇಲ್ಲದೆ, ಸರ್ವವು ಶೂನ್ಯವಾಗಿ ಬ್ರಹ್ಮವು ತಾನೊಂದೆಯಾಗಿರ್ದು, ತನ್ನ ತಾನೆಂಬ ಭಾವ ತಲೆದೋಱದೆ ನಿಶ್ಶಬ್ದವಾಗಿದ್ದಿತ್ತು ಎಂಬುದೀ ವಚನದ ತಾತ್ಪರ್ಯಾರ್ಥ. ೮

ವ. ಆದಿ ಸ್ವಯಂಭುವಿಲ್ಲದ ಮುನ್ನ, ಸಂಗ ನಿಸ್ಸಂಗವಿಲ್ಲದ ಮುನ್ನ, ನಕ್ಷತ್ರ ಗ್ರಹಂಗಳಿಲ್ಲದ ಮುನ್ನ, ಯೋಗ ಕರಣಂಗಳಿಲ್ಲದ ಮುನ್ನ, ಖೇಚರ ಭೂಚರರಿಲ್ಲದ ಮುನ್ನ, ಆರಾರು ಇಲ್ಲದ ಮುನ್ನ, ಆಕಾಶ ಮಾರುತರಿಲ್ಲದ ಮುನ್ನ, ಅಂಬುಧಿ ಕಮಠರಿಲ್ಲದ ಮುನ್ನ, ಹರಿಬ್ರಹ್ಮಾದಿಗಳಾರ ನಿಲವಿಲ್ಲದ ಮುನ್ನ, ಹಿಮಕರ ದಿನಕರರ ಸುಳುಹಿಲ್ಲದ ಮುನ್ನ,

೧ ಕಪಿಲಸಿದ್ಧಮಲ್ಲಿನಾಥಾ (ಮು)

ಹಿಂದೂ ಇಲ್ಲ ಮುಂದೂ ಇಲ್ಲ ಒಂದೂ ಇಲ್ಲದಂದು ಗೊಹೇಶ್ವರನಿದ್ದ ತನ್ನ ತಾನಱಿಯದಂತೆ.

**ಟೀ.** ಶಿವನು ತನ್ನ ಸ್ವಯಂಪ್ರಕಾಶ ಚಿಚ್ಛಕ್ತಿಯ ಪ್ರಭಾವತೆಯಿಂದ ಲಿಂಗ ಮೂರ್ತಿಯಾಗದಂದು, ಬ್ರಹ್ಮಾಂಡಗಳು ಸಚರಾಚರಾತ್ಮರು ಸಕಲ ದೇವತೆಗಳು ಆರು ಇಲ್ಲದೆ ಸರ್ವವು ಶೂನ್ಯವಾಗಿ ನಿಷ್ಕಲವಸ್ತು ತಾನೊಂದೆ ಇರ್ದು ತನಗೆ ತಾನೆಂಬ ಭಾವ ತನ್ನಲ್ಲಿಲ್ಲದೆ ಇದ್ದಿತ್ತೆಂಬುದೀ ವಚನದ ತಾತ್ಪರ್ಯಾರ್ಥ.

**ವ.** ಸರ್ಪನ ಮೇಲೆ ಪೃಥ್ವಿ ರಚಿಸದಂದು, ಸಮುದ್ರಂಗಳೇಳೂ ಹಾಸದಂದು[೧], ಅಷ್ಟದಿಗುದಂತಿಗಳು ಹೂಡದಂದು, ಸ್ವಯಂಭು ಶಕ್ತಿಗಳು ಇಲ್ಲದಂದು, ಗಂಗೆಗೌರೀವಲ್ಲಭರಿಲ್ಲದಂದು, 'ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಈಶ್ವರಶ್ಚ ಸದಾಶಿವಃ' ಈ ಐವರೂ ಇಲ್ಲದಂದು, ನಿಜಗುರು ಕಪಿಲಸಿದ್ಧಮಲ್ಲಿನಾಥ ಅತ್ತತ್ತ ನಿಮಗೆ ಹೆಸರಿಲ್ಲವಯ್ಯಾ.

**ಟೀ.** ಸಕಲ ಜಗತ್ತಿನ ಸೃಷ್ಟಿಕರ್ತರಪ್ಪ ಪಂಚಸಾದಾಖ್ಯ ಕಲಾಶಕ್ತಿಗಳು ಮೊದಲಾದ ಶಿವನ ಲೀಲಾಮೂರ್ತಿಗಳಿಲ್ಲದಂದು ನಿಷ್ಕಲವಾಗಿರ್ದ ವಸ್ತುವನು ಹೆಸರಿಡಬಾರದೆಂಬುದೀ ವಚನದ ತಾತ್ಪರ್ಯಾರ್ಥ.

**ವ.** ದ್ವೀಪಾದ್ವೀಪವಿಲ್ಲದಲ್ಲಿಂದತ್ತತ್ತ, ಕಾಲಕರ್ಮವಿಲ್ಲದಲ್ಲಿಂದತ್ತತ್ತ, ಮಾಯಾಮೋಹವಿಲ್ಲದಲ್ಲಿಂದತ್ತತ್ತ. ಏನು ಏನು ಇಲ್ಲದಲ್ಲಿಂದತ್ತತ್ತ ಆದಿಮೂವರಿಲ್ಲದಲ್ಲಿಂದತ್ತತ್ತ, ಚಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗವಿಲ್ಲದಲ್ಲಿಂದತ್ತತ್ತ ನೀನು ನಿರಾಳನಯ್ಯಾ.

**ಟೀ.** ಶಿವನ ಲೀಲಾಮೂರ್ತಿಗಳು ತತ್ತ್ವಾತತ್ತ್ವಂಗಳು ಏನು ಇಲ್ಲದಂದು ನಿಷ್ಕಲವಾಗಿದ್ದಿತ್ತು ಪರವಸ್ತುವೆಂಬುದೀ ವಚನದ ತಾತ್ಪರ್ಯಾರ್ಥ. ೧೧

**ವ.** ಅಪರವಿಲ್ಲದಂದು, ಪರಬ್ರಹ್ಮವಿಲ್ಲದಂದು, ಅನಾದಿಯಿಲ್ಲದಂದು, ಆದಿಯಿಲ್ಲದಂದು, ಸದಾಶಿವನಿಲ್ಲದಂದು, ಶಿವನಿಲ್ಲದಂದು, ಆನು ನೀನೆಂಬುದು ತಾನು ಇಲ್ಲದಂದು ಕೂಡಲ ಚೆನ್ನಸಂಗಯ್ಯ ಏನು ಎನ್ನದಿರ್ದನಂದು.

ವಹಿಸದಂದು (ಎ.)   ೨ ಸಿ (ಎ.)

೬೯. ನಿಷ್ಕಲವಸ್ತು ತನ್ನ ಚಿದ್ವಿಲಾಸಲೀಲೆಯಿಂದ ಪಂಚ ಸಾದಾಖ್ಯ ಲಿಂಗ ಮೂರ್ತಿಯಾದುದು ಅಪರವಾದಕಾರಣ 'ಅಪರ'ವೆಂಬ ಶಬ್ದಕ್ಕರ್ಥ. ಅಂತಪ್ಪ ಅಪರವಿಲ್ಲದಂದು ಪರಬ್ರಹ್ಮವೆಂಬ ನಾಮವಿಲ್ಲವಾಗಿ 'ಪರಬ್ರಹ್ಮವಿಲ್ಲದಂದು' ಎಂಬ ಶಬ್ದಕ್ಕರ್ಥ. ಅಂತಿಪ್ಪ ಅನಾದಿಯ ಶಿವನ ಚಿದ್ವಿಲಾಸಲೀಲೆಯಿಂದಲಾದ ಶಿವಾಂಶಿಕನೆ ಆತ್ಮನಾದ ಕಾರಣ ಆತ್ಮನೆಂಬುದೀಗ 'ಅನಾದಿ' ಯೆಂಬ ಶಬ್ದಕ್ಕರ್ಥ ದೇಹವೆಂಬುದೀಗ 'ಆದಿ'ಯೆಂಬ ಶಬ್ದಕ್ಕರ್ಥ. ಅಂತಾದ ದೇಹಾತ್ಮರುಗಳೂ ಇಲ್ಲ, ನಾನೀನೆಂದು ದ್ವೈತವಾಗಿ ತೋರುವ ತೋರಿಕೆಯೇನೂ ಇಲ್ಲ. ಅದೇಕಯ್ಯಾ ಎಂದರೆ ಶಿವನು ಲೀಲಾಮೂರ್ತಿಯಾಗದೆ ಇದ್ದಂದು ನಾನು ಇಲ್ಲವಾಗಿ ಅದು ನಿಶ್ಶಬ್ದಬ್ರಹ್ಮವಾಗಿದ್ದಿತ್ತು ವಸ್ತುವೆಂಬುದೀ ವಚನದ ತಾತ್ಪರ್ಯಾರ್ಥ.

ನಿಷ್ಕಲಲಿಂಗಸ್ಥಲ ಸಂಪೂರ್ಣ

ಅಂತು ಸ್ಥಲ ೧ಕ್ಕಂ ಶ್ಲೋಕ ೨ಕ್ಕಂ ವಚನ ೧೩ಕ್ಕಂ

**ಮಂಗಳಂ**

ಶ್ರೀ

# ೩. ಮಹಾಲಿಂಗಸ್ಥಲ

ಸೂತ್ರ. ಅಸ್ತು ಅಂತಪ್ಪ ಅಖಂಡಾದ್ವಯ ನಿತ್ಯನಿರವಯ ಪರಿಪೂರ್ಣ ಸಚ್ಚಿದಾನಂದವಪ್ಪ ನಿಷ್ಕಲಲಿಂಗವು ತಾನು ನಿಷ್ಕಲನಾಗಿ ಇರವಯದಲ್ಲಿ ಬಯಲಿಂಗ ನಾಗಿ ಇರಬಾರದೆಂದು, ಧ್ಯಾನ ಪೂಜೆಗಳಿಲ್ಲದೆ ಇರಬಾರದೆಂದು ತನ್ನ ಸ್ವ ಇಚ್ಛಾ ಲೀಲಾವಿಲಾಸದೋಜೆ ನೆನೆದ ನೆನಹುಮಾತ್ರದಲ್ಲಿಯೆ ತನ್ನ ಚಿತ್ರ್ಭಾಸಾಮರ್ಥ್ಯ ಶಕ್ತಿಯ ಮುಂದುಗೊಂಡು ಅಖಂಡ ತೇಜೋಮೂರ್ತಿಯಪ್ಪ ಮಹಾಲಿಂಗ ವಾಯಿತ್ತು. ಅಂತು ಮಹಾಲಿಂಗಸ್ಥಲ ಹೇಳಲಾದುದು.

ಮಹಾಲಿಂಗಸ್ಥಲಕ್ಕೆ ವೃತ್ತ :

ಆದ್ಯಂತಶೂನ್ಯಮಮಲಂ ಪರಿಪೂರ್ಣಮೇಕಮ್
ಸೂಕ್ಷ್ಮಂ ಪರಾತ್ಪರಮನಾಮಯಮಪ್ರಮೇಯಮ್
ಭಾವೈಕಗಮ್ಯಮಜಡಂ ಶಿವತತ್ವಮಾಯು
ಚಿಚ್ಛಕ್ತಿಸಂಸ್ಫುರಣರೂಪ ಮಹಾತ್ಮಲಿಂಗಮ್

ಟೀ. ಆದ್ಯಂತಶೂನ್ಯಂ-ಜನನ ಮರಣಂಗಳಿಲ್ಲದುದಾಗಿ, ಅಮಲಂ-ನಿರ್ಮಲ ನಾಗಿ, ಪರಿಪೂರ್ಣಂ-ಸರ್ವವ್ಯಾಪಿಯಾಗಿ, ಏಕಂ-ಅದ್ವಿತೀಯವಾಗಿ, ಸೂಕ್ಷ್ಮಂ-ಅಣುವಿಂಗೆಯು ಅಣುವಾಗಿ, ಪರಾತ್-ಪರಕಿಂದವೂ. ಪರಂ-ಪರವಾಗಿ, ಅನಾಮಯಂ-ಸಂಸಾರವ್ಯಾಧಿಯಿಲ್ಲದುದಾಗಿ, ಅಪ್ರಮೇಯಂ-ಹವಣಿಸಬಾರದುದಾಗಿ, ಭಾವೈಕಗಮ್ಯಂ-ಭಾವ ಒಂದರಿಂದವೇ ಅರಿಯಲು ಬಹುದಾಗಿ, ಅಜಡಂ-ಚೈತನ್ಯ ಸ್ವರೂಪವಾದ, ಶಿವತತ್ತ್ವಂ-ಶಿವತತ್ತ್ವವನು, ಚಿಚ್ಛಕ್ತಿಸಂಸ್ಫುರಣರೂಪಮಹಾತ್ಮ

ಲಿಂಗಂ, ಚಿಚ್ಛಕ್ತಿ-ಚಿತ್ತೆಂಬ ಶಕ್ತಿಯ, ಸಂಸ್ಫುರಣ-ಸಂಸ್ಫುರಣವೇ, ರೂಪ-ರೂಪವಾಗಿ ಉಳ್ಳ, ಮಹಾತ್ಮಲಿಂಗಂ-ಮಹಾಲಿಂಗವಾಗಿ, ಆಹುಃ ಹೇಳುತ್ತಿರುವರು. ೧

ಶ್ಲೋ. ಲೀಯತೇ ಗಮ್ಯತೇ ಯತ್ರ ಯೇನ ಸರ್ವಂ ಚರಾಚರಮ್
ತದೇತಲ್ಲಿಂಗಮಿತ್ಯುಕ್ತಂ ಲಿಂಗತತ್ತ್ವಪರಾಯಣೈಃ

ಟೀ. ಚರಾಚರಂ-ಚರಾಚರಾತ್ಮಕವಾದ, ಸರ್ವಂ-ಸರ್ವವಾದ ಜಗತ್ತು, ಯತ್ರ-ಆವುದರಲ್ಲಿ, ಲೀಯತೇ-ಲಯವನೆಯ್ದುತ್ತಿಹುದು, ಯೇನ-ಆವುದರಿಂದ, ಚರಾಚರಂ-ಜಂಗಮ ಸ್ಥಾವರಾತ್ಮಕವಾದ, ಸರ್ವಂ-ಸಮಸ್ತವೂ, ಗಮ್ಯತೇ [1]ಎಯ್ದಲುಪಡುತ್ತಿಹುದು, ತತ್-ಅ, ಏತತ್-ಇದು, ಲಿಂಗತತ್ತ್ವಪರಾಯಣೈಃ-ಲಿಂಗತತ್ತ್ವದಲ್ಲಿ ತಾತ್ಪರ್ಯವುಳ್ಳವರುಗಳಿಂದ, ಲಿಂಗಮಿತಿ-ಲಿಂಗವೆಂದು, ಉಕ್ತಂ ಹೇಳಲ್ಪಟ್ಟಿತ್ತು. ಲೀಙ್ ಶ್ಲೇಷಣೇ, ಗಮ್ಲೃ ಗತೌ ಎಂಬ ಲಯಾರ್ಥ ಗಮ್ಯಾರ್ಥಂಗಳಾದ ಧಾತುಗಳೆರಡರಿಂದವು ಲಿಂಗಶಬ್ದ ಉತ್ಪನ್ನವಾಯಿತ್ತು.

ಮಹಾಲಿಂಗಮಿದಂ ದೇವಿ ಮನೋತೀತಮಗೋಚರಮ್
ನಿರ್ನಾಮ ನಿರ್ಗುಣಂ ನಿತ್ಯಂ ನಿರಂಜನ್ಯಂ ನಿರಾಮಯಮ್
ನಿರ್ಮಲಂ ನಿಷ್ಕಲಂ ಜ್ಞೇಯಂ ನಿರ್ಭೇದ್ಯಂ ನಿರುಪಾಧಿಕಮ್
ಅಖಂಡಾನಂದಮಕ್ಷೀಣಂ ಅಸಾಧ್ಯಕ್ಯಮಿದಂ ಶೃಣು

ಟೀ. ಎಲೆ ದೇವಿ, ಮಹಾಲಿಂಗವು ಮನಕ್ಕೆ ಅತೀತವಾದಂಥ, ಅಗೋಚರವಾದಂಥ, ನಾಮವಿಲ್ಲದೆ ಇದ್ದಂಥ, ಗುಣತ್ರಯರಹಿತವಾಗಿದ್ದಂಥ, ರಂಜನೆಯಿಲ್ಲದೆ ಇದ್ದಂಥ, ಭೇದಿಸಬಾರದಂಥ, ಉಪಾಧಿಯಿಲ್ಲದೆ ಇದ್ದಂಥ, ಅಖಂಡಾನಂದವನುಳ್ಳಂಥ, ನಿತ್ಯವಾಗಿ ಇದ್ದಂಥ, ಪ್ರಕೃತಿಯಿಲ್ಲದಿದ್ದಂಥಾದ್ದೆಂದು ತಿಳಿವುದು.

ಪರತತ್ತ್ವಂ ಗೋಲಕಾಕಾರಂ ಚಿನ್ಮಯಂ ಸದ್ವಿಲಾಸಿತಮ್
ಶರಣ್ಯಂ ಸರ್ವತತ್ತ್ವಾನಾಂ ಲಿಂಗಾಕಾರೇಣ ವರ್ತತೇ

ಟೀ. ಪರತತ್ತ್ವವು ಜ್ಞಾನಸ್ವರೂಪವಾಗಿಯು ಉಂಟಾದ ಲೀಲೆಯನುಳ್ಳುದಾಗಿಯು ಎಲ್ಲಾ ತತ್ತ್ವಂಗಳಿಗೆಯು ಸ್ಥಾನವಾಗಿಯು ಗೋಳಕಾಕಾರವಾದಂಥ ಲಿಂಗಾಕಾರವಾಯಿತ್ತು.

[1] ಹುಟ್ಟುತ್ತಿಹುದು (ಎ).

ಕಿಂತ್ವೇತೇಷಾಂ ಸ್ಥಲಾನಾಂ ತು ಪ್ರಾದುರ್ಭಾವಃ ಪ್ರದರ್ಶ್ಯತೇ
ಶಿವ ಏವ ಸ್ವಚಿಚ್ಛಕ್ತ್ಯಾ ಮಹಾಲಿಂಗಸ್ಥಲಂ ಬಭೌ

**ಟೀ.** ಇನ್ನು ಈ ಸ್ಥಲಂಗಳ ತೋರ್ಪಿಕೆ ತೋರಿಸಲು ಬರುದಾಗಿ ಇರುದದು ಶಿವನೇ ತನ್ನ ಚಿಚ್ಛಕ್ತಿಯಿಂದ ಉಪಾಸ್ಯರೂಪವಾದ ಮಹಾಲಿಂಗಸ್ಥಲವಾದನು. ೬

## ಮಹಾಲಿಂಗಸ್ಥಲಕ್ಕೆ ವಚನ :

**ವ.** ಏನೂ ಏನೂ ಇಲ್ಲದ ಬಯಲೊಳಗೊಂದು ಬಗೆಗೊಳಗಾಗದ ಬಣ್ಣ ತಲೆದೋಱಿತ್ತು. ಆ ಬಣ್ಣವನಾ ಬಯಲು ಶೃಂಗರಿಸಲು ಬಯಲು ಸ್ವರೂಪುಗೊಂಡಿತ್ತು. ಅಂತಪ್ಪ ಸ್ವರೂಪಿನ ಬೆಡಗು ತಾನೆ ನಮ್ಮ ಗೊಹೇಶ್ವರಲಿಂಗದ ಪ್ರಥಮ ಭಿತ್ತಿ.

**ಟೀ.** ನಾದಬಿಂದುಗಳಿಲ್ಲದೆ, ಸಕಲ ತತ್ತ್ವಂಗಳೇನು ಇಲ್ಲದೆ, ಸರ್ವವು ಶೂನ್ಯವಾಗಿ ನಿಷ್ಕಲವಾಗಿದ್ದಿತ್ತು ಪರಬ್ರಹ್ಮವೆಂಬುದೀಗ ‘ ಏನೂ ಏನೂ ಇಲ್ಲದ ಬಯಲು ’ ಎಂಬ ಶಬ್ದಕ್ಕರ್ಥ. ಅಂತು ಉಪಮಿಸಬಾರದ ನಿರವಯಪರಬ್ರಹ್ಮದ ಸ್ವಯಂಪ್ರಕಾಶವಪ್ಪ ಚಿದ್ಬೆಳಗನುಪಮಿಸಬಾರದೆಂಬುದೀಗ ‘ ಬಯಲೊಳಗೊಂದು ಬಗೆಗೊಳಗಾಗದ ಬಣ್ಣ’ ವೆಂಬ ಶಬ್ದಕ್ಕರ್ಥ. ಅಂತು ಅಖಂಡ ಚಿದ್ಬೆಳಗೆಯಾಗಿಪ್ಪ ಪರಬ್ರಹ್ಮವು ತನ್ನ ಸ್ವಯಂಪ್ರಕಾಶಮಪ್ಪ ಸ್ವಚಿತ್ತಿನಿಂದ ಸ್ವಲೀಲಾಚಿಂತನೆದೋಱಿತ್ತೆಂಬುದೀಗ ‘ ಬಣ್ಣ ತಲೆದೋಱಿತ್ತೆ’ಂಬ ಶಬ್ದಕ್ಕರ್ಥ. ಅಂತು ಪರಬ್ರಹ್ಮವು ತನ್ನ ಸ್ವಚಿತ್ತಿನಿಂದ ಚಿಂತಿಸಿದ ಲೀಲಾಚಿಂತನೆಯ [೧]ನಿರ್ಧರಿಸಿದ[೧] ತನ್ನ ಚಿದ್ಬೆಳಗನತ್ಯುತ್ಕೃಷ್ಟವಾಗಿ ಅಲಂಕರಿಸಿಕೊಂಡು ಅಖಂಡತೇಜೋಮೂರ್ತಿಯಾದ ಮಹಾಲಿಂಗವಾಯಿತ್ತೆಂಬುದೀಗ ‘ ಆ ಬಣ್ಣವನಾ ಬಯಲು ಶೃಂಗರಿಸಲು ಬಯಲು ಸ್ವರೂಪುಗೊಂಡಿತ್ತು ’ ಎಂಬ ಶಬ್ದಕ್ಕರ್ಥ. ಅಂತು ತನ್ನ ಚಿದ್ವಿಲಾಸಲೀಲೆಯಿಂದ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವೇ ಪ್ರಥಮವಾಗಿ ಸಕಲತತ್ತ್ವಂಗಳ ಸೃಷ್ಟಿಗೆ ಕಾರಣವಾಯಿತ್ತೆಂಬುದೀಗ ‘ ಅಂತಪ್ಪ ಕಲಾಸ್ವರೂಪಿನ ಬೆಡಗು ತಾನೆ ನಮ್ಮ ಗೊಹೇಶ್ವರಲಿಂಗದ ಪ್ರಥಮ ಭಿತ್ತಿ ’ ಎಂಬ ಶಬ್ದಕ್ಕರ್ಥ. ೧

೧ ನಿರ್ಧರಿಸಿ (ಎ).

**ವ.** ಬಯಲು ಮೊಳಗಿ, ಮಳೆ ಸೃಜಿಸಿ, ಆ ಬಯಲು ಆ ಮಳೆಯನೊಡಗೂಡಿ ದೃಷ್ಟವಪ್ಪ ವಾರಿಕಲ್ಲಾಗಿ ತೋಱಿದಂತೆ ನಿನ್ನ ನೆನಹೆ ನಿನಗೆ ಶಕ್ತಿಯಾಯಿತ್ತಲ್ಲಾ. ಆ ನಿಮ್ಮಿಬ್ಬರ ಸಮರತಿಯೇ ನಿಮಗೆ ಅಖಂಡವೆಂಬ ನಾಮಸೂಚನೆಯಾಯಿತ್ತಲ್ಲಾ. ಮಹಾಲಿಂಗಕಲ್ಲೇಶ್ವರಾ ನಿಮ್ಮ ಆದಿಗೆ ಇದೇ ಪ್ರಥಮವಾಯಿತ್ತಲ್ಲಾ.

**ಟೀ.** ಆಕಾಶದ ಶಬ್ದನಾದಂಗಳಿಂದ ವಾಯುಜಲಂಗಳು ಹುಟ್ಟಿದವು. ಆ ಹುಟ್ಟಿದ ವಾಯುಜಲದಲ್ಲಿ ಶಬ್ದವೆಂಬ ನಾದಾಕಾಶ ವಾಯುರೂಪಾಗಿ ಕೂಡಲು ವಾರಿಕಲ್ಲಾಯಿತ್ತು ಎಂಬುದೀಗ 'ಬಯಲು ಮೊಳಗಿ ಮಳೆ ಸೃಜಿಸಿ ಆ ಬಯಲು ಆ ಮಳೆಯನೊಡಗೂಡಿ ದೃಷ್ಟವಪ್ಪ ವಾರಿಕಲ್ಲಾಗಿ ತೋಱಿದಂತೆ' ಎಂಬ ಶಬ್ದಕ್ಕರ್ಥ. ಈ ದೃಷ್ಟದಂತೆ ನಿಷ್ಕಲವಾಗಿಪ್ಪ ಪರಬ್ರಹ್ಮವೆಲ್ಲಾ ಪರಮ ಚೈತನ್ಯ ಚಿತ್ಸ್ವರೂಪು. ಅಂತಿಪ್ಪ ಪರಬ್ರಹ್ಮವು ತನ್ನ ಸ್ವಚಿತ್ತಿನಿಂದ ತನ್ನ ನೆನೆವುತ್ತಿಪ್ಪ ಚಿತ್ಸಾಮರ್ಥ್ಯವೇ ತನಗೆ ಚಿಚ್ಛಕ್ತಿಯಾಯಿತ್ತೆಂಬುದೀಗ 'ನಿನ್ನ ನೆನಹೆ ನಿನಗೆ ಶಕ್ತಿಯಾಯಿತ್ತಲ್ಲಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವು ತನ್ನ ಅಭಿನ್ನ ಸ್ವಶಕ್ತಿಯಪ್ಪ ಚಿತ್ತುವಿನ ನೆನಹಿನ ರತಿಸುಖದಿಂದ ಅತಿಶಯವಾಗಿ ಅಖಂಡತೇಜೋಮೂರ್ತಿಯಾದ ಮಹಾಲಿಂಗವಾಯಿತ್ತೆಂಬುದೀಗ 'ಆ ನಿಮ್ಮಿಬ್ಬರ ಸಮರತಿಯೇ ನಿಮಗೆ ಅಖಂಡವೆಂಬ ನಾಮಸೂಚನೆಯಾಯಿತ್ತಲ್ಲಾ' ಎಂಬ ಶಬ್ದಕ್ಕರ್ಥ. ಅಂತು ತನ್ನ ಚಿದ್ವಿಲಾಸಾನಂದಲೀಲೆಯಿಂದಲಾದ ಮಹಾಲಿಂಗಮೂರ್ತಿಯೇ ಶಿವನ ಸಾಕಾರಮೂರ್ತಿಗಳಿಗೆ ಪ್ರಥಮವೆಂಬುದೀಗ 'ಮಹಾಲಿಂಗ ಕಲ್ಲೇಶ್ವರಾ ನಿಮ್ಮ ಆದಿಗೆ ಇದೇ ಪ್ರಥಮವಾಯಿತ್ತಲ್ಲಾ' ಎಂಬ ಶಬ್ದಕ್ಕರ್ಥ. ೨

**ವ.** ಒಂದು ಇಲ್ಲದ ಬಿಂದುವ, ತಂದೆಯಿಲ್ಲದ ಕಂದನ, ಮಾತೆಯಿಲ್ಲದ ಜಾತನ, ಗಮನವಿಲ್ಲದ ಗಮ್ಯನ, ಮೂವರಱಿಯದ ಮುಗ್ಧನ ಠಾವ ತೋಱಿಸು ಗೊಹೇಶ್ವರಾ!

**ಟೀ.** ಪಂಚಕಲಾಶಕ್ತಿಗಳ ತೋಱಿಕೆಗಳೇನು ಇಲ್ಲದ ಮುನ್ನ, ಬಚ್ಚಬಱಿಯ ಬಯಲಾಗಿಪ್ಪ ನಿಷ್ಕಲಬ್ರಹ್ಮವು ಅಖಂಡ ಚಿದ್ಬೆಳಗೇ ಅಂಗವಾಗಿಪ್ಪುದು. ಆ ಚಿದ್ಬೆಳಗಿನಂಗವೇ ಚಿದ್ಬಿಂದು. ಅಂತಪ್ಪ ಚಿದ್ಬಿಂದುವೇ ಮಹಾಲಿಂಗವಾಯಿತ್ತೆಂಬುದೀಗ 'ಒಂದು ಇಲ್ಲದ ಬಿಂದುವ, ಎಂಬ ಶಬ್ದಕ್ಕರ್ಥ. ಅಂತು ಮಾತಾಪಿತರುಗಳಿಲ್ಲದ ತನ್ನಿಂದ ತಾನೇ ಮೂರ್ತಿಯಾದ ಮಹಾಲಿಂಗವೆಂಬುದೀಗ 'ತಂದೆಯಿಲ್ಲದ ಕಂದನ, ಮಾತೆಯಿಲ್ಲದ ಜಾತನ' ಎಂಬ ಶಬ್ದಕ್ಕರ್ಥ. ಅಂತು ಅಖಂಡ ತೇಜೋಮೂರ್ತಿ

ಯಾದ ಮಹಾಲಿಂಗವು ತನ್ನ ನಿಜವ ಹಿಂಗದೆ ಬೆಳಗಿ ತೋಱಿದ ತೋಱಿಕೆಯಾದ ಕಾರಣ 'ಗಮನವಿಲ್ಲದ ಗಮ್ಯನ' ಎಂಬ ಶಬ್ದಕ್ಕರ್ಥ. ಇಂತಾದ ಮಹಾಘನಲಿಂಗ ದಿಂದಾದ ತ್ರಿದೇವತೆಗಳು ಆ ಮಹಾಘನಲಿಂಗದಂತುವನಱಿಯರು. ಅದೇಕಯ್ಯಾ ಎಂದೊಡೆ ಆ ಮಹಾಘನಲಿಂಗವು ತನ್ನ ನಿಜದ ಮಹತ್ತ್ವವ ತಾನುಸುಱಿಹೇಳುವ ಶಬ್ದವದಕ್ಕಿಲ್ಲವಾಗಿ ಎಂಬುದೀಗ 'ಮೂವರಱಿಯದ ಮುಗ್ಧನ' ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾಲಿಂಗಸ್ವರೂಪಕ್ಕೆ ನೆಲೆ ಕಡೆಯಿಲ್ಲವಾಗಿ ಉಪಮಿಸಬಾರದೆಂಬುದೀಗ 'ಠಾವ ತೋಱಿಸು' ಎಂಬ ಶಬ್ದಕ್ಕರ್ಥ.

**ವ.** ಹುಟ್ಟು ಮೆಟ್ಟೆಂಬುದು ನಿಮಗಿಲ್ಲವಯ್ಯಾ. ನಿಮ್ಮಿಂದ ನೀವೇ ಸ್ವಯಂಭುವಯ್ಯಾ. ಇಂತಾದಿರಯ್ಯಾ, ಇಂತಾದಿರಯ್ಯಾ. ಹರುಷದಿಂದ ನೀವಿಂತಾದಿರಯ್ಯಾ! ನಿಮ್ಮ ಮಹಾತ್ಮೆಯ ನೀವೇ ಬಲ್ಲಿರಯ್ಯ ನಿಜಗುರು ಸ್ವತಂತ್ರ ಕಪಿಲಸಿದ್ಧಮಲ್ಲಿನಾಥಾ.

**ಟೀ.** ಉತ್ಪತ್ತಿ ಸ್ಥಿತಿ ಲಯಂಗಳು ಇಲ್ಲದ ಮಹಾಘನವಸ್ತು ತನ್ನ ಸ್ವಲೀಲೆಯಿಂದ ತಾನೇ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ.

**ವ.** ಅಮೂಲ್ಯನಪ್ರಮಾಣನಗೋಚರ ಲಿಂಗ. ಆದಿ ಮಧ್ಯಾವಸಾನಂಗಳಿಲ್ಲದ ಸ್ವತಂತ್ರಲಿಂಗ. ನಿತ್ಯನಿರ್ಮಲಲಿಂಗ. ಅಯೋನಿಸಂಭವ ನಮ್ಮ ಕೂಡಲ ಸಂಗಮದೇವರು.

**ಟೀ.** ನಿಷ್ಕಲಪರಬ್ರಹ್ಮವು ತನ್ನ ಲೀಲಾಸ್ವತಂತ್ರತೆಯಿಂದ ಅಖಂಡ ಗೋಳಕಾಕಾರ ತೇಜೋಮೂರ್ತಿಯಾಗಿ ಮಹಾಲಿಂಗವಾಯಿತ್ತಲ್ಲದೆ[1] ನಾದ ಬಿಂದು ಕಳೆಗಳಿಂದಾದ ಮೂರ್ತಿಯಲ್ಲವೆಂಬುದೀಗ 'ಅಮೂಲ್ಯ'ನೆಂಬ ಶಬ್ದಕ್ಕರ್ಥ. ಅದು ಕಾರಣ ಮಹಾಲಿಂಗವು ಶಕ್ತಿಯಿಂದ ಹುಟ್ಟಿದುದಲ್ಲವೆಂಬುದೀಗ 'ಅಯೋನಿ ಸಂಭವ'ನೆಂಬ ಶಬ್ದಕ್ಕರ್ಥ. ಅಂತಾದ ಮಹಾಲಿಂಗವು ನಿತ್ಯವನುಳ್ಳುದಾಗಿ ನಿರ್ಮಲವನುಳ್ಳುದಾಗಿ ಉತ್ಪತ್ತಿ ಸ್ಥಿತಿ ಲಯಂಗಳಿಲ್ಲದುದಾಗಿ ವಾಙ್ಮನಸ್ಸಿಗೆ ಅಗೋಚರವಾಗಿಪ್ಪುದು ಆ ಮಹಾಲಿಂಗವೆಂಬುದೀವಚನದ ಅಪರಾರ್ಥದರ್ಥ.

**ವ.** ತರುಗಳ ಮುಱಿದು ಗಗನಕ್ಕೀಡಾಡುವ ಅನಿಲ ರೂಪೋ? ನಿರೂಪೋ? ಬಲ್ಲರೆ ನೀವು ಹೇಳಿ ಭೋ! ಗಜಸಿಂಹ ಶಾರ್ದೂಲವೆಂಬ ಅಧಿಕ

೧ ತ್ತೆಂದಡೆ

ಮೃಗಂಗಳ ಮುಱಿದೊತ್ತಿ ಕೆಡುಹುತ್ತಿಪ್ಪ ವ್ಯಾಧಿ ರೂಪ್ಪೋ ನಿರೂಪ್ಪೋ ಬಲ್ಲರೆ ನೀವು ಹೇಳಿ ಭೋ! ಕಾಣಲೀಯದೆ ಕೇಳಲೀಯದೆ ಅವಧಾನಂಗಳ ಕೆಡಿಸುತ್ತಿಪ್ಪ ನಿದ್ರೆ ರೂಪ್ಪೋ ನಿರೂಪ್ಪೋ ಬಲ್ಲರೆ ನೀವು ಹೇಳಿ ಭೋ! ಇಂತಾಳಿನಾಳಿನ ಕೀಲಾಳಿನಂತಸ್ಥವನಾರಿಗೂ ಅಱಿಯಬಾರದು. ಅನಾದಿಮೂಲದೊಡೆಯನ ಬಲ್ಲೆನೆಂಬ ಪರಿ ಇನ್ನೆಂತೋ? ರೂಪೆಂದೊಡೆ ಶಬ್ದ, ನಿರೂಪೆಂದೊಡೆ ಶೂನ್ಯ. ಈ ಎರಡಱ ಆದಿಯಿಂದತ್ತ ಕಾಣಾ! ಎನ್ನ ತಂದೆ ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗವು ಗುರುಕಾರುಣ್ಯವುಳ್ಳವರಿಗಲ್ಲದೆ ಅಱಿಯಬಾರದು.

**ಟೀ.** ಅಖಂಡ ತೇಜೋಮೂರ್ತಿಯಾದ ಮಹಾಲಿಂಗವು ಸಕಲ ತತ್ವಂಗಳ ಸೃಷ್ಟಿಗೆ ತಾನೆ ಮೂಲಕರ್ತೃವಾಗಿಪ್ಪುದು. ಅಂತಿಪ್ಪ ಮಹಾಲಿಂಗವು ಸಾಕಾರವಲ್ಲ, ನಿರಾಕಾರವಲ್ಲ. ಮತ್ತೆಂತಿಪ್ಪುದೆಂದೊಡೆ ಅಖಂಡಿತಮಪ್ಪ ಮಹಾಪ್ರಕಾಶವೆಯಾಗಿ ವಾಙ್ಮನಸ್ಸಿಗೆ ಅಗೋಚರವಾಗಿಪ್ಪುದು. ಅಂತಪ್ಪ ಮಹಾಲಿಂಗವು ವೇದಾಗಮ ಶಾಸ್ತ್ರಂಗಳಿಂದ ಸಾಧಿಸಿ ಕಂಡೆನೆಂಬ ಮತಾದಿಗಳಿಗೆ ಸಾಧ್ಯವಲ್ಲದಿಪ್ಪುದು. ಮತ್ತೆಂತು ಕಾಣಬಹುದಯ್ಯಾ ಎಂದೊಡೆ ಗುರು ಕಾರುಣ್ಯಮಂ ಪಡೆದ ಶರಣಜನಂಗಳಿಗೆ ಭಿನ್ನವಿಲ್ಲದೆ ಬೆಳಗಿ ತೋಱುತ್ತಿಹನೆಂಬುದೀ ವಚನದ ತಾತ್ಪರ್ಯಾರ್ಥ. ೬

**ವ.** ನಿಮ್ಮ ತೇಜವ ನೋಡಲೆಂದು ಹಱಿಸಾರಿ ನೋಡುತ್ತಿರಲು ಶತಕೋಟಿ ಸೂರ್ಯರು ಮೂಡಿದಂತೆ ಇರ್ದುದಯ್ಯ! ಮಿಂಚಿನ ಬಳ್ಳಿಯ ಸಂಚವ ಕಂಡಡೆ ಎನಗಿದು ಸೋಜಿಗವಾಯಿತ್ತು! ಗುಹೇಶ್ವರಾ ನೀನು ಜ್ಯೋತಿರ್ಲಿಂಗವಾದಡೆ ಉಪಮಿಸಿ ನೋಡಬಲ್ಲವರಿಲ್ಲಯ್ಯ!

**ಟೀ.** ನಿಷ್ಕಲವಾಗಿರ್ದ ಪರಬ್ರಹ್ಮವು ತಾನೆ ತನ್ನ ಸ್ವಲೀಲೆಯಿಂದ ಅಖಂಡ ತೇಜೋಮೂರ್ತಿಯಾದ ಪರಂಜ್ಯೋತಿರ್ಲಿಂಗದ ಬೆಳಗಿನಿಂದೊಗೆದ ಶರಣನು ತನ್ನ ಸಮ್ಯಗ್‌ಜ್ಞಾನದೃಕ್ಕಿಂದ ತನ್ನಾದಿಯಪ್ಪ ಮಹಾಲಿಂಗದ ಬೆಳಗ ಕಂಡು ಉಪಮಿಸಬಾರದೆಂದು ಚೋದ್ಯಂಬಡುತಿರ್ದನೆಂಬುದೀ ವಚನದ ತಾತ್ಪರ್ಯಾರ್ಥ.

**ವ.** ಮಹಾಕಾಲದಲ್ಲಿ ನಿಮ್ಮಿಂದ ನೀವೆ ಸ್ವಯಂಭುವಾಗಿರ್ದೆಯಯ್ಯಾ ಒಂದನಂತಕಾಲ ಮಹವು ಮಹಾನಂದದಲುಕ್ಕಾಡಿ ಮತ್ತಲ್ಲಿಯೇ

ತಲ್ಲೀಯವಾಗಿರ್ದೆಯೊಂದನಂತಕೋಟಿ ವರುಷ! ಕೂಡಲ ಚೆನ್ನ ಸಂಗದೇವ ವಿಪರೀತ ಚಾರಿತ್ರ.

ಟೀ. ಕಾಲ ಕಲ್ಪಿತಂಗಳು ಮೊದಲಾದ ತತ್ವಂಗಳೇನು ಇಲ್ಲದಂದಿನ ಕಾಲಕ್ಕೆ ವರುಷ ದಿನಂಗಳೆಂಬ ಎಣಿಕೆ ಇಲ್ಲವಾಗಿ ಅದು ಮಹಾಕಾಲವೆನಿಸುವುದು. ಅಂತು ಏನೂ ಇಲ್ಲದ ಕಾಲದಂದು ನಿಷ್ಕಲವಾಗಿರ್ದ ಪರಬ್ರಹ್ಮವು ತನ್ನ ಸ್ವಲೀಲೆಯಿಂದ ತಾನೇ ಅಖಂಡ ಗೋಳಕಾಳಕಾವಾದ ಮಹಾಲಿಂಗವಾಯಿತ್ತು. ಅಂತಾದ ಮಹಾಲಿಂಗವು ತನ್ನ ಮಹಾನಂದದಲ್ಲಿ ಉಕ್ಕಾವಿ ಆ ಮಹಾನಂದದಲ್ಲಿ ವಿಶ್ರಮಿಸಿ ಕೊಂಡು ಅನಂತಕಾಲವಿರ್ದ ಮಹಾಲಿಂಗದ ಲೀಲಾಚಾರಿತ್ರವ ಉಪಮಿಸಬಾರದ ವಿಪರೀತವೆಂಬುದೀ ವಚನದ ತಾತ್ಪರ್ಯಾರ್ಥ.

ವ. ತನಗೆ ತಾನೆ ಹುಟ್ಟಿದಾತನಾಗಿ ತಾನೆ ಸ್ಥಾವರವಾದ ಆ ಲಿಂಗವು ತನ್ನಲ್ಲಿರ್ದ ರುಚಿಯ ಅವ್ಯಕ್ತಕ್ರೀಯಿಂದ ಮನವೆ ಬಾಯಾಗಿ ಉಂಬ ಲಿಂಗವು ಇತರ ಸುಖವ ಬಲ್ಲುದೆ ಕೂಡಲ ಚೆನ್ನಸಂಗಯ್ಯ?

ಟೀ. ನಿಷ್ಕಲ ಪರಬ್ರಹ್ಮವು ತನ್ನ ಸ್ವಲೀಲೆಯಿಂದ ತನಗೆ ತಾನೇ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಗಿ ತೋರಿತ್ತು. ಅಂತಾದ ಲಿಂಗವು ತನ್ನ ನಿಜಸ್ಥಲವ ಹಿಂಗದೆ ತೋರುತ್ತಿಹುದೆಂಬುದೀಗ 'ತನಗೆ ತಾನೇ ಹುಟ್ಟಿದಾತನಾಗಿ ತಾನೆ ಸ್ಥಾವರವಾದ'ನೆಂಬ ಶಬ್ದಕರ್ಥ. ಅಂತಪ್ಪ ಮಹಾಲಿಂಗವು ತನ್ನ ಸ್ವಾತ್ಮಾನಂದ ಸುಖದ ಸವಿಯ ಜಿಹ್ವೇಂದ್ರಿಯ ಮುಖಂಗಳಲ್ಲಿ ಕ್ರೀಯಿಂದ ಸವಿವುದಲ್ಲವಾಗಿ ತನ್ನ ಸಮ್ಯಗ್‌ಜ್ಞಾನಮುಖದಿಂದ ಭಿನ್ನವಿಡದೆ ಸವಿದಾನಂದಿಸುತ್ತಿರ್ದನೆಂಬುದೀಗ 'ಆ ಲಿಂಗವು ತನ್ನಲ್ಲಿರ್ದ ರುಚಿಯ ಅವ್ಯಕ್ತ ಕ್ರೀಯಿಂದ ಮನವೆ ಬಾಯಾಗಿ ಉಂಬ ಲಿಂಗ'ನೆಂಬ ಶಬ್ದಕರ್ಥ. ಅಂತು ತನ್ನ ಸ್ವಾತ್ಮಾನಂದ ಸುಖಾಮೃತದ ಸವಿಯ ಜ್ಞಾನಮುಖದಿಂದ ಸವಿದು ಆನಂದಿಸುತ್ತಿಹ ಲಿಂಗವು ಮಿಥ್ಯ ಮಾಯಾ ಸುಖಂಗಳಿಗೆ ಇಚ್ಛೈಸದೆ ಇಹನೆಂಬುದೀಗ 'ಲಿಂಗವು ಇತರ ಸುಖಂಗಳ ಬಲ್ಲುದೆ' ಎಂಬ ಶಬ್ದಕರ್ಥ. ೯

ವ. ತಾಯಿತಂದೆಯಿಲ್ಲದ ಕಂದಾ, ನಿನಗೆ ನೀನೆ ಹುಟ್ಟಿ ಬೆಳೆದೆಯಲ್ಲಾ! ನಿನ್ನ ಪರಿಣಾಮವೆ ನಿನಗೆ ಪ್ರಾಣತೃಪ್ತಿಯಾಗಿರ್ದೆಯಲ್ಲಾ! ಭೇದಕರಿಗೆ ಅಭೇದ್ಯನಾಗಿ ನಿನ್ನ ನೀನೆ ಬೆಳಗುತಿರ್ದೆಯಲ್ಲಾ! ನಿನ್ನ ಚಾರಿತ್ರ ನಿನಗೆ ಸಹಜ ಗುಹೇಶ್ವರಾ.

ಟೀ. ನಿಷ್ಕಲ ಪರಬ್ರಹ್ಮವು ಮಾತಾಪಿತರುಗಳು ಇಲ್ಲದೆ ತನ್ನ ಸ್ವಲೀಲೆಯಿಂದ ತಾನೆ ಅಖಂಡ ಪರಂಜ್ಯೋತಿರ್ಲಿಂಗವಾಗಿ ಬೆಳೆದು ಬೆಳಗುತ್ತಿರ್ದಲ್ಲಿ ಆ ಲಿಂಗವು ತನ್ನ ಪರಮ ಹರುಷಾನಂದ ಪರಮಪರಿಣಾಮವನೆ ಪ್ರಾಣಾಹಾರವಾಗಿ ತೃಪ್ತಿಯನೆಯ್ದುತ್ತಿಪ್ಪನಾಗಿ ಆ ಮಹಾಲಿಂಗದ ಚಾರಿತ್ರದ ನಿಲವನಾ ಲಿಂಗವೆ ಬಲ್ಲನಲ್ಲದೆ ಭೇದಿಸಿ ಕಂಡೆಹೆನೆಂದಡೆ ಅಭೇದ್ಯವೆಂಬುದೀ ವಚನದ ತಾತ್ಪರ್ಯಾರ್ಥ. ೧೦

ವ. ಕಾಲಕಲ್ಪಿತಂಗಳಿಲ್ಲದೆ ನಿನ್ನಿಂದ ನೀನೆಯಾಗಿ ಇರ್ದೆಯಲ್ಲಾ! ನಿಮ್ಮ ಪರಮಾನಂದಪ್ರಭಾವದ ಪರಿಣಾಮದಲ್ಲಿ ಅನಂತಕಾಲವಿರ್ದಿರಲ್ಲಾ! ನಿಮ್ಮ ಆದ್ಯಂತವ ನೀವೆ ಅರಿವುತಿದ್ದಿರಲ್ಲಾ! ನಿಮ್ಮ ನಿಜಸ್ವಭಾವವ ನೀವೆ ಬಲ್ಲಿರಿ ಕೂಡಲ ಚೆನ್ನ ಸಂಗಮದೇವಾ.

ಟೀ. ಕಾಲಕಲ್ಪಿತಂಗಳು ಮೊದಲಾದುವೇನೂ ಇಲ್ಲದಿರ್ದ ನಿಷ್ಕಲ ಪರಬ್ರಹ್ಮವು ತನ್ನ ಪರಮಾನಂದವೆಂಬ ಉತ್ಕೃಷ್ಟಾನಂದದಿಂದ ಹೆಚ್ಚಿ ಪ್ರಭಾವಿಸಿ ಮಹಾಲಿಂಗ ಮೂರ್ತಿಯಾಗಿ ಪರಿಣಾಮಿಸಿಕೊಂಡಿರ್ದ ಆ ಕಾಲಂಗಳಿಗೆಯೂ ಎಣಿಕೆಯಿಲ್ಲ. ಅಂತಿರ್ದ ಮಹಾಲಿಂಗದ ನಿಜಸ್ವಭಾವವನು ಆ ಲಿಂಗದ ಆದ್ಯಂತವನು ಆ ಲಿಂಗವೆ ಬಲ್ಲನಲ್ಲದೆ ಬೇಱೆಜೀವವರೊಬ್ಬರೂ ಇಲ್ಲದಿರ್ದರೆಂಬುದೀ ವಚನದ ತಾತ್ಪರ್ಯಾರ್ಥ. ೧೧

ವ. ಬ್ರಹ್ಮ ವಿಷ್ಣು ರುದ್ರ ಈಶ್ವರ ಸದಾಶಿವ ಪರಮೇಶ್ವರರೆಂಬ ಸಂದಣಿ ತಲೆದೋಱದ ಮುನ್ನ, ಅಲ್ಲಿಂದತ್ತ ಬಯಲೆ ಸ್ವರೂಪವಾಯಿತ್ತು. ಆ ಸ್ವರೂಪಿನ ಘನತೆಯನುಪಮಿಸಬಾರದು. ನೋಡಬಾರದ ಬೆಳಗು, ಕೂಡಬಾರದ ಮೂರ್ತಿ, ಅಖಂಡ ಅಪ್ರತಿಮ ನಮ್ಮ ಗುಹೇಶ್ವರ ಲಿಂಗದ ಬೆಳಗಿನ ಮೂಲವ ಲಿಂಗಸಂಗಿಗಳಲ್ಲದೆ ಮಿಕ್ಕಿನ ಅಂಗವಿಕಾರಿಗಳೆತ್ತ ಬಲ್ಲರೋ ?

ಟೀ. ಸದಾಶಿವ ಮೊದಲಾದ ತತ್ವಂಗಳೇನೂ ಇಲ್ಲದಂದು ಬಯಲುಗನಾಗಿರ್ದ ನಿಷ್ಕಲಪರಬ್ರಹ್ಮವು ತನ್ನ ಸ್ವಲೀಲೆಯಿಂದ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಯಿತ್ತು. ಅಂತಾಗಿಪ್ಪ ಲಿಂಗದ ಘನತೆಯ, ಆ ಲಿಂಗದ ಬೆಳಗ, ಆ ಲಿಂಗದ ಪ್ರಥಮದ ಮೂಲವ ವೇದಾಗಮಂಗಳಿಂದ ಉಪಮಿಸಿ ಕಾಣಬಾರದಾಗಿ ಲಿಂಗದ ಚಿದಂಗಸ್ವರೂಪರಾದ ಶರಣಜನಂಗಳಿಂದ ಕಾಣಲಾಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೧೨

ವ. ಲಿಕಾರವೇ ಶೂನ್ಯ, ಬಿಂದುವೇ ಲೀಲೆ, ಗಕಾರವೇ ಚಿತ್ತು. ಈ ತ್ರಿವಿಧದೊಳಗದೆ ಲಿಂಗವೆಂಬ ಸಕೀಲ. ಅದಱ ಸಂಚವನಾವಾತ ಬಲ್ಲ ಆತನ ಲಿಂಗಸಂಗಿ. ಕೂಡಲ ಚೆನ್ನಸಂಗಮದೇವಾ ಲಿಂಗಾನುಭಾವಿಗಳ ಶ್ರೀಚರಣಕ್ಕೆ ನಮೋ ನಮೋ ಎಂಬೆ!

ಟೀ. ಚಿತ್ಚೈತನ್ಯವೆ ಗಮಿಸಿ ಜಗತ್ಚೈತನ್ಯವಾಗಿ ಸೃಷ್ಟಿಯಾಯಿತ್ತಾಗಿ 'ಗಕಾರವೆ ಚಿತ್ತು'ವೆಂಬ ಶಬ್ದಕ್ಕರ್ಥ. ಆ ಮಧ್ಯದ ಚಿದ್ಬಿಂದುವೆ ಆ ಚಿತ್ಚೈತನ್ಯಕ್ಕೆ ಅಂಗವಾಗಿ ಲೀಲಾಸ್ಥಿತಿಯ ನಟಿಸುತ್ತಿಹುದಾಗಿ 'ಬಿಂದುವೆ ಲೀಲೆ'ಯೆಂಬ ಶಬ್ದಕ್ಕರ್ಥ. ಲಿಕಾರವೆ ಲಯವನೆಯ್ದಿಸಿ ಸರ್ವಶೂನ್ಯವ ಮಾಡುತ್ತಿಹುದೆಂಬುದೀಗ 'ಲಿಕಾರವೆ ಶೂನ್ಯ'ವೆಂಬ ಶಬ್ದಕ್ಕರ್ಥ. ಅಂತು ಜಗದುತ್ಪತ್ತಿ ಸ್ಥಿತಿ ಲಯಂಗಳು ಲಿಂಗದಿಂದಾಗುತ್ತಿಹುದಾಗಿ ಲಿಂಗವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗದ ಮಹತ್ವದ ಸಂಚವನಱಿದಿಪ್ಪ ಲಿಂಗಾನುಭಾವಿಗಳ ಅನುಭಾವದ ವರ್ತನೆಯಿಂದ ಕಾಣಲಾಯಿತ್ತಾಗಿ ಆ ಲಿಂಗಾನುಭಾವಿಗಳ ಶ್ರೀಚರಣಕ್ಕೆ ನಮೋ ನಮೋ ಎಂಬೆನೆಂಬ ಶಬ್ದಕ್ಕರ್ಥ. ೧೩

ವ. ಲಿಂಗವೆಂಬುದು ಪರಶಕ್ತಿಯುಕ್ತ. ಲಿಂಗವೆಂಬುದು ಪರಶಿವನ ನಿಜದೇಹ. ಲಿಂಗವೆಂಬುದು ಪರಶಿವನ ಘನತೇಜ. ಲಿಂಗವೆಂಬುದು ಪರಶಿವನ ನಿರತಿಶಯಾನಂದಸುಖ. ಲಿಂಗವೆಂಬುದು ಪರಶಿವನ ಪರಮಜ್ಞಾನ. ಲಿಂಗವೆಂಬುದು ಪರಶಿವನು ತಾನು. ಲಿಂಗವೆಂಬುದು ಷಡಧ್ವಮಯ ಜಗಜ್ಜನ್ಮಭೂಮಿ ತಾನು. ಲಿಂಗವೆಂಬುದು ಅಖಂಡಿತ ಅಭೇದ್ಯ ಪಂಚ ಸಂಜ್ಞೆ ತಾನು. ಲಿಂಗವೆಂಬುದು ಹರಿಬ್ರಹ್ಮರ ನಡುವೆ ನೆಗಳ್ದ ಜ್ಯೋತಿರ್ಮಯಲಿಂಗ. ಶ್ರುತಿ : "ಆಲಯಂ ಸರ್ವಭೂತಾನಾಂ ಲಯಾನ್ನಾಮ್ ಲಿಂಗಮುಚ್ಯತೇ" ಎಂದುದಾಗಿ. ಇದು ಲಿಂಗದ ವರ್ಮ. ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಲಿಂಗದೊಳಿಂತು ತಿಳಿಯಬಲ್ಲಾತನೆ ಬಲ್ಲವನು.

ಟೀ. ನಿಷ್ಕಲ ಪರಶಿವಲಿಂಗವು ತನ್ನ ಸ್ವಲೀಲೆಯಿಂದ ತನ್ನ ನಿಜಾಂಗವನು ತನ್ನ ಮಹಾಪ್ರಕಾಶವನು ತನ್ನ ಮಹಾಜ್ಞಾನವನು ತನ್ನ ಸ್ವಯಾನಂದಸುಖ ಮೊದಲಾದ ತನ್ನ ಸ್ವಧರ್ಮವೆಲ್ಲಾ ಸಹವಾಗಿ ಅಖಂಡ ತೇಜೋಮೂರ್ತಿಯಾದ ಮಹಾಲಿಂಗಾಕಾರವಾಯಿತ್ತು. ಅಂತಾದ ಮಹಾಲಿಂಗವು ಪಂಚಮುಖವನೆಯ್ದಿ ಪಂಚಕಲಾಶಕ್ತಿಯುಕ್ತವಾದ ಪಂಚಸಾದಾಖ್ಯಲಿಂಗಮೂರ್ತಿಯಾಯಿತ್ತು. ಅಂತಾದ ಮಹಾ

ಲಿಂಗವೆ ಹರಿಬ್ರಹ್ಮರ ನಡುವೆ ನೆಗಳ್ದ ಮಹಾತೇಜೋಮೂರ್ತಿಯಾದ ಲಿಂಗವಾದುದು ತಾನೆ. ಅಂತು ಅಖಂಡಿತವಾಗಿ ಸರ್ವತೇಜೋಮುಖವಾಗಿ ಸಕಲ ನಿಃಕಲವಾಗಿ ಪಂಚಸಂಜ್ಞೆಯನುಳ್ಳುದಾಗಿ ತನ್ನ ಸ್ವಲೀಲಾಸ್ವತಂತ್ರತೆಯಿಂದಿಪ್ಪ ಆ ಮಹಾಲಿಂಗವೆ ಭುವನಾಧ್ವ ತತ್ವಾಧ್ವ ವರ್ಣಾಧ್ವ ಮಂತ್ರಾಧ್ವ ಪದಾಧ್ವ ಕಲಾಧ್ವ ಮೊದಲಾದ ಚರಾಚರಾತ್ಮಕರುಗಳಿಗೆ ತಾನೆ ಜನ್ಮಸ್ಥಾನವಾದನಾಗಿ ಅಂತು ಸರ್ವತತ್ವಂಗಳು ಲಿಂಗಮಧ್ಯದಲ್ಲಿಯೆ ಹುಟ್ಟಿ ಅಡಗುತ್ತಿಹವೆಂದು ಅಱಿದು ಲಿಂಗವಾಗಿಪ್ಪ ಶರಣನೆ ಬಲ್ಲಾತನು. ಆ ಬಲ್ಲ ಶರಣನಿಂದ ಆ ಮಹಾಲಿಂಗದ ಘನ ಕಾಣಲಾಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೧೪

ಮಹಾಲಿಂಗಸ್ಥಲ ಸಂಪೂರ್ಣ

**ಅಂತು ಸ್ಥಲ ೨೯ಕ್ಕಂ ಶ್ಲೋಕ ೮೯ಕ್ಕಂ ವಚನ ೨೬೯ಕ್ಕಂ**

**ಮಂಗಳಂ**

**ಶ್ರೀ**

# ೩. ಲಿಂಗಮೂರ್ತಿಸ್ಥಲ

❀

**ಸೂತ್ರ.** ಅಂತು ಅಖಂಡ ಗೋಳಕಾಕಾರವಪ್ಪ ಮಹಾತೇಜೋಮೂರ್ತಿಯಾದ ಮಹಾಲಿಂಗವು ತನ್ನ ತಾನೆ ಅರ್ಚಿಸಿ ಪೂಜಿಸಿಕೊಂಬ ಲೀಲಾವಿಲಾಸದಿಂದ ಲಿಂಗಾಂಗವೆರಡಾಯಿತ್ತು. ಅವೆರಡಾದುದೆಂತೆಂದೊಡೆ : ಆ ಮಹಾಲಿಂಗವೆ ಪಂಚಮುಖವನೆಯ್ದಿ ಪಂಚಸಾದಾಖ್ಯ ಲಿಂಗಮೂರ್ತಿಯಾಯಿತ್ತು. ಆ ಲಿಂಗಮೂರ್ತಿಯಾಗಿ ಪ್ರಭಾವಿಸಿದ ಚಿಚ್ಚೈತನ್ಯಪ್ರಭಾಸಾಮರ್ಥ್ಯಶಕ್ತಿಯೊಳೊಂದಂಶಮಂ ಬೇರ್ಪಡಿಸೆ ಆತ್ಮನೆಂಬ ಅಂಗವಾಯಿತ್ತು. ಅಂತಾದ ಲಿಂಗಾಂಗವೆರಡರೊಳಗೆ ಆ ಲಿಂಗಮೂರ್ತಿಸ್ಥಲ ಹೇಳಲಾದುದು.

**ಆ ಸ್ಥಲಕ್ಕೆ ಶ್ಲೋಕ :**

ಲೀಲಯಾ ಸಹಿತಃ ಸಾಕ್ಷಾದುಮಾಪತಿರಿತೀರಿತಾ
ಲೀಲಯಾ ರಹಿತಃ ಪಶ್ಚಾತ್ ಸ್ವಯಂಭೂರಿತಿ ಕಥ್ಯತೇ

**ಟೀ.** ಮಹಾಘನಲಿಂಗವು ಲೀಲೆಯಾದಲ್ಲಿ ಉಮಾಪತಿಯಾಗಿಪ್ಪನು. ಲೀಲೆ ನಿಂದಡೆ ಸ್ವಯಂಭುವಾಗಿಪ್ಪನು ಎಂಬುದೀ ಗ್ರಂಥದ ತಾತ್ಪರ್ಯಾರ್ಥ

ತಸ್ಮಾಲ್ಲಿಂಗಂ ವಿಶೇಷೇಣ ಕರ್ಮರೂಪಮುದಾಹೃತಂ
ಕರ್ಮೋದಯೇ ಚ ಸೃಷ್ಟಿಶ್ಚ ಕರ್ಮಾಂತೇ ಸಂಹೃತಿರ್ಭವೇತ್

**ಟೀ.** ತಸ್ಮಾತ್-ಅದುಕಾರಣದಿಂದ, ಲಿಂಗಂ-ಶಿವಲಿಂಗವು, ವಿಶೇಷೇಣ-ವಿಶೇಷಿಸಿಯೂ, ಕರ್ಮರೂಪಮುದಾಹೃತಂ- ಕರ್ಮರೂಪವಾದುದೆಂದು ನುಡಿಯಲ್ಪಟ್ಟುದು. ಕರ್ಮೋದಯೇ ಚ-ಕರ್ಮಸ್ವರೂಪವಾದ ಶಿವಲಿಂಗೋದಯದಲ್ಲಿ,

ಸೃಷ್ಟಿಶ್ಚ-ಜಗತ್‌ಸೃಷ್ಟಿಯಹುದು, ಕರ್ಮಾಂತೇ-ಕರ್ಮಾಂತ್ಯದಲ್ಲಿ, ಸಂಹೃತಿರ್ಭವೇತ್-ಜಗತ್‌ಸಂಹಾರವಹುದು. ೨

ಪಂಚಮೂರ್ತಿಮಯಂ ದೇಹಂ ಪಂಚತತ್ವಾತ್ಮಕಂ ಭವೇತ್
ಮೂರ್ತಾನಾಂ ದೇಹಭೇದೈಸ್ತು ಗುಣೈಃ ಪಂಚಾನನೈರ್ಯುತಂ

ಟೀ. ಪಂಚಮೂರ್ತಿಮಯಂ ದೇಹಂ - ಪಂಚಮೂರ್ತಿಸ್ವರೂಪವಾದಂಥ ಕರ್ಮಸಾದಾಖ್ಯವು, ಪಂಚತತ್ವಾತ್ಮಕಂ ಭವೇತ್-ಅಯ್ದು ತತ್ವಂಗಳ ಸ್ವರೂಪವಹುದು. ಮೂರ್ತಾನಾಮ್-ಮೂರ್ತಿಯನುಳ್ಳ ಸದಾಶಿವತತ್ವಂಗಳ, ದೇಹಭೇದೈಃ-ದೇಹಭೇದಂಗಳೊಡನೆಯುಂ, ಗುಣೈಸ್ತು-ಗುಣಂಗಳೊಡನೆಯುಂ, ಪಂಚಾನನೈರ್ಯುತಂ-ಅಯ್ದುಮುಖಂಗಳೊಡನೆಯುಂ ಕೂಡಿದ್ದುದಾಗಿಹುದು. ೩

ಏವಂ ತತ್ ಸ್ಮೃತಿಮಾತ್ರೇಣ ಮೂರ್ತಂ ಸಕಲರೂಪಧೃತ್
ನಿಷ್ಕಲಂ ತದಭಾವೇತು ತಸ್ಮಾತ್ ಸಕಲನಿಷ್ಕಲಂ

ಟೀ. ಏವಂ-ಈ ಪ್ರಕಾರದಿಂದ, ತತ್-ಆ ಶಿವತತ್ವವು, ಸ್ಮೃತಿಮಾತ್ರೇಣ-ನೆನಹು ಮಾತ್ರದಿಂದ, ಸಕಲರೂಪಧೃತ್-ಸಕಲ ಕಲೆಗಳೊಡನೆ ಕೂಡಿದಂಥ ಸ್ವರೂಪವ ಧರಿಸಿದ್ದ, ಮೂರ್ತಂ-ಮೂರ್ತಿಯನುಳ್ಳುದಹುದು. ತದಭಾವೇತು-ಆ ಧ್ಯಾನಯೋಗಿಗಳ ನೆನಹಿಂಗೆ ಗೋಚರಿಸದ ಪಕ್ಷ, ನಿಷ್ಕಲಂ-ತನ್ನ ನಿಷ್ಕಲಶಕ್ತಿಯನೆ ಕೂಡಿಕೊಂಡಿಹುದು. ತಸ್ಮಾತ್-ಅದುಕಾರಣ ಕರ್ಮೇಶತತ್ವವು, ಸಕಲನಿಷ್ಕಲಂ-ಸಕಲನಿಷ್ಕಲವೆಂಬ ದ್ವಿಲಕ್ಷಣವಾಗಿಹುದು. ೪

ಸವೀರ್ಯಂ ಚೈವ ನಿರ್ದೇಹಂ ಮಾಂಸಾಸ್ಥಿರುಧಿರಂ ನ ಚ
ಇಂದ್ರಚಾಪಮಿವಾಕಾಶೇ ದರ್ಪಣೇ ಪ್ರತಿಬಿಂಬವತ್

ಟೀ. ಸವೀರ್ಯಂ ಚೈವ ನಿರ್ದೇಹಂ-ವೀರ್ಯದೊಡನೆ ಕೂಡಿದ್ದುದಾಗಿಯೂ ದೇಹವಲ್ಲದಂಥಾದ್ದು, ಮಾಂಸಾಸ್ಥಿರುಧಿರಂ ನ ಚ-ಮಾಂಸ ಅಸ್ಥಿ ರುಧಿರಂಗಳು ಇಲ್ಲದಂಥಾದ್ದು. ಈ ಕರ್ಮೇಶತತ್ವದ ಸಕಲ ತತ್ವವು ಆಕಾಶೇ-ಆಕಾಶದಲ್ಲಿ ಮೇಘಜಾಲದ ಮೇಲೆ, ಇಂದ್ರಚಾಪಮಿವ-ಇಂದ್ರಚಾಪವು ಹೇಗೆ ತೋಱುವುದು ಹಾಗೆ ಧ್ಯಾನಿಗಳ ಹೃದಯಾಕಾಶದಲ್ಲಿಯುಂ ಧ್ಯಾನದರ್ಪಣದಲ್ಲಿಯುಂ ತೋಱುತ್ತಿಹುದು. ೫

ಇತ್ಯೇತನ್ಮನಸಾ ಕಲ್ಪ್ಯ ಸಕಲಂ ನಿಷ್ಕಲಂ ಭವೇತ್

**ಟೀ.** ಇತಿ-ಈ ಪ್ರಕಾರದಿಂದ, ಏತತ್-ಆ ಈಶ್ವರರೂಪವನು, ಮನಸಾ ಕಲ್ಪ್ಯ-ಮನಸ್ಸಿನೊಡನೆ ಸಂಬಂಧಿಸಿದೊಡೆ, ಸಕಲಂನಿಷ್ಕಲಂ ಭವೇತ್-ಸಕಲ ನಿಷ್ಕಲವೆಂಬ ದ್ವಿರೂಪವಹುದು. ಕರ್ಮೇಶ ಕರ್ಮೇಶತತ್ವದ ಸಕಲ ನಿಷ್ಕಲವುಂ ನಿರೂಪಿಸಿ ಅಂಗಭೇದವುಂ ನಿರೂಪಿಸಿಹನು. ೬

ಧ್ಯಾನಲಕ್ಷಣಮಿತ್ಯುಕ್ತಂ ಅಂಗಭಾವಮಥೋಚ್ಯತೇ
ಅಂಗಭೇದೋ ಮಹಾಸೇನ ಚತುರ್ಭಿರ್ಭೇದ ಉಚ್ಯತೇ

**ಟೀ.** ಭೋ ಮಹಾಸೇನ-ಎಲೆ ಷಣ್ಮುಖನೇ, ಇತಿ-ಈ ಪ್ರಕಾರದಿಂದ, ಧ್ಯಾನಲಕ್ಷಣಮಿತ್ಯುಕ್ತಂ-ಧ್ಯಾನಲಕ್ಷಣ ಹೇಳಲ್ಪಟ್ಟುದು, ಅಥ-ಅನಂತರವು, ಅಂಗ ಭಾವಂ-ಅಂಗಭಾವವಂ, ಉಚ್ಯತೇ-ನುಡಿಯಲ್ಪಡುತ್ತಿದ್ದುದು. ಅಂಗಭೇದಃ-ಅಂಗ ಭೇದವು, ಚತುರ್ಭಿಃ-ಅಂಗ ಪ್ರತ್ಯಂಗ ಸಾಂಗೋಪಾಂಗಂಗಳಿಂದ. ಭೇದಃ-ಬೇರ್ಪ ಡಿಸುವುದೆಂದು, ಉಚ್ಯತೇ-ನುಡಿಯಲ್ಪಡುತ್ತಿಹುದು. ೭

ಅಂಗ ಪ್ರತ್ಯಂಗ ಸಾಂಗಂಚ ಉಪಾಂಗಂಚ ಚತುರ್ಥಕಂ
ಶಿರೋ ವಕ್ತ್ರಂಚ ಹೃದಯಮಂಗಂಚೇತಿ ಪ್ರಕೀರ್ತಿತಂ

**ಟೀ.** ಅಂಗ ಪ್ರತ್ಯಂಗ ಸಾಂಗಂಚ ಉಪಾಂಗಂಚ-ಅಂಗ ಪ್ರತ್ಯಂಗ ಸಾಂಗ ಉಪಾಂಗಗಳೆಂದು, ಚತುರ್ಥಕಂ-ನಾಲ್ಕುಭೇದವನುಳ್ಳುದಹುದು. ಶಿರಃ-ಶಿರಸ್ಸು, ವಕ್ತ್ರಂಚ-ಮುಖವು, ಹೃದಯಂ-ಹೃದಯವು, ಅಂಗಂ ಚೇತಿ ಪ್ರಕೀರ್ತಿತಂ-ಅಂಗ ವೆಂದು ಹೇಳಲ್ಪಟ್ಟುದು. ೮

ಮಧ್ಯಃ ಕಂಠಸ್ತಥಾ ಬಾಹೂ ನಾಭಿ ಗುಹ್ಯೋದರಾಣಿ ಚ
ನೇತ್ರೇ ನಾಸಾ ಚ ಕರ್ಣೌಚ ಪಾಣೀಪಾದೌ ತಥಾಂಗುಲಿಃ
ಊರೂಚ ಜಾನೂ ಜಂಘೇ ಚ ಪ್ರತ್ಯಂಗಂ ಚೇತಿ ಕೀರ್ತಿತಂ

**ಟೀ.** ಮಧ್ಯಃ-ನಡು, ಕಂಠಃ-ಕೊರಲು, ತಥಾ-ಹಾಗೆಯೇ, ಬಾಹೂ-ತೋಳುಗಳು, ತಥಾ-ಆ ಪರಿಯಲ್ಲಿಯೇ, ನಾಭಿ-ಹೊಕ್ಕುಳು, ಗುಹ್ಯ-ಗುಹ್ಯಸ್ಥಾನವು, ಉದರ-ಒಡಲು, ನೇತ್ರೇ-ಕಂಗಳು, ನಾ ಸಾಚ-ನಾಸಿಕವು, ಕರ್ಣೌ ಚ-ಶ್ರೋತ್ರಂಗಳು, ತಥಾ-ಹಾಗೆಯೆ, ಪಾಣೀ-ಹಸ್ತಗಳು, ಪಾದೌ-ಪಾದಂಗಳು, ಅಂಗುಲಿಃ-ಬೆರಳು ಗಳು, ಊರೂ ಚ-ತೊಡೆಗಳು, ಜಾನೂ ಜಂಘೇ ಚ-ಮೊಳಕಾಲುಗಳು, ಕಿಜುದೊಡೆ ಗಳು, ಪ್ರತ್ಯಂಗಂ ಚೇತಿ ಕೀರ್ತಿತಂ ಪ್ರತ್ಯಂಗಗಳೆಂದು ನುಡಿಯಲ್ಪಟ್ಟುವು. ೯

ಮೂರ್ತಂ ಚ ಗುಣರೂಪಂ ಚ ಸಾಂಗಂ ಚೇತಿ ಪ್ರಕೀರ್ತಿತಂ
ಗುಣಭಿನ್ನಮಿತಿ ಜ್ಞೇಯಂ ತದ್ಗುಣಸ್ತು ತಥಾ ಭವೇತ್

ಟೀ. ಮೂರ್ತಂ ಚ-ಮೂರ್ತಿಯನುಳ್ಳಂಥಾ, ಗುಣರೂಪಂ ಚ-ಗುಣಗಳ ಸ್ವರೂಪವು, ಸಾಂಗಂ ಚೇತಿ ಪ್ರಕೀರ್ತಿತಂ-ಸಾಂಗವೆಂದು ಹೇಳಲ್ಪಟ್ಟುದು. ಗುಣ ಭಿನ್ನಮಿತಿ ಜ್ಞೇಯಂ-ಗುಣಂಗಳ [೧]ಭೇದದಿ[೧] ಹೀಗೆಂದು ಮುಂದಣ ಶ್ಲೋಕಂಗಳಲ್ಲಿ ಅಱಿಯಲು ತಕ್ಕುದು. ತದ್ಗುಣಸ್ತು-ಆ ಗುಣ ಭೇದವು ಪ್ರತಿ ಹಸ್ತಂಗಳಲ್ಲಿ ಸ್ವರೂಪವನುಳ್ಳುದು, ತಥಾ ಭವೇತ್-ಹಾಗೆ ಭೇದವನುಳ್ಳುದು. ೧೦

ತ್ರಿಗುಣಂ ಕರ್ತೃಪ್ರತಾಪೌ ಚ ದುರ್ಭೇದ್ಯೋನುಗ್ರಹಸ್ತಥಾ
ವಿಧಿರ್ಮಾಯಾ ವಿವರ್ಣಂ ಚ ವರ್ಣಂ ಸಂಹಾರ ಏವ ಚ
ಏತೇ ದಶಗುಣಾಃ ಪ್ರೋಕ್ತಾಸ್ತೇಷಾಂ ಲಕ್ಷಣಮುಚ್ಯತೇ

ಟೀ. ಆ ಶಿವತತ್ವಸಂಭೂತನಾಗಿಯುಂ ಶಿವತತ್ವವ ನೆಮ್ಮಿದಂಥ ಸದ್ಗುಣಂ ಗಳ ಲಕ್ಷಣಮಂ ಪೇಳುತ್ತಿದ್ದನು. ತ್ರಿಗುಣಂ-ತ್ರಿಗುಣವೆಂದು, ಕರ್ತೃ-ಕರ್ತೃ ವೆಂದು, ಪ್ರತಾಪಂ-ಪ್ರತಾಪವೆಂದು, ದುರ್ಭೇದ್ಯಃ-ದುರ್ಭೇದ್ಯವೆಂದು, ತಥಾ-ಹಾಗೆಯೇ, ಅನುಗ್ರಹಃ-ಅನುಗ್ರಹವೆಂದು, ವಿಧಿಃ-ವಿಧಿಯೆಂದು, ಮಾಯಾ-ಮಾಯೆಯೆಂದುಂ, ವಿವರ್ಣಂಚ-ವಿವರ್ಣವೆಂದುಂ, ವರ್ಣಂ-ವರ್ಣಮೆಂದುಂ, ಸಂಹಾರ ಏವ ಚ-ಸಂಹಾರವೆಂದು, ಏತೇ ದಶ - ಈ ಹತ್ತು ಪ್ರತಿ ಭಿನ್ನನಾಮಂ ಗಳನುಳ್ಳ, ಗುಣಾಃ ಪ್ರೋಕ್ತಾಃ-ಗುಣಂಗಳೆಂದು ಹೇಳಲ್ಪಟ್ಟುವು. ತೇಷಾಂ-ಈ ದಶಗುಣಂಗಳ ಲಕ್ಷಣಮುಚ್ಯತೇ-ಲಕ್ಷಣಂಗಳು ಹೇಳಲ್ಪಟ್ಟುವು. ೧೧

ತ್ರಿಗುಣಂ ಶೂಲಮಿತ್ಯುಕ್ತಂ ಕರ್ತಾ ಪರಶುರುಚ್ಯತೇ
ಖಡ್ಗಮೀಶಪ್ರತಾಪಸ್ಸ್ಯಾದ್ದುರ್ಭೇದ್ಯೋ ವಜ್ರಮಿಷ್ಯತೇ
ಈಶಸ್ಯಾನುಗ್ರಹಶ್ಚೈವ ತ್ವಭಯಂತು ಪ್ರಶಸ್ಯತೇ
ವಿಧಿಸ್ಸ್ಯಾನ್ನಾಗರೂಪಂತು ಪಾಶೋ ಮಾಯಾಸ್ವರೂಪಕಂ
ವಿವರ್ಣಮಂಕುಶಶ್ಚೈವ ವರ್ಣಂ ನಾದಾತ್ಮಕಂ ವಿದುಃ
ಸಂಹಾರಸ್ತ್ವಗ್ನಿರೂಪಂ ಸ್ಯಾತ್ತೇಷಾಮಾಖ್ಯಾಃ ಪ್ರಕೀರ್ತಿತಾಃ
ಏತಾನಿ ಗುಣರೂಪಾಣಿ ಸಾಂಗಾನಿ ಚ ಯಥಾಕ್ರಮಮ್

೧. ಭೇದವು (ಎ)

**ಟೀ.** ತ್ರಿಗುಣಂ-ಪರಮೇಶ್ವರನ ದೆಸೆಯಿಂದ ಸಂಭೂತವಾದ ಸತ್ವ ರಜಃ ತಮೋಗುಣಂಗಳು, ಶೂಲಮಿತ್ಯುಕ್ತಂ-ತ್ರಿಶೂಲವೆಂದು ನುಡಿಯಲ್ಪಟ್ಟುವು. ಕರ್ತಾ-ತನ್ನಲ್ಲಿ ಪ್ರಸನ್ನ ಮಾನಸ ಭಕ್ತರುಗಳ ಭವಾರಣ್ಯಾದಿಗಳ ಕತ್ತರಿಸುವ ಗುಣವೇ, ಪರಶುರುಚ್ಯತೇ-ಕೊಡಲಿಯೆಂದು ಹೇಳಲ್ಪಡುತ್ತಿಹುದು. ಈಶಪ್ರತಾಪಃ-ದುಷ್ಟರುಗಳ ನೋಯಿಸುವಂಥಾ ಪರಮೇಶ್ವರನ ಪ್ರತಾಪಗುಣವೆ, ಖಡ್ಗಂ ಸ್ಯಾತ್-ಅಡಾಯುಧವಹುದು. ದುರ್ಭೇದ್ಯಃ-ಪರಮೇಶ್ವರನ ಗುಣಲಕ್ಷಣವಾವುದ ಱಿಂದವು ಭೇದಿಸಬಾರದದು ಕಾರಣ ದುರ್ಭೇದ್ಯವೆನಿಸಿಕೊಂಬುದು, ಅಂಥಾ ದುರ್ಭೇದ್ಯ ಲಕ್ಷಣವೆ ವಜ್ರಮಿಷ್ಯತೇ-ವಜ್ರವೆಂದು ನುಡಿಯಲ್ಪಡುತ್ತಿಹುದು. ಈಶಸ್ಯ-ಪರಮೇಶ್ವರನ ನಿಗ್ರಹಾನುಗ್ರಹಕಾರ ನಾಮಕ್ಕೆ ದುಷ್ಟರಾದ ಕಾಲ ಕಾಮ ದಕ್ಷ ಜಲಂಧರ ನರಸಿಂಹಾದಿಗಳನು ನಿಗ್ರಹಿಸುವ ಪ್ರತಾಪಗುಣವೆ ಖಡ್ಗವೆನಿಸಿತ್ತಾಗಿ, ಅನುಗ್ರಹ ಶ್ಚೈವ-ಶಿಷ್ಟರಾದ.ತನ್ನ ಸದ್ಭಕ್ತಿಯುಕ್ತರುಗಳನು ಅನುಗ್ರಹಿಸುವ ಗುಣವೆ,ಅಭಯಂತು ಪ್ರಶಸ್ಯತೇ-ಅಭಯವೆಂದು ಪ್ರಶಂಸೆಯ ಪಡುತ್ತಿಹುದು. ನಿಧಿಃ-ಆಯಾಯ ಭೋಗ್ಯ ಭೋಕ್ತೃತ್ವಂಗಳಿಗೆ ತಕ್ಕುದ ಮಾಡುವಂಥಾ ನಿಯತಗುಣವೆ, ನಾಗರೂಪಂ ಸ್ಯಾತ್-ಫಣಿ ಸ್ವರೂಪವಹುದು. ಮಾಯಾಸ್ವರೂಪಕಂ-ದೇಹಿಗಳ ಭೋಗ್ಯ ಭೋಕ್ತೃತ್ವದ ಸಂಪದಕ್ಕೋಸ್ಕರ ಶರೀರೇಂದ್ರಿಯಾದಿಗಳಂ ಸೃಜಿಸುತ್ತಿರುವಂಥಾ ಆವುದಾನೊಂದು ಮಾಯಾಶಕ್ತಿಯುಂಟು, ಆ ಮಾಯಾಶಕ್ತಿಸ್ವರೂಪ ಗುಣವೆ, ಪಾಶಂ-ಪಾಶವೆನಿಸಿಕೊಂಬುದು. ವಿವರ್ಣಂ-ವರ್ಣಗಳೆಂದು ನಾದಸ್ವರೂಪವೆ ಎರಡುಪ್ರಕಾರವಾಗಿ ಹುದು. ಮೇಘಾದಿಗಳ ಭೂಮ್ಯಾದಿಗಳ ಸಂಘಟನದಿಂದವು ವಿಹಂಗಾದಿಗಳ ಜಿಹ್ವೆಗಳಿಂದ ಹುಟ್ಟಿ ಬರೆಹಕ್ಕೆ ಬಾರದ ಆವುದಾನೊಂದು ಧ್ವನಿಯುಂಟು ಅದು ವಿವರ್ಣವೆನಿಸಿಕೊಂಬುದು. ಬರೆಹಕ್ಕೆ ಬಹ ಅಕ್ಷರಧ್ವನಿಯೆಲ್ಲವು ವರ್ಣವೆನಿಸಿಕೊಂಬುದು. ಇಂತು ವಿವರ್ಣ ವರ್ಣಂಗಳೆನಿಸಿಕೊಂಬವೆರಡು ಶಿವತತ್ವದಲ್ಲಿಯೆ ಹುಟ್ಟಿ ತೋರುತ್ತಿಹ ಕಾರಣ ವಿವರ್ಣಗುಣವೆ, ಅಂಕುಶಶ್ಚೈವ-ಅಂಕುಶವೆನಿಸಿಕೊಂಬುದು. ವರ್ಣಂ-ಧ್ವನಿಸ್ವರೂಪವಾಗಿ ಬರೆಹಕ್ಕೆ ಬಂದ ಅಕ್ಷರಸಮೂಹಗುಣವೆ, ನಾದಾತ್ಮಕಂ-ಪರಮೇಶ್ವರನ ಹಸ್ತದ ನಾದಸ್ವರೂಪವೆಂದು, ವಿದುಃ-ಅಱಿವುದು. ಸಂಹಾರಃ-ಶಿವನು ಲೀಲಾಮಾತ್ರದಿಂದೆ ಇಚ್ಛಾಶಕ್ತಿಯಿಂದ ಸಮಸ್ತ ಜಗತ್ತನ್ನು ಸೃಷ್ಟಿಸುವನು. ಲೀಲಾಂತ್ಯವನೆಯ್ದುವ ವೇಳೆ ಸಮಸ್ತ ಜಗತ್ತನ್ನು ಲಯವನೆಯ್ದಿಸುವನು. ಈ ಸೃಷ್ಟಿ ಸಂಹಾರಂಗಳ ಮಾಡುವ ಗುಣಂಗಳು ಶಿವನ ಗುಣಂಗಳು. ಅದುಕಾರಣ ಸಂಹಾರಗುಣವೆ ಅಗ್ನಿರೂಪಂ ಸ್ಯಾತ್-ಶಿವನ ಹಸ್ತದಲ್ಲಿಯ ಅಗ್ನಿ ಸ್ವರೂಪವಹುದು. ತೇಷಾಂ-ಆ ಈ ದಶಗುಣಂಗಳ, ಏತಾನಿ ಗುಣಸ್ವರೂಪಾಣಿ ನಾಮಾನಿ-ಈ ಗುಣಸ್ವರೂಪವಾದ ಹೆಸರುಗಳು, ಯಥಾಕ್ರಮಂ-ಯಥಾಕ್ರಮ

ದಿಂದ, ಸಾಂಗಾನಿ-ಸಾಂಗಂಗಳೆಂದು, ಕೀರ್ತಿತಾಃ ಶ್ಲೋಕಂಗಳು ಹೇಳಲ್ಪ ಟ್ಟುವು. ೧೪

ವಸ್ತ್ರೋಪವೀತಮಾಲ್ಯಾನಿ ಗಂಧಶ್ಚಾಭರಣಂ ತಥಾ
ತಥೈವಾವರಣಂಚೈವ ಉಪಾಂಗಂ ಪ್ರೋಚ್ಯತೇಽಪಿ ಚ
ಅಂಗಭೇದಮಿದಂ ಪ್ರೋಕ್ತಂ ತಸ್ಯರೂಪಮಿಹೋಚ್ಯತೇ

ಟೀ. ವಸ್ತ್ರಂ-ವಸ್ತ್ರವು, ಉಪವೀತಂ-ಉಪವೀತವು, ಮಾಲ್ಯಂ-ಮಾಲ್ಯವು, ಗಂಧಂ-ಗಂಧವು, ಆಭರಣಂ-ಆಭರಣವು ಎಂಬ ಈ ಅಂಗಸಮೀಪಸ್ಥವಾದ ಗುಣಂಗಳು, ಯಥಾ-'ತಂತ್ರಾಣ್ಯಸ್ಯೋಪಾಂಗಾನಿ ಭವಂತಿ' ಹೇಗೆ ಆಗಮಂಗಳು ಈ ಪರಮೇಶ್ವರಂಗೆ ಉಪಾಂಗಗಳಾಗುತ್ತಿಹವು ತಥೈವ ಚ-ಹಾಗೆಯೆ, ಆವರಣಂ ಚೈವ-ಸಮಸ್ತಾವರಣವು. ಉಪಾಂಗಂಚೇತಿ ಪ್ರೋಚ್ಯತೇ-ಉಪಾಂಗವೆಂದು ನುಡಿ ಯಲ್ಪಡುತ್ತಿಹುದು. ಇದಂ-ಈಯಂಗಭೇದಂ, ಪ್ರೋಕ್ತಂ-ಅಂಗ ಪ್ರತ್ಯಂಗ ಸಾಂಗೋಪಾಂಗಂಗಳ ಭೇದ ಹೇಳಲ್ಪಟ್ಟುದು. ತಸ್ಯ-ಆ ಸದಾಶಿವನ, ರೂಪಂ-ಧ್ಯಾನಾರ್ಹವಾದ ಸ್ವರೂಪವು, ಇಹೋಚ್ಯತೇ-ಈ ತಂತ್ರದಲ್ಲಿ ನುಡಿಯಲ್ಪಟ್ಟುದು. ೧೫

ಕುಂದೇಂದುಸ್ಫಟಿಕಾಭಾಸಂ ಜಟಾಮಕುಟಮಂಡಿತಂ
ಪಂಚಮೂರ್ಧಸಮಾಯುಕ್ತಂ ಪಂಚವಕ್ತ್ರಸಮಾಯುತಂ
ಪ್ರತಿವಕ್ತ್ರಂ ವಿಶೇಷೇಣ ತ್ರಿಲೋಚನ ಸಮಾಯುತಂ

ಟೀ. ಕುಂದೇಂದು ಸ್ಫಟಿಕಾಭಾಸಂ-ಮೊಲ್ಲೆ ಚಂದ್ರಸ್ಫಟಿಕಂಗಳ ಹೋಲುವ ಬೆಳಗನುಳ್ಳುದಾಗಿ, ಜಟಾಮಕುಟಮಂಡಿತಂ-ಜಟಾಮಕುಟದಿಂದೊಪ್ಪುವುದಾಗಿ, ಪಂಚಮೂರ್ಧ ಸಮಾಯುಕ್ತಂ-ಅಯ್ದು ಶಿರಸ್ಸಿನೊಡನೆ ಕೂಡಿದ್ದುದಾಗಿ, ಪಂಚವಕ್ತ್ರ ಸಮಾಯುತಂ-ಅಯ್ದು ಮುಖದೊಡನೆ ಕೂಡಿರ್ದುದಾಗಿ, ಪ್ರತಿವಕ್ತ್ರವಿಶೇಷೇಣ-ವಕ್ತ್ರಂ ಪ್ರತಿ ಪ್ರತಿ ವಕ್ತ್ರವು, ವಿಶೇಷೇಣ-ವಿಶೇಷದಿಂದ, ತ್ರಿಲೋಚನ ಸಮಾಯುತಂ-ಮೂಱು ಮೂಱು ನೇತ್ರಂಗಳೊಡನೆ ಕೂಡಿರ್ದುದಾಗಿ ೧೬

ದಿಗ್ಭುಜಸ್ತು ಮಹಾಸೇನ ದ್ವಿಪಾದಂ ಪದ್ಮಸಂಸ್ಥಿತಂ
ಶೂಲಃ ಪರಶುಖಡ್ಗೌಚಾಭಯವಜ್ರೇ ಚ ದಕ್ಷಿಣೇ

ಟೀ. ಭೋ ಮಹಾಸೇನ-ಎಲೇ ಷಣ್ಮುಖನೇ, ಭುಜಂತು-ಭುಜಮಂಡಲ ವಾಯಿತ್ತಾದಡೆ, ದಿಕ್-ದಶದಿಕ್ಕುಗಳ ಸಂಖ್ಯೆಯನುಳ್ಳುದು, ದ್ವಿಪಾದಂ-ಎರಡು

ಪಾದವನುಳ್ಳುದು, ಪದ್ಮಸಂಸ್ಥಿತಂ ಪದ್ಮಾಸನಸ್ಥಾನವಾಗಿರುತ್ತಿಹುದು, ದಕ್ಷಿಣೇ-ಬಲದ ಅಯ್ದು ಹಸ್ತಂಗಳಲ್ಲಿಯೂ, ಶೂಲಂ ಪರಶು ಖಡ್ಗಂ ಚ ವಜ್ರಾಭಯ-ಶೂಲವುಂ ಪರಶುವುಂ ಖಡ್ಗಮುಂ ವಜ್ರಮುಂ ಅಭಯಪ್ರದಮುಮೆಂಬಿವೈದುಂ ಇರುತ್ತಿಹವು.

ನಾಗಃ ಪಾಶಾಂಕುಶೌ ಚೈವ ಘಂಟಾ ವಹ್ನಿಶ್ಚ ವಾಮಕೇ

**ಟೀ.** ಸರ್ಪನುಂ ಪಾಶಮುಂ ಅಂಕುಶಮುಂ ಘಂಟೆಯುಂ ಅಗ್ನಿಯು-ಮೆಂಬಿವು ಎಡದ ಅಯ್ದು ಹಸ್ತಂಗಳಲ್ಲಿ ಇರುತ್ತಿಹವು. ೧೮

ಸರ್ವಲಕ್ಷಣ ಸಂಯುಕ್ತಂ ಸರ್ವಾಭರಣಭೂಷಿತಂ
ದಿವ್ಯಾಂಬರಧರಂ ದೇವಂ ದಿವ್ಯರೂಪಮುದಾಹೃತಂ
ಏತದ್ರೂಪಂ ಸ್ಮರೇನ್ನಿತ್ಯಂ ಧರ್ಮಕಾಮಾರ್ಥಮೋಕ್ಷದಂ

**ಟೀ.** ಸರ್ವಲಕ್ಷಣ ಸಂಯುಕ್ತಂ-ಸಮಸ್ತ ಲಕ್ಷಣಗಳೊಡನೆ ಕೂಡಿದ್ದು-ದಾಗಿ, ಸರ್ವಾಭರಣ ಭೂಷಿತಂ-ಸಮಸ್ತ ಆಭರಣಗಳಿಂದ ಅಲಂಕರಿಸಲ್ಪಟ್ಟುದಾಗಿ, ದಿವ್ಯಾಂಬರಧರಂ-ದಿವ್ಯ ವಸ್ತ್ರಂಗಳ ಧರಿಸಿದ್ದುದಾಗಿ, ದೇವಂ-ದಿವ್ಯಕಾಂತಿಯನುಳ್ಳು-ದಾದುದು, ದಿವ್ಯರೂಪಮುದಾಹೃತಂ-ಸದಾಶಿವ ಸ್ವರೂಪವೆಂದು ನುಡಿಯಲ್ಪಟ್ಟುದು. ಧರ್ಮಾರ್ಥ ಕಾಮಮೋಕ್ಷದಂ-ಚತುರ್ವಿಧ ಪುರುಷಾರ್ಥಂಗಳ ಕೊಡುವುದಾದ ನಿತ್ಯಂ-ಅವಾಗವು, ಏತದ್ರೂಪಂ ಸ್ಮರೇತ್-ಈ ದೇಹಸ್ವರೂಪಮಂ ನೆನವುದು. ೧೯

ಧ್ಯಾನರೂಪಮಿದಂ ಪ್ರೋಕ್ತಂ ವಿಶೇಷಮಧುನೋಚ್ಯತೇ

**ಟೀ.** ಇದಂ ಧ್ಯಾನರೂಪಂ-ಈ ಧ್ಯಾನಾರ್ಹರೂಪವು, ಪ್ರೋಕ್ತಂ-ಹೇಳಲ್ಪ-ಟ್ಟುದು. ವಿಶೇಷಂ-ಮುಖವಿಶೇಷವು, ಅಧುನೋಚ್ಯತೆ-ಈಗ ನುಡಿಯಲ್ಪಡು-ತ್ತಿಹುದು.

ಕರ್ಮೇಶಂ ಪೂರ್ವ ವಕ್ತ್ರಂ ಸ್ಯಾತ್ ಕರ್ತೃಸ್ಸ್ಯಾದ್ದಕ್ಷಿಣಾನನಂ
ಅಪರಂ ಮೂರ್ತಿವಕ್ತ್ರಂಸ್ಯಾದಮೂರ್ತಂ ಚೋತ್ತರಾನನಂ
ಊರ್ಧ್ವಂತು ಶಿವಸಾದಾಖ್ಯಮೇವಂ ಪಂಚಾನನಂ ವಿದುಃ

**ಟೀ.** ಕರ್ಮೇಶಂ-ಕರ್ಮಸಾದಾಖ್ಯರೂಪವು, ಪೂರ್ವವಕ್ತ್ರಂ ಸ್ಯಾತ್-ಪೂರ್ವವಕ್ತ್ರವಹುದು. ಕರ್ತೃಸ್ಸ್ಯಾತ್-ಕರ್ತೃಸಾದಾಖ್ಯರೂಪವು, ದಕ್ಷಿಣಾನನಂ

ಸ್ಯಾತ್-ಬಲದ ಮುಖವಹುದು. ಮೂರ್ತಿವಕ್ತ್ರಂ ತು-ಮೂರ್ತಸಾದಾಖ್ಯವಾಯಿ ತ್ತಾದಡೆ, ಅಪರಂ-ಪಶ್ಚಿಮಾನನವಾಗಿಹುದು. ಅಮೂರ್ತಂಚ-ಅಮೂರ್ತಸಾದಾ ಖ್ಯವು, ಉತ್ತರಾನನಂ-ಬಡಗಣ ಮುಖವಾಗಿಹುದು. ಊರ್ಧ್ವಂತು-ಊರ್ಧ್ವಮುಖ ವಾಯಿತ್ತಾದಡೆ, ಶಿವಸಾದಾಖ್ಯಂ-ಶಿವಸಾದಾಖ್ಯತತ್ವವು, ಏವಂ-ಈ ಪ್ರಕಾರದಿಂದ. ಪಂಚಾನನಂ-ಪಂಚವಕ್ತ್ರಂಗಳಂ, ವಿದುಃ-ಧ್ಯಾನಾರ್ಹಸ್ವರೂಪಮಂ ಬಲ್ಲ ಧ್ಯಾತೃಗ ಳರಿವರು. ೧೯

ಶಿವತತ್ತ್ವಂ ಮಹಾಸೇನ ನಿಷ್ಕಲಂ ಚೇತಿ ಕೀರ್ತಿತಂ
ಸಕಲಂ ನಿಷ್ಕಲಂ ಚೈವ ಸದಾಶಿವಮಿಹೋಚ್ಯತೇ
ಮಹೇಶಂ ಸಕಲಂ ವಿದ್ಯಾತ್ ತ್ರಿವಿಧಾಸ್ತೇ ಭವಂತಿ ವೈ

ಟೀ. ಭೋ ಮಹಾಸೇನ-ಎಲೇ ಸೇನಾವಲ್ಲಭನೇ, ಶಿವತತ್ತ್ವಂ-ಶಿವತತ್ವವು. ನಿಷ್ಕಲಂ ಚೇತಿ ಕೀರ್ತಿತಂ-ನಿಷ್ಕಲ ತತ್ವವು ಎಂದು ಕೀರ್ತಿಸಲ್ಪಟ್ಟುದು. ಸದಾ ಶಿವಂ-ಸದಾಶಿವತತ್ವವು. ಸಕಲಂ ನಿಷ್ಕಲಂ ಚೈವ-ಸಕಲ ನಿಷ್ಕಲವು ಎಂಬ ದ್ವಿರೂಪ ವಾಗಿಹುದೆಂದು, ಇಹ ಪ್ರೋಚ್ಯತೇ-ಈ ಶುದ್ಧಾಖ್ಯತಂತ್ರದಲ್ಲಿ ನುಡಿಯಲ್ಪಡುತ್ತಿ ಹುದು. ಮಹೇಶಂ-ಮಹೇಶತತ್ವವು, ಸಕಲಂ ವಿದ್ಯಾತ್-ಸಕಲತತ್ವವೆಂದರಿ ವುದು. ತೇ-ಆ ಶಿವ, ಸದಾಶಿವ, ಮಹೇಶ್ವರರೆಂಬ ತ್ರಿತತ್ವಭೇದಂಗಳು ತ್ರಿವಿಧಾ ಭವಂತಿ-ನಿಷ್ಕಲಮುಂ, ಸಕಲ ನಿಷ್ಕಲಮುಂ, ಸಕಲಮುಮೆಂಬ ಮೂರು ವಿಧಂಗ ಳಾಗುತ್ತಿಹವು, ಬ್ರಹ್ಮೋವಾಚ-ಬ್ರಹ್ಮ ನುಡಿದನು. ೨೦

ತದಿದಂ ತ್ರಿವಿಧಂ ರೂಪಂ ಸ್ಥೂಲಂ ಸೂಕ್ಷ್ಮಂ ತತಃ ಪರಂ
ಅಸ್ಮದಾದ್ಯಮರ್ತ್ಯೈರ್ದೃಶ್ಯಂ ಸ್ಥೂಲಂ ಸೂಕ್ಷ್ಮಂ ಚ ಯೋಗಿಭಿಃ

ಟೀ. ತದಿದಂ ತ್ರಿವಿಧಂ ರೂಪಂ-ಆ ಈ ಶಿವಸಂಬಂಧವಾದ ಸ್ವರೂಪವು. ತ್ರಿವಿಧಂ-ಮೂರು ಪ್ರಕಾರವಾಗಿಹುದು. ಸ್ಥೂಲಂ-ಸ್ಥೂಲತತ್ವವೆಂಬುದುಂ,ಸೂಕ್ಷ್ಮಂ-ಸೂಕ್ಷ್ಮತತ್ವವೆಂಬುದುಂ, ತತಃಪರಂ-ಪರಾತ್ಪರತತ್ವವೆಂಬುದುಂ, ಅಸ್ಮದಾದ್ಯ ಮರ್ತ್ಯೈಃ-ಬ್ರಹ್ಮ ಮೊದಲಾದ ದೇವತೆಗಳಿಂದ, ಸ್ಥೂಲಂ-ಸ್ಥೂಲತತ್ವವು, ದೃಶ್ಯಂ ಕಾಣಲ್ತಕ್ಕುದು. ಯೋಗಿಭಿಃ-ಯೋಗೀಶ್ವರರುಗಳಿಂದ, ಸೂಕ್ಷ್ಮಂಚ-ಸೂಕ್ಷ್ಮ ತತ್ವವು ಕಾಣಲ್ತಕ್ಕುದು. ೨೧

ತತಃ ಪರಂ ತು ಯನ್ನಿತ್ಯಂ ಜ್ಞಾನಮಾನಂದಮವ್ಯಯಂ
ತನ್ನಿಷ್ಠೈಸ್ತತ್ಪರೈರ್ಭಕ್ತೈರ್ದೃಶ್ಯಂ ತದ್ವ್ರತಮಾಸ್ಥಿತೈಃ

೧. ತತ್ವ (ರಾ).

ಟೀ. ಯತ್-ಆವುದಾನೊಂದು, ತತಃ ಪರಂತು-ಆ ಪರತತ್ವವಾಯಿತ್ತಾದಡೆ, ನಿತ್ಯಂ-ನಿತ್ಯವಾದಂಥಾದ್ದು, ಜ್ಞಾನಂ-ಜ್ಞಾನಸ್ವರೂಪವಮಾದುದು, ಆನಂದಂ-ಸುಖಮಯವಾಗಿದ್ದಂಥದು, ಅವ್ಯಯಂ-ಅವ್ಯಯವಾದ ತತ್ವವು, ತತ್-ಆ ಪರತತ್ವದಲ್ಲಿ, ನಿಷ್ಠೈಃ-ನಿಷ್ಠೆಯುಳ್ಳವರುಗಳಾಗಿ, ತತ್-ಆ ಪರತತ್ವದಲ್ಲಿ, ಪರೈಃ-ಎರಕವುಳ್ಳವರುಗಳಾಗಿ, ವ್ರತಮಾಸ್ತಿಕ್ಯೈಃ-ಶಿವವ್ರತದಲ್ಲಿ ಆಸ್ತಿಕ್ಯಬುದ್ಧಿಯುಳ್ಳವರುಗಳಾದ ಭಕ್ತೈಃ-ಷಟ್‌ಸ್ಥಲಬ್ರಹ್ಮಿಗಳಿಂದ, ತತ್-ಆ ಪರತತ್ವವು, ದೃಶ್ಯಂ-ಕಾಣಲ್ತಕ್ಕುದು. ೨೩

**ಲಿಂಗಮೂರ್ತಿಸ್ಥಲಕ್ಕೆ ವಚನ :**

ವ. ಚಿತ್ತುವೆಂಬ ಬಿತ್ತು ಬಲಿದು ಎರಡಾದಲ್ಲಿ ಲಿಂಗವೆಂಬ ಕಳೆ ಅಂಕುರಿಸಿ ಮೂರ್ತಿಯಾಯಿತ್ತು. ಆ ಮೂರ್ತಿಯ ಘನತೆಯನೇನೆಂದುಪಮಿಸಬಾರದು. ನೋಡಿದಡೆ ಮೂರ್ತಿ, ಹಿಡಿದಡೆ ಬಯಲು. ಆ ಮೂರ್ತಿಯೊಳಗಡೆ ಈರೇಳು ಲೋಕದ ಪ್ರಾಣಕಳೆ. ಆ ಕಳೆಯ ಬೆಳಗು ತಾನೆ ನಮ್ಮ ಗುಹೇಶ್ವರಲಿಂಗದ ಲೀಲಾಮೂಲದ ಪ್ರಥಮ ಭಿತ್ತಿ.

ಟೀ. ನಿಷ್ಕಲವಸ್ತು ತಾನೆಲ್ಲಾ ಚೈತನ್ಯಜ್ಞಾನಸ್ವರೂಪು. ಅಂತು ತಾನೆಲ್ಲಾ ಚೈತನ್ಯಜ್ಞಾನಸ್ವರೂಪವಾಗಿರ್ದ ಅಜೀವು ತನ್ನ ನಿಷ್ಕಲಾನಂದದಲ್ಲಿಯೆ ತೃಪ್ತಿವಟ್ಟು ಶಾಂತಿಯನೈದಿ ನಿಃಪತ್ತಿಯನೈದಿಪ್ಪುದಲ್ಲದೆ ಚೈತನ್ಯಜ್ಞಾನಶೂನ್ಯವಾಗಿರ್ದ ವಸ್ತುವಲ್ಲ. ಅಂತಾದ ಜ್ಞಾನವಸ್ತು ತನ್ನ ಸ್ವಯಂಜ್ಞಾನದಿಂದವೆ ತಾನು ಮಹಾಲಿಂಗವಾದಿಯಾದ ಸಾಕಾರಂಗಳಲ್ಲಿ ವಿನೋದಿಸಬೇಕೆಂಬ ನೆನಹುದೋರಲು ಆ ನೆನೆದ ಚಿತ್ತಿನ ನೆನಹು ನಿರ್ಧರವಾದುದೀಗ 'ಚಿತ್ತುವೆಂಬ ಬಿತ್ತು ಬಲಿದು' ಎಂಬ ಶಬ್ದಕ್ಕರ್ಥ. ಅಂತು ತಾನೆ ತನ್ನ ನೆನದ ನೆನಹಿನ ತೋರಿಕೆಯಿಂದ ಸತ್ತು ಚಿತ್ತುಗಳೆರಡೆಂದು ಹೇಳಲಾಯಿತ್ತು. ಅಂತೆರಡೆನಿಸಿದ ನೆನಹು ಮಾತ್ರದಲ್ಲಿಯೆ ಮಹಾಲಿಂಗವಂಕುರವಾಯಿತ್ತಾಗಿ, 'ಎರಡಾದಲ್ಲಿ ಲಿಂಗವೆಂಬ ಕಳೆ ಅಂಕುರಿಸಿ' ಎಂಬ ಶಬ್ದಕ್ಕರ್ಥ. ಆ ಮಹಾಲಿಂಗಾಂಕುರವೆ ಪಂಚಸಾದಾಖ್ಯಲಿಂಗಮೂರ್ತಿಯಾಯಿತ್ತೆಂಬುದೀಗ 'ಮೂರ್ತಿಯಾಯಿತ್ತೆಂಬ ಶಬ್ದಕ್ಕರ್ಥ. ಅಂತು ಪಂಚಸಾದಾಖ್ಯಲಿಂಗಮೂರ್ತಿಯಾದ ಮಹಾಲಿಂಗದ ಘನತೆಯನುಪಮಿಸಬಾರದು. ನೋಡಿದರೆ ಮೂರ್ತಿ, ಹಿಡಿದರೆ ಬಯಲಾಗಿಪ್ಪುದು. ಅಂತಾದ ಮಹಾಲಿಂಗದ ಚಿತ್ ಪ್ರಭಾಚೈತನ್ಯವೆ ಜ್ಞಾನತತ್ವವನೆಯ್ದಿ ಹಲವಾತ್ಮರುಗಳಾಗಿ ಚೇತರಿಸಿ ಬೆಳಗುತ್ತಿದ್ದಿತ್ತು. ಅಂತು ಹಲವಾತ್ಮರುಗಳಾದ ಕಲಾಬೆಳಗೆಲ್ಲಾ ಕೂಡಿ ಆ ಮಹಾಲಿಂಗದ ಚಿದ್ಬೆಳಗಿನ ಸಹಸ್ರಾಂಶದೊ

ಕೊಂದು ಕಲಾಬೆಳಗು. ಅಂತು ಹಲವಾತ್ಮಪ್ರಕಾಶಂಗಳ ಪ್ರಕಾಶಿಸುವ ಮಹಾ ಪ್ರಕಾಶವನುಳ್ಳ ಮಹಾಲಿಂಗವೆ ಸೃಷ್ಟಿಗೆ ಪ್ರಥಮಮೂರ್ತಿಯೆಂಬುದೀಗ ' ಆ ಮೂರ್ತಿಯ ಘನತೆಯನೇನೆಂದುಪಮಿಸಬಾರದು, ನೋಡಿದರೆ ಮೂರ್ತಿ, ಹಿಡಿದರೆ ಬಯಲು ಆ ಮೂರ್ತಿಯೊಳಗದೆ ಈರೇಳುಲೋಕದ ಪ್ರಾಣಕಳೆ, ಆ ಕಳೆಯ ಬೆಳಗು ತಾನೆ ನಮ್ಮ ಗೊಹೇಶ್ವರಲಿಂಗದ ಲೀಲಾಮೂಲದ ಪ್ರಥಮ ಭಿತ್ತಿ ' ಎಂಬ ಶಬ್ದಕ್ಕರ್ಥ.

**ವ.** ಮರದೊಳಗಣ ಪತ್ರೆ ಫಲಂಗಳು ಮರಕಾಲವಶದಲ್ಲಿ ತೋಱುವಂತೆ ಹರನೊಳಗಣ ಲೀಲಾಪ್ರಕೃತಿಸ್ವಭಾವಂಗಳು ಹರಲೀಲಾವಶದಲ್ಲಿ ತೋಱುವವು. ಲೀಲೆಯಾದಡುಮಾಪತಿ, ಲೀಲೆ ನಿಂದಡೆ ಸ್ವಯಂಭು ನಮ್ಮ ಗೊಹೇಶ್ವರಲಿಂಗವು.

**ಟೀ.** ಮರದಲ್ಲಿ ಕಾಣಿಸದಿರ್ದ ಪತ್ರೆ ಫಲಂಗಳು ಮರನ ಋತುಕಾಲದಲ್ಲಿ ಲೀಲೆಯಿಂದ ತೋಱಿ ಅಡಗುವುದು ಆ ಮರಕ್ಕೆ ಸ್ವಭಾವ. ಈ ದೃಷ್ಟಾಂತದಂತೆ ಪ್ರಕೃತಿಯೆಂದಡೆ ಶಕ್ತಿ. ಇಂತು ಮಹಾಲಿಂಗದ ಚಿತ್ಪ್ರಭಾಸಾಮರ್ಥ್ಯಶಕ್ತಿಯೊಳೊಂದಂಶಮಂ ಬೇರ್ಪಡಿಸಿ ಉಮಾಶಕ್ತಿಯೆಂದೆನಿಸಿತ್ತು. ತನ್ನ ಸ್ವಲೀಲೆಯಿಂದ ಉಮಾಪತಿಯಾಗಿಪ್ಪನು. ಲೀಲೆ ಸಾಕಾದಡೆ ಸ್ವಯಂಭುವಾಗಿಪ್ಪನು. ಅಂತು ಮಹಾಲಿಂಗವು ತನ್ನ ಚಿತ್ಪ್ರಭಾಸಾಮರ್ಥ್ಯಶಕ್ತಿಯನುಳ್ಳತನವು ಲೀಲೆಯಿಂದ ಶಕ್ತಿಸಮೇತನಪ್ಪತನವು ಲಿಂಗದಲ್ಲಿ ಅದೆಂದೆಂದೂ ಉಳ್ಳ ಸ್ವಭಾವ. ಅದೆಂತೆಂದಡೆ ಶಿವನು ಸರ್ವಕಲಾಸಂಪೂರ್ಣನಾದಕಾರಣ ಸಾಕಾರದ ಕಲಾಭಿನ್ನತ್ವವು ಕಡಮೆಯಾಗಿರಬಾರದೆಂಬ ಚದುರಿಂದ ನಟಿಸುತ್ತಿಹುದು ಶಿವಂಗೆ ಸ್ವಭಾವವೆಂಬುದೀ ವಚನದ ತಾತ್ಪರ್ಯಾರ್ಥ. ೨

**ವ.** ಶಿವಶಕ್ತಿಸಂಪುಟವೆಂಬುದೆಂತು ಹೇಳಿರಣ್ಣಾ! ಶಿವನೆ ಚೈತನ್ಯಾತ್ಮಕನು. ಶಕ್ತಿಯೆ ಚಿತ್ತು. ಇಂತೀ ಚೈತನ್ಯಾತ್ಮಕನೆ ಚಿತ್ಸ್ವರೂಪನಾದ, ಆತನೆ ಶರಣ ಗೊಹೇಶ್ವರಾ.

**ಟೀ.** ಪರಿಪೂರ್ಣ ಚೈತನ್ಯಾತ್ಮಕನೆ ಶಿವನು. ಆ ಶಿವನ ಸ್ವಯಂಪ್ರಕಾಶ ಸಾಮರ್ಥ್ಯಶಕ್ತಿಯೆ ಚಿಚ್ಛಕ್ತಿ. ಅಂತು ಶಿವನು ಚಿತ್ಪ್ರಕಾಶಾಂಗಸ್ವರೂಪವಾಗಿದ್ದಂತೆ ಸಾಕಾರವನೆಯ್ದಿ ಶರಣನೆನಿಸಿಕೊಂಡ ತನ್ನ ಸ್ವಲೀಲಾಸ್ವತಂತ್ರತೆಯಿಂದಲೆಂಬುದೀ ವಚನದ ತಾತ್ಪರ್ಯಾರ್ಥ. ೩

**ವ.** ಶ್ರುತಿತತಿಯ ಮಸ್ತಕದ ಅತಿಶಯದ ಬೆಳಗಿನೊಳು ಸಕಲ ಲೋಕಂಗಳು ಬೆಟ್ಟವಾಗಿ ಒಸರುವಾ ಸಾನಂದ ಬೆಳಗು ಬಿಂದುಗಳಾಗಿ ಬೆಳಗುತ್ತಿದ್ದಿತ್ತು ಬ್ರಹ್ಮಯೋಗಿನಾಥಾ.

**ಟೀ.** ವೇದಂಗಳ ಶಿರಸ್ಸುಗಳಲ್ಲಿ ಹೇಳುವ ಶ್ರುತಿಗಳ ಹೊಗಳತೆಗೆ ಉಪಮಿಸಬಾರದಿಹ ಅಖಂಡ ಬೆಳಗೆ ಪರಬ್ರಹ್ಮವೆಂಬುದೀಗ 'ಶ್ರುತಿತತಿಯ ಮಸ್ತಕದ ಅತಿಶಯದ ಬೆಳಗೆಂ'ಬ ಶಬ್ದಕ್ಕರ್ಥ. ಅಂತಪ್ಪ ಮಹಾಪ್ರಕಾಶವನುಳ್ಳ ಪರಬ್ರಹ್ಮತ್ತ ತನ್ನ ಚಿದ್ವಿಲಾಸಾನಂದ ಲೀಲೆಯಿಂದ ಹೆಚ್ಚಿ ಮಿಗೆವರಿದ ಚಿದಾನಂದದ ಬೆಳಗೆ ಷಟ್ಕಲಾ ಶಕ್ತಿಸಮೇತವಾದ ಲಿಂಗಮೂರ್ತಿಯಾಯಿತ್ತು ಎಂಬುದೀಗ 'ಒಸರುವಾ ಸಾನಂದಬೆಳಗು ಬಿಂದುಗಳಾಗಿ' ಎಂಬ ಶಬ್ದಕ್ಕರ್ಥ. ಅಂತಾದ ಲಿಂಗಕಳಾ ಶಕ್ತಿಗಳಿಂದ ಅನಂತ ಬ್ರಹ್ಮಾಂಡಂಗಳು ಸಚರಾಚರಂಗಳು ಆದವೆಂಬುದೀಗ 'ಸಕಲ ಲೋಕಂಗಳು ಬೆಟ್ಟವಾಗಿ' ಎಂಬ ಶಬ್ದಕ್ಕರ್ಥ. ಅಂತು ನಿಷ್ಕಲನಾಗಿ ಸಕಲನಿಷ್ಕಲನಾಗಿ ಸಕಲನಾಗಿ ಅನಂತ ಬ್ರಹ್ಮಾಂಡಪಿಂಡಾಂಡಂಗಳಾಗಿ ಬೆಳಗುತ್ತಿರ್ದ ಪರಬ್ರಹ್ಮವೊಂದೆ ಎಂಬುದೀಗ 'ಬೆಳಗುತ್ತಿದ್ದಿತ್ತು ಬ್ರಹ್ಮಯೋಗಿನಾಥಾ' ಎಂಬ ಶಬ್ದಕ್ಕರ್ಥ. ೪

**ವ.** ಅಯ್ಯಾ ತತ್ವವಿತತ್ವಂಗಳಿಲ್ಲದಂದು,ಪ್ರಕೃತಿ ಪುರುಷರಿಲ್ಲದಂದು, ಜೀವ ಪರಮರೆಂಬ ಭಾವ ತಲೆದೋರದಂದು, ಏನೂ ಏನೂ ಇಲ್ಲದಂದು ಬಯಲು ಬಲಿದೊಂದು ಬಿಂದುವಾಯಿತ್ತು ನೋಡಾ. ಆ ಬಿಂದು ಅಕ್ಷರತ್ರಯದ ಗದ್ದುಗೆಯಲ್ಲಿ ಕುಳ್ಳಿರಲು ಓಂಕಾರವುತ್ಪತ್ಯವಾಯಿತ್ತು. ಆ ನಾದ ಉತ್ಪತ್ಯವಾದಲ್ಲಿ ಮೂರ್ತಿಗೊಂಡನೊಬ್ಬ ಶರಣನು. ಆ ಶರಣನಿಂದಾಯಿತ್ತು ಪ್ರಕೃತಿ. ಆ ಪ್ರಕೃತಿಯಿಂದಾಯಿತ್ತು ಲೋಕ. ಈ ಲೋಕ ಲೌಕಿಕವನತಿಗಳೆದು ನಿಜದಲ್ಲಿ ನಿವಾಸಿಯಾಗಿಪ್ಪ ಗುಹೇಶ್ವರನ ಶರಣ ಚೆನ್ನಬಸವಣ್ಣನ ಘನವನು ಬಸವಣ್ಣನ ಕೃಪೆಯಿಂದಲಾನರಿದು ನಮೋ ನಮೋ ಎನುತಿರ್ದೆನು.

**ಟೀ.** ಶಕ್ತಿಸಮೇತರು ಇಲ್ಲದಂದು, ತತ್ವ ವಿತತ್ವ ಜೀವ ಪರಮರು ಮೊದಲಾದ ಆತ್ಮರುಗಳಾರೂ ಇಲ್ಲದಂದು,ಮತ್ತೇನೂ ಏನೂ ಇಲ್ಲದಂದು ನಿಷ್ಕಲನಾಗಿರ್ದ ಪರಬ್ರಹ್ಮವು ಅಖಂಡ ಪರಿಪೂರ್ಣ ಚೈತನ್ಯಜ್ಞಾನಪ್ರಭಾ ಬೆಳಗಿನ ಬಯಲುಗನಾಗಿರುತಿದ್ದನು. ಅಂತು ಬಯಲುಗನಾಗಿಯೆ ಇರಬಾರದೆಂಬ ಚಿಂತನೆದೋರಲು ಆ ಚಿಂತನೆಯ ನಿರ್ಧರಿಸಿ ತನ್ನ ಅಖಂಡ ಚೈತನ್ಯಜ್ಞಾನಪ್ರಭಾಬೆಳಗಿನೊಬ್ಬುಳಿಗೊಂಡು

ಚಿತ್ರಭಾಂಗಸ್ವರೂಪನಾದ ಲಿಂಗವಾಯಿತ್ತೆಂಬುದೀಗ ' ಅಯ್ಯಾ ತತ್ತ್ವ ವಿತತ್ತ್ವಂಗಳಿಲ್ಲದಂದು, ಪ್ರಕೃತಿಪುರುಷರಿಲ್ಲದಂದು, ಜೀವಪರಮರೆಂಬ ಭಾವ ತಲೆದೋರದಂದು, ಏನೂ ಏನೂ ಇಲ್ಲದಂದು, ಬಯಲು ಬಲಿದೊಂದು ಬಿಂದುವಾಯಿತ್ತು ನೋಡಾ ' ಎಂಬ ಶಬ್ದಕ್ಕರ್ಥ. ಅಂತು ಸುಚೈತನ್ಯಜ್ಞಾನಲಿಂಗದ ಚಿತ್ರಭಾಂಗವೆ ಬಿಂದುವೆಂಬ ಶಬ್ದಕ್ಕರ್ಥ. ಅಂತಪ್ಪ ಸುಚೈತನ್ಯಲಿಂಗವೆ ಸುನಾದಸ್ವರೂಪು. ಆ ಲಿಂಗದ ಕಳಾಬೆಳಗೆ ಕಳೆ. ಅಂತಪ್ಪ ಬಿಂದುಕಲಾಯುಕ್ತವಾಗಿಪ್ಪುದು ಸುನಾದ ಲಿಂಗ. ಅಂತು ಬಿಂದುಕಲಾಯುಕ್ತವಾದ ಸುನಾದಸ್ವರವೆ ಅಕಾರ ಉಕಾರ ಮಕಾರ ಸ್ವರೂಪವಾಗಿ ಸ್ವರಾಕ್ಷರದಲ್ಲಿ ಅಧಿಷ್ಠಿಸಿಕೊಂಡಿಪ್ಪುದೀಗ ' ಆ ಬಿಂದು ಅಕ್ಷರ ತ್ರಯದ ಗದ್ದುಗೆಯಲ್ಲಿ ಕುಳ್ಳಿರಲು ' ಎಂಬ ಶಬ್ದಕ್ಕರ್ಥ. ಅಂತು ಸ್ವರಾಕ್ಷರದಿಂದ ಪ್ರದೋಱಿದ ಸುನಾದವೆ ಓಂಕಾರವೆಂಬ ಪ್ರಣವಸ್ವರೂಪವಾಯಿತ್ತು. ಆ ಪ್ರಣವನಾದವೆ ಮೂರ್ತಿಯಾಗಿ ನಿಂದು ಸದಾಶಿವನೆಂಬ ಶರಣನಾದನೆಂಬುದೀಗ ' ಆ ನಾದ ಉತ್ಪತ್ಯವಾದಲ್ಲಿ ಮೂರ್ತಿಗೊಂಡನೊಬ್ಬ ಶರಣ ' ಎಂಬ ಶಬ್ದಕ್ಕರ್ಥ. ಅಂತಪ್ಪ ಸದಾಶಿವನ ಪಂಚಮುಖದೊಳಗೊಂದು ಮುಖದಲ್ಲಿ ಕ್ರಿಯಾಶಕ್ತಿಯಾಯಿತ್ತು. ಅಂತಾದ ಶಿವನ ಶಕ್ತಿಯಿಂದ ಸಕಲ ಲೋಕಂಗಳು ಸಚರಾಚರಾತ್ಮರು ಮೊದಲಾದ ಜಗತ್ತಾಯಿತ್ತೆಂಬುದೀಗ ' ಆ ಶರಣನಿಂದಾಯಿತ್ತು ಪ್ರಕೃತಿ. ಆ ಪ್ರಕೃತಿಯಿಂದಲಾಯಿತ್ತು ಲೋಕಲೌಕಿಕ ' ವೆಂಬ ಶಬ್ದಕ್ಕರ್ಥ. ಇಂತಪ್ಪ ಲೋಕ ಲೌಕಿಕದೊಳಗಿರ್ದು ಶರಣನಾ ಲೋಕ ಲೌಕಿಕಾಚಾರವನತಿಗಳೆದು ತನ್ನ ನಿಜವಪ್ಪ ಲಿಂಗವನೆ ಆಶ್ರಯಿಸಿ ಲೀಗವಾಗಿಪ್ಪ ಶರಣನೇ ಲಿಂಗಮೂರ್ತಿಯೆಂಬುದ ಶ್ರೀಗುರು ಬಸವಣ್ಣನಿಂದ ಅಱಿಯಲಾಯಿತ್ತೆಂದು ಪ್ರಭುದೇವರು ಗುರುನಮಸ್ಕಾರವಂ ಮಾಡುತ್ತಿರ್ದರೆಂಬುದೀಗ ' ಈ ಲೋಕಲೌಕಿಕವನತಿಗಳೆದು ನಿಜದಲ್ಲಿ ನಿವಾಸಿಯಾಗಿಪ್ಪ ಗೊಹೇಶ್ವರನ ಶರಣ ಚೆನ್ನಬಸವಣ್ಣನ ಘನವನು ಬಸವಣ್ಣನ ಕೃಪೆಯಿಂದಲಾನು ಅಱಿದು ನಮೋ ನಮೋ ಎನುತಿರ್ದೆನು ' ಎಂಬ ಶಬ್ದಕ್ಕರ್ಥ. ೫

೬. ಪ್ರಣವಾರೂಢನು ಪ್ರಣವಸ್ವರೂಪನು ಪ್ರಣವಪ್ರಕೃತಿಸಂಜ್ಞನು
ಪ್ರಣವಷಡಂಗಸಮರಸ ನಮ್ಮ ಕೂಡಲ ಸಂಗಮದೇವರು.

ಟೀ. ಚಿತ್‌ಪ್ರಣವಬಿಂದುಪೀಠದಲ್ಲಿ ಚಿತ್‌ಪ್ರಣವನಾದವಪ್ಪ ಮಹಾ ಲಿಂಗವು ವಿಯೋಗವಿಲ್ಲದೆ ಇಪ್ಪನೆಂಬುದೀಗ ' ಪ್ರಣವಾರೂಢನು ಪ್ರಣವಸ್ವರೂಪನು ' ಎಂಬ ಶಬ್ದಕ್ಕರ್ಥ. ಅಂತಪ್ಪ ಪ್ರಣವನಾದ ಸುಚೈತನ್ಯ ಲಿಂಗಪುರುಷನು ತನ್ನ ಚಿತ್‌ಪ್ರಣವಪ್ರಕಾಶಸಾಮರ್ಥ್ಯವೆ ಶಕ್ತಿಯಾಗಿ ಉಳ್ಳವನೆಂಬುದೀಗ ' ಪ್ರಣವ ಪ್ರಕೃತಿಸಂಜ್ಞನು ' ಎಂಬ ಶಬ್ದಕ್ಕರ್ಥ. ಅಂತು ಪ್ರಣವನಾದಚೈತನ್ಯವೆ ಲಿಂಗ. ಆ

ಲಿಂಗದ ಪರಮಪ್ರಕಾಶಾಂಗವೆ ಶಕ್ತಿ. ಅಂತಾದ [೧]ಚಿತ್ಕಲಾಂಗ[೧]ಶಕ್ತಿಯಾಜಿಾಗಿ ಆ ಷಡ್ವಿಧ ಕಲಾಶಕ್ತಿಗಳಿಗೆ ತನ್ನಂಗವಾಗಿ ಭಿನ್ನವಿಲ್ಲದೆ [೨]ಷಟ್ಸಾದಾಖ್ಯ[೨]ಲಿಂಗ ಮೂರ್ತಿಯಾಗಿಪ್ಪನು ತನ್ನ ಸ್ವಲೀಲೆಯಿಂದಲೆಂಬುದೀಗ ‘ ಪ್ರಣವ ಷಡಂಗ ಸಮ ರಸ ನಮ್ಮ ಕೂಡಲ ಸಂಗಮದೇವರು ’ ಎಂಬ ಶಬ್ದಕ್ಕರ್ಥ. ೬

**ವ.** ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ. ಆತನ ವಿದ್ಯೆಬುದ್ಧಿ ಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿ ಸೈರಣೆಯಿಂದ ಹುಟ್ಟಿ ದಾತ ವಿಷ್ಣು. ಆತನ ಕೋಪ ಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂಜು ಪೀಠವಂತಿರಲಿ, ಆ ಶರಣನನಜೀದು ಶರಣೆನುತ್ತಿರ್ದೆನು ಕೂಡಲ ಸಂಗಮದೇವಾ.

**ಟೀ.** ನಿಷ್ಕಲ ನಿರವಯ ಪರಿಪೂರ್ಣಚೈತನ್ಯಜ್ಞಾನಪ್ರಭಾಬೆಳಗೆ ಮೂರ್ತಿ ಯಾಗಿ ನಿಂದಿರ್ದ ಮಹಾಲಿಂಗವು ತನ್ನ ಸ್ವಲೀಲೆಯಿಂದ ನಿರವಯವಾಗಿಪ್ಪುದಾಗಿ ಲಿಂಗವೆಂಬುದೀಗ ‘ಬಯಲೆ’ಂಬ ಶಬ್ದಕ್ಕರ್ಥ. ಅಂತಪ್ಪ ನಿರವಯ ಲಿಂಗವೆ ಪಂಚಸಾದಾಖ್ಯ ಮುಖವನೆಯ್ದಿ ಮೂರ್ತಿಯಾಗಿ ಸದಾಶಿವನೆಂಬ ಶರಣನಾದನೆಂಬು ದೀಗ ‘ ಬಯಲು ಮೂರ್ತಿಯಾಗಿ ನಿಂದನೊಬ್ಬ ಶರಣ ’ ಎಂಬ ಶಬ್ದಕ್ಕರ್ಥ. ಅಂತು ಅಖಂಡ ಚಿಚ್ಚೈತನ್ಯಪ್ರಭಾಬೆಳಗೆ ಅಂಗಕರಚರಣಂಗಳಾಗಿ ಮೂರ್ತಿ ಯಾದ ಸದಾಶಿವನು ತನ್ನನುಪಾವಸ್ಥೆಯಂ ಮಾಡುವ ಉಪಾಸಕರಿಲ್ಲದಿರಬಾರ ದೆಂಬ ರಾಜಸಾಹಂಕಾರ ತಲೆದೋಜಿ ಜಗತ್ಸೃಷ್ಟಿಗೆ ಬುದ್ಧಿಯಾದ ಪ್ರಭಾವ ಜ್ಞಾನಮಂ ಬೇರ್ಪಡಿಸೆ ಬ್ರಹ್ಮ ಮೊದಲಾದ ಆತ್ಮರುಗಳ ಜಗತ್ಸೃಷ್ಟಿಯಾಯಿ ತ್ತೆಂಬುದೀಗ ‘ ಆತನ ವಿದ್ಯೆಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ ’ ನೆಂಬ ಶಬ್ದಕ್ಕರ್ಥ. ಅಂತು ಸದಾಶಿವನು ಸೇವ್ಯನಪ್ಪ ರಾಜಸಬುದ್ಧಿದೋಜಿ ಚಿಂತಿಸಿದ ಚಿತ್ಪ್ರಸ ಪ್ರಭಾ [೩]ಕಿರಣರಾಜಸವೆ[೩] ಸೇವಕರಪ್ಪ ಆತ್ಮರಾದ ಆ ಆತ್ಮರುಗಳಿಗೆ ಭೋಗ ಸುಖ ಶಾಂತಿಯನಿತ್ತು ನಡಸುವ ಸ್ಥಿತಿಧರ್ಮಮಂ ಚಿಂತಿಸೆ ಕರುಣ ಶಾಂತಿದಯಚಿತ್ತ ವಾದ ಸಾತ್ವಿಕ ಗುಣಬುದ್ಧಿದೋಜಿ ಶಿವನ ಚಿತ್ತದಲ್ಲಿ ಹೊಳೆಯಲು ಆ ಹೊಳೆದ ಚಿತ್ತಿನ ಛಾಯೆ ಬುದ್ಧಿಯಂ ಬೇರ್ಪಡಿಸೆ ಆತ್ಮರುಗಳ ದೇಹ ಕರಣ ಇಂದ್ರಿಯ ವಿಷಯಸುಖ ಭೋಗಂಗಳಾಗಿ, ಮಿಥ್ಯಾ ಸ್ಥಿತಿ ಕರ್ಮಂಗಳನುಳ್ಳ ಮಾಯಾಸ್ವರೂಪ ವಪ್ಪ ವಿಷ್ಣುವಾಗಲು,ಆ ಮಾಯಾಮಿಥ್ಯದ ಸ್ಥಿತಿ[೪]ಕರ್ಮವಳಿಯದಂತೆ[೪] ಆ ಮಾಯೆಗೆ

೧. ಚಿತ್ಕಲಾಲಿಂಗ (ರಾ). ೨. ಷಟ್ಸಾದಾಖ್ಯಮೂರ್ತಿ (ರಾ, ಹು).
೩. ಕಿರಣರಜವೆ (ಪ, ಹು). ೪. ಕರ್ಮ ತಿಳಿಯದಂತೆ.

ಗುಣ ತ್ರಾಣ ತಾನಾಗಿ ಸ್ಥಿತಿಯ ನಡಸುತ್ತಿಹ ಶಾಂತಿಯನುಳ್ಳ ಶಿವನೆಂಬುದೀಗ 'ಆತನ ಶಾಂತಿ ಸ್ಮೈರಣೆಯಿಂದ ಹುಟ್ಟಿದಾತ ವಿಷ್ಣು' ವೆಂಬ ಶಬ್ದಕ್ಕರ್ಥ. ಅಂತು ಶಿವನಿಂದಾದ ಆತ್ಮರುಗಳಿಗೆ ಶಿವಭಾವ ತಲೆದೋಱದೆ ದೇಹಸುಖಭೋಗಂಗಳಿಂದ ಶಿವನ ಮಱೆದು ಅಹಂಕರಿಸಿದ ಕಾಲ ಕಾಮ ದಕ್ಷ ದೈತ್ಯರು ಮೊದಲಾದ ದುಷ್ಟಾತ್ಮರುಗಳ ಕಂಡು ಶಿವನು ಚಿತ್ತದಲ್ಲಿ ಕೋಪಿಸಿದ ಕೋಪಾಗ್ನಿಜ್ಞಾನಮಂ ಬೇರ್ಪಡಿಸೆ ಲಯೋಧರ್ಮವನುಳ್ಳ ರುದ್ರಸ್ವರೂಪವಾಯಿತ್ತೆಂಬುದೀಗ 'ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ' ನೆಂಬ ಶಬ್ದಕ್ಕರ್ಥ. ಇಂತು ಶಿವನು ಜಗತ್‌ಸೃಷ್ಟಿ ಸ್ಥಿತಿ ಸಂಹಾರಂಗಳಂ ಮಾಡುವ ಕರ್ತೃ ತಾನಾಗಿ ತಾನಲ್ಲದಂತಿಪ್ಪ ಚದುರಿನಿಂದ ಬ್ರಹ್ಮ ವಿಷ್ಣು ರುದ್ರರೆಂಬ ತ್ರಿಗುಣಸ್ವರೂಪರಂ ಹುಟ್ಟಿಸಿ ಅಧಿಕಾರವನಿತ್ತು ತಾನಲ್ಲದಂತೆ ಇಹನು ಸದಾಶಿವನು ತನ್ನ ಲೀಲಾಸ್ವತಂತ್ರತೆಯಿಂದ. ಅಂತು ತ್ರಿಗುಣಾತ್ಮಕರಾದ ತ್ರಿಮೂರ್ತಿಗಳಂ ಬಿಟ್ಟು ಆ ಸದಾಶಿವ ಮೂರ್ತಿಯೊಬ್ಬನೇ ಸೇವ್ಯನೆಂದಱಿದು ಸೇವಕನಾಗಿ ಶರಣುವೊಕ್ಕು ಬದುಕಿದೆನೆಂಬುದೀಗ 'ಈ ಮೂಱು ಪೀಠವಂತಿರಲಿ ಆ ಶರಣನನಱಿದು ಶರಣೆನುತಿದ್ದೆ ಕೂಡಲಸಂಗಮದೇವಾ' ಎಂಬ ಶಬ್ದಕ್ಕರ್ಥ. ೭

**ವ.** ಸಹಜದಿಂದ ನಿರಾಲಂಬವಾಯಿತ್ತು. ನಿರಾಲಂಬದಿಂದ ನಿರಾಳವಾಯಿತ್ತು. ನಿರಾಳದಿಂದ ನಿರವಯವಾಯಿತ್ತು. ನಿರವಯದಿಂದ ಅನಾದಿಯಾಯಿತ್ತು. ಅನಾದಿಯಲ್ಲಿ ಮೂರ್ತಿಯಾದನೊಬ್ಬ ಶರಣ. ಆ ಶರಣನ ಮೂರ್ತಿಯಿಂದ ಸದಾಶಿವನಾದ. ಆ ಸದಾಶಿವನ ಮೂರ್ತಿಯಿಂದ ಶಿವನಾದ. ಆ ಶಿವನ ಮೂರ್ತಿಯಿಂದ ರುದ್ರನಾದ. ಆ ರುದ್ರನ ಮೂರ್ತಿಯಿಂದ ವಿಷ್ಣುವಾದ. ಆ ವಿಷ್ಣುವಿನ ಮೂರ್ತಿಯಿಂದ ಬ್ರಹ್ಮನಾದ. ಆ ಬ್ರಹ್ಮನ ಮೂರ್ತಿಯಿಂದಲಾದವು ಸಕಲ ಜಗತ್ತುಗಳೆಲ್ಲಾ. ಇವರೆಲ್ಲಾ ನಮ್ಮ ಗೊಹೇಶ್ವರನ ಕರಸ್ಥಲದ ಹಂಗಿನಲ್ಲಿ ಹುಟ್ಟಿ ಬೆಳೆದರು.

ಟೀ. ಶಿವನ ಲೀಲಾಮೂರ್ತಿಗಳಾಗದೆ ನಿಷ್ಕಲವಾಗಿಪ್ಪ ನಿಜವಸ್ತು ಸ್ವಭಾವವಾಗಿರ್ದುದೆ 'ಸಹಜ'ವೆಂಬ ಶಬ್ದಕ್ಕರ್ಥ. ಅಂತಪ್ಪ ನಿಷ್ಕಲವಸ್ತು ತನ್ನ ತಾನೆ ಒಮ್ಮೆ ಸ್ವಲೀಲಾಚಿಂತನೆದೋಱಿ ನೆನದುದೀಗ ಚಿತ್ತುವಿನ ಜನಿತವೆಂದು ಹೇಳಲಾಯಿತ್ತು. ಅಂತು ಜನಿಸಿದ ಚಿತ್ತು ಆ ಪರಶಿವನಲ್ಲಿ ವಿಯೋಗಿಯಾಗಿ ಬೇಱೊಂದನವಲಂಬಿಸುವುದಲ್ಲವಾಗಿ ಆ ಚಿತ್ತುವನು ನಿರಾಲಂಬವೆಂಬವೆಂದು ಹೆಸರಿಡಲಾಯಿತ್ತಾಗಿ 'ಸಹಜದಿಂದ ನಿರಾಲಂಬವಾಯಿತ್ತೆ'ಂಬ ಶಬ್ದಕ್ಕರ್ಥ. ಅಂತು ನಿಷ್ಕಲವಸ್ತು ತನ್ನಲ್ಲಿ ತಾನೆ ಸ್ವಲೀಲಾಚಿಂತನೆದೋಱಿದ ಚಿತ್ತಿನ ಪ್ರಭಾವತೆಯ ಕೂಡಿ, ಶಿವ

ಚೈತನ್ಯ ಬೆಂಬಳಿವಿಡಿದು ಪ್ರಭಾವಿಸಿತ್ತಾಗಿ 'ನಿರಾಲಂಬದಿಂದ ನಿರಾಳವಾಯಿತ್ತೆ'ಂಬ ಶಬ್ದಕ್ಕರ್ಥ. ಅಂತು ಪ್ರಭಾವಿಸಿ ತೋರ್ಪ ಚಿಚ್ಚೈತನ್ಯದ ಪ್ರಭಾಬೆಳಗಿನ ಕೂಡೆ ಶಿವಕಳೆದೋರ್ಪುತ್ತಿರ್ಪುದೀಗ 'ನಿರಾಳದಿಂದ ನಿರವಯವಾಯಿತ್ತೆ'ಂಬ ಶಬ್ದಕ್ಕರ್ಥ. ಅಂತು ನಿರಾಲಂಬವೆಂಬುದೆ ಚಿದ್ಬಿಂದು, ನಿರಾಳವೆಂಬುದೆ ನಿರಾಕಾರ ಚೈತನ್ಯವಪ್ಪ ನಾದ. ನಿರವಯವೆಂಬುದೆ ಶಿವಕಳೆ. ಅಂತಾದ ನಾದ ಬಿಂದು ಕಳಾಬೆಳಗೆಲ್ಲಾ ಘಟ್ಟಿಗೊಂಡು ಗೋಳಕಾಕಾರವಪ್ಪ ಲಿಂಗವಾಯಿತ್ತೆಂಬುದೀಗ 'ನಿರವಯದಿಂದ ಅನಾದಿಯಾಯಿತ್ತೆ'ಂಬ ಶಬ್ದಕ್ಕರ್ಥ. ಅಂತಾದ ಚಿಲ್ಲಿಂಗವೆ ಚಿತ್‌ಪ್ರಭಾಮೂರ್ತಿಯಾಗಿ ತನ್ನೊಳಗೆ ಅವಯವಂಗಳಾಗಿ ತೋರ್ಪುತ್ತಿರ್ಪುದೀಗ 'ಅನಾದಿಯಲ್ಲಿ ಮೂರ್ತಿಯಾದವನೊಬ್ಬ ಶರಣ' ಎಂಬ ಶಬ್ದಕ್ಕರ್ಥ. ಅಂತು ಮಹಾಲಿಂಗವು ಅಖಂಡ ಚಿತ್‌ಪ್ರಭಾಂಗಸ್ವರೂಪವಾಗುತ್ತವೆ ಶಿವಸಾದಾಖ್ಯ ಮೊದಲಾದ ಸದಾಶಿವಾದಿಯಾದ ರುದ್ರತ್ವಕಡೆಯಾದ ಶಿವಮೂರ್ತಿಗಳಾದವು. ಅಂತಾದ ಮಹಾಲಿಂಗದ ಚಿತ್‌ಪ್ರಭಾಂಗಸ್ವರೂಪುಗಳಾದ ಆ ಶಿವಮೂರ್ತಿಗಳ ಚಿತ್‌ಕಲಾಂಶಿಕವೆ ಬ್ರಹ್ಮವಿಷ್ಣ್ವಾದಿ ಸುರರು ನರರು ಸಕಲ ಜೀವಂಗಳಾದವು. ಅಂತು ಮಹಾಲಿಂಗದ ಚಿದ್ಭಾವದಿಂದೊಗೆದ ಚಿನ್ಮೂರ್ತಿಗಳೆ ಸದಾಶಿವಾದಿ ರುದ್ರಮೂರ್ತಿಗಳು. ಆ ಚಿನ್ಮೂರ್ತಿಗಳಪ್ಪ ಸದಾಶಿವಾದಿ ಮೂರ್ತಿಗಳ ಚಿದ್‌ಭಾವದಿಂದೊಗೆದ ಚಿತ್‌ಕಲಾಂಶಿಕವೆ ಬ್ರಹ್ಮವಿಷ್ಣು ಮೊದಲಾದ ಹಲವಾತ್ಮರುಗಳಾಗಿ ಮೂರ್ತಿಗಳಾದವು. ಅಂತು ಎಲ್ಲಾ ಮೂರ್ತಿಗಳು ಲಿಂಗದ ಚಿದ್‌ಭಾವವೆಂಬ ಹಸ್ತದಿಂದೊಗೆದ ಚಿತ್‌ಕಲಾಂಶಿಕರೆಂಬುದೀಗ 'ಇವರೆಲ್ಲಾ ನಮ್ಮ ಗುಹೇಶ್ವರನ ಕರಸ್ಥಲದ ಹಂಗಿನಲ್ಲಿ ಹುಟ್ಟಿ ಬೆಳೆವರು' ಎಂಬ ಶಬ್ದಕ್ಕರ್ಥ. ೮

೯. ಶಿವನುಳೊಬ್ಬ ಮೂರ್ತಿಯಾದ. ಆತನ ಮೂರ್ತಿಯಿಂದ ಸದಾಶಿವನಾದ. ಆ ಸದಾಶಿವನ ಮೂರ್ತಿಯಿಂದ ಜ್ಞಾನಶಕ್ತಿಯಾದಳು. ಆ ಸದಾಶಿವಂಗೆಯೂ ಜ್ಞಾನಶಕ್ತಿಯಿಬ್ಬರಿಗೆಯೂ ಶಿವನಾದ. ಶಿವಂಗೆ ಇಚ್ಛಾಶಕ್ತಿಯಾದಳು. ಆ ಶಿವಂಗೆಯೂ ಇಚ್ಛಾಶಕ್ತಿಯಿಬ್ಬರಿಗೆಯೂ ರುದ್ರನಾದ. ಆ ರುದ್ರಂಗೆ ಕ್ರಿಯಾಶಕ್ತಿಯಾದಳು. ಆ ರುದ್ರಂಗೆಯೂ ಕ್ರಿಯಾಶಕ್ತಿಯಿಬ್ಬರಿಗೆಯೂ ವಿಷ್ಣುವಾದ. ಆ ವಿಷ್ಣುವಿಂಗೆ ಮಹಾಲಕ್ಷ್ಮಿಯಾದಳು. ಆ ವಿಷ್ಣುವಿಂಗೆಯೂ ಮಹಾಲಕ್ಷ್ಮಿಯಿಬ್ಬರಿಗೆಯೂ ಬ್ರಹ್ಮನಾದ. ಆ ಬ್ರಹ್ಮಂಗೆ ಸರಸ್ವತಿಯಾದಳು. ಆ ಬ್ರಹ್ಮಂಗೆಯೂ ಸರಸ್ವತಿಯಿಬ್ಬರಿಗೆಯೂ ನರರು ಸುರರು ದೇವರ್ಕಳು ಹೆಣ್ಣು ಗಂಡು ಸಚರಾಚರಂಗಳು ಸಹಿತವಾಗಿ ಎಂಬತ್ತುನಾಲ್ಕು ಲಕ್ಷ ಜೀವಜಂತು

ಗಳು ತೋಱುವ ತೋಱಿಕೆಯೆಲ್ಲಾ ಹುಟ್ಟಿತ್ತು ಕೂಡಲ ಚೆನ್ನ ಸಂಗಯ್ಯಾ.

ಟೀ. ಅಖಂಡ ಸುಚ್ಛೈತನ್ಯಲಿಂಗದ ಚಿತ್ಪ್ರಭಾಂಗವೇ ಚಿದ್ಬಿಂದು. ಅಂತು ಲಿಂಗದ ಚಿತ್ಪ್ರಭಾಂಗವೆಂಬುದೀಗ 'ಆದಿ' ಯೆಂಬ ಶಬ್ದಕ್ಕರ್ಥ. ಅಂತಪ್ಪ ಸುಚ್ಛೈತನ್ಯಲಿಂಗದ ಚಿತ್ಪ್ರಭಾಂಗವೆ ಅಂಗ ಕರ ಚರಣಂಗಳಾಗಿ ಆ ಲಿಂಗವು ಲೀಲೆಯಿಂದ ಮೂರ್ತಿಯಾಯಿತ್ತೆಂಬುದೀಗ 'ಆದಿಯಲೊಬ್ಬ ಮೂರ್ತಿಯಾದ' ಎಂಬ ಶಬ್ದಕ್ಕರ್ಥ. ಅಂತು ಲಿಂಗವು ಚಿತ್ಪ್ರಭಾಂಗಮೂರ್ತಿಯಾಗುತ್ತವೆ ಪಂಚ ಸಾದಾಖ್ಯಮುಖವನೆಯ್ದಿ ಪಂಚಕಲಾಶಕ್ತಿಯುಕ್ತವಾದ ಸದಾಶಿವನಾದ. ಆ ಸದಾಶಿವನ ಪಂಚಮುಖದೊಳಗಣ ಮುಖಂಗಳೆ ಶಿವರುದ್ರರೆಂಬ ಶಿವಶಕ್ತಿಮೂರ್ತಿಗಳೆನಿಸಿದವು. ಅಂತಪ್ಪ ಶಿವ ಶಕ್ತ್ಯಾಂಶಿಕವೆ ಹೆಣ್ಣು ಗಂಡಾದ ದೇವತಾದಿಗಳು ನರರು ಸುರರು ಸಚರಾಚರಾತ್ಮರು ತೋಱುವ ತೋಱಿಕೆಯಾದ ಜಗತ್ತೆಲ್ಲಾ ಆಯಿತ್ತಾಗಿ ಶಿವಶಕ್ತಿಮಯವೀ ಜಗತ್ತೆಂಬುದೀ ವಚನದ ತಾತ್ಪರ್ಯಾರ್ಥ. ೯

ವ. ಹರನ ಕೊರಳೊಳಿರ್ದ ಕರೋಟಿಮಾಲೆಯ ಶಿರದ ಲಿಖಿತವ ಕಂಡು ಮುರುಳ ತಂಡಂಗಳೋದಿ ನೋಡಿ ಇವನಜ ಇವ ಹರಿ ಇವ ಸುರಪತಿ ಇವ ಧರಣೀಂದ್ರ ಇವನಂತಕನೆಂದು ಹರುಷದಿಂದೋದಿ ನೋಡಿ ಸರಸವಾಡುವದ ಹರ ನೋಡಿ ಕಂಡು ಮುಗುಳು ನಗೆಯ ನಗುತಿರ್ದನು ನಮ್ಮ ಕೂಡಲಸಂಗಮದೇವಾ.

ಟೀ. ಸಮಸ್ತ ದೇವತಾದಿಗಳ ಜಗಜ್ಜನನ ಉತ್ಪತ್ತ್ಯ ಸ್ಥಿತಿ ಲಯಂಗಳಿಗೆ ಶಿವನೇ ಕರ್ತನೆಂಬುದಕ್ಕೆ ಬ್ರಹ್ಮ ವಿಷ್ಣ್ವಾದಿಗಳ ಶಿರಮಾಲೆಯೆ ದೃಷ್ಟವೆಂಬುದೀ ವಚನದ ತಾತ್ಪರ್ಯಾರ್ಥ ೧೦

ವ. ಐದುದೇ ಬ್ರಹ್ಮನ ಕಪಾಲ ಕರದಲ್ಲಿ. ಐದುದೇ ವಿಷ್ಣುವಿನ ನಯನ ಚರಣದಲ್ಲಿ. ಐದುದೇ ಕಾಮನ ಸುಟ್ಟ ವಿಭೂತಿ ಮೈಯಲ್ಲಿ. ಐದುದೇ ಕಾಲನ ಸುಟ್ಟ ಕಿಡಿಗಣ್ಣು ನೊಸಲಲ್ಲಿ. ಇದಕ್ಕೆ ಮುಖ ಮೂದಲೆಯೇಕಯ್ಯಾ ಕೂಡಲ ಸಂಗಮದೇವಾ.

ಟೀ. ಶಿವನು ಅಹಂಕರಿಸಿದ ಬ್ರಹ್ಮನ ಶಿರವ ಚಿವುಟಿ ಕರದಲ್ಲಿ ಪಿಡಿದ. ಅಹಂಕರಿಸಿದ ನಾರಾಯಣನ ನೇತ್ರಕಮಲವನು ಪಾದದಲ್ಲಿ ಧರಿಸಿದ. ಅಹಂಕರಿಸಿದ ಕಾಲ ಕಾಮರ ಸುಟ್ಟು ಬೂದಿಯನಿಟ್ಟನಾಗಿ ಇದು ದುಷ್ಟನಿಗ್ರಹ, ಅಂತಲ್ಲದೆ

ಶಿವನ ಶ್ರೀಪಾದಕ್ಕೆ ನಯನಪುಷ್ಪ ಮೊದಲಾದ ಪುಷ್ಪಂಗಳಿಂದ ಪೂಜಿಸಿದ ವಿಷ್ಣು ವಿಂಗೆ ಶಂಖಚಕ್ರಂಗಳನಿತ್ತು ರಕ್ಷಿಸಿದನಾಗಿ ಇದು ಶಿಷ್ಟಪ್ರತಿಪಾಲಕತ್ವ. ಇಂತು ದುಷ್ಟನಿಗ್ರಹ ಶಿಷ್ಟಪ್ರತಿಪಾಲಕನು ಎಲ್ಲಾ ದೇವರ ವಲ್ಲಭ ಶಿವನೊಬ್ಬನೆ ಎಂಬುದ ಶಿವನ ಮೂರ್ತಿಯಲ್ಲಿಯೆ ಕಾಣಬರುತ್ತಿರಲೂ ಇತರ ಸಮಯದವರು ಸಂದೇಹ ಬಟ್ಟು ಕೆಡುವರೆಂಬುದೀ ವಚನದ ತಾತ್ಪರ್ಯಾರ್ಥ. ೧೧

**ವ.** ಅನಾದಿಯ ಮಗನು ಆದಿ. ಆದಿಯ ಮಗನತೀತ. ಅತೀತನ ಮಗನು ಆಕಾಶ. ಆಕಾಶನ ಮಗನು ವಾಯು. ವಾಯುವಿನ ಮಗನಗ್ನಿ. ಅಗ್ನಿಯ ಮಗ ಅಪ್ಪು. ಅಪ್ಪುವಿನ ಮಗ ಪೃಥ್ವಿ. ಪೃಥ್ವಿಯಿಂದ ಸಕಲ ಜೀವರೆಲ್ಲರೂ ಉದ್ಭವ ಗುಹೇಶ್ವರಾ.

**ಟೀ.** ಸುಚೈತನ್ಯಲಿಂಗವೆಂಬುದೀಗ ಅನಾದಿಯೆಂಬ ಶಬ್ದಕ್ಕರ್ಥ. ಆ ಸುಚೈತನ್ಯಲಿಂಗದ ಚಿತ್ಪ್ರಭಾವೆಳಗೆ ಅಂಗ ಕರ ಚರಣಂಗಳಾಗಿ ಮೂರ್ತಿಯಾಯಿತ್ತೆಂಬುದೀಗ ' ಅನಾದಿಯ ಮಗನು ಆದಿ ' ಎಂಬ ಶಬ್ದಕ್ಕರ್ಥ. ಅಂತು ಚಿತ್ಪ್ರಭಾಂಗಸ್ವರೂಪಾದ ಲಿಂಗವು ಪಂಚಸಾದಾಖ್ಯ ಮುಖವನ್ನೈದಿ ಪಂಚಕಲಾಶಕ್ತಿಯುಕ್ತವಾಗಿ ಅತಿ ಘನತರವನುಳ್ಳ ಸದಾಶಿವನಾದನೆಂಬುದೀಗ ' ಆದಿಯ ಮಗನತೀತನೆಂಬ ಶಬ್ದಕ್ಕರ್ಥ. ಅಂತಪ್ಪ ಸದಾಶಿವನ ಪಂಚಮುಖಂಗಳಿಂದ ಪಂಚತತ್ವಂಗಳಾದುವು. ಆ ಪಂಚ ತತ್ತ್ವಂಗಳಿಂದ ಇಪ್ಪತ್ತೈದು ತತ್ತ್ವಂಗಳಾದುವು. ಆ ಇಪ್ಪತ್ತೈದನೆಯದು ಜೀವನಾದ ಕಾರಣ ಪಂಚತತ್ತ್ವಂಗಳಿಂದ ಸಕಲ ಜೀವಂಗಳು ಹುಟ್ಟಿದವೆಂಬುದು ಯಥಾರ್ಥ. ಅಂತಾಗಿ ಶಿವಕಲಾಂಶಿಕನಾದ ಪಂಚಬ್ರಹ್ಮಮಯವೀ ಜಗತ್ತೆಂಬುದೀ ವಚನದ ತಾತ್ಪರ್ಯಾರ್ಥ. ೧೨

**ವ.** ಏನೆಂದೆನಲಿಲ್ಲದ ಮಹಾಘನವು ತನ್ನ ಲೀಲೆಯಿಂದ ತಾನೇ ಸ್ವಯಂಭು ಲಿಂಗವಾಯಿತ್ತು. ಆ ಲಿಂಗದಿಂದಾಯಿತ್ತು ಶಿವಶಕ್ತ್ಯಾತ್ಮಕ. ಆ ಶಿವ ಶಕ್ತ್ಯಾತ್ಮಕದಿಂದಾದುದು ಆತ್ಮ. ಆತ್ಮನಿಂದಾದುದು ಆಕಾಶ. ಆಕಾಶ ದಿಂದಾದುದು ವಾಯು. ವಾಯುವಿನಿಂದಾದುದು ಅಗ್ನಿ. ಅಗ್ನಿಯಿಂದಾದುದು ಅಪ್ಪು. ಅಪ್ಪುವಿನಿಂದಾದುದು ಪೃಥ್ವಿ. ಪೃಥ್ವಿಯಿಂದಾದುದು ಸಕಲ ಜೀವವೆಲ್ಲಾ. ಇವೆಲ್ಲಾ ನಿಮ್ಮ ನೆನಹುಮಾತ್ರದಿಂದಾದುವು ಚೆನ್ನಮಲ್ಲಿಕಾರ್ಜುನಾ.

**ಟೀ.** ವಾಙ್ಮನಸ್ಸಿಗೆ ಅಗೋಚರವಾಗಿಪ್ಪ ನಿಃಕಲ ಪರಬ್ರಹ್ಮವು ತನ್ನ ಸ್ವಲೀಲೆಯಿಂದ ತಾನೇ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಯಿತ್ತು.

ಅಂತಪ್ಪ ಮಹಾಲಿಂಗವು ತನ್ನ ಚಿದ್ವಿಲಾಸದಿಂದ ತಾನೇ ತನ್ನ ಚಿತ್ರ್ರಭಾಶಕ್ತಿಯ ಮುಂದುಗೊಂಡು ಶಿವಶಕ್ತ್ಯಾತ್ಮಕನೆನಿಸಿದ ಸದಾಶಿವನಾದ. ಅಂತಪ್ಪ ಶಿವನ ಶಕ್ತಿ ಕಲಾಪ್ರಭಾವದೊಳೊಂದಂಶಮಂ ಬೇರ್ಪಡಿಸಿ ಆತ್ಮನಾಯಿತ್ತು. ಅಂತಾದ ಆತ್ಮನಲ್ಲಿ ಆಕಾಶಾದಿ ಪಂಚತತ್ವಂಗಳ ಹುಟ್ಟಿಸಿ, ಆ ಪಂಚತತ್ವಂಗಳೇ ಇಪ್ಪತ್ತೈದು ತತ್ವ ಸ್ವರೂಪಾಗಿ ಆತ್ಮನು ನಾನಾತ್ವವನ್ನೈದಿ ಪರಿಚ್ಛಿನ್ನಾತ್ಮರಾಗಿ ಜೀವರೆಂದೆನಿಸಿ ಜಗವಾಯಿತ್ತಾಗಿ ಅಂತು ಪರಶಿವನು ಸ್ವಲೀಲಾಚಿಂತನೆದೋಱ ನೆನೆದ ನೆನಹಿನ ಚಿತ್ತು ತಾನೇ ನಾನಾತ್ವವನ್ನೈದಿ ಜಗವಾಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ.

೧೩

ಲಿಂಗಮೂರ್ತಿಸ್ಥಲ ಸಂಪೂರ್ಣ

**ಅಂತು ಸ್ಥಲ ೩ಕ್ಕಂ ಶ್ಲೋಕ ೩೧ಕ್ಕಂ ವಚನ ೩೯ಕ್ಕಂ**

**ಮಂಗಳಂ**

ಶ್ರೀ

# ೪ ಅಂಗಸ್ಥಲ

❁

**ಸೂತ್ರ.** ಅಂತು ಅಖಂಡ ಚಿತ್ಪ್ರಕಾಶ ತೇಜೋಮೂರ್ತಿಯಾದ ಮಹಾ ಲಿಂಗವು ಪಂಚಸಾದಾಖ್ಯ ಲಿಂಗಮೂರ್ತಿಯಾಗುತ್ತವೆ. ಆತ್ಮನೆಂಬ ಅಂಗವು ತಾನೆಯಾಯಿತ್ತು. ಅಂತು ತನ್ನ ಸ್ವಲೀಲೆಯಿಂದ ಲಿಂಗಾಂಗವೆರಡಾಗಿ ಪೂಜ್ಯ ಪೂಜಕನಾದುದು ಒಂದೇ ವಸ್ತು. ಅಂತು ಶಿವಾಂಶಿಕನಾದ ಆತ್ಮನೇ ಆ ಲಿಂಗಕ್ಕೆ ಅಂಗವಾದುದಾಗಿ ಅಂಗಸ್ಥಲವೆಂದು ಹೇಳಲಾದುದು.

**ಅಂಗಸ್ಥಲಕ್ಕೆ ಶ್ಲೋಕ:**

ಸ್ವಶಕ್ತಿಕ್ಷೋಭಮಾತ್ರೇಣ ಸ್ಥಲಂ ತದ್ದ್ವಿವಿಧಂ ಭವೇತ್
ಏಕಂ ಲಿಂಗಸ್ಥಲಂ ಪ್ರೋಕ್ತಂ ಅನ್ಯದಂಗಸ್ಥಲಂ ಸ್ಮೃತಂ

**ಟೀ.** ತತ್ಸ್ಥಲಂ-ಆ ಸ್ಥಲವು, ಸ್ವಶಕ್ತಿಕ್ಷೋಭಮಾತ್ರೇಣ, ಸ್ವ-ತನ್ನ, ಶಕ್ತಿ-ಮಾಯಾಶಕ್ತಿಯ, ಕ್ಷೋಭಮಾತ್ರೇಣ-ಚಲಿಸಿ ಮಾತ್ರದಿಂದಲೆ, ದ್ವಿವಿಧಂ ಭವೇತ್-ಎರಡು ಪ್ರಕಾರವಾದುದು. ಆ ಎರಡರೊಳಗೆ ಏಕಂ-ಒಂದು ಸ್ಥಲವು, ಲಿಂಗಸ್ಥಲಂ-ಲಿಂಗಸ್ಥಲವೆಂದು, ಪ್ರೋಕ್ತಂ-ಹೇಳಲ್ಪಟ್ಟುದು, ಅನ್ಯತ್-ಮತ್ತೊಂದು, ಅಂಗಸ್ಥಲಂ-ಅಂಗಸ್ಥಲವೆಂದು, ಸ್ಮೃತಂ-ನೆನೆಯಲ್ಪಟ್ಟಿತ್ತು. ೧

ಲಿಂಗಾಂಗೋಪಾಧಿ ಭೇದೇನ ದ್ವಿಧಾ ಭಿನ್ನಂ ಪರಸ್ಪರಂ
ಮಹಾನ್ ಘಟಪ್ರಭೇದೇನ ಯಥಾಕಾಶಃ ಪ್ರತೀಯತೇ

**ಟೀ.** ಮಹತ್-ಅಧಿಕವಾದಂಥಾ, ಆಕಾಶಂ-ಆಕಾಶವು, ಘಟಪ್ರಭೇದೇನ, ಘಟ-ಘಟಂಗಳ, ಭೇದೇನ-ಭೇದದಿಂದ, ಯಥಾ-ಹೇಗೆ, ಭೇದಂ-ಭೇದವು, ಹಾಗೆ

ಭಿನ್ನಂ-ಬೇಱಾದುಗಾಗಿ, ಪ್ರತೀಯತೇ-ಅಱಿಯಲ್ಪಡುತ್ತಿಹುದು, ತಥಾ-ಹಾಗೆ, ಏಕವಾದ ಸ್ಥಲವು ಲಿಂಗಾಂಗೋಪಾಧಿ ಭೇದೇನ, ಲಿಂಗಾಂಗ-ಲಿಂಗಸ್ಥಲ ಅಂಗಸ್ಥಲಗಳೆಂಬ ಉಪಾಧಿಮೂರ್ತಿಗಳ, ಭೇದೇನ-ಭೇದದಿಂದ, ದ್ವಿಧಾ-ಎರಡು ಪ್ರಕಾರಂಗಳಿಂದ, ಭಿನ್ನಂ-ಬೇಱಾದುದಾಗಿ, ಪರಸ್ಪರಂ-ಅನ್ಯೋನ್ಯವಾಗಿ, ಪ್ರತೀಯತೇ-ತೋಱುತ್ತಿಹುದು. ೨

ಮಹಾನ್ ಘಟಪ್ರಭೇದೇನ ಯಥಾಕಾಶಃ ಪ್ರತೀಯತೇ
ಪ್ರತೀಯತೇ ತಥಾ ಚೈವ ಸ್ಥಲಂ ಲಿಂಗಾಂಗಭೇದತಃ

**ಟೀ.** ಮಹತ್-ಅಪರಿಮಿತವಾದಂಥಾ. ಆಕಾಶಃ-ಆಕಾಶವು, ಘಟಪ್ರಭೇದೇನ-ಘಟಭೇದದಿಂದ, ಯಥಾ-ಹೇಗೆ, ಮಹದಾಕಾಶ ಘಟದಾಕಾಶಂಗಳೆಂದು ಪ್ರತೀಯತೇ-ಬೇಱಾಗಿ ತೋಱುತ್ತಿಹುದು, ತಥೈವ-ಹಾಗೆ, ಸ್ಥಲಂ ಚ-ಸ್ಥಲವೂ, ಲಿಂಗಾಂಗ ಭೇದತಃ-ಲಿಂಗವು ಅಂಗವು ಎಂಬ ಭೇದದಿಂದ, ಪ್ರತೀಯತೇ-ಬೇಱಾಗಿ ತೋಱುತ್ತಿಹುದು. ೩

ಸ್ಥಲಂ ನಾಮ ಪರಂ ತತ್ತ್ವಂ ಶಿವರುದ್ರಾದಿ ಸಂಜ್ಞಕಂ
ಉಪಾಸ್ಯೋಪಾಸಕತ್ವೇನ ಸ್ವಯಮೇವ ದ್ವಿಧಾ ಭವೇತ್
ಲಿಂಗಸ್ಥಲಮುಪಾಸ್ಯಃ ಸ್ಯಾದಂಗಸ್ಥಲಮುಪಾಸಕಂ

**ಟೀ.** ಶಿವರುದ್ರಾದಿ ಸಂಜ್ಞಕಂ-ಶಿವನು ರುದ್ರನು ಎಂಬಿವು ಮೊದಲಾದ ನಾಮಂಗಳಿಂದ ಕುಱುಹಾಗಿ ಮಾಡಲುಪಟ್ಟಂಥಾ, ಸ್ಥಲಂ ನಾಮ-ಸ್ಥಲವೆಂದು ಪ್ರಸಿದ್ಧವಾದ, ಪರಂ-ಪರವಾದ, ತತ್ತ್ವಂ-ತತ್ತ್ವವು, ಸ್ವಯಮೇವ-ತಾನೇ, ಉಪಾಸ್ಯೋಪಾಸಕತ್ವೇನ-ಉಪಾಸ್ಯವೆಂದು ಸೇವಿಸಲು ತಕ್ಕ ವಸ್ತುವು, ಉಪಾಸಕನೆಂದು ಸೇವಕ, ಹೀಗೆ ಸೇವ್ಯ ಸೇವಕತ್ವದಿಂದ, ದ್ವಿಧಾ-ಎರಡು ಪ್ರಕಾರಂಗಳಿಂದ ಭಿನ್ನವಾದುದು, ಭವೇತ್-ಅಹುದು. ಅಲ್ಲಿ ಲಿಂಗಸ್ಥಲಂ-ಲಿಂಗಸ್ಥಲವು, ಉಪಾಸ್ಯಂ-ಉಪಾಸ್ಯವಾದುದು, ಸ್ಯಾತ್-ಅಹುದು. ಅಂಗಸ್ಥಲಂ-ಅಂಗಸ್ಥಲವು, ಉಪಾಸಕಂ-ಸೇವಿಸುವುದು, ಸ್ಯಾತ್-ಅಹುದು. ೪

ಉಪಾಸ್ಯತ್ವಂ ತಥೋಪಾಸಕತ್ವಂ ಚ ಪರಮಶ್ಶಿವಃ
ಅಪ್ರಚ್ಯುತಾತ್ಮಭೇದೇನ ಸ್ಥಿತಸ್ಸನ್ನಾತ್ಮಲೀಲಯಾ
ಸ್ವಶಕ್ತ್ಯಾ ಯುಗಪತ್ ಸಾಕ್ಷಾತ್ ಪ್ರಾಪ್ತ ಏವ ಸ್ವಯಂ ಕ್ರಮಾತ್

**ಟೀ.** ಪರಮಃ-ಉತ್ಕೃಷ್ಟನಾದ, ಶಿವಃ-ಶಿವನು, ಆತ್ಮಲೀಲಯಾ-ತನ್ನ ಲೀಲೆಯಿಂದ, ಅಪ್ರಚ್ಯುತಾತ್ಮಭೇದೇನ-ಚ್ಯುತಿಯಿಲ್ಲದ, ಆತ್ಮ-ತನ್ನ, ಭೇದೇನ-ಭೇದ

ದಿಂದ, ಸ್ಥಿತಸ್ಸ್ಯಾತ್-ಇದ್ದಾತನಾಗುತಲು, ಸಾಕ್ಷಾತ್-ಪ್ರತ್ಯಕ್ಷವಾದ, ಸ್ವಶಕ್ತ್ಯಾ-ತನ್ನ ಶಕ್ತಿಯಿಂದ, ಯುಗಪತ್-ಒಮ್ಮೆ, ಕ್ರಮಾತ್-ಲಿಂಗಸ್ಥಲ ಅಂಗಸ್ಥಲ ಕ್ರಮದಿಂದ, ಉಪಾಸ್ಯತ್ವಂ-ಸೇವ್ಯತ್ವವನು, ತಥಾ-ಹಾಗೆಯೆ, ಉಪಾಸಕತ್ವಂ ಚ-ಸೇವಕತ್ವವನು, ಪ್ರಾಪ್ತಃ-ಎಯ್ದಿದಾತನಹನು. ೫

ಚಿನ್ಮಾತ್ರಂ ಪರಮಂ ಸಾಕ್ಷಾತ್ ಸ್ಥಲಂ ಸತ್ಯಾದಿ ಲಕ್ಷಣಂ
ಲಿಂಗಾಂಗತ್ವಂ ಶಿವಾತ್ಮತ್ವಂ ಭೇದೇನೈವ ಸ್ವಯಂ ಶ್ರಿತಂ

ಟೀ. ಚಿನ್ಮಾತ್ರಂ-ಚೈತನ್ಯಾತ್ಮಕನಾಗಿ, ಸತ್ಯಾದಿಲಕ್ಷಣಂ-ಸತ್ಯಾನಂದಾದಿನಾಮಂಗಳು ಜ್ಞಾಪಕಂಗಳಾಗಿ ಉಳ್ಳ, ಪರಮಂ-ಉತ್ಕೃಷ್ಟವಾದ, ಸಾಕ್ಷಾತ್-ಪ್ರತ್ಯಕ್ಷವಾದ, ಸ್ಥಲಂ-ಸ್ಥಲವೆ, ಶಿವಾತ್ಮಕತ್ವಭೇದೇನೈವ-ಶಿವತ್ವ ಜೀವತ್ವವೆಂಬ ಭೇದದಿಂದಲೆ, ಲಿಂಗಾಂಗತ್ವಂ-ಲಿಂಗತ್ವವನು ಅಂಗತ್ವವನು, ಶ್ರಿತಂ-ಎಯ್ದಿತ್ತು. ೬

ಆತ್ಮಾಽಯಂ ಕೇವಲಶ್ಶುದ್ಧಶ್ಶಿವಸ್ಯಾಂಶಸ್ಸದಾಮಲಃ
ನಿತ್ಯೋ ನಿರಂಜನಶ್ಶಾಂತಸ್ತಸ್ಮಾದಾತ್ಮಾ ಸ್ವಯಂ ಶಿವಃ

ಟೀ. ಅಯಂ-ಈ, ಆತ್ಮಾ-ಜೀವನು, ಕೇವಲಃ-ಮುಕ್ತನು, ಶುದ್ಧಃ-ಶುದ್ಧನು. ಶಿವಸ್ಯ-ಶಿವನ, ಅಂಶಃ-ಅಂಶವು, ಸದಾ-ಎಲ್ಲಾಗಳು, ಅಮಲಃ-ನಿರ್ಮಲನು, ನಿತ್ಯಂ-ಶಾಶ್ವತನು, ನಿರಂಜನಃ-ನಿಃಪಾಪನು, ಶಾಂತಃ-ರಾಗ ದ್ವೇಷ ವಿರಹಿತನು, ತಸ್ಮಾತ್-ಅದುಕಾರಣ, ಆತ್ಮಾ-ಜೀವನು, ಶಿವಃ-ಶಿವನು, ಸ್ವಯಂ-ತಾನೆ. ೭

ಸೋಽಯಮಾತ್ಮಾ ಶಿವಾಂಗಂ ಸ್ಯಾಚ್ಛಿವೇನಾಂಗೀಕೃತತ್ವತಃ
ಸರ್ವಜ್ಞತ್ವಾದಿ ಭೇದೈಶ್ಚ ಶಿವಾಂಗಮಿದಮಿಷ್ಯತೇ

ಟೀ. ಸೋಽಯಮಾತ್ಮಾ-ಈ ಜೀವನು. ಶಿವೇನ-ಶಿವನಿಂದ, ಅಂಗೀಕೃತತ್ವತಃ-ಅಂಗೀಕರಿಸಲ್ಪಟ್ಟಾತನಪ್ಪುದರಿಂದವು, ಅಂಗವಾಗಿ ಮಾಡಲ್ಪಟ್ಟಾತನಪ್ಪುದರಿಂದವು, ಶಿವಾಂಗಂ-ಶಿವನ ಅಂಗವು, ಸ್ಯಾತ್-ಅಹುದು. ಸರ್ವಜ್ಞತ್ವಾದಿ ಭೇದೈಶ್ಚ-ಸರ್ವಜ್ಞತ್ವ ಸರ್ವಗತತ್ವವು, ಆದಿ-ಮೊದಲಾಗಿ ಉಳ್ಳ ಗುಣಂಗಳ, ಭೇದೈಶ್ಚ-ವಿಶೇಷಂಗಳಿಂದವು, ಅಯಂ-ಈ ಜೀವನು, ಶಿವಾಂಗಂ-ಶಿವನ ಅಂಗವೆಂದರಿದು, ಇಷ್ಯತೇ-ಇಚ್ಛೈಸಲು ಪಡುತ್ತಿಹನು. ೮

ದೀಪಾದಿವ ಮಹಾತೇಜೋ ವಿಸ್ಫುಲಿಂಗಂ ಶಿವಾನ್ವಿತಂ
ನಿಪತಂತೀ ತ್ರಿಧಾ ಭಾತಿ ಶಿವವಿದ್ಯಾತ್ಮಭಿಃ ಕಲಾ

ಟೀ. ದೀಪದತ್ತಣಿಂದ ವಿಸ್ಫುಲಿಂಗ ತೇಜಸ್ಸುಗಳು ಹೇಂಗೆ ಹುಟ್ಟಿದವು ಹಾಂಗೆ ಸಕಲವಾದ ಶಿವತತ್ತ್ವದೊಡನೆ ಕೂಡಿದ ಆ ಶಾಂತಿಕಲೆಯೇ ಶಿವ ವಿದ್ಯೆ ಜೀವರುಗಳೆಂಬ ತ್ರಿರೂಪಂಗಳಾದ ಮೂಱು ಪ್ರಕಾರವಾಗಿಯೆ ಇರುತ್ತಿಹುದು. ೯

ರುದ್ರಯಾಮಳದಲ್ಲಿಯ ವಾಕ್ಯ:-

ಜಲಸ್ಯಾಪ್ಯೂರ್ಮಯೋ ವಹ್ನೇರ್ಜ್ವಾಲಾ ಭಾನೋಃ ಪ್ರಭಾ ಇವ
ಯೋಗಿನಸ್ತು ಶಿವಸ್ಯಾತ್ಮಾ ವಿಶ್ವಭೂರಸ್ತ್ಯಭೇದತಃ

ಟೀ. ಜಲ ಜಲದ ತೆರೆಯ ಹಾಗೆ, ಅಗ್ನಿ ಅಗ್ನಿಯ ಜ್ವಾಲೆಯ ಹಾಗೆ, ಸೂರ್ಯ ಸೂರ್ಯನ ಪ್ರಭೆಯ ಹಾಗೆ, ಆವುದಾನೊಂದು ಪರವಸ್ತುವಿನಲ್ಲಿ ವಿಶ್ವವು ಹಾಗೆ ಕೂಡಿ ತೋಱುತ್ತಿಹುದು ಭೇದವಿಲ್ಲದೆ. ೧೦

ನಿರ್ಮಲಂ ನಿಷ್ಕಲಂ ಶಾಂತಂ ಸರ್ವಾತೀತಂ ನಿರಂಜನಂ
ತದೇವ ಜೀವರೂಪೇಣ ಪುಣ್ಯ ಪಾಪ ಫಲೈರ್ವೃತಂ

ಟೀ. ಮಲಮಾಯಾದಿಗಳು ಇಲ್ಲದಂಥ, ಅವಯವಂಗಳಿಲ್ಲದಂಥ, ಸಕಲ ಕರಣಂಗಳು ಇಲ್ಲದಂಥ, ಎಲ್ಲಾ ತತ್ತ್ವವನು ಮೀಱಿದಂಥ, ಅಜ್ಞಾನಾವೇಶ ಹೊದ್ದದಂಥ, ಆ ಪರತತ್ವವು ತಾನ ಅವಿದ್ಯೋಪಾಧಿಕತ್ವದಿಂದ ಬ್ರಹ್ಮಾದಿ ತೃಣಾಂತವಾದ ಪ್ರಾಣಿಜಾಲವಾಗಿ ಪುಣ್ಯಪಾಪಂಗಳಿಂದ ಪರಿವೃತವಾಯಿತ್ತು. ಆ ಬ್ರಹ್ಮವು ಹೇಂಗೆ ಪುಣ್ಯ ಪಾಪ ಫಲಂಗಳಿಂದ ಪರಿವೃತವಾಯಿತ್ತಯ್ಯಾ ಎಂದಡೆ ೧೧

ಬ್ರಹ್ಮಗೀತಾಸು:-

ವೃತ್ತ

ಪರಮ ಶಿವಸಮುದ್ರೇಽಹಂ ಹರಿಃ ಸರ್ವದೇವಾಃ
ಮನುಜ ಪಶುಮೃಗಾದ್ಯಾಸ್ಸೀಕರಾ ಏವ ಸತ್ಯಂ
ವಿಮಲಮತಿಭಿರೇವಂ ವೇದ ವೇದಾಂತ ನಿಷ್ಠೈಃ
ಹೃದಯ ಕುಹರ ಮಧ್ಯೇ ವೇದಿತುಂ ಶಕ್ಯತೇ ಹಿ

ಟೀ. ದೇವತೆಗಳಿಗೆ ಬ್ರಹ್ಮ ನುಡಿದನು: ಬ್ರಹ್ಮ ತಾನು ಹರಿಯು ಸಮಸ್ತ ದೇವತೆಗಳು ಮನುಷ್ಯರು ಪಶು ಮೃಗಂಗಳು ಮೊದಲಾದ ಸಮಸ್ತ ಪ್ರಾಣಿಗಳು ಉತ್ಕೃಷ್ಟವಾದಂಥ ಶಿವನೆಂಬ ಸಮುದ್ರದಲ್ಲಿಯ ತುಂತುರ್ವನಿಗಳೆಂದು ಅಱಿವುದು. ಅಂಥ ಉತ್ಕೃಷ್ಟವಾದ ಶಿವನು ಎಲ್ಲಿಹನೆಯಾ ಎಂದಡೆ, ವೇದ ವೇದಾಂತ ಶಾಸ್ತ್ರಂಗಳಂ ಬಲ್ಲವರಾದ ನಿರ್ಮಲ ಮತಿಗಳಿಂದ ಹೃದಯಕಮಲಕರ್ಣಿಕಾಮಧ್ಯದಲ್ಲಿಹನೆಂದು ಅಱಿಯಲು ಶಕ್ಯವಾಗುತ್ತಿಹನು. ಅದುಕಾರಣ ಶಿವನಿಂದ ಹುಟ್ಟಿದ

ಪ್ರಾಣಿಗಳು ಶಿವನೆಂದಱಿಯಬೇಕಾದುದು. ಅದು ಹೇಂಗೆಯಾ ಎಂದಡೆ, ಶರಧಿಯೊಳಗೆ ಪುಟ್ಟಿದ ನೂರೆ ತೆರೆ ಬುದ್ಬುದ ಸೀಕರಾದಿಗಳನು ಸರದಿಯೆಂದೇ ಕಾಬ. ಆ ಸರದಿಯ ನೀರಂ ತೃಣಾಗ್ರಬಿಂದುವಂ ಒಂದೇ ಎಂದು ಕಾಬುದು. ಕಾಬಲ್ಲಿ ಭೇದವುಂಟು. ಆ ಸರದಿಯ ಘನಗಂಭೀರತೆ ಫೇನಾದಿಗಳಿಗಿಲ್ಲವಾಗಿ ಶಿವನಿಗುಳ್ಳ ಮಹತ್ವತೆ ಜೀವರಿಗಿಲ್ಲೆಂದು ಅಱಿವುದು. ಅದು ಹೇಂಗೆಂದಡೆ: ರವಿಯಲ್ಲಿ ಹುಟ್ಟಿದ ಛಾಯಾತಪಾದಿಗಳು ರವಿಯಂಶವಾಗಿರ್ದು ರವಿಯಲ್ಲದವಹವು. ಚಂದ್ರನಲ್ಲಿ ತೋಱುವ ಜ್ಯೋತ್ಸ್ನೆ ಹಿಮಾದಿಗಳು ಚಂದ್ರ ತಾನೆಯಲ್ಲ. ಅಗ್ನಿಯಲ್ಲಿ ಸ್ಫುರಿಸಿದ ಊಷ್ಣಾರ್ಚಿಧೂಮಾದಿಗಳು ಅಗ್ನಿಯಲ್ಲ. ಅಂತು ಇತ್ಯಾದಿಗಳು ಹೇಂಗೆ ತತ್ತದಂಗಸಂಭೂತಂಗಳಾಗಿಯೂ ಅವಲ್ಲದಿಹವು ಹಾಂಗೆ ಪರಶಿವತತ್ತ್ವದಿಂದ ಬ್ರಹ್ಮಾದಿ ತೃಣಾಂತವಾದ ಜೀವಜಾಲ ಹುಟ್ಟಿಯುಂ ಆ ಜೀವಜಾಲಂ ಪರಶಿವತತ್ತ್ವವೆಯಲ್ಲ. ಇಂತಪ್ಪ ಜೀವತತ್ತ್ವಮಂ ಶಿವತತ್ತ್ವವೆಂದು ಭಾವಿಸಲಾಗದು. ೧೨

ಯಥಾ ಪತ್ರಾಣಿ ವೃಕ್ಷೇಷು ನಿರ್ಝರೇಷು ಯಥಾ ಕಣಾಃ
ತಥೈವ ಬ್ರಹ್ಮಣಿ ಸ್ಥಿರೇ ಜಗದ್ಬುಧ್ಯಾ ವಿಕಲ್ಪಿತಂ

ಟೀ. ವೃಕ್ಷೇಷು-ವೃಕ್ಷಗಳಲ್ಲಿ, ಪತ್ರಾಣಿ-ಎಲೆಗಳು, ಯಥಾ-ಹೇಗೆ, ನಿರ್ಝರೇಷು-ಪ್ರವಾಹಂಗಳಲ್ಲಿ, ಕಣಾಃ-ತುಂತುರ್ವನಿಗಳು, ಯಥಾ-ಹೇಗೆ, ತಥೈವ-ಹಾಗೆ, ಸ್ಥಿರೇ-ದಟ್ಟವಾದಂಥ, ಬ್ರಹ್ಮಣಿ-ಬ್ರಹ್ಮದಲ್ಲಿ, ಜಗತ್-ಲೋಕವು, ಬುಧ್ಯಾ-ಬುದ್ಧಿಯಿಂದ, ವಿಕಲ್ಪಿತಂ-ವಿಕಲ್ಪಿಸಲು ಪಟ್ಟುದು. ೧೩

## ಅಂಗಸ್ಥಲಕ್ಕೆ ವಚನ :

**ವ.** ಓಂ ಪ್ರಥಮದಲ್ಲಿ ದಿವ್ಯ ನಿರಾಲಂಬಮೂರ್ತಿ ಜಗತ್ಸೃಷ್ಟ್ಯರ್ಥ ಕಾರಣವಾಗಿ ತತ್ವಾದಲ್ಲಿ ಪಂಚಬ್ರಹ್ಮಸಾಕಾರಮೂರ್ತಿಯಾದ ಲೀಲಾಸಂಭವವಾದಲ್ಲಿ ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತು, ಅಂಗ ಕರಂಡ ಆತ್ಮಸುಗಂಧ ನೀನಾದೆಯಲ್ಲಾ ಪಣಾಂಕಧರ ಸೋಮೇಶ್ವರಾ.

ಟೀ. ಸಾಕಾರಂಗಳನವಲಂಬಿಸದೆ ನಿಃಕಲವಾಗಿದ್ದಿತ್ತು ಪರಬ್ರಹ್ಮ ಮೊಟ್ಟ ಮೊದಲಲ್ಲಿ ಎಂಬುದೀಗ 'ಓಂ ಪ್ರಥಮದಲ್ಲಿ ದಿವ್ಯ ನಿರಾಲಂಬ ಮೂರ್ತಿ' ಎಂಬ ಶಬ್ದಕ್ಕೆ ಅರ್ಥ. ಅಂತು ನಿಃಕಲವಾಗಿರ್ದ ಅಖಂಡ ಚೈತನ್ಯಜ್ಞಾನವಸ್ತು ತನ್ನ ತಾನೇ ಸೇವ್ಯ ಸೇವಕನಾಗಿರಬೇಕೆಂಬ ಲೀಲಾಚಿಂತನೆದೋಱಿ, ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಯಿತ್ತೆಂಬುದೀಗ 'ಜಗತ್ಸೃಷ್ಟ್ಯರ್ಥಕಾರಣ

ವಾಗಿ ತತ್ತಾದನೆ'ಂಬ ಶಬ್ದಕ್ಕರ್ಥ. ಅಂತಾದ ಮಹಾಲಿಂಗವು ತನ್ನ ಸ್ವಲೀಲೆಯಿಂದವೆ ಪಂಚಸಾದಾಖ್ಯಮೂರ್ತಿಯಾಗಿ ಸಾಕಾರವಾದನೆಂಬುದೀಗ 'ತತ್ತಾದಲ್ಲಿ ಪಂಚ ಬ್ರಹ್ಮಸಾಕಾರಮೂರ್ತಿಯಾದ' ನೆಂಬ ಶಬ್ದಕ್ಕರ್ಥ. ಅಂತು ಪಂಚಬ್ರಹ್ಮಸಾಕಾರ ಮೂರ್ತಿಯಾದ ಮಹತ್ತಾಗುತ್ತವೆ ಆ ಲಿಂಗವು ಅಣುರೂಪವಾದ ಆತ್ಮನೆಂಬ ಅಂಗಸ್ವರೂಪು ತಾನೆಯಾದನೆಂಬುದೀಗ 'ಅಣುವಿಂಗೆ ಅಣು, ಮಹತ್ತಿಂಗೆ ಮಹತ್ತು, ಅಂಗಕರಂಡ ಆತ್ಮಸುಗಂಧ ನೀನಾದೆಯಲ್ಲಾ ಏಣಾಂಕಧರ ಸೋಮೇಶ್ವರಾ' ಎಂಬ ಶಬ್ದಕ್ಕರ್ಥ. ೧

ವ. ನಿಜವಸ್ತುವೊಂದೇ. ತನ್ನ ಲೀಲೆಯಿಂದ ಎರಡಾಗಬಲ್ಲುದದೊಂದೇ. ಬೇಱೆ ತೋಱಬಲ್ಲುದದೊಂದೇ. ತನ್ನ ಮಱೆಯಬಲ್ಲುದದೊಂದೇ. ಆ ಮಱವೆಯ ಬಲ್ಲುದದೊಂದೇ. ತಾನಲ್ಲದನ್ಯವಿಲ್ಲೆಂದಱಿದಱಿವು ತಾನೆ ಸಿಮ್ಮಲಿಗೆಯ ಚೆನ್ನರಾಮನು.

ಟೀ. ತೋಱುವ ತೋಱಿಕೆಗಳ ಹುಸಿಯೇನೂ ಇಲ್ಲದೆ ನಿಜವೆ ಆಗಿರ್ದ ಪರವಸ್ತು ತಾನೊಂದೆಯಾಗಿರ್ದು ತನ್ನ ಲೀಲೆಯಿಂದ ತಾನೆ ಲಿಂಗಾಂಗವೆಂದೆರಡಾಯಿತ್ತು. ಆ ಎರಡಾದಲ್ಲಿ ತಾನೆ ಲಿಂಗವಾಗಿ ಮಹತ್ತೆನಿಸಿದ ತನ್ನ ಚೈತನ್ಯಾಂಶವೊಂದ ಬೇರ್ಪಡಿಸಿ ಅಣುರೂಪಾಗಿ ಆತ್ಮನಾಯಿತ್ತು. ಅಂತು ಶಿವಾಂಶಿಕನಾದ ಆತ್ಮನು ತಾನು ಶಿವನೆಂಬುದ ಮಱೆದಿಪ್ಪ ಮಱವೆಯೂ ಶಿವನ ಲೀಲಾವಿಲಾಸ ದಿಂದಾದುದಾಗಿ ಲಿಂಗಾಂಗವೆಂದೆರಡಾಗಿ ತೋಱಿತ್ತು. ಆ ಎರಡು ಒಂದೆಯೆಂಬ ಱಿವು ತಾನೆಯಾಗಿ ಎರಡಳಿದು ಒಂದೆ ವಸ್ತುವಾಗಿಪ್ಪುದಾಗಿ, ಅಂತು ಒಂದೆ ವಸ್ತು ಲಿಂಗಮೂರ್ತಿಯಾಗುತ್ತವೆ ಆತ್ಮನೆಂಬ ಅಂಗವು ತಾನೆಯಾಗಿ ಎರಡೆನಿಸಿತ್ತು ತಾನೆ ತನ್ನ ಲೀಲಾಸ್ವತಂತ್ರತೆಯಿಂದಲೆಂಬುದೀ ವಚನದ ತಾತ್ಪರ್ಯಾರ್ಥ. ೨

ವ. ರುದ್ರ ಮುಖದಲ್ಲಿ, ವಿಷ್ಣು ಭುಜದಲ್ಲಿ, ಜಂಘೆಯಲ್ಲಿ ಅಜಜನನವು. ಇಂದ್ರ ಪಾದದಲ್ಲಿ, ಚಂದ್ರ ಮನದಲ್ಲಿ, ಚಕ್ಷುವಿನಲ್ಲಿ ಸೂರ್ಯ ಜನನವು. ನೊಸಲಲಗ್ನಿಯು, ಪ್ರಾಣದಲ್ಲಿ ವಾಯು, ನಾಭಿಯಲ್ಲಿ ಅಂತರಿಕ್ಷ ಜನನವು. ಶಿರದಲುದಯ ತೆತ್ತೀಸಕೋಟಿ ದೇವರ್ಕಳು. ಪಾದ ತಳದಲ್ಲಿ ಭೂಮಿಜನನವು. ಶ್ರೋತ್ರದಲ್ಲಿ [೧]ದಶದಿಕ್ಕು[೧]. ಜಗವ ನಿಕ್ಷೇಪಿಸಿದ ಕುಕ್ಷಿಯೊಳಕ್ಷಯನಗಣಿತ ನೀನು ಸಾಸಿರಮುಖ ಸಾಸಿರ

೧. ದಶದಿಕ್ಕುವೊ (ರಾ. ಹು. ಮ.)

ಕಣ್ಣು ಸಾಸಿರ ಭುಜ ಸಾಸಿರ ಪಾದ ಸಾಸಿರ ಸಂನಿಹಿತ ನಮ್ಮ ಕೂಡಲ ಸಂಗಮದೇವರು.

**ಟೀ.** ಉಪಮಿಸಬಾರದ ಅಖಂಡ ಚಿದ್ಬೆಳಗನುಳ್ಳ ಪೂರ್ಣಚೈತನ್ಯವೆ ಲಿಂಗಾಕಾರವಾಗಿರ್ದ. ಆ ಲಿಂಗವು ತಾನೆ ತನ್ನ ಸ್ವಲೀಲೆಯಿಂದ ಅಂಗ ಕರಚರಣಂಗಳಾಗಿ, ಅನಂತಶಿರ ಅನಂತಚಕ್ಷು ಅನಂತ ಪಾದಂಗಳನುಳ್ಳ ಮೂರ್ತಿಯಾಯಿತ್ತು. ಅಂತಪ್ಪ ಪರಶಿವಮೂರ್ತಿಯ ಚಿತ್‌ಪ್ರಭಾಂಗದ ಚಿತ್‌ಪ್ರಭಾವತೆ ಪ್ರಭಾವಿಸಿದ ಚಿತ್‌ಕಲಾಂಶವೆ ಅನಂತ ಮೂರ್ತಿಗಳಾಗಿ ಅನಂತ ಜೀವಕೋಟಿಗಳಾಗಿ ಅನಂತ ತತ್ತ್ವಂಗಳಾಗಿ ಅನಂತ ಬ್ರಹ್ಮಾಂಡಂಗಳಾದ ಜಗತ್ತಾದವು. ಅಂತು ಶಿವಾಂಶಿಕರಾದ ಆತ್ಮರು ಮೊದಲಾದ ಬ್ರಹ್ಮಾಂಡಂಗಳ ಆ ಪರಶಿವನು ತನ್ನ ಜಠರದಲ್ಲಿಯೆ ಇರಿಸಿಕೊಂಡು ರಕ್ಷಿಸುತ್ತಿಹನೆಂಬುದೀಗ ವಚನದ ತಾತ್ಪರ್ಯಾರ್ಥ. ೩

**ವ.** ಅವನಿಯಂಬರ ಉದಯಿಸದಂದು ಒಂದು ತುಂಬಿದ ಕೊಡನ ಕಂಡೆ. ಆ ಕೊಡನನೆತ್ತಿದವರಿಲ್ಲ, ಇಳುಹಿದವರಿಲ್ಲ. ಆ ಕೊಡ ತುಳುಕಿದಲ್ಲಿ ಒಂದು ಬಿಂದು [೧]ಕೆಲಕ್ಕೆ[೧] ಸಿಡಿಯಿತ್ತು ಕಂಡೆ. ಆ ಬಿಂದುವಿನಲ್ಲಿ ಅನಂತ ದೇವತಾಮೂರ್ತಿಗಳು ಹುಟ್ಟಿತ್ತ ಕಂಡೆ. ಇದು ಕಾರಣ ಚಿಕ್ಕಯ್ಯ ಪ್ರಿಯಸಿದ್ಧಲಿಂಗದ ಲೀಲಾಮೂಲವ ಕಂಡು ಇಲ್ಲ ಇಲ್ಲವೆನುತಿರ್ದೆನು.

**ಟೀ.** ಸರ್ವ ತತ್ತ್ವಂಗಳೇನೂ ಇಲ್ಲವೆ ಇರ್ದಂದು ಅಖಂಡ ಚಿತ್‌ಪ್ರಕಾಶಾಂಗವೆಂಬ ಭಾಜನದಲ್ಲಿ ಅಖಂಡ ಚಿದಾನಂದರಸ ಪರಿಪೂರ್ಣವಾದ ಪರಬ್ರಹ್ಮವು ಒಂದೇ ಇದ್ದಿತೆಂಬುದೀಗ ' ಅವನಿಯಂಬರ ಉದಯಿಸದಂದು ಒಂದು ತುಂಬಿದ ಕೊಡನ ಕಂಡೆ ' ನೆಂಬ ಶಬ್ದಕ್ಕರ್ಥ. ಅಂತಿಪ್ಪಲ್ಲಿ ಆ ಪರಬ್ರಹ್ಮವನರಿದು ಅಂಗದಲ್ಲಿ ಧರಿಸಿ ಹಿಂಗದೆ ಪೂಜಿಸುವ ಷಟ್‌ಸ್ಥಲಜ್ಞಾನಿಗಳಿಲ್ಲ. ಆ ಪರಬ್ರಹ್ಮವನರಿವ ಅರಿವಿಲ್ಲದೆ ಆಹ್ವಾನ ವಿಸರ್ಜನೆಯ ಮಾಡುವ ಭಿನ್ನ ಪೂಜಕರಪ್ಪ ಶೈವರು ಇಲ್ಲ. ಅಂತು ಭಜಿಸುವರಾರೂ ಇಲ್ಲದಂದು ಒಂದೆ ಪರಬ್ರಹ್ಮವಿದ್ದಿತ್ತೆಂಬುದೀಗ ' ಆ ಕೊಡನನೆತ್ತಿದವರಿಲ್ಲ ಇಳುಹಿದವರಿಲ್ಲ ' ಎಂಬ ಶಬ್ದಕ್ಕರ್ಥ. ಅಂತು ಅಖಂಡ ಪರಿಪೂರ್ಣ ಚೈತನ್ಯ ವಸ್ತುವೊಂದೆ ಇರ್ದು ತನ್ನ ಭಜಿಸುವರಿಲ್ಲದಿರಬಾರದೆಂದು ತನ್ನ ಚಿದ್ವಿವೇಕದಿಂದ ಚಿಂತನೆದೋರಲು ಆ ತೋರಿದ ಚಿದ್ವಿವೇಕದ ಚಿಂತನೆ

೧. ಕಡೆಗೆ (ರಾ, ಎ).

ಈಗವೆ ಬ್ರಹ್ಮಕ್ಕೆ ಕಂಪನವೆಂಬುದೀಗ 'ಆ ಕೊಡ ತುಳುಕಿತ್ತೆ'ಂಬ ಶಬ್ದಕ್ಕರ್ಥ. ಅಂತು ಚಿದ್ವಿವೇಕದಿಂದ ಚಿಂತಿಸಿದ ಚಿಚ್ಚೈತನ್ಯವೇ ಪ್ರಭಾವಿಸಿ ನೆಗಳ್ದು ಚಿತ್‌ಪ್ರಭಾಂಗಮೂರ್ತಿಯಾದ ಚಿಲ್ಲಿಂಗವಾಯಿತ್ತೆಂಬುದೀಗ 'ಆ ಕೊಡ ತುಳುಕಿದಲ್ಲಿ ಒಂದು ಬಿಂದು [1]ಕೆಲಕ್ಕೆ[1] ಸಿಡಿಯಿತ್ತ ಕಂಡೆ' ನೆಂಬ ಶಬ್ದಕ್ಕರ್ಥ. ಅಂತು ಚಿತ್‌ಪ್ರಭಾಂಗಮೂರ್ತಿಯಾದ ಲಿಂಗವು ತನ್ನ ಭಜಿಸುವರಾಗಬೇಕೆಂಬ ಲೀಲಾವಿಲಾಸದಿಂದ ತನ್ನ ಚಿತ್‌ಪ್ರಭಾಂಗದ ಚಿತ್‌ಪ್ರಭಾಕಲಾಂಶಗಳ ಬೇರ್ಪಡಿಸೆ ಅನಂತ ದೇವತಾಮೂರ್ತಿಗಳು ಮುಖ್ಯವಾದ ಆತ್ಮರುಗಳು ಅನಂತರಾದರೆಂಬುದೀಗ 'ಆ ಬಿಂದುವಿನಲ್ಲಿ ಅನಂತ ದೇವತಾಮೂರ್ತಿಗಳು ಹುಟ್ಟಿತ್ತ ಕಂಡೆ' ನೆಂಬ ಶಬ್ದಕ್ಕರ್ಥ. ಅಂತು ಲಿಂಗದ ಲೀಲಾವಿಲಾಸದಿಂದಾದ ಜಗದ ಸೃಷ್ಟಿ ಮುನ್ನಿಲ್ಲ. ಲಿಂಗದ ಲೀಲೆ ಸಾಕಾದಡೆಯು ಇಲ್ಲವೆಂಬುದೀಗ 'ಇದುಕಾರಣ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗದ ಲೀಲಾಮೂಲವ ಕಂಡು ಇಲ್ಲ ಇಲ್ಲವೆನುತಿರ್ದೆ' ನೆಂಬ ಶಬ್ದಕ್ಕರ್ಥ. ೪

ವ. ಆದಿಪುರುಷನ ಮನವು [2]ಮಹವನಕ್ಕಾಡಿ[2] ಮತ್ತಲ್ಲಿಯೆ ಆನಂದದಿಂದ ಆ ನಿರವಯವು ಬೆಸಲಾಯಿತ್ತು. ಧರೆ ಅಂಬರ ವಾರುಧಿ ಸಹಿತ ಜಾರೆಯೆಂದರೆ ಜಗದಲ್ಲಿ ನಿಂದರು ಚೌರಾಸಿ ಲಕ್ಷ ಜೀವಜಾಲಂಗಳು. ಹಾರೆಯೆಂದರೆ ಆಕಾಶದಲ್ಲಿ ನಿಂದರು ಗರುಡ ಗಂಧರ್ವ ಸಿದ್ಧ ವಿದ್ಯಾಧರ ದೇವರ್ಕಳು ಮೊದಲಾದ ದೇವ ಸಮೂಹಂಗಳೆಲ್ಲಾ. ಕೂಡಲಸಂಗಮದೇವಾ ನೀವು ಮನದಲ್ಲಿ ಸಂಕಲ್ಪಿಸಿ ಆಗೆಂದಡೆ ಆದುವು.

೫. ತತ್ತ್ವಂಗಳೇನೂ ಇಲ್ಲದ ಮೊದಲಿರ್ದ ಪರಶಿವನು ತನ್ನ ಘನತೆಗೆ ತನ್ನ ಚಿತ್ತು ಹೆಚ್ಚಿ ಹಿಗ್ಗಾಡಿ ಘನತರದಹಂಭಾವದಾನಂದದಲಿ ವಿಶ್ರಮಿಸಿ ನಿಂದಿತ್ತೆಂಬುದೀಗ 'ಆದಿಪುರುಷನ ಮನವು ಮಹವನಕ್ಕಾಡಿ ಮತ್ತಲ್ಲಿಯೆ ಆನಂದದಿಂದ' ಎಂಬ ಶಬ್ದಕ್ಕರ್ಥ. ಅಂತು ಪರಬ್ರಹ್ಮವು ತನ್ನ ಘನತೆಗೆ ತಾನೆ ಹೆಚ್ಚಿ ಮಹದಹಂಕಾರದಲ್ಲಿ ಆನಂದಿಸಿದ ಚಿತ್ತಿನ ನೆನಹಿಂದವೆ ಸಾಕಾರದ ತೋಱಿಕೆಯ ವಿಲಾಸದ ನೆನಹುದೋಱಿಸಿ ತನ್ನ ನಿರವಯದಲ್ಲಿಯೆ ಸಾಕಾರಮೂರ್ತಿಯಾಗಿ ನಿಂದಿತ್ತೆಂಬುದೀಗ 'ಆ ನಿರವಯವು ಬೇಸಲಾಯಿತ್ತೆ'ಂಬ ಶಬ್ದಕ್ಕರ್ಥ. ಅಂತು ನಿರವಯುವಸ್ತು ಸಾಕಾರವಾದ ನೆನಹಿನ ಚಿತ್ತುವಿಂದವೆ ದೇವತಾದಿಗಳು ಸಕಲಾತ್ಮರು ಅಷ್ಟತನುಗಳು ಮೊದಲಾದ ಜಗತ್ತೆಲ್ಲಾ ಜನಿಸಿತ್ತು. ಅಂತು ಪರಶಿವನು ಲೀಲೆಯಿಂದ ಸಾಕಾರವಾದ ಚಿತ್ತಿನಿಂದ ಜನಿಸಿದ ಚಿತ್ತುಮಯವೀ ಜಗತ್ತೆಂದುದಾಗಿ,

೧. ಕಡೆಗೆ (ರಾ, ಎ) ೨ ಮಹವಲಕ್ಕಾಡಿ (ಹು).

ಮುನ್ನ ಆತ್ಮರು ಮೊದಲಾದ ತತ್ವಂಗಳೇನೂ ಇಲ್ಲವೆಂಬುದೀ ವಚನದ ತಾತ್ಪ ರ್ಯಾರ್ಥ. ೫

**ವ.** ಶಿವ ತನ್ನ ವಿನೋದಕ್ಕೆ ರಚಿಸಿದನನಂತ ವಿಶ್ವವ. ರಚಿಸಿ ಏನು ವಿಶ್ವಕ್ಕೆ ಹೊರಗಾಗಿದ್ದನೇ ? ಇಲ್ಲ, ವಿಶ್ವಮಯ ತಾನಾದನು. ವಿಶ್ವ ವೆಲ್ಲವು ತಾನಾದನೆಂದರೆ ವಿಶ್ವದ ಉತ್ಪತ್ಯ ಸ್ಥಿತಿ ಲಯಕ್ಕೆ ಒಳಗಾದಾ ತನೇ ? ಅಲ್ಲ. ಅದೇನು ಕಾರಣವೆಂದಡೆ, ಅಜಾತನಾಗಿ ಉತ್ಪತ್ಯನಲ್ಲ. ಸ್ಥಿತಿ ಕರ್ಮ ರಹಿತನಾಗಿ ಸ್ಥಿತಿಗೊಳಗಲ್ಲ. ಮರಣ ವಿರಹಿತನಾಗಿ ಲಯಕ್ಕೆ ಒಳಗಲ್ಲ. ಇಂತೀ ಗುಣತ್ರಯಂಗಳು ಹೊದ್ದಲರಿಯವು. ತಾನಲ್ಲದೆ ವಿಶ್ವಕ್ಕೆ ಆಧಾರವಿಲ್ಲವಾಗಿ ದೂರಸ್ಥನಲ್ಲ. ತನ್ನಲ್ಲಿ ತಾನಲ್ಲದೆ ಅನ್ಯವು ತೋರಲರಿಯದಾಗಿ ಇದಿರಿಲ್ಲ. ಇದಿರಿಲ್ಲವಾಗಿ ವಿಶ್ವಮ ಯವು ತಾನಾದುದೇ ಸತ್ಯ. ಅರಸು ಕಾಲಾಳಾಗಬಲ್ಲ ತನ್ನ ವಿನೋ ದಕ್ಕೆ, ಮರಳಿ ಅರಸಾಗಬಲ್ಲ. ನಮ್ಮ ಉರಿಲಿಂಗಪೆದ್ದಿಪ್ರಿಯ ವಿಶ್ವೇ ಶ್ವರನು ಜಗವಾಗಲೂ ಬಲ್ಲ, ಜಗವಾಗದಿರಲೂ ಬಲ್ಲ.

**ಟೀ.** ಅಖಂಡಾದ್ವಯ ನಿತ್ಯಪರಿಪೂರ್ಣವಸ್ತು ತಾನೊಂದೆಯಾಗಿದ್ದು ತನ್ನ ತಾನೆ ಸೇವ್ಯ ಸೇವಕನಾಗಿರಬೇಕೆಂಬ ಲೀಲಾವಿಲಾಸದಿಂದ ತಾನೇ ಲಿಂಗಸ್ವರೂಪ ವಾಗಿ ತನ್ನ ತದಂಶವೊಂದ ಬೇರ್ಪಡಿಸಿ, ನಾನಾತ್ಮವನೆಯ್ದಿ ಪರಿಚ್ಛಿನ್ನಾತ್ಮರಾಗಿ ಅಂಗಸ್ವರೂಪಾದ ಜಗತ್ತಾಯಿತ್ತು. ಅಂತಾದ ಆತ್ಮರಿಗೆ ಸುಖ ದುಃಖ ಬಂಧ ಮೋಕ್ಷ ಜನನ ಮರಣಂಗಳಂ ಮಾಡಿ ತಾನೆ ನಿತ್ಯನಾಗಿ ವಿನೋದಿಸುತ್ತಿರ್ಪ ಆ ಪರ ಡಾಗಿ ಶಿವನು. ಅಂತಪ್ಪ ಆತ್ಮರುಗಳಿಗೆ ಸಮ್ಯಗ್ಜ್ಞಾನಮಂ ಪ್ರಕಾಶಿಸಿ, ಮೋಕ್ಷಾ ಪೇಕ್ಷರಂ ಮಾಡಿ, ಭಕ್ತಿರತಿಯನಿತ್ತು, ತನ್ನ ಶಿವತ್ವವನೆಯ್ದಿಸಿ, ಎರಡಳಿದು ಒಂದೆ ಯಾಗಿಪ್ಪನಾ ಶಿವನು. ಅಂತು ಒಂದೆ ವಸ್ತು ತನ್ನ ಲೀಲೆಯಿಂದ ತಾನೇ ಲಿಂಗ ವಾಗಿ ಪೂಜ್ಯನೆನಿಸಿದ. ತನ್ನ ಪೂಜಿಸುವ ಆತ್ಮರಿಲ್ಲದಲ್ಲಿ ತಾನೇ ಆತ್ಮರುಗಳಾಗಿ ತನ್ನ ತಾನೆ ಪೂಜಿಸಿಕೊಂಬ ಭೇದದಿಂದ ಎರಡೆನಿಸಿದ ಶಿವಮಯವೀ ಜಗತ್ತೆಂಬುದೀ ವಚನದ ತಾತ್ಪರ್ಯಾರ್ಥ. ೬

**ವ.** ಘನಗಂಭೀರ ಮಹಾವಾರುಧಿಯಲ್ಲಿ ನೊರೆ ತೆರೆ ಬುದ್ಬುದ ಫೇನ ತರಂಗಗಳು ತೋರುತ್ತಲಿಲ್ಲಾ ಎಂದಡೆ ಅವು ಬೇರಾಗಬಲ್ಲವೆ ? ಪರ ಶಿವನೆಂಬ ಅಂಬುಧಿಯಲ್ಲಿ ಸಕಲ ಬ್ರಹ್ಮಾಂಡಗಳಾದವಲ್ಲದೆ ಬೇರಾಗ ಬಲ್ಲವೆ ? ಇದ ಬೇರೆಂಬ ಅರುಮರುಳರ ನಾನೇನೆಂಬೆ? ವಿಶ್ವವ ತಿಳಿದು ನೋಡಲು ನಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗವು ತಾನೆ.

ಟೀ. ಸಮುದ್ರದಲ್ಲಿ ತೋಱುವ ನೊರೆ ತೆರೆ ಬುದ್ಬುದ ಫೇನತರಂಗ ತುಂತುರ್ವನಿಗಳು ಸಮುದ್ರದ ಉದಕವೆಯಲ್ಲದೆ ಬೇಱೊಂದುದಕವೆ ? ಅಲ್ಲಲ್ಲಾ. ಆ ಸಮುದ್ರದ ಉದಕವಾಗಿಯುೂ ಆ ಸಮುದ್ರವನಗಲಿ ಬೇಱಾದ ತುಂತುರ್ವನಿಗಳಿಗೆ ಆ ಸಮುದ್ರದ ಘನತೆಯ ಮಹತ್ವವಿಲ್ಲ. ಮತ್ತಾ ತುಂತುರ್ವನಿಗಳಿಗೆ ಪಥಕ್ರೀಯಿಂದ ಸಮುದ್ರವನೈದಿ ಬೆರೆದಂದು ಸಮುದ್ರವಪ್ಪಂತೆ ಅಂತು ಅಖಂಡ ಚೈತನ್ಯಾನಂದರಸಪರಿಪೂರ್ಣವಾದ ಪರಶಿವಸಮುದ್ರವಪ್ಪ ಶಿವಚೈತನ್ಯವು ತನ್ನ ಲೀಲೆಯಿಂದ ವಿಕರಿಸಿ ಸಾಕಾರವಾಗಿ ನಾನಾತ್ವವನೈದಿ ಪರಿಚ್ಛಿನ್ನಾತ್ಮರಾಗಿ ಜಗತ್ತಾಯಿತ್ತು. ಅಂತಾದ ಆತ್ಮರು ಜ್ಞಾನಕ್ರೀಯಿಂದಲೆಯ್ದಿ ಮತ್ತಾ ಪರಬ್ರಹ್ಮವೆಯಪ್ಪರು. ಅಂತು ಶಿವಾಂಶಿಕವಾದ ಶಿವಮಯವೀ ಜಗತ್ತೆಂಬುದೀ ವಚನದ ತಾತ್ಪರ್ಯಾರ್ಥ. ೭

ವ. ಶಿವ ಜಗವಾಗಬಲ್ಲ, ಶಿವ ಜಗವಾಗದಿರಲೂ ಬಲ್ಲ. ಶಿವ ರೂಪವಾಗಬಲ್ಲ, ಶಿವ ರೂಪವಾಗದಿರಲೂ ಬಲ್ಲ. ಶಿವನಜಾಂಡಕೋಟಿಗಳ ಮಾಡಬಲ್ಲ, ಮಾಡದಿರಲೂ ಬಲ್ಲ. ಶಿವ ಕೆಡಿಸಬಲ್ಲ, ಕೆಡಿಸದಿರಲೂ ಬಲ್ಲ. ಶಿವ ಜಂಗಮವಾಗಿ ಶಿವನ ಪೂಜಿಸಬಲ್ಲ, ಶಿವಲಿಂಗವಾಗಿ ತಾನೇ ಪೂಜಿಸಿಕೊಳ್ಳಬಲ್ಲ. ಶಿವ ಹೊಱಗಾಗಿ ಅನ್ಯವುಂಟೆಂಬ ವೇದವುಂಟೇ ? ಇಲ್ಲ. ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ವಿಶ್ವಕ್ಕೆಲ್ಲ ಮಾತಾಪಿತನು.

ಟೀ. ಪರಶಿವನು ತಾನೆ ತನ್ನ ಲೀಲಾಸ್ವತಂತ್ರತೆಯಿಂದ ಪೂಜ್ಯಪೂಜಕರಾಗಿರಬೇಕೆಂದು ಸಾಕಾರಮೂರ್ತಿಯಾಗುತ್ತವೆ ತನ್ನ ತದಂಶಕಲೆಯೊಳೊಂದ ಬೇರ್ಪಡಿಸಿ ಪರಿಚ್ಛಿನ್ನಾತ್ಮರಾಗಿ ನಾನಾತ್ವವನೈದಿ ಜಗತ್ತಾಯಿತ್ತು. ಅಂತಾದ ಜಗತ್ತಿನ ಉತ್ಪತ್ತ್ಯ ಸ್ಥಿತಿ ಸಂಹಾರಂಗಳಿಗೆ ತಾನೆ ಕರ್ತೃವಾಗಿಪ್ಪ, ತಾನೆ ಪೂಜ್ಯನಾಗಿಪ್ಪ. ತನ್ನ ತದಾಂಶವಾಗಿಪ್ಪ ಆತ್ಮರೆ ಪೂಜಕರಾಗಿಪ್ಪರು. ಅಂತು ಪರಶಿವನು ತಾನೆ ಲಿಂಗವಾಗಿ ಪೂಜ್ಯನಾದ ತಾನೆ ಆತ್ಮರಾಗಿ ಪೂಜಕರಾದ, ಭೇದದಿಂದ ಒಂದೆ ವಸ್ತು ಎರಡೆನಿಸಿ ಶಿವ ಜಗವಾದನೆಂಬುದೀ ವಚನದ ತಾತ್ಪರ್ಯಾರ್ಥ. ೮

ವ. ಹರಿ ಬ್ರಹ್ಮ ಧರೆಯಾಕಾಶವಿಲ್ಲದ ಭಸ್ಮಕ್ಕೆ ಸ್ಥಲವದು. ಅದಾದಿ ನೋಡಯ್ಯಾ. ಭಸ್ಮವನೆ ಮುಸುಳಿಸಿ ಲೋಕಂಗಳನೆ ಪಡೆದು ಸಕಲ ಜೀವರನಿಂತು ಮಾಡಿದರೊಳರೆ? ನಿನ್ನಿಚ್ಛೆ ನಿನಗೆ. ಸ್ವಯಂಭು ನೀನೆಯಾಗಿರ್ದೆಯಯ್ಯಾ ಕಪಿಲಸಿದ್ಧಮಲ್ಲಿನಾಥಯ್ಯಾ.

**ಟೀ.** ಪಂಚತತ್ತ್ವಂಗಳು ಮೊದಲಾದ ತತ್ತ್ವಮೂರ್ತಿಗಳಾರೂ ಇಲ್ಲದಂದು ಒಂದೆ ಪರಬ್ರಹ್ಮನಿದ್ದಿತ್ತು. ಆ ಪರಬ್ರಹ್ಮವೆಂಬುದೀಗ 'ಸ್ಥಲ'ವೆಂಬ ಶಬ್ದಕ್ಕರ್ಥ. ಅಂತು ಪರಬ್ರಹ್ಮವೆಂಬ ಸ್ಥಲವದು ಮೊದಲಿರ್ದ ವಸ್ತುವೆಂಬುದೀಗ 'ಅದಾದಿ ನೋಡಯ್ಯಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವು ತನ್ನ ಸ್ವೇಚ್ಛೆಯಿಂದ ತಾನೆ ಮಹಾಲಿಂಗವಾಯಿತ್ತೆಂಬುದೀಗ 'ನಿನ್ನಿಚ್ಛೆ ನಿನಗೆ ಸ್ವಯಂಭೂ ನೀನೆಯಾಗಿರ್ದೆಯಯ್ಯಾ' ಎಂಬ ಶಬ್ದಕ್ಕರ್ಥ. ಅಂತಾದ ಮಹಾಲಿಂಗದ ಚಿತ್ಪ್ರಕಾಶಾಂಗವೆ ಚಿದ್ಭಸ್ಮ. ಆ ಚಿದ್ಭಸ್ಮವೆನಿಸಿದ ಚಿತ್ಪ್ರಭಾಂಗದ ಚಿತ್ಕಲೆಯೊಂದ ಬೇರ್ಪಡಿಸಿ ಆ ಚಿತ್ಕಲೆಯ ಪರಿಚ್ಛಿನ್ನಾತ್ಮರ ಮಾಡಿ ತನ್ನ ನಿಜವ ಮರೆಸಿ ಲೋಕಲೌಕಿಕ ಜೀವಂಗಳೆನಿಸಿ ಸೃಷ್ಟಿಯಂ ಮಾಡಿದ ಮಹತ್ವ ಲಿಂಗಕ್ಕಲ್ಲದಿಲ್ಲವೆಂಬುದೀಗ 'ಭಸ್ಮವನೆ ಮಸುಳಿಸಿ ಲೋಕಂಗಳನೆ ಪಡೆದು ಸಕಲ ಜೀವರಸಿಂತು ಮಾಡಿದರೊಳರಿ' ಎಂಬ ಶಬ್ದಕ್ಕರ್ಥ. ಅಂತು ಲಿಂಗವು ತನ್ನ ಸ್ವೇಚ್ಛಾಲೀಲೆಯಿಂದ ತನ್ನ ಚಿತ್ಕಲೆಯನೆ ಪರಿಚ್ಛಿನ್ನಾತ್ಮರ ಮಾಡಿ ನೋಡಿ ವಿನೋದಿಸುತಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೯

**ವ.** ಒಂದೆರಡಾದುದನಾರೂ ಅರಿಯರು. ಅವೊಂದು ಒಂದೆಯಾಯಿತ್ತು. ತ್ರಿತತ್ತ್ವವಾಯಿತ್ತು. ವೇದಾತೀತವಾಯಿತ್ತು. ಭರಿತವಾಯಿತ್ತು. ಪ್ರಾದೇಶಿಕವಾಯಿತ್ತು. ಭಕ್ತಿಗೆ ಸಾಧ್ಯವಾಯಿತ್ತು. ಅದಕ್ಕೆ ಆಧಾರ ದೇಹವಾಯಿತ್ತು. ಅದು ಅಷ್ಟವಿಗ್ರಹಸ್ವರೂಪವಾಗಿರುತ್ತಿಪ್ಪುದು. ಮತ್ತಿದ್ದ ಒಂದು ಮಾಯಾಶಕ್ತಿಯಂ ಕೂಡಿ ಗುಣತ್ರಯಂಗಳಂ ಕೂಡಿ ನಾನಾತ್ಮನೆನಿಸಿಕೊಂಡು ವಿಷಯಾತ್ಮ ಇಂದ್ರಿಯಾತ್ಮ ಭೂತಾತ್ಮ ಜೀವಾತ್ಮ ಪರಮಾತ್ಮನೆನಿಸಿಕೊಂಡು ಪ್ರಾಣಾದಿವಾಯುಗಳಂ ಕೂಡಿಕೊಂಡು ಜಡಪ್ರಕೃತಿಗಳಂ ಹೊತ್ತುಕೊಂಡು ಸಂಕಲ್ಪ ವಿಕಲ್ಪವೆಂಬ ಉಭಯ ಕರ್ಮಂಗಳಂ ಕಲ್ಪಿಸಿ ನಾನಾ ಯೋನಿಪ್ರಾಪ್ತನಾಗುತ್ತಿರ್ದು ಲೋಕಾದಿ ಲೋಕಂಗಳೊಳು ತೊಳಲಿ ಬಳಲಿ ತನ್ನ ಮೊದಲ ಕೂಡುವ ಪ್ರಕಾರಮಂ ಬಯಸಿ ನಾನಾ ಪಥದಿಂದ ಅರಸಿ ಹರಿವುತ್ತಿಪ್ಪರಖಿಳ ಜೀವಿಗಳೆಲ್ಲರು. ಇದ ಬೆರಸದೆ ಬೆರಸಿದ ಸಂಗನಬಸವಣ್ಣನ ನೆನೆದವಂಗೆ ಇದು ಸಾಧ್ಯವೆಂದರಿದೆನಾಗಿ ನಾನು ಬಸವಣ್ಣನ ನೆನೆನೆನೆದು ಶರಣೆಂದು ಶುದ್ಧನಾದೆ ಕಾಣಾ ಗುಹೇಶ್ವರಾ.

**ಟೀ.** ಅನಾದಿಯಲ್ಲಿ ಆತ್ಮರುಗಳೂ ಇಲ್ಲ. ಮಾಯೆ ಮೊದಲಾದ ತತ್ತ್ವಂಗಳೇನೂ ಇಲ್ಲದಂದು ಒಂದೆ ಪರಬ್ರಹ್ಮವಿದ್ದು ತನ್ನ ಸ್ವಲೀಲೆಯಿಂದ ತಾನೆ ಲಿಂಗ

ವಾಗಿ ತಾನೆ ಆತ್ಮನೆಂಬ ಅಂಗವಾಗಿ ಎರಡಾಯಿತ್ತು. ಆ ಒಂದೇ ಎರಡಾದ ಭೇದವ ವೇದಾಂತಿಗಳು ಸಿದ್ಧಾಂತಿಗಳು ಮೊದಲಾದ ಇತರ ಮತವಾದಿಗಳು ಅಱಿಯರೆಂಬುದೀಗ 'ಒಂದೆರಡಾದುದನಾರೂ ಅಱಿಯರು' ಎಂಬ ಶಬ್ದಕ್ಕರ್ಥ. ಆ ಒಂದೇ ಎರಡಾದ ಪರಿಯೆಂತೆಂದಡೆ ಆ ಒಂದೆಯಾಗಿರ್ದ ಪರಬ್ರಹ್ಮವು ತನ್ನ ನಿಜದಲ್ಲಿ ಅಗಲಿಕೆಯಿಲ್ಲದೆ ಎಂತಿರ್ದಂತೆ ಅಖಂಡ ಲಿಂಗಮೂರ್ತಿಯಾಯಿತ್ತೆಂಬುದೀಗ 'ಆವೊಂದು ಒಂದೆಯಾಯಿತ್ತೆಂಬ ಶಬ್ದಕ್ಕರ್ಥ. ಅಂತಾದ ಲಿಂಗವು ತನ್ನ ಲೀಲೆಯಿಂದ ನಿಃಕಲನಾಗಿಪ್ಪ, ಸಕಲನಿಃಕಲನಾಗಿಯೂ ಇಪ್ಪ, ಸಕಲನಾಗಿಯೂ ಇಪ್ಪನೆಂಬುದೀಗ 'ತ್ರಿತತ್ವವಾಯಿತ್ತೆ'ಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗದ ಘನವ ವೇದಾಗಮಂಗಳು ವಚಿಸಿ ಹೇಳಲಱಿಯವು. ಆ ಲಿಂಗ ಪರಿಪೂರ್ಣವಾಗಿಪ್ಪುದು. ತಾನೊಂದೆಯಾಗಿಪ್ಪುದು. ಭಕ್ತಿಗೆ ಸಾಧ್ಯವಾಯಿತ್ತೆಂಬುದೀಗ 'ವೇದಾತೀತವಾಯಿತ್ತು, ಭರಿತವಾಯಿತ್ತು, ಪ್ರಾದೇಶಿಕವಾಯಿತ್ತು, ಭಕ್ತಿಗೆ ಸಾಧ್ಯವಾಯಿತ್ತೆ'ಂಬ ಶಬ್ದಕ್ಕರ್ಥ. ಅಂತಪ್ಪ ಮಹಾಘನಲಿಂಗದ ಚಿದಂಗವೆಂಬುದೀಗ 'ಅದಕ್ಕೆ ಆಧಾರ'ವೆಂಬ ಶಬ್ದಕ್ಕರ್ಥ. ಅಂತಾದ ಲಿಂಗದ ಚಿದಂಗವೆ ಅಷ್ಟತನುಗಳಾಗಿ ಲಿಂಗಕ್ಕೆ ಸ್ಥೂಲದೇಹವಾಯಿತ್ತೆಂಬುದೀಗ 'ಅದಕ್ಕೆ ಆಧಾರ ದೇಹವಾಯಿತ್ತು' ಎಂಬ ಶಬ್ದಕ್ಕರ್ಥ. 'ಅದು ಅಷ್ಟವಿಗ್ರಹಸ್ವರೂಪವಾಗಿರುತ್ತಿಪ್ಪುದು' ಎಂಬ ಶಬಕ್ಕರ್ಥ. ಅಂತು ಮಹಾಘನವಸ್ತು ಲೀಲೆಯಿಂದ ತಾನೇ ಲಿಂಗಮೂರ್ತಿಯಾಯಿತ್ತು. ತನ್ನ ತದಂಶವಪ್ಪ ಚಿಚ್ಚೈತನ್ಯ ಕಲೆಯೊಂದ ಬೇರ್ಪಡಿಸಿ ಆ ಚಿಚ್ಚೈತನ್ಯಕ್ಕೆ ಮಿಥ್ಯಾಮಾಯಾ ಸಂಬಂಧಮಂ ಮಾಡೆ ಗುಣತ್ರಯ ಸಂಬಧಿಯಾಗಿ ನಾನಾತ್ವವನೆಯ್ದಿ ಪರಿಚ್ಛಿನ್ನಾತ್ಮರಾಗಿ ದೇಹೋಹಮೆಂದು ಜೀವರಾಗಿ ತಮ್ಮ ನಿಜವ ಮಱೆದು ಪರಿಭವದ ಬಂಧನದಲ್ಲಿ ಸಿಕ್ಕಿ ತಾಪತ್ರಯಂಗಳಲ್ಲಿ ನೋವುತ್ತಿರ್ದ ಜೀವಿಗಳು ತಮ್ಮ ನಿಜವಪ್ಪ ಶಿವಪದವ ಕೂಡಬೇಕೆಂಬ ಅವಸ್ಥೆಯಿಂದ ಹಲವು ಮತಂಗಳಿಂದ ಸಾಧಿಸಲು ಆರಿಗೂ ಸಾಧ್ಯವಲ್ಲದಿರಲು ಇದನಱಿದು ಹಲವು ಮತಂಗಳ ಕೂಡದೆ ಲಿಂಗಾಂಗಸಂಬಂಧಿಯಾದ ಶರಣ ಸಂಗನಬಸವಣ್ಣನನೆ ಲಿಂಗವೆಂದಱಿದು ಶರಣುವೊಕ್ಕು ಲಿಂಗಾಂಗಸಂಬಂಧಿಯಾಗಿ [1]ಲಿಂಗಾಂಗ[1]ವಾದೆನೆಂದು ಪ್ರಭುದೇವರು ನುಡಿದರೆಂಬುದೀ ವಚನದ ತಾತ್ಪರ್ಯಾರ್ಥ. ೧೦

**ವ.** ಅಸ್ತಿ ಭಾತಿ ಎಂಬ ಎನ್ನ ಸತ್ಯದಲ್ಲಿ ನಾಮ ರೂಪೆಂಬ ಹುಸಿಯೆಂತು ಜನಿಸಿತ್ತೆಂದಱಿಯೆನಯ್ಯ. ಇಲ್ಲದ ಹೆಸರುಗಳ ಭಿತ್ತಿಯ ಚಿತ್ತಾರದಂತೆ ದೇಹ ನಾಮವೀ ತೆಱನೆಂದಱಿಯದೆ ತೊಳಲಿ ಬಳಲುತ್ತಿರ್ದೆನಯ್ಯಾ ಕೂಡಲ ಚೆನ್ನಸಂಗಯ್ಯಾ ಸಂಸಾರಬಂಧನವೆನಗಿದೆ ಕಂಡಯ್ಯ.

೧ ಲಿಂಗ (ರಾ, ಹು)

**ಟೀ.** ಪರಬ್ರಹ್ಮವು ಎಂದೂ ಉಂಟಾದುದು, ಚಿತ್ಪ್ರಕಾಶವನುಳ್ಳುದು ಎಂಬುದೀಗ 'ಅಸ್ತಿ ಭಾತಿ' ಎಂಬ ಶಬ್ದಕ್ಕರ್ಥ. ಅಂತು ಸತ್ತು ಚಿತ್ತಾನಂದ ನಿತ್ಯವನುಳ್ಳ ಪರಶಿವನು ಲೀಲೆಯಿಂದ ತನ್ನ ಚಿಚ್ಛೈತನ್ಯಾಂಶಕಲೆಯೊಂದ ಜೇರ್ಪ ಡಿಸೆ ಆತ್ಮನಾಯಿತ್ತು. ಅಂತಾದ ಆತ್ಮಂಗೆ ಅಹಂ ಮಮತೆಯನೆಯ್ದಿಪ್ಪ ಮಱವೆಯುಂ ಪುಟ್ಟಿಸಲು ಆ ಮಱವೆಯಿಂದ ನಾಮರೂಪಾದ ಹುಸಿದೇಹ ಹುಟ್ಟಿ ಆತ್ಮಂಗೆ ಅದೇ ಸಂಸಾರಬಂಧನವಾಗಲು ಆ ದೇಹ ಸಂಸಾರಬಂಧನ[1] ಹುಸಿಯೆಂದಱಿಯದೆ ಪರಿಭವಕ್ಕೆ ಬರುತ್ತಿಪ್ಪ ಜೀವಿಗಳು ತಾವು ಶಿವಾಂಶಿಕರೆಂದಱಿಯರು. ತಮಗೆ ಈ ದೇಹಸಂಬಂಧವೆಂತಾಯಿತ್ತೆಂಬುದ ತಿಳಿಯಲಱಿಯರೆಂಬುದೀ ವಚನದ ತಾತ್ಪರ್ಯಾರ್ಥ. ೧೧

ಅಂಗಸ್ಥಲ ಸಂಪೂರ್ಣ

**ಅಂತು ಸ್ಥಲ ೪ಕ್ಕಂ ಶ್ಲೋಕ ೪೪ಕ್ಕಂ ವಚನ ೪೨ಕ್ಕಂ**

**ಮಂಗಳಂ**

**ಶ್ರೀ**

೧. ಸಂಬಂಧ (ಎ)

## ೫. ಸಂಸಾರಸಂಬಂಧ ಸ್ಥಲ

❋

**ಸೂತ್ರ.** ಅಂತು ಮಹಾಘನಲಿಂಗವು ತನ್ನ ಸ್ವಲೀಲೆಯಿಂದ ಲಿಂಗಾಂಗ ಪೆರಡಾಗಿ ಉಪಸ್ಯೋಪಾಸಕನಪ್ಪ ಭೇದದಿಂದ ಆ ಮಹಾಘನಲಿಂಗವು ತನ್ನ ಪಂಚ ಸಾದಾಖ್ಯ ಮುಖಂಗಳಲ್ಲಿ ಪಂಚ ತತ್ತ್ವಂಗಳಂ ಪುಟ್ಟಿಸಿ ಆ ಪಂಚ ತತ್ತ್ವಂಗಳಿಂದ ಪಂಚವಿಂಶತಿ ತತ್ತ್ವಂಗಳಂ ಪುಟ್ಟಿಸಿ ಆ ಪಂಚವಿಂಶತಿ ತತ್ತ್ವದೇಹಮಂ ಆತ್ಮಂಗೆ ಸಂಬಂಧಿಸಿ ಆ ಸಂಬಂಧಿಸಿದ ದೇಹಕರಣಂಗಳಲ್ಲಿ ಅಹಂ ಮಮತೆಯನೆಯ್ದಿಪ್ಪ ಅಜ್ಞಾನವಮಂ ಪುಟ್ಟಿಸಿ ಜೀವನೆಂದೆನಿಸಿ ಆ ಜೀವಂಗೆ ಪುಣ್ಯಪಾಪವೆಂಬ ಕರ್ಮದ ಉದ್ಯೋಗಮಂ ಕೊಟ್ಟು ಪಾಶಬದ್ಧನ ಮಾಡಿ ಸುಖದುಃಖ ಬಂಧಮೋಕ್ಷ ಜನನ ಮರಣಂಗಳೆಂಬ ಭವವಾಲೆಗೊಳಗುಮಾಡಿ ಜೀವರನಾಡಿಸಿ ನೋಡುತ್ತಿಪ್ಪನು. ಆ ಮಹಾಲಿಂಗವು ತನ್ನ ಲೀಲಾವಿಲಾಸದಿಂದ ಇಂತು ಆತ್ಮಂಗೆ ದೇಹಸಂಸಾರ ಸಂಬಂಧಿಸಲು ಆ ಆತ್ಮನು ತನ್ನ ನಿಜವಂ ಮಱೆದು ದೇಹೋಹಮೆಂದು ದೇಹ ಸಂಸಾರಸಂಬಂಧಿಯಾದನಾಗಿ ಸಂಸಾರಸಂಬಂಧಸ್ಥಲ ಹೇಳಲಾದುದು.

**ಸಂಸಾರಸಂಬಂಧಸ್ಥಲಕ್ಕೆ ಶ್ಲೋಕ :**

ಸದ್ಯೋಜಾತೋ ವಾಮದೇವೋಽಘೋರಸ್ತತ್ಪುರುಷಾಹ್ವಯಃ
ಈಶಾನಶ್ಚೇತಿ ಪಂಚೈತೇ ಬ್ರಹ್ಮಸಂಜ್ಞಾಃ ಪ್ರಕೀರ್ತಿತಾಃ

**ಟೀ.** ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ ಎಂದಿಂತು ಪಂಚಬ್ರಹ್ಮಮೂರ್ತಿಗಳು ಹೇಳಲ್ಪಟ್ಟವು. ಆ ಪಂಚಬ್ರಹ್ಮಮೂರ್ತಿಗಳಿಂದ ಪಂಚಭೌತಿಕಂಗಳು ಪುಟ್ಟಿದವು. ೧

ಸದ್ಯೋಜಾತಸ್ತಥಾ ಭೂಮಿರ್ವಾಮದೇವೋ ಭವೇಜ್ಜಲಂ
ಅಘೋರಾದ್ವಹ್ನಿರಿತ್ಯುಕ್ತಸ್ತತ್ಪುರುಷಾದ್ವಾಯುರುಚ್ಯತೇ
ಈಶಾನಾದ್ಗಗನಾಕಾರಃ ಪಂಚಬ್ರಹ್ಮಮಯಂ ಜಗತ್

**ಟೀ.** ಸದ್ಯೋಜಾತ ಮುಖದಿಂದ ಪೃಥ್ವಿ ಪುಟ್ಟಿತ್ತು. ವಾಮದೇವ ಮುಖದಿಂದ ಅಪ್ಪು ಪುಟ್ಟಿತ್ತು. ಅಘೋರ ಮುಖದಿಂದ ಅಗ್ನಿ ಪುಟ್ಟಿತ್ತು. ತತ್ಪುರುಷ ಮುಖದಿಂದ ವಾಯು ಪುಟ್ಟಿತ್ತು. ಈಶಾನ ಮುಖದಿಂದ ಆಕಾಶ ಪುಟ್ಟಿತ್ತು. ಇದು ಕಾರಣ ಭೌತಿಕ ಜಗವೆಲ್ಲಾ ಪಂಚಬ್ರಹ್ಮಸ್ವರೂಪವೆಂದು ಅರಿವುದು. ೭

ನಿವೃತ್ತಿಃ ಪೃಥಿವೀ ಜ್ಞೇಯಾ ಪ್ರತಿಷ್ಠಾ ಚಾಪ ಉಚ್ಯತೇ
ವಿದ್ಯಾ ತೇಜೋ ವಿನಿರ್ದಿಷ್ಟಾ ವಾಯು ಶ್ಶಾಂತಿಃ ಪ್ರಕೀರ್ತಿತಾ
ಶಾಂತ್ಯತೀತಾ ಭವೇದ್ವ್ಯೋಮ ಕಳಾರೂಪಾಃ ಪ್ರಕೀರ್ತಿತಾಃ

**ಟೀ.** ನಿವೃತ್ತಿಕಲೆಯೇ ಪೃಥ್ವಿಯೆಂದರಿವುದು. ಪ್ರತಿಷ್ಠಾಕಲೆಯೇ ಉದಕವೆಂದರಿವುದು. ವಿದ್ಯಾಕಲೆಯೆ ಅಗ್ನಿಯೆಂದು ವಿನಿರ್ದಿಷ್ಟಾ ಹೇಳಲ್ಪಟ್ಟಿತ್ತು. ಶಾಂತಿ ಕಲೆಯೆ ವಾಯುವೆಂದು ಹೇಳಲ್ಪಟ್ಟಿತ್ತು. ಶಾಂತ್ಯತೀತ ಕಲೆಯೆ ಆಕಾಶವೆಂದು ಹೇಳಲ್ಪಟ್ಟಿತ್ತು. ಹೀಗೆ ಪಂಚತತ್ತ್ವಂಗಳು ಪಂಚಕಲಾರೂಪಂಗಳೆಂದು ಹೇಳಲ್ಪಟ್ಟುವು. ೮

ಮತ್ತಂ ಪಂಚಭೌತಿಕಮಯವಾದಂಥ ಜೀವನೋದಯದ ಸಂಸಾರ ಸಂಬಂಧ ಹೇಗೆಂದಡೆ :

ಸರ್ವಭಾವಪದಾತೀತಂ ಜ್ಞಾನರೂಪಂ ನಿರಂಜನಂ
ವಾರೀವ ಸ್ಫುರಿತಂ ಸ್ವಸ್ಮಿನ್ ತತ್ರಾಹಂಕೃತಿರುತ್ಥಿತಂ
ಪಂಚಾತ್ಮಕಮಭೂತ್ಪಿಂಡಂ ಧಾತುಬದ್ಧಂ ಗುಣಾತ್ಮಕಂ
ಸುಖದುಃಖಸಮಾಯುಕ್ತಂ ಜೀವಭಾವನವ್ಯಾಕುಲಂ
ತೇನಾತ್ಮಾ ಜೀವ ಇತ್ಯುಕ್ತೋ ವಿಶುದ್ಧೇ ಪರಮಾತ್ಮನಿ

**ಟೀ.** ಸಮಸ್ತಭಾವಪದಂಗಳ ಮೀರಿದಂಥಾ ಜ್ಞಾನಸ್ವರೂಪನಾದ ನಿರಂಜನ ವಸ್ತುವು ಶರಧಿಯಲ್ಲಿ ಮರುತಾಸ್ಪಂದದಿಂದ ತರಂಗಾದಿ ನಾನಾಕಾರಂ ತೋರಿದ ಹಾಗೆ ತನ್ನ ವೈಚಿತ್ರಶಕ್ತಿಗಳೆಂಬ ವಾಯುಸ್ಪಂದದಿಂದ ತನ್ನಲ್ಲಿ ಜಗತ್ತು ಸ್ಫುರಿಸಿತ್ತು. ಅಲ್ಲಿ ಶಿವಾಂಶವಾದ ಹಮ್ಮು ಪುಟ್ಟಿ ಆ ಹಮ್ಮಿನಿಂದ ಧಾತುಗಳಿಂದ ಬದ್ಧನಾಗಿ ತ್ರಿಗುಣಾತ್ಮಕವಾಗಿ ಪಂಚಭೂತಾತ್ಮಕವಾದ ಪಿಂಡವಾಯಿತ್ತು.

ಈ ಹಮ್ಮು ನಾನು ಜೀವನು ಎಂದು ಬಗೆದಿಹ ವ್ಯಾಕುಲದಿಂದ ನಿರ್ಮಲವಾದ ಪರ ಮಾತ್ಮ ತತ್ತ್ವದಲ್ಲಿ ಸುಖದುಃಖಂಗಳೊಡನೆ ಯಾವಾಗಲೂ ಕೂಡಲುಪಟ್ಟ ಜೀವ ತ್ವವು ಹೇಳಲ್ಪಟ್ಟುದು. ೪

ಸೋಽಯಮಾತ್ಮಾ ಶಿವಸ್ಸಾಕ್ಷಾಚ್ಛಿವಸ್ಯಾಂಶೋಽಪಿ ತತ್ತ್ವತಃ
ವ್ಯವಹಾರದಶಾಯಾಂ ತು ಸಂಸಾರೀವ ಪ್ರಕಾಶತೇ

ಟೀ. ಆ ಪ್ರಸಿದ್ಧವಾದ ಅಯಂ ಆತ್ಮಾ-ಈ ಆತ್ಮನು, ತತ್ತ್ವತಃ-ಪರಮಾರ್ಥ ದಿಂದ, ಸ್ವಯಂ-ತಾನು, ಸಾಕ್ಷಾತ್-ಪ್ರತ್ಯಕ್ಷವಾದ, ಶಿವಸ್ಯ-ಶಿವನ, ಅಂಶೋಽಪಿ ಅಂಶವಾಗಿರ್ದು, ವ್ಯವಹಾರದಶಾಯಾಂ ತು-ವ್ಯವಹಾರಾರ್ಥವಾದ ಅವಸ್ಥೆಯಲ್ಲಿ, ಆತ್ಮಾ-ಜೀವನಾಗಿ, ಸಂಸಾರೀವ-ಸಂಸಾರಿಯೆಂಬ ಹಾಂಗೆ, ಪ್ರಕಾಶತೇ-ಕಾಣಿಸು ತ್ತಿಹನು. ೫

ಸಂಸಾರೋಽವಿದ್ಯಯಾ ಚಾಸ್ಯ ಸತ್ಯವತ್ ಪರಿಕಲ್ಪಿತಃ
ದೇಹೇಂದ್ರಿಯಾದಿ ಸಂಘಾತೇಽಹಂ ಮಮ ಭ್ರಾಂತಿರೂಪತಃ

ಟೀ. ಅಸ್ಯ-ಈ ಆತ್ಮಂಗೆ, ದೇಹೇಂದ್ರಿಯಾದಿ ಸಂಘಾತೇ, ದೇಹ-ದೇಹದ, ಇಂದ್ರಿಯಾದಿ-ಇಂದ್ರಿಯಂಗಳು ಮೊದಲಾದ, ಸಂಘಾತೇ-ಸಮೂಹದಲ್ಲಿ, ಅಹಂ ಮಮ ಭ್ರಾಂತಿರೂಪತಃ, ಅಹಂ-ನಾನು, ಮಮ-ನನ್ನದು ಹೀಂಗೆ ಎಂಬ ಭ್ರಾಂತಿ ರೂಪತಃ-ಮಿಥ್ಯಾಬುದ್ಧಿಸ್ವರೂಪವಾಗಿ ಉಳ್ಳ, ಅವಿದ್ಯಯಾ ಚ-ಅಜ್ಞಾನದಿಂದವೆ, ಸಂಸಾರಃ-ಸಂಸಾರಿಯಹವು, ಸತ್ಯವತ್-ಯಥಾರ್ಥವೆಂಬ ಹಾಂಗೆ, ಪರಿಕಲ್ಪಿತಃ-ಕಲ್ಪಿಸಲ್ಪಟ್ಟಿತು. ೬

ಸ್ವಸ್ಮಿನ್ನವಸ್ಥಿತಾವಿದ್ಯಾಮೋಹಿತಃ ಪುರುಷಸ್ಸ್ವಕಂ
ಶಿವತ್ವಂ ಸ್ವಪರಾಂ ಭಕ್ತಿಮವಿಜ್ಞಾಯ ಸ್ವಕರ್ಮಣಾ

ಟೀ. ಪುರುಷಃ-ಪುರುಷನು, ಸ್ವಸ್ಮಿನ್-ತನ್ನಲ್ಲಿ, ಅವಸ್ಥಿತಾ-ಇದ್ದಂಥಾ, ಅವಿದ್ಯಾ-ಅಜ್ಞಾನದಿಂದ, ಮೋಹಿತಃ-ಮೂಢನಾಗಿ ಮಾಡಲ್ಪಟ್ಟಾತನಾಗಿ, ಸ್ವಕಂ-ತನ್ನದಾದ, ಶಿವತ್ವಂ-ಶಿವತ್ವವನು, ಸ್ವ-ತನ್ನ, ಪರಾಂ-ಉತ್ಕೃಷ್ಟವಾಗಿ ತಾತ್ಪರ್ಯ ವುಳ್ಳಂಥ, ಭಕ್ತಿಂ-ಭಕ್ತಿಯನು, ಸ್ವಕರ್ಮಣಾ-ತನ್ನ ಕರ್ಮದಿಂದ, ಅವಿಜ್ಞಾಯ-ಅಱಿಯದೆ, ದೇಹಿ-ಜೀವನಾಗಿ ಇದ್ದನು. ೭

**ಸಂಸಾರಸಂಬಂಧಸ್ಥಲಕ್ಕೆ ವಚನ :**

**ವ.** ಪರಶಿವನ ಚಿತ್ಕಿರಣಂಗಳು ಈ ಜಗತ್ತಿನ ಶಿರೋಮಧ್ಯಕ್ಕೆ ಬಿಂಬಿಸಿ, ಅದಕ್ಕೆ ಚೈತನ್ಯಗೊಳಿಸಿದಲ್ಲಿ ಅದೇ ಪರಮಾತ್ಮನಾಯಿತ್ತು. ಆ ಪರಮಾತ್ಮನಾ ಜಗತ್ತಿನ ಭ್ರೂಮಧ್ಯಕ್ಕೆ ಬಿಂಬಿಸಿದಲ್ಲಿ ಅದೇ ಅಂತರಾತ್ಮನಾಯಿತ್ತು. ಆ ಅಂತರಾತ್ಮನಾ ಜಗತ್ತಿನ ಹೃನ್ಮಧ್ಯಕ್ಕೆ ಬಿಂಬಿಸಿದಲ್ಲಿ ಅದೇ ಜೀವಾತ್ಮನಾಯಿತ್ತು. ಆ ಜೀವಾತ್ಮನೆ ಘಟ, ಅಂತರಾತ್ಮನೆ ಪ್ರಾಣ, ಪರಮಾತ್ಮನೆ ಸರ್ವಸಾಕ್ಷಿಕ, ಆ ಸಾಕ್ಷಿಕನೆ ವಸ್ತು. ಆ ಪರವಸ್ತು ಜೀವಾಂತರಾದಿಗಳೆಂಬ ಅಂಗಪ್ರಾಣಕ್ಕೆ ಪಂಚವಿಂಶತಿ ತತ್ತ್ವಂಗಳೆಂಬ ತುಷಾಪಾಶಮಂ ತೊಡಿಸಿ, ಅಂತದನೆ ಪಶುವೆನಿಸಿ, ತಾನದಕ್ಕೆ ಪತಿಯಾಗಿ, ಅಲ್ಲಿ ನಾನಾ ವಿನೋದಂಗಳಂ ನೋಡಿ ವಿನೋದಿಸುತ್ತ ಬಸವಪ್ರಿಯ ಕೂಡಲ ಚೆನ್ನಸಂಗಯ್ಯನಿಂತೀಪರಿಯಲ್ಲಿ ಆಡಿಸುತ್ತಿರ್ದ ಸರ್ವ ಜಗತ್ತ.

**ಟೀ.** ಅಖಂಡ ಚಿಚ್ಚೈತನ್ಯ ಚಿತ್ ಪ್ರಭಾಪೇಕ್ಷೆಯಾಗಿಪ್ಪ ಪರಶಿವನು ತನ್ನ ಸ್ವಲೀಲೆಯಿಂದ ಚಿತ್ ಪರಮಲಿಂಗವಾಗುತ್ತ ಸ್ಫುರಿಸಿ ಪ್ರಭಾಸಿಸಿದಲ್ಲಿ ಚಿಚ್ಚೈತನ್ಯಾಣುಕೋಟಿಗಳೆದ್ದು ಚೈತನ್ಯಾಣುರೂಪಗಳಾಗಿ ಬಿಂಬಿಸಿ ತೋರಲು, ಆ ತೋರಿದ ಚಿದಣುಬಿಂದುಗಳಿಗೆ ಪಂಚವಿಂಶತಿ ತತ್ತ್ವದೇಹಂಗಳಂ ಸಂಬಂಧಿಸಿ, ಜೀವಪ್ರಾಣಂಗಳೆನಿಸಿ, ಜಗತ್ತನಾಡಿಸಿ ನೋಡಿ ವಿನೋದಿಸುತ್ತ ಪಶುಪತಿಯಾಗಿಪ್ಪ ಪರಮಲಿಂಗವೆಂಬುದೀಗ ಈ ವಚನದ ತಾತ್ಪರ್ಯಾರ್ಥ.

**ವ.** ಅಕಲ್ಪಿತ ನಿತ್ಯ ನಿರಂಜನ ನಿಸ್ಸೀಮ ನಿರವಯ ಅಖಂಡಪರಿಪೂರ್ಣ ಪರಂಜ್ಯೋತಿಯಾದ ಮಹಾಘನವಸ್ತುವಿನಲ್ಲಿ ಪರಮಾತ್ಮನುತ್ಪತ್ಯ. ಆ ಪರಮಾತ್ಮನಿಂದ ಅಂತರಾತ್ಮನುತ್ಪತ್ಯ. ಆ ಅಂತರಾತ್ಮನಿಂದ ಜೀವಾತ್ಮನುತ್ಪತ್ಯ. ಈ ತ್ರಯಾತ್ಮರೊಳಗೆ ಜೀವಾಂತರಾತ್ಮಾದಿಗಳೆ ಪಾಶಬದ್ಧರು. ಪರಮಾತ್ಮನೆ ಪಾಶಮುಕ್ತನು. ಈ ಸಂಚವನರಿದ ದ್ವಂದ್ವರಹಿತ ತಾನೆ ನಮ್ಮ ಗುಹೇಶ್ವರ ಲಿಂಗದಲ್ಲಿ ಯಂತ್ರವಾಹಕನೆನಿಸುವನು.

**ಟೀ.** ಅಖಂಡಾದ್ವಯ ನಿತ್ಯ ನಿರವಯ ಪರಿಪೂರ್ಣ ಚೈತನ್ಯವಪ್ಪ ಮಹಾಘನವಸ್ತು ತನ್ನ ಸ್ವಲೀಲೆಯಿಂದ ತನ್ನ ಘನತೆಯಲ್ಲಿ ತಾನೆ ಘನ ತೇಜೋಮೂರ್ತಿಯಾದ ಪರಮಾತ್ಮಲಿಂಗವಾಯಿತ್ತು. ಆ ಪರಮಾತ್ಮಲಿಂಗವಾದ ಘನತೇಜಸ್ಫುರಣೆ

ಯಲ್ಲಿ ಸ್ಫುರಿಸಿದ ಚಿಚ್ಚೈತನ್ಯಾಣುರಜಧೂಮ್ನ ಅಸಂಖ್ಯಕೋಟಿಗಳಾಗಿ ತೋಱೆ ಆ ತೋಱಿದ ಚಿಚ್ಚೈತನ್ಯಾಣುಗಳಿಗೆ ಪಂಚವಿಂಶತಿ ತತ್ತ್ವದೇಹಪಾಶಮಂ ಸುತ್ತಿ ಪಾಶಬದ್ಧರಂ ಮಾಡಿ ಆ ಮಾಡಿದ ತನುಭೇದದಿಂದ ಜೀವಾಂತರಾತ್ಮರೆನಿಸಿ ಪಾಶ ಬದ್ಧರಾದ ಜಗವಾಯಿತ್ತು. ಅಂತು ಮಾಡಿದ ಪರಮಾತ್ಮಲಿಂಗವು ತಾನು ಪಾಶ ವಿರಹಿತನಾಗಿಪ್ಪನು. ಅಂತು ಜೀವಾಂತರಾತ್ಮರುಗಳ ಪಾಶಕ್ಕೆ ಹೊಱಗಾಗಿಹ ಸಂಜ ವನಱಿದಿಹ ಪರಮಾತ್ಮಲಿಂಗವೆ ಸರ್ವಚೈತನ್ಯನೆಂಬುದೀ ವಚನದ ತಾತ್ಪರ್ಯಾರ್ಥ.

೯. ಪರಮಾತ್ಮನ ಪ್ರತಿಲಹರಿಯಿಂದ ಅಂತರಾತ್ಮನುತ್ಪತ್ಯ. ಅಂತರಾತ್ಮನ ಪ್ರತಿಲಹರಿಯಿಂದ ಜೀವಾತ್ಮನುತ್ಪತ್ಯ. ಅಂತಪ್ಪ ಜೀವಾಂತರಾತ್ಮಾದಿ ಗಳು ಅಂಗ ಪ್ರಾಣವಾದಲ್ಲಿ ಒಂದೆಯೆನಿಸಿದರು. ಆ ಒಂದೆಯೆಂಬ ತಾಮಸ ಜೀವನು ಅಂಗನೆಯರ ಸಂಗ ಮೊದಲಾದ ನಾನಾ ದುಃಖಂಗ ಳಲ್ಲಿ ನೋವುತ್ತ, ನಾನಾ ಯೋನಿಗಳಲ್ಲಿ ಜನಿಸುತ್ತ, ರೌರವನರಕದಲ್ಲಿ ಆಳುತ್ತ ಮುಳುಗುತ್ತಲಿಹನು. ಆ ಪರಮಾತ್ಮನು ಜೀವಾತ್ಮನ ಶಿರೋ ಮಧ್ಯದಲ್ಲಿರ್ದು ನಾಹಂ ಎನ್ನದೆ ಸೋಹಂ ಎನ್ನುತ್ತ ಸಿಮ್ಮಲಿಗೆಯ ಚೆನ್ನರಾಮನೆಂಬ ಅಖಂಡ ಲಿಂಗದೊಳಗೆ ನಿತ್ಯತ್ವವನೆಯ್ದಿ ಎಡೆಬಿಡ ವಿಲ್ಲದೆ ಪರಮ ಸಂತೋಷದೊಳಿದ್ದಿತ್ತು.

೬೦. ನಿಃಕಲವಸ್ತು ತನ್ನ ಲೀಲೆಯಿಂದ ಅಖಂಡ ತೇಜೋಮೂರ್ತಿಯಾದ ಮಹಾಲಿಂಗವಾಯಿತ್ತು. ಆ ಮಹಾಲಿಂಗವೆ ಚಿದಾತ್ಮಸ್ವರೂಪವಾಗಿ ಸದಾಶಿವನೆನಿ ಸಿದ. ಆ ಸದಾಶಿವನೆಂಬಾತನಿಗೆ ಪರಮಾತ್ಮನು. ಅಂತಪ್ಪ ಪರಮಾತ್ಮಲಿಂಗವು ತಾನೇ ಸೆವ್ಯನಪ್ಪ ಪತಿಯಾಗಿ ಇರಬೇಕೆಂದು ತನ್ನಲ್ಲಿ ಸೇವಕರಪ್ಪ ಆತ್ಮರುಗಳು ಇರಬೇಕೆಂಬ ಪ್ರತಿಬುದ್ಧಿಯ ರಾಜಸಾಹಂಕಾರದೋಱಲು ಆ ತೋಱಿದ ಪ್ರತಿ ಬುದ್ಧಿಯ ಚಿತ್ತುವ ಬೇರ್ಪಡಿಸೆ, ಆ ಚಿತ್ತು ಪರಿಚ್ಛಿನ್ನಾತ್ಮರುಗಳಾಗಿ, ಸೂಕ್ಷ್ಮಾತ್ಮ ರೆನಿಸಲು ಆ ಸೂಕ್ಷ್ಮಾತ್ಮರಿಗೆ ಶಿವಾಜ್ಞೆಯಿಂದ ತನು ಸಂಬಂಧವಾಗಲು ಆ ತನು ತನ್ನದೆಂಬ ಅಹಂಭಾವದ ಮಱವೆಯಿಂದ ಜೀವನೆನಿಸಿದನು. ಆ ಜೀವನು ದೇಹೇಂದ್ರಿಯ ವಿಷಯಸುಖಂಗಳಿಂದ ದುಃಖವನೆಯ್ದಿ ಪರಿಭವಕ್ಕೆ ಬರುತ್ತಿಪ್ಪರಾ ಜೀವರು. ಅಂತಪ್ಪ ಜೀವರ ಬ್ರಹ್ಮಸ್ಥಾನದಲ್ಲಿ ಆ ಪರಮಾತ್ಮಲಿಂಗವಿರ್ದು, ಸರ್ವ ಸಾಕ್ಷಿಕನಾಗಿ, ತಾನು ಶಿವನೆಂಬ ನಿಜದ ಅಱಿವುಳ್ಳವನಾಗಿ, ತನ್ನ ನಿಜಾನಂದಸುಖವ ನಗಲದೆಯಿರ್ದನಾಗಿ ಸಾಕಾರದ ಸುಖದ ಪರಿಣಾಮದಲ್ಲಿರ್ದು ನಿರ್ಲೇಪನಾಗಿಹ ನೆಂಬುದೀ ವಚನದ ತಾತ್ಪರ್ಯಾರ್ಥ.

ವ. ಜಗತ್ತೆಂಬ ಯಂತ್ರದ ಹಾಹೆಗೆ ಅಜ್ಞಾನವೆಂಬ ತುಷವ ತೊಡಿಸಿ, ಅಹಂ ಮಮತೆಯೆಂಬ ಸೊಕ್ಕನಿಕ್ಕಿ, ಬಾರದ ಬಟ್ಟೆಯಲ್ಲಿ ಬರಿಸಿ, ಕಾಣದ ದುಃಖವ ಕಾಣಿಸಿ, ಉಣ್ಣದ ಅಪ್ಯಾಯವನುಣಿಸಿ ಮಾರಾರಿ ವಿನೋದಿಸಿದೆ ನೀ ಕೂಡಲಸಂಗಮದೇವಾ.

ಟೀ. ಪರಶಿವನು ತನ್ನ ಚಿದ್ವಿಲಾಸದಿಂದಾದ ಆತ್ಮರುಗಳಿಗೆ ತನ್ನ ನಿಜವ ಮರೆಸುವ ಅಜ್ಞಾನಮಂ ಪುಟ್ಟಿಸಿ, ಅಹಂ ಮಮತೆಯನೆಯ್ದಿಸಿ, ತನುವಾಸನಾ ಸಂಬಂಧಿಗಳಂ ಮಾಡಿ, ಜನನ ಮರಣಕ್ಕೆ ತಂದು, ಶಿವನು ನೋಡಿ ವಿನೋದಿಸುತ್ತಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೪

ವ. ತನುವಿಕಾರ ಮನವಿಕಾರ ಜನನಮರಣಸ್ಥಿತಿಕಾರಣ ಹೊನ್ನ ತೋರಿದೆ ಜಗದ ಕಣ್ಣ ಮೊದಲಿಗೆ, ಹೆಣ್ಣ ಸುಳಿಸಿದೆ ಜಗದ ಕಣ್ಣ ಮೊದಲಿಗೆ. ಮಣ್ಣ ಹರವಿದೆ ಜಗದ ಕಣ್ಣ ಮೊದಲಿಗೆ. ತನ್ನುವ ತಪ್ಪಿಸಿ ಜಗವ ಸಂಸಾರಕೊಪ್ಪಿಸಿ ಸುಣ್ಣನೆ ಹೋದನುಪಾಯದಿ ಸೊಡ್ಡಳಾ !

ಟೀ. ಪರಶಿವನು ತನ್ನ ಚಿದಾಂಶಿಕರಾದ ಆತ್ಮರುಗಳಿಗೆ ತನ್ನ ನಿಜವ ಮರೆಸಿ ಹೊನ್ನು ಹೆಣ್ಣು ಮಣ್ಣೆಂಬ ಸಂಸಾರ ವಿಷಯಸುಖಕ್ಕೆ ಮುಚ್ಚಿಸಿ, ಜೀವರ ಜನನ ಮರಣಕ್ಕೆ ತಂದು, ಜೀವರನಾಡಿಸಿ ನೋಡುತ್ತ ಶಿವನು ತಾ ಭವವಿರಹಿತನಾಗಿ ವಿನೋದಿಸುತ್ತಿಹನೆಂಬುದೀ ವಚನದ ತಾತ್ಪರ್ಯಾರ್ಥ. ೫

ವ. ವಾರಿ ಬಲಿದು ವಾರಿ ಕಲ್ಲಾದಂತೆ ಶೂನ್ಯವೇ ಸ್ವಯಂಭುವಾಯಿತ್ತು. ಆ ಸ್ವಯಂಭುಲಿಂಗದಿಂದಾಯಿತ್ತು ಮೂರ್ತಿವತ್ತು. ಆ ಮೂರ್ತಿಯಿಂದಾಯಿತ್ತು ವಿಶ್ವೋತ್ಪತ್ತಿ. ಆ ವಿಶ್ವೋತ್ಪತ್ತಿಯಿಂದಾಯಿತ್ತು ಸಂಸಾರ. ಆ ಸಂಸಾರದಿಂದಾಯಿತ್ತು ಮುಜನೆ. ಆ ಮುಜನೆಯೆಂಬ ಮಹಾಮಾಯೆ ವಿಶ್ವವ ಮುಸುಕಿದಲ್ಲಿ ನಾ ಬಲ್ಲೆ ಬಲ್ಲಿದರೆಂಬ ಅರುಹಿರಿಯರೆಲ್ಲ ತಾಮಸಕ್ಕೊಳಗಾಗಿ ಮೀನಕೇತನ ಬಲೆಗೆ ಸಿಲುಕಿ ಮಾಯೆಯ ಬಾಯ ತುತ್ತಾದರಲ್ಲಾ ಗುಹೇಶ್ವರಾ!

ಟೀ. ವಾರಿ ಬಲಿದು ವಾರಿ ಕಲ್ಲಾದಂತೆ ಸರ್ವತತ್ತ್ವಂಗಳೇನೂ ಇಲ್ಲದೆ ನಿಷ್ಕಲವಸ್ತುವೊಂದೆ ಇರ್ದುದು ತನ್ನ ಸ್ವಲೀಲೆಯಿಂದ ತಾನೆ ಅಖಂಡ ಗೋಳಕಾಕಾರವಪ್ಪ ಮಹಾಲಿಂಗವಾಯಿತ್ತು. ಆ ಮಹಾಲಿಂಗವು ಪಂಚಸಾದಾಖ್ಯ ಮುಖವಸ್ತುವಿ ಸದಾಶಿವನಾಯಿತ್ತು. ಅಂತಪ್ಪ ಸದಾಶಿವನು ತಾನೆ ಸೇವ್ಯನಾಗಿ ತನಗೆ ಸೇವಕ

ರಿರಬೇಕೆಂಬ ರಾಜಸಲೀಲಾವಿಲಾಸದ ನೆನಹುದೋಱಿ ಸದಾಶಿವನು ತನ್ನ ತದಂಶ ಕಲೆಯೊಂದ ಬೇರ್ಪಡಿಸಿ ಪರಿಚ್ಛಿನ್ನಾತ್ಮರಂ ಮಾಡಿ, ಆಯಾತ್ಮರಿಗೆ ಪಂಚವಿಂಶತಿ ದೇಹಸಂಸಾರ ಸಂಬಂಧಮಂ ತನ್ನಲ್ಲಿಯೆ ಪುಟ್ಟಿಸಿ, ಆ ಸಂಸಾರದಿಂದ ತನ್ನ ನಿಜವ ಮಱೆದಿಪ್ಪ ಮಱವೆಯುಂ ಪುಟ್ಟಿಸಿ, ಆ ಮಱವೆಯನೆ ಮಹಾಮಾಯೆಯೆನಿಸಿ, ಆ ಮಾಯೆಗೆ ಸರ್ವಾತ್ಮರ ಗ್ರಹಿಸಿಪ್ಪ ಮಹತ್ವವನಿತ್ತನಾಗಿ ಶಿವನು ಅಂತಪ್ಪ ಮಾಯಾ ಬದ್ಧರು ಮುಕ್ತರು ಎನ್ನದೆ ಊಚ ನೀಚವ ನೋಡದೆ ಪಂಚೇಂದ್ರಿಯ ವಿಷಯ ಸುಖಭ್ರಾಂತಿಯಪ್ಪ ಅಜ್ಞಾನಮಂ ಪುಟ್ಟಿಸಿ ಸರ್ವರನು ಕಬಳೀಕರಿಸಿದ ಮಾಯೆಯ ನೋಡಿ ಶಿವನು ಮಾಯಾವಿಲಾಸಿಯಾಗಿಹನೆಂಬುದೀ ವಚನದ ತಾತ್ಪರ್ಯಾರ್ಥ. ೬

ವ. ಕಾಯದ ಮೊದಲಿಂಗೆ ಬೀಜವಾವುದೆಂದಱಿಯದೀ ಲೋಕ. ಇಂದ್ರಿಯಂಗಳು ಬೀಜವಲ್ಲ. ಆ ಕಳಾಭೇದವಲ್ಲ. ಸ್ವಪ್ನ ಬಂದೆಱಗಿತಲ್ಲಾ! ಇದಾವಂಗೂ ಶುದ್ಧ ಸುಯಿಧಾನವಲ್ಲ ಕಾಣಾ ಗುಹೇಶ್ವರಾ.

ಟೀ. ಶಿವಾಂಶಿಕರಾದ ಆತ್ಮರುಗಳಿಗೆ ತನುಸಂಬಂಧದ ಜನನಕ್ಕೆ ಮೂಲ ವಾವುದೆಂದಡೆ ಇಂದ್ರಿಯಂಗಳಿಂದುದಯವಲ್ತು. ಅದೇನು ಕಾರಣವೆಂದಡೆ ಆ ಇಂದ್ರಿಯಂಗಳು ಜಡವಿಷಯಂಗಳಾದ ಕಾರಣವೆಂಬುದೀಗ 'ಕಾಯದ ಮೊದಲಿಂಗೆ ಇಂದ್ರಿಯಂಗಳು ಬೀಜವಲ್ಲ' ಎಂಬ ಶಬ್ದಕ್ಕರ್ಥ. ಆತ್ಮನ ಕಲಾ ಭೇದದಿಂದಾದುದೂ ಅಲ್ಲ. ಅದೇನು ಕಾರಣವೆಂದಡೆ ಆತ್ಮನು ನಿರ್ಮಲನಪ್ಪ ಶಿವಕಲಾಂಶಿಕನಾದ ಕಾರಣವೆಂಬುದೀಗ 'ಆ ಕಳಾಭೇದವಲ್ಲ' ಎಂಬ ಶಬ್ದಕ್ಕರ್ಥ. ಈ ದೇಹ ಸಂಬಂಧದುತ್ಪತ್ತಿ ಏತಱಿಂದಾಯಿತ್ತೆಂದಡೆ ಶಿವ ತನ್ನ ತದಾಂಶವಾದ ಆತ್ಮರಿಗೆ ತಾನೆ ಮಱವೆಯ ಪುಟ್ಟಿಸಲು ಆ ಮಱವೆಯೇ ಆತ್ಮಂಗೆ ಎಡೆಯೊಕ್ಕ ಕಾರಣ ತಾನು ಶಿವಾಂಶಿಕನೆಂಬುದ ಮಱೆದು ದೇಹೋಽಹಂ ಎಂದಲ್ಲಿ ದೇಹಭಾವಪ್ರದಯವಾಯಿ ತ್ತೆಂಬುದೀಗ 'ಸ್ವಪ್ನ ಬಂದೆಱಗಿತಲ್ಲಾ' ಎಂಬ ಶಬ್ದಕ್ಕರ್ಥ. ಅಂತು ಶಿವಾಜ್ಞೆಯಿಂದ ಆತ್ಮಂಗೆ ಬಂದ ಮಱವೆಯೆ ದೇಹದ ಜನನಕ್ಕೆ ಮೊದಲೆಂಬುದನಾರಿಗೆಯೂ ಅಱಿ ಯಬಾರದು. ಆ ಮಱವೆಯನಾರೂ ಸಂಸ್ಕಾರವ ಮಾಡಿ ಜನನ ರಹಿತರಾಗಬಾರ ದೆಂಬುದೀಗ 'ಇದಾವಂಗೂ ಶುದ್ಧ ಸುಯಿಧಾನವಲ್ಲ ಕಾಣಾ' ಎಂಬ ಶಬ್ದಕ್ಕರ್ಥ. ೭

ವ. ಗಗನದ ಮೇಲೊಂದು ಅಭಿನವ ಗಿಳಿ ಹುಟ್ಟಿ ಸಯ ಸಂಭ್ರಮದಲ್ಲಿ ಮನೆಯ ಮಾಡಿತ್ತು. ಒಂದು ಗಿಳಿ ಇಪ್ಪತ್ತೈದು ಗಿಳಿಯಾಯಿತ್ತು. ಬ್ರಹ್ಮನಾ ಗಿಳಿಗೆ ಪಂಜರವಾದ, ವಿಷ್ಣುವಾ ಗಿಳಿಗೆ ಕೊಱೆಕೂಳಾದ,

ರುದ್ರನಾ ಗಿಳಿಗೆ [೧]ಕೋಳುವೋದ[೧]. ಇಂತೀ ಮೂವರ ಮುಂದಣ ಕಂದನ ನುಂಗಿ ದೃಷ್ಟನಾಮು ನಷ್ಟವಾಯಿತ್ತು ಇದೆಂತೋ ಗೊಹೇಶ್ವರಾ ?

**ಟೀ.** ಪರಶಿವನು ತನ್ನ ಚಿದ್ವಿಲಾಸದಿಂದ ಮಹಾಲಿಂಗವಾಗಿ ಪರಮಾತ್ಮನೆನಿಸಿದ. ಆ ಪರಮಾತ್ಮನೆಂಬುದೀಗ 'ಗಗನ'ವೆಂಬ ಶಬ್ದಕ್ಕರ್ಥ. ಅಂತಪ್ಪ ಪರಮಾತ್ಮನು ತನಗೆ ತಾನೆ ಸೇವ್ಯ ಸೇವಕನಾಗಿರಬೇಕೆಂಬ ಚಿತ್ತು ತನ್ನಲ್ಲಿ ತೋಱಲು ಆ ತೋಱಿದ ಅಹಂಭಾವದ ಚಿಚ್ಛೈತನ್ಯವ ಬೇರ್ಪಡಿಸೆ ಜೀವಹಂಸನಾಗಿ ಉದಯಿಸಿತ್ತೆಂಬುದೀಗ 'ಗಗನದ ಮೇಲೊಂದು ಅಭಿನವ ಗಿಳಿ ಹುಟ್ಟಿ' ಎಂಬ ಶಬ್ದಕ್ಕರ್ಥ. ಅಂತಾದ ಒಬ್ಬ ಜೀವಹಂಸನು ಪಂಚವಿಂಶತಿ ಭೂತಾತ್ಮನಾದ ಕಾರಣದಿಂ 'ಒಂದು ಗಿಳಿ ಇಪ್ಪತ್ತೈದು ಗಿಳಿಯಾಯಿತ್ತೆ'ಂಬ ಶಬ್ದಕ್ಕರ್ಥ. ಆ ಜೀವಹಂಸನು ಪಂಚವಿಂಶತಿ ತತ್ತ್ವದೇಹವನಾಶ್ರಯಿಸಿ ತನ್ನ ನಿಜವ ಮಱೆದು ದೇಹ ಸಂಸಾರ ಪ್ರಪಂಚ ಸ್ವಯುವೆಂದು ಸಂಭ್ರಮಿಸುತ್ತಿದ್ದಿತ್ತೆಂಬುದೀಗ 'ಸ್ವಯಸಂಭ್ರಮದಲ್ಲಿ ಮಸಿಯುಮಾಡಿತ್ತೆ'ಂಬ ಶಬ್ದಕ್ಕರ್ಥ. ಇಂತು ಜೀವಂಗೆ ನಿವಾಸ ಸ್ಥಾನವಾದ ಸ್ಥೂಲತನುವೇ ರಜೋಗುಣಸಂಬಂಧವಾಗಿ ಆ ರಜೋಗುಣ ಸಂಬಂಧವೇ ಬ್ರಹ್ಮತತ್ತ್ವವೆಂಬುದೀಗ 'ಬ್ರಹ್ಮನಾ ಗಿಳಿಗೆ ಪಂಜರವಾದ'ನೆಂಬ ಶಬ್ದಕ್ಕರ್ಥ. ಅಂತಿಪ್ಪ ಜೀವನ ದೇಹೇಂದ್ರಿಯ ವಿಷಯಾದಿ ಭೋಗಂಗಳ ಸ್ಥಿತಿಗತಿಯೆಂಬುದು ಸತ್ವಗುಣಸಂಬಂಧವಾದ ಕಾರಣ ಆ ಸತ್ವಗುಣಸಂಬಂಧವೆ ವಿಷ್ಣುತತ್ತ್ವವೆಂಬುದೀಗ 'ವಿಷ್ಣುವಾ ಗಿಳಿಗೆ ಕೊಱೆಕೊಳಾದ'ನೆಂಬ ಶಬ್ದಕ್ಕರ್ಥ. ಅಂತು ಜೀವನು ತನ್ನ ತನುಗುಣವಿಷಯಾದಿ ಭೋಗಂಗಳಿಂದ ತನ್ನ ಮಱೆದು ತಮೋಗುಣದಲ್ಲಿ ಕೋಳುವೋಗಲು ಆ ತಮೋಗುಣಸಂಬಂಧವೇ ರುದ್ರತತ್ತ್ವವೆಂಬುದೀಗ ರುದ್ರನಾ ಗಿಳಿಗೆ ಕೋಳುವೋದನೆಂಬ ಶಬ್ದಕ್ಕರ್ಥ. ಇಂತು ಗುಣತ್ರಯಂಗಳ ಮುಂದುಗೊಂಡಿರ್ದ ಜೀವನ ಕನುವಾಸನೆ ಎಂದೆಂದು ಬಿಡದೆ ಗ್ರಹಿಸಿತ್ತೆಂಬುದೀಗ 'ಮೂವರ ಮುಂದಣ ಕಂದನ ನುಂಗಿ' ಎಂಬ ಶಬ್ದಕ್ಕರ್ಥ. ಅಂತು ಮಿಥ್ಯಾದೇಹಸಂಬಂಧದಿಂದ ಜೀವನಾಗಿ ತನ್ನ ಮಱೆದು ತಾನು ಶಿವನೆಂಬ ತಥ್ಯವೆ ಮಿಥ್ಯವಾಗಿ ತೋಱಿತ್ತೆಂಬುದೀಗ 'ದೃಷ್ಟನಾಮು ನಷ್ಟವಾಯಿತ್ತೆ'ಂಬ ಶಬ್ದಕ್ಕರ್ಥ. ೮

**ವ.** ಬ್ರಹ್ಮಪಾಶ ವಿಷ್ಣುಮಾಯೆಯೆಂಬ ಬಲೆಯ ಬೀಸಿ, ಹೊನ್ನು ಹೆಣ್ಣು ಮಣ್ಣು ತೋಱಿ ಮುಕ್ಕಣ್ಣನಾಡಿದ ಬೇಂಟೆಯು. ಆಸೆಯೆಂಬ ಕುಟುಕ ಸಿಕ್ಕಿ ಹೇಸದೆ ಕೊಂದೆಯಲ್ಲಾ ಗೊಹೇಶ್ವರಾ!

೧ ಕೊಳುವಾಯಿದ (ಹು)

**ಟೀ.** ಬ್ರಹ್ಮತತ್ತ್ವವೇ ರಜೋಗುಣ, ಆ ರಜೋಗುಣವೆ ತನುವೆಂಬ ಪಾಶವಾಯಿತ್ತು ಜೀವಂಗೆಂಬುದೀಗ 'ಬ್ರಹ್ಮಪಾಶ'ವೆಂಬ ಶಬ್ದಕ್ಕರ್ಥ. ಅಂತಪ್ಪ ದೇಹದ ಇಂದ್ರಿಯ ವಿಷಯಸುಖಭೋಗಸ್ಥಿತಿಯೆಲ್ಲಾ ಮಾಯಾಸಂಬಂಧ. ಅಂತಪ್ಪ ಮಾಯಾ ಮೋಹವೆ ಬಲೆಯಾಗಿ ಜೀವನ ಸುತ್ತಿತ್ತೆಂಬುದೀಗ 'ವಿಷ್ಣುಮಾಯೆಯೆಂಬ ಬಲೆಯ ಬೀಸಿ' ಎಂಬ ಶಬ್ದಕ್ಕರ್ಥ. ಅಂತು ಜೀವನಿಗೆ ದೇಹವೆಂಬ ಪಾಶವ ಸುತ್ತಿ, ಆ ದೇಹೇಂದ್ರಿಯ ವಿಷಯಸುಖಭೋಗ, ಹೊನ್ನು ಹೆಣ್ಣು ಮಣ್ಣು ಮೊದಲಾದ ವಿಷಯ ಪದಾರ್ಥಂಗಳ ತೋಱಿ ಮಚ್ಚನಿಕ್ಕಿ ಮೋಹದ ಬಲೆಯಲ್ಲಿ ಕೆಡಹಿ, ಜೀವರ ಉತ್ಪತ್ಯ ಸ್ಥಿತಿ ಸಂಹಾರಂಗಳ ಮಾಡಿ ವಿನೋದಿಸುತ್ತಿಪ್ಪ ಶಿವನೆಂಬುದೀ ವಚನದ ತಾತ್ಪರ್ಯಾರ್ಥ. ೯

**ವ.** ನಾನೆಂಬಹಂಕಾರ ತಲೆದೋಱಿದಲ್ಲಿ ಅಟಮಟ ಕುಟಿಲ ಕುಹಕವೆಂಬ ಬಿಱುಗಾಳಿ ಹುಟ್ಟಿತ್ತು. ಆ ಬಿಱುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತು. ಜ್ಞಾನಜ್ಯೋತಿ ಕೆಡಲೊಡನೆ ನಾ ಬಲ್ಲೆ ಬಲ್ಲಿದರೆಂಬ ಅಱುಹಿರಿಯರೆಲ್ಲರು ತಾಮಸಕ್ಕೊಳಗಾಗಿ ಸೀಮೆದಪ್ಪಿ ಕೆಟ್ಟರು ಕಾಣಾ ಗೊಹೇಶ್ವರಾ.

**ಟೀ.** ಮಹಾಲಿಂಗವು ತನ್ನ ನಿಜವ ತಾನ ಅಱಿವುತ್ತಿರ್ದು, ತಾನೆ ಘನವೆಂಬ ಚಿತ್ತುವ್ರೂಮ್ಮ ತೋಱಲು, ಆ ತೋಱಿದ ಚಿದಹಂಕಾರದಲ್ಲಿ ಲೀಲೆದೋಱಿ ಲಿಂಗವು ಸಾಕಾರವಾಗುತ್ತವೆ ತನ್ನ ನಿಜಚಿತ್ತಿನಲ್ಲಿ ತಾನುಳಿದು ತನ್ನ ಮಹದಹಂಕಾರದ ಚಿತ್ತುವ ಬೇರ್ಪಡಿಸೆ ಆ ಚಿತ್ತು ಆತ್ಮನಾಯಿತ್ತು. ಆಯಾತ್ಮಂಗೆ ನಾನೆಂಬ ಅಹಂಭಾವ ತಲೆದೋಱಲು ಆ ತೋಱಿದ ಅಹಂಭಾವದ ಭ್ರಾಂತಿಯೆ ಅಜ್ಞಾನವಾಗಿ, ಅಂಗ ಮನ ಕರಣಂಗಳೆಂಬ ಮಾಯಾಕುಟಿಲ ಆತ್ಮಂಗೆ ಸಂಬಂಧಿಸಿತ್ತೆಂಬುದೀಗ 'ನಾನೆಂಬ ಅಹಂಕಾರ ತಲೆದೋಱಿದಲ್ಲಿ ಅಟಮಟ ಕುಟಿಲ ಕುಹಕವೆಂಬ ಬಿಱುಗಾಳಿ ಹುಟ್ಟಿತ್ತು' ಎಂಬ ಶಬ್ದಕ್ಕರ್ಥ. ಅಂತು ಆತ್ಮಂಗೆ ಅಹಂಭಾವದಿಂದ ಮಾಯಾತನು ಕರಣ ಸಂಬಂಧವಾದಲ್ಲಿ ತನ್ನ ನಿಜದ ಸಮ್ಯಗ್ಜ್ಞಾನವಿಲ್ಲದೆ ಹೋಯಿತ್ತೆಂಬುದೀಗ 'ಬಿಱುಗಾಳಿ ಹುಟ್ಟಲೊಡನೆ ಜ್ಞಾನಜ್ಯೋತಿ ಕೆಟ್ಟಿತ್ತೆ'ಂಬ ಶಬ್ದಕ್ಕರ್ಥ. ಅಂತು ಆತ್ಮಂಗೆ ಸಮ್ಯಗ್ಜ್ಞಾನವಿಲ್ಲದೆ ಹೋದಲ್ಲಿ ತನ್ನ ಶಿವತತ್ತ್ವದ ನಿಜವ ತಪ್ಪಿ ಕೆಟ್ಟು ತಾನು ಆಗಮ ಶಾಸ್ತ್ರಜ್ಞಾನಂಗಳಿಂದ ತನ್ನ ನಿಜವನಱಿದು ಕೂಡಬಲ್ಲೆನೆಂಬ ಶ್ರುತಜ್ಞಾನಿಗಳೆಲ್ಲಾ ಮಱವೆಗೊಳಗಾಗಿ ಹೊಲಬುದಪ್ಪಿ ಕೆಟ್ಟರು ಎಂಬುದೀಗ ಈ ವಚನದ ಅಪರಾರ್ಥದರ್ಥ. ೧೦

**ವ.** ಬಣ್ಣ ಹಲವಪ್ಪಲ್ಲಿ ಬಣ್ಣ ತಾನೊಂದಾಗಿ, ಬಣ್ಣ ಮೂಜಗಕೆ ಮುಕ್ಕಣ್ಣ ತಾನು, ಬಣ್ಣಕರು ಬಣ್ಣದೊಳಗಾಳುವದನೆ ಕಂಡು ಅಣ್ಣ ನಗುತಿರ್ದನಯ್ಯಾ ಯೋಗಿನಾಥಾ!

**ಟೀ.** ಮಹಾಲಿಂಗದ ಚಿತ್‌ಪ್ರಭಾಂಗವೆಂಬುದೀಗ ಬಣ್ಣವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಕ್ಕೆ ಲೀಲಾವಿಲಾಸವಿನೋದದಲ್ಲಿ ಆ ಚಿತ್‌ಪ್ರಭಾ ಪ್ರಕಾಶವೆ ಸ್ಫುರಿಸಿ ನಾನಾತ್ವವನ್ನೈದಿ ಪರಿಚ್ಛಿನ್ನಾತ್ಮರಾದರೆಂಬುದೀಗ 'ಬಣ್ಣ ಹಲವಪ್ಪಲ್ಲಿ' ಎಂಬ ಶಬ್ದಕ್ಕರ್ಥ. ಅಂತು ಹಲವಾತ್ಮರಾದ ಚಿಚ್ಛೈತನ್ಯವೊಂದೆಂಬುದೀಗ 'ಬಣ್ಣ ತಾನೊಂದಾಗಿ' ಎಂಬ ಶಬ್ದಕ್ಕರ್ಥ. ಅಂತು ಲಿಂಗದ ಚಿತ್‌ಪ್ರಕಾಶವೆ ಮೂಜಗವಾಯಿತ್ತೆಂಬುದೀಗ 'ಬಣ್ಣ ಮೂಜಗಕ್ಕೆ ಮುಕ್ಕಣ್ಣ ತಾನು' ಎಂಬ ಶಬ್ದಕ್ಕರ್ಥ. ಅಂತು ಚಿದಾಂಶಿಕರಾದ ಆತ್ಮರು ದೇಹೇಂದ್ರಿಯ ಕುಲಗೋತ್ರಂಗಳು ಮೊದಲಾದ ನಾನಾ ಪ್ರಪಂಚಿನ ಬಣ್ಣದ ಸಂಸಾರಸಾಗರದೊಳಗೆ ಮುಳುಗಿ ಆಳುತಿಪ್ಪ ಜೀವರ ನೋಡಿ ವಿನೋದಿಸುತ್ತ ತಾ ಹೊರಗಾಗಿರ್ದ ಶಿವನೆಂಬುದೀಗ 'ಬಣ್ಣಕರು ಬಣ್ಣದೊಳಗಾಳುವದನೆ ಕಂಡು ಅಣ್ಣ ನಗುತಿರ್ದನಯ್ಯಾ ಯೋಗಿನಾಥಾ' ಎಂಬ ಶಬ್ದಕ್ಕರ್ಥ. ೧೧

**ವ.** ಸರ್ಪ ಸಂಸಾರಿಯೊಡನಾಡಿ ಕಟ್ಟುವಡೆಯಿತ್ತು. ಮನದ ತಮಂಧ ಬಿಡದು, ಮನದ ಕಪಟ ಬಿಡದು. ಸಟೆಯೊಡನೆ ದಿಟನಾಡೆ ಬಯಲು ಬಡಿವಡೆಯಿತ್ತು. ಕಾಯದ ಸಂಗದ ಜೀವವುಳ್ಳನ್ನಕ್ಕರ ಎಂದೂ ಭವ ಹಿಂಗದು ಗುಹೇಶ್ವರಾ.

**ಟೀ.** ಒಡಲಿ ಹೊಕಿವ ಗಾರುಡಿಗನ ನಾದ ಸುಖಕ್ಕೆ ಮೆಚ್ಚಿ ಸರ್ಪ ಬಂಧನಕ್ಕೆ ಸಿಲ್ಕಿದಂತೆ ಹುಸಿಯುಪ್ಪ ದೇಹೇಂದ್ರಿಯ ವಿಷಯ ಸುಖಕ್ಕೆ ಮೆಚ್ಚಿ ಆತ್ಮನ ನಿಜದರಿವು ಮರವೆಗೊಳಗಾಗಿ ಮಾಯಾ ಕರಣಂಗಳ ವಾಸನೆ ಬಿಡದೆ ಹಿಡಿದು ಸಿರವಯುವಪ್ಪ ಆತ್ಮನು ಭವಬಂಧನದಲ್ಲಿ ಸಿಲ್ಕಿ ಕಾಲ ಕಾಮರ ಕೈಯ ಬಡಿಸಿಕೊಳುತಿರ್ಪನು. ಇಂತಪ್ಪ ಭವಬಂಧನದ ದುಃಖ ಜೀವಂಗೆ ದೇಹಸಂಗಸುಖದ ಮಚ್ಚುಳ್ಳನ್ನಕ್ಕ ಬಿಡದೆಂಬುದೀ ವಚನದ ತಾತ್ಪರ್ಯಾರ್ಥ. ೧೨

**ವ.** ಸಿರಾಲಿಂಬದಲ್ಲಿ ನಿಜಲಿಂಗವು ನಾನೆಂಬ ಮಹದಹಂಕಾರವದೇನೊ? ಆ ಮಹದಹಂಕಾರವೆ ಸಂಸಾರವಾಗಿ ಬಂದು ಬಳಲುವ ಭ್ರಾಂತಿಯಿದೇನೋ? ಇದಾರಿಗೂ ತಿಳಿಯದಲ್ಲ! ಇದನಾರಯ್ಯಾ ಪರಿಹರಿಸುವರು ಕೂಡಲ ಚೆನ್ನಸಂಗಯ್ಯನಲ್ಲದೆ?

**ಟೀ.** ಲೀಲಾಸಾಕಾರಂಗಳನವಲಂಬಿಸದೆ ನಿಃಕಲವಾಗಿದ್ದಿತ್ತು ಪರಬ್ರಹ್ಮ ವೆಂಬುದೀಗ 'ನಿರಾಲಂಬ'ವೆಂಬ ಶಬ್ದಕ್ಕರ್ಥ. ಅಂತಿರ್ದ ನಿಃಕಲಚೈತನ್ಯವಸ್ತು ತನ್ನ ಚಿತ್ತುವಿನಿಂದ ತನ್ನ ನಿಜವ ತಾನೆ ಅಱಿವುತ್ತಿರ್ದಲ್ಲಿ ಆ ಚಿತ್ತುವಿನಿಂದ ತಾನೇ ಘನ ವೆಂಬ ಮಹದಹಂಕಾರದಲ್ಲಿ ವಿಶ್ರಮಿಸಿ ಲಿಂಗವು ಸಾಕಾರವಾಯಿತ್ತು. ಅಂತಾದುದು ಆಶ್ಚರ್ಯವೆಂಬುದೀಗ 'ನಿರಾಲಂಬದಲ್ಲಿ ನಿಜಲಿಂಗವು ನಾನೆಂಬ ಮಹದಹಂಕಾರ ವದೇನೋ?' ಎಂಬ ಶಬ್ದಕ್ಕರ್ಥ. ಅಂತು ಮಹದಹಂಕಾರದಲ್ಲಿ ವಿಶ್ರಮಿಸಿ ^೧^ಲಿಂಗ^೧^ ಮೂರ್ತಿಯಾಗುತ್ತವೆ ತನ್ನ ನಿಜಸ್ವಭಾವದ ಚಿತ್ತಿನಲ್ಲಿ ತಾನುಳಿದು ಲಿಂಗವಾಗಿರ್ದು ತನ್ನ ಮಹದಹಂಕಾರದ ಚಿತ್ತುವ ಬೇರ್ಪಡಿಸಿ ಆತ್ಮರುಗಳಿಗಾಗಿ ದೇಹಸಂಸಾರ ಭ್ರಾಂತಿ ದೊರೆಕೊಂಡು ಭವಬಂಧನಕ್ಕೆ ಬಂದು ಬಳಲುತ್ತಿರ್ದುದು, ಅಂತು ಬಳಲುತ್ತಿಪ್ಪುದು ಆತ್ಮಂಗೆ ಮುನ್ನಿಲ್ಲ. ಅವಾಂತರದಲ್ಲಿ ಬಂದುದು ಆಶ್ಚರ್ಯ ವೆಂಬುದೀಗ 'ಆ ಮಹದಹಂಕಾರವೇ ಸಂಸಾರವಾಗಿ ಬಂದು ಬಳಲುವ ಭ್ರಾಂತಿ ಯಿದೇನೋ?' ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಸಂಸಾರಭ್ರಾಂತಿಯನ್ನೈದಿಪ್ಪ ಆತ್ಮ ರುಗಳು ತಾವು ಶಿವಾಂಶಿಕರೆಂದಱಿದು ತಮ್ಮಿಂದ ತಾವೆ ಶಿವತತ್ತ್ವವನೆಯ್ದಲಱಿಯರು ಶಿವ ಕರುಣಿಸಿದಂದಿಗಲ್ಲದಿಲ್ಲವೆಂಬುದೀಗ 'ಇದಾರಿಗೂ ತಿಳಿಯದಲ್ಲ! ಇದನಾರ ಯ್ಯಾ ಪರಿಹರಿಸುವರು ಕೂಡಲ ಚೆನ್ನಸಂಗಯ್ಯನಲ್ಲದೆ?' ಎಂಬ ಶಬ್ದಕ್ಕರ್ಥ. ೧೩

**ವ.** ಎನ್ನೊಡಲಾದರೆ ಎನ್ನಿಚ್ಛೆಯೊಳಿಹುದು. ನಿನ್ನೊಡಲಾದರೆ ನಿನ್ನಿಚ್ಛೆ
ಯೊಳಿಹುದು. ಅದು ಎನ್ನೊಡಲೂ ಅಲ್ಲ, ನಿನ್ನೊಡಲೂ ಅಲ್ಲ.
ನೀ ಮಾಡಿದ ಬಿನ್ನಾಣದೊಡಲು ಕಾಣಾ ರಾಮನಾಥಾ!

**ಟೀ.** ಶಿವನಿಗೆ ದೇಹಕರಣವಿಲ್ಲ. ಆ ಶಿವನ ಅಂಶೀ ಭೂತವಾದ ಆತ್ಮಂಗೆ ಯೂ ದೇಹಕರಣ ಮುನ್ನಿಲ್ಲ. ಮತ್ತೇತಱಿಂದ ಆತ್ಮಂಗೆ ದೇಹಸಂಬಂಧವಾಯಿತ್ತ ಯ್ಯಾ ಎಂದಡೆ ಶಿವನು ಕಲ್ಪಿಸಿದ ಕಲ್ಪಿತ ಮಾಯಾದೇಹ ಆತ್ಮಂಗೆ ಸಂಬಂಧಿ ಸಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೧೪

**ವ.** ಪರಮಂಗೆ ಪ್ರಕೃತಿಯ ಸಂಗದಿಂದ ಜೀವಭಾವ. ಆ ಜೀವಂಗೆ
ಅಂಗನೆಯರ ಸಂಗದಿಂದ ರೌರವನರಕದಿಂದ ದುಃಖಹೇತು. ದುಃಖ
ಹೇತುವಿನಿಂದ ನಾನಾಯೋನಿಯ ಜನನ. ಇದುಕಾರಣ ನಾನಾಯೋನಿ

೧. ಲಿಂಗವು (ರಾ, ಹು, ಮು)

ಯಲ್ಲಿ ಜನಿಸುವ ಪ್ರಕೃತಿಯ ಸಂಗ ಬಿಡದವಂಗೆ ಮುಕ್ತಿಯೆಲ್ಲಿಯದು ನಿಮ್ಮಲಿಗೆಯ ಚೆನ್ನರಾಮಾ?

**ಟೀ.** ಪರಶಿವಲಿಂಗದ ಅಂಶೀಭೂತವಾದ ಆತ್ಮಂಗೆ ಶಿವಾಜ್ಞೆಯಿಂದ ಮಾಯಾದೇಹ ಸಂಬಂಧಿಸಲು ಆ ದೇಹೇಂದ್ರಿಯ ವಿಷಯಸುಖಕ್ಕೆ ಮಚ್ಚಿ ಹಲವು ಯೋನಿಗಳಲ್ಲಿ ತಿರುಗುತ್ತಿಪ್ಪನು ತನ್ನ ನಿಜವ ಮರೆದು ಜೀವನಾಗಿ. ಅಂತು ಜೀವಂಗೆ ದೇಹ ಸಂಗವುಳ್ಳನ್ನಕ್ಕರ ಮುಕ್ತಿಯಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೧೫

**ವ.** ಬಟ್ಟಬಯಲಲ್ಲಿ ಒಂದು ಅಷ್ಟತನುವ ಪಡೆದೆ. ಬಾಳೆಯ ದಿಂಡು ನಾಳಿಯ ನೂಲು, ಗಾಳಿಯ ಶಬ್ದ, ಉದಕದ ಬಿಂದು, ಪ್ರೋ ಪ್ರೋ ಬಾಳೆ ಮಹಾಲಿಂಗ ಗಜೇಶ್ವರನಲ್ಲಿ ಉದಕ ಬಿಟವೆಂಬೆ.

**ಟೀ.** ಶಿವನು ಲೀಲಾಸಾಕಾರಂಗಳು ಇಲ್ಲದೆ ಇದ್ದಂದು ನಿರವಯ ಚಿದಾಕಾಶನಾಗಿರ್ದನು ಲಿಂಗವೆಂಬುದೀಗ 'ಬಟ್ಟಬಯಲೆ'ಂಬ ಶಬ್ದಕ್ಕರ್ಥ. ಅಂತಪ್ಪ ನಿರವಯ ಲಿಂಗದ ಚಿಚ್ಛಕ್ತಿತನ್ನವೆ ಸ್ಫುರಿಸಿ ಆತ್ಮ ಮೊದಲಾದ ಅಷ್ಟತನುಗಳಾದವು. ಅಂತು ಆತ್ಮನುದಯಿಸುತ್ತವೆ ಅಷ್ಟತನುಸಂಬಂಧಿಯಾದನೆಂಬುದೀಗ 'ಬಟ್ಟಬಯಲಲ್ಲಿ ಒಂದು ಅಷ್ಟತನುವ ಪಡೆದೆ'ನೆಂಬ ಶಬ್ದಕ್ಕರ್ಥ. ಅಂತಪ್ಪ ದೇಹ ನೀರ ಬೊಬ್ಬುಳಿಕೆಯಂತೆ, ಬಾಳೆಯ ದಿಂಡಿನ ನೂಲಿನಂತೆ, ಗಾಳಿಯ ಶಬ್ದದಂತೆ ಧೃಢವಿಲ್ಲ. ಆ ದೇಹ ತೋರಿ ಕೆಡುವುದೆಂದರಿಯದೆ ನಿತ್ಯವೆಂದು ಬಗೆದು ಬಾಳುತಿಪ್ಪುದು ದೇಹ ಸಂಸಾರದಲ್ಲಿ ಜೀವನು ಎಂಬುದೀ ವಚನದ ಅಭಿಪ್ರಾಯದರ್ಥ. ೧೬

**ವ.** ಎಂಬತ್ತುನಾಲ್ಕುಲಕ್ಷರತ್ನದ ವ್ಯವಹಾರಿಗಳು ರತ್ನವ ಕೆಡಿಸಿ ಅರಸುತ್ತೈದಾರೆ ನೋಡಾ! ರತ್ನ ಮಂಜಿನ ರಂಜನೆ, ಆಗರಕ್ಕೆ ಸಲ್ಲದು. ಹುಟ್ಟಿ ಕೆಟ್ಟಾ ರತ್ನ ಕೆಟ್ಟ ಕೇಡಿಂಗಿನ್ನೆಂತೋ! ಆಗುಹೋಗಿನ ನಿರ್ಣಯವನು ಸಾಗರ ನುಂಗಿತ್ತು. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆ.

**ಟೀ.** ಶಿವಜ್ಞಾನಾಂಶಿಕರಾದ ಆತ್ಮರುಗಳಿಗೆ ಶಿವಾಜ್ಞೆಯಿಂದ ದೇಹ ಸಂಬಂಧಿಸಲು ಅಜ್ಞಾನವೆಡೆಗೊಂಡು ಶಿವಜ್ಞಾನರತ್ನವಡಗಿ ಹೋಯಿತ್ತೆಂಬುದೀಗ 'ಎಂಬತ್ತುನಾಲ್ಕುಲಕ್ಷ ರತ್ನದ ವ್ಯವಹಾರಿಗಳು ರತ್ನವ ಕೆಡಿಸಿ' ಎಂಬ ಶಬ್ದಕ್ಕರ್ಥ. ಅಂತು ಕೆಟ್ಟ ಶಿವಜ್ಞಾನವ ಆಗಮ ಶಾಸ್ತ್ರಂಗಳಿಂದ ಸಾಧಿಸುತ್ತಿರ್ದರೆಂಬುದೀಗ 'ಅರಸುತ್ತೈದಾರೆ' ಎಂಬ ಶಬ್ದಕ್ಕರ್ಥ. ಅಂತು ಸಾಧಿಸುವ ಶ್ರುತಜ್ಞಾನ ತನ್ನ ನಿಜದರಿವಲ್ಲವೆಂಬುದೀಗ 'ರತ್ನ ಮಂಜಿನ ರಂಜನೆ' ಎಂಬ ಶಬ್ದಕ್ಕರ್ಥ. ಆ ಶ್ರುತಜ್ಞಾನ

ವೆಂಬ ರತ್ನ ತನ್ನ ನಿಜಾಂತರಂಗದ ಶಿವಾನುಭಾವಕ್ಕೆ ಬೆಲೆಗೆಯ್ಯದೆಂಬುದೀಗ ‘ ಆಗರಕ್ಕೆ ಸಲ್ಲದು ’ ಎಂಬ ಶಬ್ದಕ್ಕರ್ಥ. ಅಂತು ಶಿವಾಂಶಿಕನಾದ ಆತ್ಮನು ದೇಹಿಯಾಗಿ ಹುಟ್ಟಿದಲ್ಲಿ ತನ್ನ ನಿಜವ ಮಱೆದು ತನ್ನ ನಿಜಜ್ಞಾನ ನಷ್ಟವಾಗಿ ಕೆಟ್ಟ ಕೇಡ ಬಯಸಿದಡಿಲ್ಲವೆಂಬುದೀಗ ‘ ಹುಟ್ಟಿ ಕೆಟ್ಟ ರತ್ನ ಕೆಟ್ಟ ಕೇಡಿಂಗೆ ಇನ್ನೆಂತೋ’ ಎಂಬ ಶಬ್ದಕ್ಕರ್ಥ. ಅಂತು ಶಿವನ ಚಿದ್ವಿಲಾಸದಿಂದೊಗೆದ ಚಿದಾಂಶಿಕರಾದ ಆತ್ಮರುಗಳು ತಮ್ಮ ಶಿವತತ್ವದಲ್ಲಿಯೆ ಅಡಗುವ ನಿಜದಱಿವ ಮಾಯಾದೇಹ ಸಂಸಾರ ಗ್ರಹಿಸಿತೆಂಬುದೀಗ ‘ ಆಗು ಹೋಗಿನ ನಿರ್ಣಯವನು ಸಾಗರ ನುಂಗಿತ್ತೆ’ಂಬ ಶಬ್ದಕ್ಕರ್ಥ. ಅಂತಪ್ಪ ದೇಹಿಗಳಲ್ಲಿ ಶಿವತತ್ತ್ವವಿಲ್ಲದೆ ಹೋಯಿತ್ತೆಂಬುದೀಗ ‘ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆ ’ ನೆಂಬ ಶಬ್ದಕ್ಕರ್ಥ. ೧೭

**ವ.** ಗುಬ್ಬಿ ಹೆಱರ ಮನೆಯ ತನ್ನ ಮನೆಯೆಂಬಂತೆ ಧರೆ ಧನ ವನಿತೆಯರು ಎನ್ನವರು ತನ್ನವರೆಂದು ಹೋರಿ ಹೋರಿ ಸಾವುತ್ತಿದೆ ಜೀವ. ಸರ್ವಕರ್ತೃ ಕೂಡಲ ಸಂಗಯ್ಯನೊಬ್ಬನೆಯೆಂದಱಿಯದೆ ಕೆಟ್ಟರು.

**ಟೀ.** ಸರ್ವಾತ್ಮಮಯವಾದ ಶಿವನೊಬ್ಬನೆಯೆಂಬಱಿವು ಆತ್ಮಂಗೆ ಶಿವಾಜ್ಞೆಯಿಂದ ಮಱೆದು ಮಾಯಾದೇಹ ವಿಷಯ ಪದಾರ್ಥಂಗಳು ತನ್ನವೆಂದು ಆಸೆ ಮಾಡಿ ತಥ್ಯಮಿಥ್ಯದಿಂದ ಸತ್ತು ಹುಟ್ಟುತ್ತಿಹನು ಜೀವನಾಗಿ. ಅಂತು ಜೀವನಾಗಿ, ತಾನು ಶಿವನೆಂಬುದ ಮಱೆದು ಕೆಟ್ಟನೆಂಬುದೀ ವಚನದ ತಾತ್ಪರ್ಯಾರ್ಥ. ೧೮

**ವ.** ಸಂಸಾರಸಂಗದಿಂದುದಯಿಸಿದ ಸುಖವೆ ದುಃಖವೆಂದಱಿಯದೆ ಆ ಸುಖವನೆ ಮೆಚ್ಚಿ ಭವದುಃಖವೆಂಬ ಕ್ರೂರ ಚಕ್ರಕ್ಕೀಡಾಗಿ ಅಲ್ಲಿ ತನ್ನ ಮಱೆದು ತನಗಿಲ್ಲದುದ ಭ್ರಮೆಯಿಂದ ತನ್ನದೆಂದು ಅಂತಪ್ಪ ಭವಘೋರನರಕದೊಳಾಳುತ್ತ ಮುಳುಗುತ್ತಲಿರ್ಪ ಅಜ್ಞಾನಿ ಜೀವಿಗಳು ನಿಮ್ಮನೆತ್ತಬಲ್ಲರು ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ ?

**ಟೀ.** ಶಿವಾಂಶಿಕರಾದ ಆತ್ಮರಿಗೆ ಶಿವಾಜ್ಞೆಯಿಂದ ದೇಹಸಂಬಂಧವಾಗಿ ಆ ದೇಹೇಂದ್ರಿಯ ವಿಷಯಸುಖಕ್ಕೆ ಮೆಚ್ಚಿ, ತನಗಿಲ್ಲದ ಮಾಯಾಪ್ರಪಂಚಿನ ಪದಾರ್ಥಂಗಳ ತನ್ನವೆಂದು ಅಜ್ಞಾನದಿಂದ ಭ್ರಮೆಗೊಂಡು ಭವದುಃಖಕ್ಕೀಡಾಗಿ ತಿರುಗುತ್ತಿಪ್ಪನು ಜೀವನಾಗಿ. ಅಂತಪ್ಪ ಜೀವರಿಗೆ ತಾವು ಶಿವನೆಂಬ ನಿಜದಱಿವು ತಲೆದೋಱದಿಪ್ಪುದು ಎಂಬುದೀಗ ಈ ವಚನದ ತಾತ್ಪರ್ಯಾರ್ಥ. ೧೯

**ವ.** ಶೂಲದ ಮೇಲಣ ಹೆಣನ ಭೋಗವೇನಾದರೇನೋ? ನಾನಾ ವರ್ಣದ ಸಂಸಾರ ಸುಖವು ಹಾವು[೧]ಹಾವಡಿಗನ[೧] ಸ್ನೇಹದಂತೆ. ತನ್ನಾತ್ಮ ತನಗೆ ಹಗೆಯಾದ ಮತ್ತೆ ಬಿನ್ನಾಣವುಂಟೆ ಮಹಾದಾನಿ ಕೂಡಲ ಸಂಗಮ ದೇವ?

**ಟೀ.** ಗಾರುಡಿಗನು ಹಾವಿನ ಸ್ನೇಹದಿಂದ ಸುಖವ ಪಡೆದೆಹೆನೆಂದು ಆ ಹಾವಿನ ಕೈಯಲಳಿವಂತೆ ಆತ್ಮನು ಅಲ್ಪ ದೇಹ ಸಂಸಾರ ಸುಖಕ್ಕೆ ಮಚ್ಚಿ ಸತ್ತು ಹುಟ್ಟುತ್ತಿಹನೆಂಬುದೀಗ ' ಶೂಲದ ಮೇಲಣ ಹೆಣನ ಭೋಗವೇನಾದರೇನೋ ? ನಾನಾ ವರ್ಣದ ಸಂಸಾರಸುಖವು ಹಾವು ಹಾವಡಿಗನ ಸ್ನೇಹದಂತೆ ' ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಸಂಸಾರ ಆತ್ಮಂಗೆ ಎಂತು ಬಂದಿತ್ತೆಂದಡೆ ಶಿವನು ತನ್ನ ಕದಂಶವನೆ ಆತ್ಮರ ಮಾಡಿ, ಆ ಆತ್ಮರುಗಳನು ಹುಸಿದೇಹ ಸಂಸಾರಸುಖಕ್ಕೆ ಮಚ್ಚಿಸಿ, ಭವದುಃಖಕ್ಕೆ ಈಡು ಮಾಡಿ, ಶಿವ ತಾನೆ ವೈರಿಯಾಗಿ ನೋಡಿ ವಿನೋದಿಸುತ್ತಿರ್ದ ಬಳಿಕ ಬಿಡಿಸುವರಾರುಂಟು ಎಂಬುದೀಗ ' ತನ್ನಾತ್ಮ ತನಗೆ ಹಗೆಯಾದ ಮತ್ತೆ ಬಿನ್ನಾಣವುಂಟೆ ? ' ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮರುಗಳಿಗೆ ಮರಳಿ ಶಿವ ತಾನೆ ತನ್ನ ಮಹದ ಸುಖವ ಕರುಣಿಸಿ ಕೊಟ್ಟಂದಿಗಹುವೆಂಬುದೀಗ ' ಮಹಾದಾನಿ ಕೂಡಲ ಸಂಗಮದೇವ ' ಎಂಬ ಶಬ್ದಕ್ಕರ್ಥ. ೨೦

**ವ.** ಸಾಸವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ನೋಡಾ ! ಘಳಿಗೆಯ ಬೇಟವ ಮಾಡಿಹೆನೆಂಬ ಪರಿಯ ನೋಡಾ ! ತನ್ನನಿಕ್ಕಿ ನಿಧಾನವ ಸಾಧಿಸುವನ್ನಕ್ಕರ ಬಿನ್ನಾಣ ತಪ್ಪಿತ್ತು ಗೊಹೇಶ್ವರಾ.

**ಟೀ.** ಶಿವಾಂಶಿಕನಾದ ಆತ್ಮನು ಅಲ್ಪದೇಹ ಸಂಸಾರ[೨]ಸುಖಕ್ಕೆ ಮಚ್ಚಿ ಭವಬಂಧನಕ್ಕೀಡಾಗಿ ತಾನು ಒಚ್ಚತವೋದನಾಗಿ ತಾನು ಶಿವನೆಂಬುದ ಮರೆದು ದೇಹಿಯಾಗಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೨೧

ಸಂಸಾರಸಂಬಂಧಸ್ಥಲ ಸಂಪೂರ್ಣ

**ಅಂತು ಸ್ಥಲ ೫ಕ್ಕಂ ಶ್ಲೋಕ ೫೧ಕ್ಕಂ ವಚನ ೬೩ಕ್ಕಂ**

**ಮಂಗಳಂ**

**ಶ್ರೀ**

೧. ಹಾವಾಡಿಗ (ಎ) ೨. ಸುಖವ ನಚ್ಚಿ (೧)

# ೬. ಪಿಂಡಸ್ಥಲ

❈

ಸೂತ್ರ. ಅಂತು ಶಿವಾಂಶಿಕನಾದ ಆತ್ಮಂಗೆ ಶಿವ ತಾನೆ ತನ್ನ ಸ್ವಲೀಲೆಯಿಂದ ಪಂಚವಿಂಶತಿ ತತ್ತ್ವದೇಹಮಂ ಸಂಬಂಧಿಸಿ ಆ ಸಂಬಂಧಿಸಿದ ದೇಹದಲ್ಲಿ ಅಹಂ ಮಮತೆಯನೆಯ್ದಿಪ್ಪ ಅಜ್ಞಾನಮಂ ಪುಟ್ಟಿಸಲು ಆ ಅಜ್ಞಾನದಿಂದ ದೇಹೋಹ ಮೆಂದು ತನ್ನ ನಿಜವ ಮಱೆದು ದೇಹ ತಾನೆಂದು ತನ್ನದೆಂದು ದೇಹಿಯಾಗಿಪ್ಪನು ಆತ್ಮನು. ಅಂತು ಶಿವಾಜ್ಞೆಯಿಂದ ಆತ್ಮನು ಪ್ರಕೃತಿಪಿಂಡಮಧ್ಯಸ್ಥನಾಗಿಪ್ಪಲ್ಲಿ ತಾನು ಶಿವಾಂಶಿಕನು, ಶಿವಕಲಾಸ್ವರೂಪನು ನಾನೆಂಬ ಶಿವಜ್ಞಾನ ತಲೆದೋಱದೆ ತನ್ನ ನಿಜ ಪಿಂಡವಾದ ಶಿವತತ್ತ್ವವ ಮಱೆದು, ಪ್ರಕೃತಿಪಿಂಡ ತದಾಕಾರವಾಗಿರ್ದುದಂ ಪಿಂಡಸ್ಥಲವೆಂದು ಹೇಳಲಾದುದು.

ಪಿಂಡಸ್ಥಲಕ್ಕೆ ಶ್ಲೋಕ :

ಪಿಂಡಮಧ್ಯಗತಾಃ ಪ್ರಾಣಾಃ ಪ್ರಾಣಮಧ್ಯಗತೋ ಧ್ವನಿಃ
ಧ್ವನಿಮಧ್ಯಗತೋ ನಾದೋ ನಾದಮಧ್ಯೇ ಸದಾಶಿವಃ

ತಾತ್ಪರ್ಯ : ಪ್ರಕೃತಿಪಿಂಡದ ಮಧ್ಯದಲ್ಲಿ ಆತ್ಮನು, ಆ ಆತ್ಮನ ಮಧ್ಯದಲ್ಲಿ ಪ್ರಣಮನಾದ, ಆ ಪ್ರಣಮನಾದ ಮಧ್ಯದಲ್ಲಿ ಸದಾಶಿವನು, ಈ ಕ್ರಮದಿಂದ ನಿಸ್ತರಂಗವಾಗಿ ಸುಪ್ತಿಯನೈದಿಹುದು. ೧

ಏಕ ಏವ ಶಿವಃ ಸಾಕ್ಷಾತ್ ಚಿದಾನಂದಮಯೋ ವಿಭುಃ
ನಿರ್ವಿಕಲ್ಪೋ ನಿರಾಕಾರೋ ನಿರ್ಗುಣೋ ನಿಷ್ಪ್ರಪಂಚಕಃ
ಅನಾದ್ಯವಿದ್ಯಾಸಂಬಂಧಾತ್ತದಂಶೋ ಜೀವಸಂಜ್ಞಕಃ

ತಾ. ಪೂರ್ಣವಾದಂಥಾ, ಚಿದಾನಂದಮಯವಾದಂಥಾ, ಒಡೆಯನಾಗಿ ಇದ್ದಂಥಾ, ವಿಕಲ್ಪವಿಲ್ಲದೆ ಇದ್ದಂಥಾ, ಆಕಾರರಹಿತವಾಗಿ ಇದ್ದಂಥಾ, ಗುಣತ್ರಯ ರಹಿತವಾಗಿ ಇದ್ದಂಥಾ, ಪ್ರಪಂಚರಹಿತವಾದಂಥಾ, ಪ್ರತ್ಯಕ್ಷವಾದ ಶಿವತತ್ತ್ವವೆ ಅನಾದಿಯಲ್ಲಿ ತೋರಿದ ಅವಿದ್ಯಾಸಂಬಂಧದಿಂದ ಆ ಶಿವತತ್ತ್ವದಂಶವೆ ಜೀವತ್ವವನೆಯ್ದಿತ್ತು. ೨

ದೇವತಿರ್ಯಙ್ಮನುಷ್ಯಾದಿಜಾತಿಭೇದೇ ವ್ಯವಸ್ಥಿತಾ ಃ
ಮಾಯೀ ಮಾಹೇಶ್ವರಸ್ತೇಷಾಂ ಪ್ರೇರಕೋ ಹೃದಯಸ್ಥಿತಃ

ತಾ. ಆ ಶಿವಾಂಶವಾದ ಜೀವನು ದೇವಜಾತಿ ತಿರ್ಯಗ್ಜಾತಿ ಮನುಷ್ಯ ಜಾತಿ ಎಂಬ ಭೇದವನೆಯ್ದಿತ್ತು. ಆ ಮಾಯೆಗೆ ಒಡೆಯನಾಗುತ್ತಿದ್ದಂಥಾ ಶಿವನು ಆ ಜೀವರುಗಳ ಹೃದಯದಲ್ಲಿರ್ದು ಪ್ರೇರಿಸುತ್ತಿಹನು. ೩

ಚಂದ್ರಕಾಂತೇ ಯಥಾ ತೋಯಂ ಸೂರ್ಯಕಾಂತೇ ಯಥಾನಲಃ
ಬೀಜೇ ಯಥಾಂಕುರಃಸ್ಸಿದ್ಧಸ್ತಥಾ ಆತ್ಮನಿ ಶಿವಃ ಸ್ಥಿತಃ

ತಾ. ಚಂದ್ರಕಾಂತದಲ್ಲಿ ಉದಕ ಹೇಂಗೆ, ಸೂರ್ಯಕಾಂತದಲ್ಲಿ ಅಗ್ನಿ ಹೇಂಗೆ, ಬೀಜದಲ್ಲಿ ಅಂಕುರ ಹೇಂಗೆ ಇಹುದು ಹಾಂಗೆ ಆತ್ಮನಲ್ಲಿಯೂ ಶಿವ ನಿಹನು. ೪

ಆತ್ಮತ್ವಮೀಶ್ವರತ್ವಂ ಚ ಬ್ರಹ್ಮಣ್ಯೇಕತ್ರ ಕಲ್ಪಿತಂ
ಬಿಂಬತ್ವಂ ಪ್ರತಿಬಿಂಬತ್ವಂ ಯಥಾ ಪೂಷಣಿ ಕಲ್ಪಿತಂ

ತಾ. ಅಖಂಡ ಬ್ರಹ್ಮದಲ್ಲಿಯೆ ಆತ್ಮತ್ವವೂ ಈಶ್ವರತ್ವವೂ ಕಲ್ಪಿಸಲ್ಪಟ್ಟಿತ್ತು. ಬಿಂಬ ಪ್ರತಿಬಿಂಬಗಳು ಸೂರ್ಯನಲ್ಲಿ ಹೇಂಗೆ ಹಾಂಗೆ. ೫

ಗುಣತ್ರಯವಿಭೇದೇನ ಪರತತ್ವೇ ಚಿದಾತ್ಮನಿ
ಭೋಕ್ತೃತ್ವಂ ಚೈವ ಭೋಜ್ಯತ್ವಂ ಪ್ರೇರಕತ್ವಂ ಚ ಕಲ್ಪಿತಂ

ತಾ. ರಾಜಸ ತಾಮಸ ಸಾತ್ತ್ವಿಕ ಭೇದಂಗಳಿಂದ ಅಖಂಡ ಬ್ರಹ್ಮದಲ್ಲಿಯೆ ಆತ್ಮರುಗಳೆಂದು ಪದಾರ್ಥಂಗಳೆಂದು ಪ್ರೇರಕನಾದ ಶಿವನೆಂದು ಹೇಳಲ್ಪಟ್ಟಿತ್ತು. ೬

ಅವಿದ್ಯಾಮೋಹಿತೋ ಜೀವೋ ಬ್ರಹ್ಮೈಕ್ಯಜ್ಞಾನವರ್ಜಿತಃ
ಪರಿಭ್ರಮತಿ ಸಂಸಾರೇ ನಿಜಕರ್ಮಾನುರೂಪತಃ

ತಾ. ಅಜ್ಞಾನದಿಂದ ಭ್ರಮಿಸಲ್ಪಟ್ಟ ಆತ್ಮನು, ಬ್ರಹ್ಮವು ತಾನೆಂಬ ಜ್ಞಾನವ ಮರೆದು ಕರ್ಮರೂಪವಾದ ಸಂಸಾರದಲ್ಲಿ ತಿರುಗುತ್ತಿಹನು. ೭

ಶಿವಪ್ರಸಾದಾಜ್ಜೀವೋಽಯಂ ಜಾಯತೇ ಶುದ್ಧಮಾನಸಃ
ಶುದ್ಧಾಂತಃಕರಣೇ ಜೀವೇ ಶುದ್ಧಕರ್ಮವಿಪಾಕತಃ
ಜಾಯತೇ ಶಿವಕಾರುಣ್ಯಾದಾಸ್ಫುಟಾ ಭಕ್ತಿರೈಶ್ವರೀ
ಜಂತುರಂತ್ಯಶರೀರೋಽಸೌ ಪಿಂಡಶಬ್ದಾಭಿಧೇಯಕಃ

ತಾ. ಶಿವಕೃಪೆಯಾಗಿ ಇದ್ದಂಥಾ ಈ ಆತ್ಮಂಗೆ ಅಂತಃಕರಣಂಗಳು ಶುದ್ಧವಹವು. ಅಂತಃಕರಣಂಗಳು ಶುದ್ಧವಾದ ಆತ್ಮಂಗೆ ಸತ್ಕ್ರಿಯೆ ದೊರೆಕೊಂಬುದು. ಅವರಿಂದ ಶಿವನ ಕೃಪೆ ನಿಶ್ಚಯವಹುದು. ಆ ಶಿವಕೃಪೆಯಿಂದ ಸಹಜಭಕ್ತಿಯಹುದು. ಆ ಭಕ್ತಿಯಿಂದ ಆತ್ಮಂಗೆ ಪ್ರಕೃತಿಪಿಂಡವೇ ಕಡೆಯ ಶರೀರವಹುದು. ಅದನೆ ಪಿಂಡಸ್ಥಲವೆಂದು ಹೇಳಲಾಯಿತು. ೮

ಬಹುಜನ್ಮಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ
ಶುದ್ಧಾಂತಃಕರಣೋ ದೇಹೀ ಪಿಂಡಶಬ್ದೇನ ಗೀಯತೇ

ತಾ. ಅನೇಕ ಜನ್ಮಂಗಳಿಂದ ಮಾಡಲ್ಪಟ್ಟ ಪುಣ್ಯಂಗಳಿಂದ ಪಾಪಸಮೂಹಂಗಳು ನಾಶವನೆಯ್ದುವವು. ಆ ದೇಹಿಗೆ ಅಂತಃಕರಣ ಶುದ್ಧವಹವು. ಆ ಶುದ್ಧಾತ್ಮನು ಪಿಂಡವೆಂದು ಹೇಳಲ್ಪಡುವನು. ೯

ಶಿವಭಕ್ತಿಸ್ಸಮುತ್ಪನ್ನಾ ಪ್ರಪಂಚೇಽಸ್ಮಿನ್ವಿಕಲ್ಪಿತೇ
ಪುಣ್ಯಾಧಿಕ್ಯಾತ್ ಕ್ಷೀಣಪಾಪಃ ಶುದ್ಧಾತ್ಮಾ ಪಿಂಡನಾಮಕಃ

ತಾ. ನಾನಾ ತೆಱನಾಗುತ್ತಿದ್ದಂಥಾ ಈ ಪ್ರಪಂಚಿನಲ್ಲಿ ಅತ್ಯಂತ ಪುಣ್ಯದಿಂದ ಕ್ಷಯವನೆಯ್ದಿಸಲ್ಪಟ್ಟ ಪಾಪವನುಳ್ಳವನಹನು. ಆ ಆತ್ಮಂಗೆ ಶಿವಭಕ್ತಿ ಉದಯವಹುದು. ಆ ಶುದ್ಧಾತ್ಮನು ಪಿಂಡವೆಂಬ ಹೆಸರನುಳ್ಳವನಹನು. ೧೦

**ಪಿಂಡೋತ್ಪತ್ಯದಲ್ಲಿ :**

ಮಾತೃತ್ರೀಣಿ ಪಿತೃತ್ರೀಣಿ ಶಿವಾಂಶತ್ರೀಣಿ ಚೋಚ್ಯತೇ
ತತ್ತ್ರಿಧಾಮಿಶ್ರಸಂಖ್ಯಾನಾಂ ನವಾಂಶಃ ಪಿಂಡಸಂಜ್ಞಕಃ

**ತಾ.** ತಾಯ ಅಂಶ ಮೂಱು, ತಂದೆಯ ಅಂಶ ಮೂಱು, ಶಿವಾಂಶ ಮೂಱು. ಈ ಮೂಱು ಮೂಱುಗಳಾದ ಒಂಭತ್ತಱ ಸಂಯೋಗವೇ ಪಿಂಡ ವೆಂದು ಹೇಳಲಾಯಿತ್ತು. ೧೧

ರುಧಿರಂ ಮಾಂಸಕಂ ತ್ವಕ್ ಚ ಮಾತೃಕಾಂಶಾ ಇತಿ ಸ್ಮೃತಾಃ
ಅಸ್ಥಿ ನಾಡ್ಯಶ್ಚ ರೋಮಾಣಿ ಪಿತ್ರಂಶಾಃ ಪರಿಕೀರ್ತಿತಾಃ
ಅಗ್ನಿಶ್ಚ ವಾಯುರಾತ್ಮಾ ಚ ಶಿವಾಂಶಾಃ ಪರಿಕೀರ್ತಿತಾಃ

**ತಾ.** ನೆತ್ತರು ಮಾಂಸ ಚರ್ಮ ಈ ಮೂಱು ತಾಯ ಅಂಶ. ಎಲು ನಾಡಿ ರೋಮ ಈ ಮೂಱು ತಂದೆಯ ಅಂಶ. ಅಗ್ನಿ ವಾಯು ಆತ್ಮ ಈ ಮೂಱು ಶಿವಾಂಶ. ಇಂತೀ ಒಂಭತ್ತಱಿಂದ ಪ್ರಕೃತಿಪಿಂಡವೆನಿಸಿತ್ತು ೧೨

**ಪಿಂಡಸ್ಥಲಕ್ಕೆ ವಚನ :**

ನೆಲದ ಮಱೆಯ ನಿಧಾನದಂತೆ, ಮುಗಿಲ ಮಱೆಯಲಡಗಿದ ಮಿಂಚಿನಂತೆ, ಬಯಲ ಮಱೆಯಲಡಗಿದ ಮರೀಚಿಯಂತೆ, ಕಂಗಳ ಮಱೆಯಲಡಗಿದ ಬೆಳಗಿನಂತೆ ಗೊಹೇಶ್ವರಾ ನಿಮ್ಮ ನಿಲವು.

**ಟೀಕು.** ಪರಶಿವನ ತದಂಶವಾದ ಆತ್ಮನು ಜಡಪಿಂಡಸಂಬಂಧಿಯಾಗಿ ತನ್ನ ನಿಜದ ನಿಲವಪ್ಪ ಬ್ರಹ್ಮವನು ಮಱೆದಿಪ್ಪಲ್ಲಿ, ಆ ಆತ್ಮನ ನಿಜದ ನಿಲವಪ್ಪ ಪರಬ್ರಹ್ಮವು ಆ ಆತ್ಮಾಂತರ್ಗತವಾಗಿ ಕಾಣಿಸದೆ ಪಿಂಡಸ್ವರೂಪನಾದ ಆತ್ಮನಲ್ಲಿ ಇಪ್ಪುದು. ಅದು ಹೇಂಗೆಂದಡೆ ಭೂಗತವಾಗಿಪ್ಪ ನಿಧಾನದಂತೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದಲ್ಲಿ ಗತವಾಗಿ ಕಾಣಿಸಬಾರದೆಂಬುದೀಗ 'ನೆಲದ ಮಱೆಯ ನಿಧಾನದಂತೆ' ಎಂಬ ಶಬ್ದಕ್ಕರ್ಥ. ಮೇಘದೊಳಗೆ ಸ್ಫುರಿಸದೆ ಇಪ್ಪ ಕ್ಷಣಿಕದಂತೆ ಆ ಪರಬ್ರಹ್ಮವು ಪಿಂಡಮಧ್ಯದೊಳಗೆ ಇದ್ದು ಬೇಱಿಟ್ಟು ತೋಱಲಱಿಯದೆಂಬುದೀಗ 'ಮುಗಿಲ ಮಱೆಯಲಡಗಿದ ಮಿಂಚಿನಂತೆ' ಎಂಬ ಶಬ್ದಕ್ಕರ್ಥ. ಬಯಲೊಳಡಗಿದ ಮರೀಚಿಯ ನಿಷ್ಕಂಪಿತದಂತೆ ಆ ಪರಬ್ರಹ್ಮವು ಪಿಂಡಮಧ್ಯದೊಳಗೆ ಇದ್ದು ನಿಸ್ಥಲವಾಗಿಪ್ಪುದೆಂಬುದೀಗ 'ಬಯಲ ಮಱೆಯಲಡಗಿದ ಮರೀಚಿಯಂತೆ' ಎಂಬ ಶಬ್ದಕ್ಕರ್ಥ. ಕಂಗಳ ಪಟಲದೊಳಗಿಪ್ಪ ಪ್ರಭೆ ಕಂಗಳಿಂದ ವ್ಯತಿರಿಕ್ತವಾಗಿ ವಿವರಿಸಬಾರದಂತೆ ಆ ಪರಬ್ರಹ್ಮವು ಪಿಂಡಸ್ಥಲವಾಗಿಪ್ಪುದ ವಿವರಿಸಬಾರದೆಂಬುದೀಗ 'ಕಂಗಳ ಮಱೆಯಲಡಗಿದ ಬೆಳಗಿನಂತೆ' ಎಂಬ ಶಬ್ದಕ್ಕರ್ಥ. ೧

**ವ.** ಜಲದೊಳಗಣ ಕಿಚ್ಚು ಜಲವ ಸುಡದೆ ಜಲವು ತಾನಾಗಿಯೆ ಇದ್ದಿತ್ತು ನೋಡಾ. ನೆಲೆಯನಱಿದು ನೋಡಿಹೆನೆಂದರೆ ಅದು ಜಲವು ತಾನಲ್ಲ. ಕುಲದೊಳಗಿರ್ದು ಕುಲವ ಬೆರಸದೆ ನೆಲೆಗೆಟ್ಟು ನಿಂದುದ ನಾರು ಬಲ್ಲರೋ ? ಹೊಱಗೊಳಗೆ ತಾನಾಗಿದ್ದು ತಲೆದೋಱದಿಪ್ಪುದು ಗೊಹೇಶ್ವರಾ ನಿಮ್ಮ ನಿಲವು ನೋಡಾ.

**ಟೀ.** ಶುಕ್ಲ ಶೋಣಿತಾತ್ಮಸಂಗದಿಂದಾದ ಜಲಬುದ್ಬುದ ಪಿಂಡದೊಳಗೆ ಅಡಗಿಪ್ಪ ಪರಶಿವಜ್ಞಾನಾಗ್ನಿ ಆ ಪಿಂಡವ ದಗ್ಧವ ಮಾಡಲಱಿಯದೆ ಅಲ್ಲಿಯೆ ಗತವಾಗಿ ತದ್ರೂಪಾಗಿ ಇದ್ದಿತ್ತೆಂಬುದೀಗ 'ಜಲದೊಳಗಣ ಕಿಚ್ಚು ಜಲವ ಸುಡದೆ ಜಲವು ತಾನಾಗಿಯೆ ಇದ್ದಿತ್ತೆ'ಂಬ ಶಬ್ದಕ್ಕರ್ಥ. ವಿವೇಕದಿಂದ ತಿಳಿದು ನೋಡಿದರೆ ಆ ಶಿವಜ್ಞಾನ ಜಡಪಿಂಡರೂಪಲ್ಲವೆಂಬುದೀಗ 'ನೆಲೆಯನಱಿದು ನೋಡಿಹೆನೆಂದರೆ ಅದು ಜಲವು ತಾನಲ್ಲವೆ'ಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಜಾತಿ ವರ್ಣಾಶ್ರಮ ನಾಮಗೋತ್ರಂಗಳೊಳಗೆ ವೇಧಿಸಿಕೊಂಡಿರ್ದು ಹೊದ್ದಿಯೂ ಹೊದ್ದದೆ ಸರ್ವತೋಧಿಕವಾಗಿದ್ದಿತ್ತೆಂಬುದೀಗ 'ಕುಲದೊಳಗಿರ್ದು ಕುಲವ ಬೆರಸದೆ ನೆಲೆಗೆಟ್ಟು ನಿಂದುದನಾರು ಬಲ್ಲರೋ' ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವು ಅಂತರಂಗ ಬಹಿರಂಗದೊಳಗೆ ಪರಿಪೂರ್ಣವಾಗಿರ್ದು ಅನ್ಯವಾಗಿ ತೋಱಿಸಿಕೊಳ್ಳಲಱಿಯದೆ ಗೋಪ್ಯವಾಗಿಪ್ಪುದೆಂಬುದೀಗ 'ಒಳಹೊಱಗೆ ತಾನಾಗಿರ್ದು ತಲೆದೋಱದಿಪ್ಪುದು ಗೊಹೇಶ್ವರಾ ನಿಮ್ಮ ನಿಲವು ನೋಡಾ' ಎಂಬ ಶಬ್ದಕ್ಕರ್ಥ. ೭

**ವ.** ಉದಕದೊಳಗೆ ಪ್ರತಿಬಿಂಬಿಸಿ... ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು. [೧]ಶಶಿಯೊಳಗಣ ರಸದ ರುಚಿಯಂತೆ ಇದ್ದಿತ್ತು. ನನೆಯೊಳಗಣ ಪರಿಮಳದಂತೆ ಇದ್ದಿತ್ತು. ಕೂಡಲ ಸಂಗಮದೇವರ ನಿಲವು [೨]ಕನ್ನೆಯ ಸ್ನೇಹದಂತೆ ಇದ್ದಿತ್ತು.

**ಟೀ.** ಚಿತ್ಪರಮಲಿಂಗದ ಚಿದಂಶವಾದ ಆತ್ಮನು ಶಿವಾಜ್ಞೆಯಿಂದ ಜಡಪಿಂಡ ಸಂಬಂಧಿಯಾಗಿ ತನ್ನ ನಿಜವ ಮಱೆದಿಪ್ಪಲ್ಲಿ ಆ ಆತ್ಮನ ನಿಜದ ನಿಲವಪ್ಪ ಚಿತ್ಪರಮ ಲಿಂಗವು ಆ ಪಿಂಡರೂಪಾದ ಆತ್ಮಾಂತರ್ಗತವಾಗಿ ಜಡಪಿಂಡದಲ್ಲಿ ತದಾಕಾರವಾಗಿ ಗುಪ್ತದಲ್ಲಿಪ್ಪುದು. ಅದೆಂತೆಂದೊಡೆ ದೃಷ್ಟ:- ಶಿವಾಜ್ಞೆಯಿಂದ ಸಮುದ್ರದಲ್ಲಿ ವಡವಾಗ್ನಿಯಿರ್ದು ಆ ಸಮುದ್ರವ ಗ್ರಹಿಸುವ ದೀಪನದೋಱದೆ ಜಲದಲ್ಲಿ ತದಾಕಾರ

೧. ಸಸಿ (ಹು) ೨. ಕನ್ನೆಯ (ಹು)

ವಾಗಿಪ್ಪಂತೆ ಚಿದಗ್ನಿಸ್ವರೂಪಮಪ್ಪ ಪರಮಲಿಂಗವು ಜಲಬುದ್ಬುದ ಪಿಂಡದಲ್ಲಿರ್ದು ಪಿಂಡವ ದಹಿಸದೆ ತದಾಕಾರವಾಗಿ ಇದ್ದಿತೆಂಬುದೀಗ 'ಉದಕದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತೆ ಇದ್ದಿತ್ತು' ಎಂಬ ಶಬ್ದಕ್ಕರ್ಥ. ಚಂದ್ರಮನೊಳಗಣ ಅಮೃತಕಿರಣವು ಆ ಅಮೃತದಿಂದ ಬೇರ್ಪಡಿಸಿ ತೋಱದಂತೆ ಪಿಂಡಮಧ್ಯದಲ್ಲಿಪ್ಪ ಆತ್ಮರಸವ ಬೇರ್ಪಡಿಸಿ ಚಿತ್ಪರಮಪ್ರಕಾಶಲಿಂಗವು ತೋಱದೆಂಬುದೀಗ 'ಸತಿಯೊಳಗಣ ರಸದ ರುಚಿಯಂತೆ ಇದ್ದಿತ್ತೆಂಬ ಶಬ್ದಕ್ಕರ್ಥ. ಕಸುನಸಿಯೊಳಗೆ ಸುವಾಸನೆದೋಱದೆಯಿರ್ದ ಸುಗಂಧದಂತೆ ಆ ಚಿತ್ಪರಮಲಿಂಗವು ಪಿಂಡಮಧ್ಯದಲ್ಲಿರ್ದು ತನ್ನ ಶಿವಸದ್ವಾಸನಾಜ್ಞಾನ ತಲೆದೋಱದೆ ಆ ಪಿಂಡದಲ್ಲಿ ತದಾಕಾರವಾಗಿ ಅಡಗಿ ಇದ್ದಿತೆಂಬುದೀಗ 'ನನೆಯೊಳಗಣ ಪರಿಮಳದಂತೆ ಇದ್ದಿತ್ತು' ಎಂಬ ಶಬ್ದಕ್ಕರ್ಥ. ವಿಷಯಸಂಗಸುಖದ ಋತುವಾಗದೆಯಿರ್ದ ಹಸುಳೆಯಲ್ಲಿ ಕಾಮ ಮೈಗಾಣಿಸದೆ ಅಡಗಿ ಇದ್ದಂತೆ ಚಿತ್ಪರಮಲಿಂಗದ ಸುಖಾನಂದವು ಪಿಂಡಸ್ಥವಾಗಿರ್ದು ಮೈಗಾಣಿಸದೆ ಇದ್ದಿತ್ತೆಂಬುದೀಗ 'ಕೂಡಲ ಸಂಗಮದೇವರ ನಿಲವು ಕನ್ಯೆಯ ಸ್ನೇಹದಂತಿದ್ದಿತ್ತೆಂಬ ಶಬ್ದಕ್ಕರ್ಥ. ೩

ವ. ಮರೀಚಿಯೊಳಡಗಿದ ಬಿಸಿಲಿನಂತೆ ಇದ್ದಿತ್ತು. ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು. ಚಿತ್ರಿಕನೊಳಡಗಿದ ಚಿತ್ರದ ಪಟದಂತೆ ಇದ್ದಿತ್ತು. ಅಲಿಯೊಳಗಣ ತೇಜದ ಗೋಪ್ಯದಂತೆ ಇದ್ದಿತ್ತು. ನುಡಿಯೊಳಡಗಿದ ಅರ್ಥದಂತಿದ್ದಿತ್ತು ಕೂಡಲಸಂಗಯ್ಯ ನಿಮ್ಮ ನಿಲವು.

ಟೀ. ಶಿವಾಂಶಿಕವಾದ ಆತ್ಮನು ಜಡಪಿಂಡಸಂಬಂಧಿಯಾಗಿ ತನ್ನ ನಿಜವ ಮಱೆದಿಪ್ಪಲ್ಲಿ ಆ ಆತ್ಮನ ನಿಜದ ನಿಲವಪ್ಪ ಪರಬ್ರಹ್ಮವೆಂತಿದ್ದಿತ್ತೆಂದಡೆ ಆ ಆತ್ಮಾಂತರ್ಗತವಾಗಿ ಆ ಪಿಂಡದಲ್ಲಿಪ್ಪುದು. ಅದು ಹೇಗೆಂದಡೆ ಪರಿಪೂರ್ಣವಾಗಿರ್ದ ಬಿಸಿಲಿನೊಳಗೆ ಮರೀಚಿಕಾಜಲಛಾಯೆದೋಱಲು ಆ ತೋಱಿದ ಮರೀಚಿಕದೊಳಗೆ ಆ ಪರಿಪೂರ್ಣವಾದ ಬಿಸಿಲಿರ್ದು ಕಾಣಿಸದೆ ಇಪ್ಪಂತೆ ಆ ಪರಬ್ರಹ್ಮದ ಅಖಂಡ ಚಿತ್ಪ್ರಕಾಶದೊಳಗೆ ತೋಱಿದ ಮಿಥ್ಯಾಮಾಯಾ ಛಾಯಜಲರೂಪವಾದ ಪಿಂಡದೊಳಗೆ ಅಖಂಡ ಚಿಚ್ಚೈತನ್ಯಪ್ರಕಾಶವಿರ್ದು ಕಾಣಿಸದೆ ಇಪ್ಪುದೆಂಬುದೀಗ 'ಮರೀಚಿಯೊಳಗಡಗಿದ ಬಿಸಿಲಿನಂತೆ' ಎಂಬ ಶಬ್ದಕ್ಕರ್ಥ. ಹಾಲಿನೊಳಗೆ ತುಪ್ಪವಿರ್ದು ಪರಿಮಳದೋಱದೆ ಹಾಲಿನಂತೆ ತದಾಕಾರವಾಗಿರ್ದು ಬೇರ್ಪಡಿಸಿ ಕಾಣಸಬಾರದಿಪ್ಪಂತೆ ಪರಮಾತ್ಮಲಿಂಗವು ಪಿಂಡರೂಪದಲ್ಲಿ ತದಾಕಾರವಾಗಿಪ್ಪುದು. ಅಂತಿರ್ದು ತನ್ನ ಶಿವಸದ್ವಾಸನೆ ತಲೆದೋಱದೆ ಅಡಗಿಪ್ಪುದೆಂಬುದೀಗ 'ಕ್ಷೀರದೊಳಗಣ ತುಪ್ಪದಂತೆ ಇದ್ದಿತ್ತು' ಎಂಬ ಶಬ್ದಕ್ಕರ್ಥ. ಚಿತ್ರಿಕನ ಭಾವದಲ್ಲಿಪ್ಪ

ಚಿತ್ರದ ರೂಹು ಕಾಣಿಸದೆ ಇಪ್ಪಂತೆ ಚಿತ್ಪ್ರಭಾಚೈತನ್ಯಲಿಂಗವು ಪಿಂಡಮಧ್ಯದಲ್ಲಿರ್ದು ತನ್ನ ರೂಪು ಕಾಣಿಸದೆ ಇಪ್ಪುದೆಂಬುದೀಗ 'ಚಿತ್ರಿಕನೊಳಗಡಗಿದ ಚಿತ್ರಪಟದಂತೆ ಇದ್ದಿತ್ತು' ಎಂಬ ಶಬ್ದಕ್ಕರ್ಥ. ಕಂಗಳ ಪಟಲದೊಳಗಿಪ್ಪ ಸೂಕ್ಷ್ಮಪ್ರಭೆ ಕಾಣು ಹಿಂಗೆ ಬಾರದಂತೆ ಚಿತ್ಪ್ರಭಾಲಿಂಗವು ಪಿಂಡಸ್ಥವಾಗಿರ್ದು ಕಾಣುಹುದೋಟಿ ದೆಂಬುದೀಗ 'ಆಲಿಯೊಳಗಣ ತೇಜದ ಗೋಪ್ಯದಂತಿದ್ದಿತ್ತು' ಎಂಬ ಶಬ್ದಕ್ಕರ್ಥ. ತತ್ತ್ವಾನುಭಾವದ ನುಡಿಯರ್ಥ ಎಲ್ಲರಿಗೆ ಕಾಣಿಸದೆ ಗೋಪ್ಯವಾಗಿ ಇಪ್ಪಂತೆ ಚಿದ್ಬೋಧಾಮೂರ್ತಿಯಪ್ಪ ಚಿಲ್ಲಿಂಗವು ಪಿಂಡಸ್ಥವಾಗಿರ್ದುದ ವಿವರಿಸಬಾರದೆಂಬು ದೀಗ 'ನುಡಿಯೊಳಗಡಗಿದ ಅರ್ಥದಂತಿದ್ದಿತ್ತು' ಎಂಬ ಶಬ್ದಕ್ಕರ್ಥ. ೪

**ವ.** ಆಡಬಾರದ ಬಯಲು, ಸೂಡಬಾರದ ಬಯಲು, ಹಿಡಿಯಬಾರದ ಬಯಲು, ಒಡಲಿಲ್ಲದಾ ಬಯಲು ಒಡಲೊಳಡಗಿದ ಭೇದವ ಲೋಕದ ಜಡಜೀವಿಗಳೆತ್ತ ಬಲ್ಲರೈ ರಾಮನಾಥಾ ?

**ಟೀ.** ಪರಬ್ರಹ್ಮವೆಂಬುದು ಚಿದ್ಬೈಳಗಿನ ಬಯಲು, ಅಂತಪ್ಪ ಬಯಲನುಪ ಮಿಸಬಾರದೆಂಬುದೀಗ 'ಆಡಬಾರದ ಬಯಲು' ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವ ಭಿನ್ನವಿಟ್ಟು ರೂಹಿಸಿ ಅಂಗದಲ್ಲಿ ಧರಿಸಿ ಪೂಜಿಸಬಾರದೆಂಬುದೀಗ 'ಸೂಡಬಾರದ ಬಯಲು' ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮವ ಮನ ಭಾವ ಜ್ಞಾನ ಹಸ್ತಂಗಳಿಂದ ಲಕ್ಷ್ಯವಿಟ್ಟು ಹಿಡಿಯಬಾರದೆಂಬುದೀಗ 'ಹಿಡಿಯಬಾರದ ಬಯಲು' ಎಂಬ ಶಬ್ದಕ್ಕರ್ಥ. ಆ ಪರಬ್ರಹ್ಮಕ್ಕೆ ದೇಹ ಕರಣಂಗಳಿಲ್ಲವೆಂಬು ದೀಗ 'ಒಡಲಿಲ್ಲದ ಬಯಲು' ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವು ತನ್ನ ಸ್ವಲೀಲೆಯಿಂದ ತನ್ನ ತದಂಶವನೆ ಜೀವಾತ್ಮನೆನಿಸಿ ದೇಹ ಕರಣ ಸಂಬಂಧಿಯ ಮಾಡಿದಲ್ಲಿ ಆ ದೇಹಸಂಬಂಧಿಯಾದ ಆತ್ಮಾಂತರ್ಗತವಾಗಿ ಶಿವನಿಪ್ಪನು. ಅದೆಂತೆಂದಡೆ ನಷ್ಟ ಚಿನ್ನದ ಬಣ್ಣದಂತೆ. ಅಂತು ಶಿವನು ಆತ್ಮನ ಕೂಡೆ ತದಾ ಕಾರವಾಗಿ ಪಿಂಡಸ್ಥವಾಗಿರ್ದ ಆ ಜೀವಾತ್ಮನ ಗುಣಧರ್ಮಕರ್ಮಂಗಳ ಹೊದ್ದದೆ ತನ್ನ ನಿಜವ ಪ್ರಕಾಶಿಸಿ ಜೀವಂಗೆ ಅಱುಹದೆ ಅಡಗಿಪ್ಪನು. ಅಂತು ತನ್ನ ನಿಜದ ನಿಲವಪ್ಪ ಪರವಸ್ತು ತನ್ನಲ್ಲಿರ್ದುದ ತಾವಱಿಯದಿಪ್ಪರು ಜಡದೇಹ ಸಂಬಂಧದಿಂದ ಜೀವಿಗಳೆಂಬುದೀಗ 'ಒಡಲಿಲ್ಲದ ಬಯಲು ಒಡಲೊಳಡಗಿದ ಭೇದವ ಲೋಕದ ಜಡಜೀವಿಗಳೆತ್ತ ಬಲ್ಲರಯ್ಯಾ ರಾಮನಾಥಾ' ಎಂಬ ಶಬ್ದ ಕ್ಕರ್ಥ. ೫

**ವ.** ಮರನೊಳಗೆ ಮಂದಾಗ್ನಿಯನುರಿಯದಂತಿರಿಸಿದೆ. ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ. ಶರೀರದೊಳಗೆ ಆತ್ಮನನಾರೂ ಕಾಣ

ದಂತಿರಿಸಿದೆ. ನೀ ಬೆರಸಿಹ ಭೇದಕ್ಕೆ ಬೆರಗಾದೆನಯ್ಯಾ ರಾಮನಾಥಾ !

**ಟೀ.** ಪರಶಿವನು ತನ್ನ ತದಂಶವಾದ ಜೀವಾತ್ಮರೊಳು ಬೆರಸಿಹನು ತನ್ನ ನಿಜವನಱುಹದೆ. ಅದೆಂತೆಂದಡೆ ಶಿವಾಜ್ಞೆಯಿಂದ ಮರದೊಳಗಿಪ್ಪ ಅಗ್ನಿ ಮರನ ಸುಡದಿಪ್ಪಂತೆ ಶಿವನು ಜೀವಾತ್ಮನ ಕೂಡೆ ಜಡಕಾಷ್ಠರೂಪಾದ ದೇಹದಲ್ಲಿರ್ದು ತನ್ನ ಚಿದಗ್ನಿಯಿಂದ ದೇಹವ ನಷ್ಟವ ಮಾಡದೆ ನಿಶ್ಚಲನಾಗಿಪ್ಪನೆಂಬುದೀಗ 'ಮರದೊಳಗೆ ಮಂದಾಗ್ನಿಯನುರಿಯದಂತಿರಿಸಿದೆ' ಎಂಬ ಶಬ್ದಕ್ಕರ್ಥ. ಶಿವಾಜ್ಞೆಯಿಂದ ಹಾಲೊಳಗೆ ತುಪ್ಪವಿರ್ದು ಪರಿಮಳದೋಱದಿಪ್ಪಂತೆ ಶಿವನ ಸದ್ವಾಸನಾಜ್ಞಾನ ದೇಹದಲ್ಲಿರ್ದು ಪ್ರಭಾವಿಸದಿಪ್ಪುದೆಂಬುದೀಗ 'ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ' ಎಂಬ ಶಬ್ದಕ್ಕರ್ಥ. ಅಂತು ಪರಶಿವನು ತನ್ನ ತದಂಶವಾದ ಆತ್ಮಂಗೆ ದೇಹಸಂಬಂಧಮಂ ಮಾಡಿ ಆ ದೇಹ ತಾನೆಂಬ ತನ್ನದೆಂಬ ಅಜ್ಞಾನಮಂ ಪುಟ್ಟಿಸಿ, ತಾನು ಶಿವಾಂಶಿಕನಾದ ಆತ್ಮನು ತಾನೆಂಬುದನು ತನಗೆ ಕಾಣಬಾರದಂತೆ ಇರಿಸಿದನೆಂಬುದೀಗ 'ಶರೀರದೊಳಗಾತ್ಮನನಾರೂ ಕಾಣದಂತೆ ಇರಿಸಿದೆ' ಎಂಬ ಶಬ್ದಕ್ಕರ್ಥ. ಅಂತು ಶಿವನು ತನ್ನ ತದಂಶವಾದ ಆತ್ಮನಲ್ಲಿ ವಿಯೋಗವಿಲ್ಲದೆ ಬೆರಸಿರ್ದು ತಿಯಾತ್ಮಂಗೆ ಜಡಪಿಂಡವ ಸಂಬಂಧಿಸಿ, ದುಃಖಕ್ಕೀಡು ಮಾಡಿ ತಾನಾ ಜಡಪಿಂಡಾತ್ಮನಲ್ಲಿ ಬೆರಸಿರ್ದು ನಿರ್ಲೇಪಿಯಾಗಿಪ್ಪ ಪರಶಿವನ ಬೆಡಗಾಶ್ಚರ್ಯವೆಂಬುದೀಗ 'ನೀ ಬೆರಸಿಹ ಭೇದಕ್ಕೆ ಬೆರಗಾದೆನಯ್ಯಾ ರಾಮನಾಥಾ' ಎಂಬ ಶಬ್ದಕ್ಕರ್ಥ. ೬

**ಪ್ರ.** ಒಡಲೊಳಗಿಣ ಕಿಚ್ಚು ಒಡಲ ಸುಡದ ಭೇದವನು, ಕುಡಿದ ನೀರಿನಲ್ಲಿ ಆ ಕಿಚ್ಚು ನಂದದ ಭೇದವನು, ಮೃಡನೆ ಪ್ರಾಣಪ್ರಕೃತಿಯೊಳಗೆ ನೀನಡಗಿಹ ಭೇದವ ಲೋಕದ ಜಡಜೀವಿಗಳೆತ್ತ ಬಲ್ಲರಯ್ಯಾ ರಾಮನಾಥಾ ?

**ಟೀ.** ದೇಹದಲ್ಲಿರ್ದ ಉದರಾಗ್ನಿ ದೇಹವ ಸುಡದಿಪ್ಪಂತೆ, ಆ ಉದರಾಗ್ನಿ ಕುಡಿದ ನೀರಿನಲ್ಲಿ ತಾನು ನಂದದಿಪ್ಪಂತೆ, ಚಿದಗ್ನಿಸ್ವರೂಪವಪ್ಪ ಪರಶಿವನು ದೇಹಕರಣಾತ್ಮನಲ್ಲಿರ್ದು ಆ ದೇಹ ಕರಣಂಗಳ ನಷ್ಟವ ಮಾಡದೆ ಇಪ್ಪನು. ಮತ್ತಾ ದೇಹಸಂಸಾರ ವಿಷಯರಸಂಗಳಿಂದ ತಾ ನಷ್ಟವಾಗದೆ ನಿರ್ಲೇಪಿಯಾಗಿಹನು ಪರಶಿವಲಿಂಗವು. ಅಂತು ದೇಹ ಕರಣಸಂಬಂಧಿಯಾದ ಆತ್ಮನ ನಿಜಸ್ವರೂಪವಪ್ಪ ಪರಶಿವಲಿಂಗವು ಆ ಜೀವಾತ್ಮನಲ್ಲಿ ವಿಯೋಗವಿಲ್ಲದೆ ಕೂಡಿ

ಪಿಂಡಸ್ಥವಾಗಿರ್ದು ತನ್ನನಾ ದೇಹಿಗಳಿಗೆ ಕಾಣಿಸದಿಪ್ಪನು ಪರಶಿವಲಿಂಗವು ಎಂಬುದೀ ವಚನದ ತಾತ್ಪರ್ಯಾರ್ಥ. ೭

**ವ.** ಕಲ್ಲೊಳಗೆ ಹೊನ್ನುಂಟು. ಮರದೊಳಗೆ ಅಗ್ನಿಯುಂಟು. ಹಾಲೊಳಗೆ ತುಪ್ಪವುಂಟು. ಅಂತರಾಮಿಯಲ್ಲಿ ಶಿವನಿಹನು. ಇದೇನು ಕಾರಣ ಕತ್ತಲೆ ಕಾಣಬಾರದು ? ತೋಱಬಲ್ಲ ಗುರು ಸುಳಿಯನು ಕೂಡಲ ಸಂಗಮದೇವಾ.

**ಟೀ.** ಮಱವೆಯನೆಯ್ದಿಪ್ಪ ಕಲುಹೃದಯಾತ್ಮರೊಳಗೆ ಚಿತ್ಪ್ರಕಾಶಲಿಂಗ ವಡಗಿಹನೆಂಬುದೀಗ ' ಕಲ್ಲೊಳಗೆ ಹೊನ್ನುಂಟು ' ಎಂಬ ಶಬ್ದಕ್ಕರ್ಥ. ಜಡಕಾಷ್ಠ ಸ್ವರೂಪಾದ ಪಿಂಡದೊಳಗೆ ಗತವನೆಯ್ದಿ ಚಿದಗ್ನಿಯಿಪ್ಪುದೆಂಬುದೀಗ ' ಮರ ನೊಳಗೆ ಅಗ್ನಿಯುಂಟು ' ಎಂಬ ಶಬ್ದಕ್ಕರ್ಥ. ಆ ಪಿಂಡಸಂಬಂಧಿಯಾಗಿರ್ದ ಆತ್ಮನಲ್ಲಿ ಅಂತರ್ಗತವಾಗಿ ಶಿವಸದ್ವಾಸನಾ ಘೃತವಿಪ್ಪುದೆಂಬುದೀಗ ' ಹಾಲೊಳಗೆ ತುಪ್ಪವುಂಟು ' ಎಂಬ ಶಬ್ದಕ್ಕರ್ಥ. ಅಂತು ಶಿವಾಂಶಿಕವಾದ ಆತ್ಮನು ಜಡ ಪಿಂಡಸ್ಥವಾಗಿಪ್ಪಲ್ಲಿ ಆತ್ಮನ ನಿಜಸ್ವರೂಪವಪ್ಪ ಶಿವತತ್ತ್ವವು ಆತ್ಮಾಂತರ್ಗತವಾಗಿ ಪಿಂಡದಲ್ಲಿ ಅಡಗಿಪ್ಪುದೆಂಬುದೀಗ ' ಅಂತರಾಮಿಯಲ್ಲಿ ಶಿವನಿಹನು ' ಎಂಬ ಶಬ್ದಕ್ಕರ್ಥ. ಅಂತು ಆತ್ಮ ತನ್ನ ನಿಜವಪ್ಪ ಪರವಸ್ತು ತನ್ನಲ್ಲಿ ತಾನಾಗಿರ್ದು ತಾ ಕಾಣದಿರ್ಪ ಅಜ್ಞಾನ ಸಂಬಂಧ ಜೀವಂಗೆ ಶಿವಾಜ್ಞೆಯಿಂದ ಬಂದಿತ್ತೆಂಬುದೀಗ ' ಇದೇನು ಕಾರಣ ಕತ್ತಲೆ ಕಾಣಬಾರದು ' ಎಂಬ ಶಬ್ದಕ್ಕರ್ಥ. ಅಂತಿಪ್ಪ ಆತ್ಮಂಗೆ ತನ್ನಲ್ಲಿಪ್ಪ ತನ್ನ ಶಿವತತ್ತ್ವವ ತನಗೆ ಅಱುಹಿ ಕೊಡಬಲ್ಲುದು ಸಮ್ಯಗ್ಜ್ಞಾನವಾದ ಕಾರಣ, ಅಂತಪ್ಪ ಸಮ್ಯಗ್‌ಜ್ಞಾನ ಸಂಚರಿಸಿ ಪ್ರಭಾವಿಸದೆಂಬುದೀಗ ' ತೋಱಬಲ್ಲ ಗುರು ಸುಳಿಯನು ಕೂಡಲ ಸಂಗಮದೇವಾ ' ಎಂಬ ಶಬ್ದಕ್ಕರ್ಥ. ೮

**ವ.** ಭೂಮಿಯ ಕಠಿಣವನು ಆಕಾಶದ ಮೃದುವನು ತಿಳಿವ ಗಮನವಲ್ಲಿಯೆ ನಿಂದಿತ್ತು. ಉದಕದೊಳಗೆ ಹುಟ್ಟಿದ ತೃಷ್ಣೆ ಉದಕವನಜಿಸಿತ್ತಲ್ಲಾ ! ಒಳಗೆ ಸತ್ತು ಹೊಱಗೆ ಆಡುತ್ತದೆ. ಗೊಹೇಶ್ವರ ಬೆರಗಾಗಿ ಅಲ್ಲಿಯೆ ನಿಂದನು.

**ಟೀ.** ದೇಹವೆಂಬುದೀಗ 'ಭೂಮಿ'ಯೆಂಬ ಶಬ್ದಕ್ಕರ್ಥ. ಆ ದೇಹದ ಅಜ್ಞಾನವೆಂಬುದೀಗ ' ಭೂಮಿಯ ಕಠಿಣವನು ' ಎಂಬ ಶಬ್ದಕ್ಕರ್ಥ. ಆತ್ಮನೆಂಬು

ದೀಗ 'ಆಕಾಶ'ವೆಂಬ ಶಬ್ದಕ್ಕರ್ಥ. ಆ ಆತ್ಮನು ದೇಹೋಹಮೆಂದು ಆ ದೇಹದಲ್ಲಿ ದಯ ಕರುಣರಸ ಚಿತ್ತವನುಳ್ಳುದಾಯಿತೆಂಬುದೀಗ 'ಆಕಾಶದ ಮೃದುವನು' ಎಂಬ ಶಬ್ದಕ್ಕರ್ಥ. ಅಂತು ಶಿವಾಜ್ಞೆಯಿಂದ ಆತ್ಮನು ದೇಹೋಹಮೆಂದು ದೇಹ ದಯ ಕರುಣರಸಚಿತ್ತದೊಳಱು ದೇಹಸಂಬಂಧಿಯಾದಲ್ಲಿ ಆ ದೇಹದ ಮಱವೆಯಲ್ಲಿ ತನ್ನ ಚಿದ್ವಿವೇಕದ ಶಿವಾಪೇಕ್ಷೆ ಅಡಗಿತ್ತೆಂಬುದೀಗ 'ತಿಳಿವ ಗಮನವಲ್ಲಿಯೇ ನಿಂದಿತ್ತೆ'ಂಬ ಶಬ್ದಕ್ಕರ್ಥ. ಅಂತು ದೇಹೋಹಂಭಾವದ ಮಱವೆಯಿಂದ ಆತ್ಮನ ಚಿತ್ತು ಅಜ್ಞಾನ ಮಱವೆಯುಕ್ತವಾಗಿ ಮನವೆನಿಸಿತ್ತು. ಆ ಮನವೆಂಬುದೀಗ 'ಉದಕ'ವೆಂಬ ಶಬ್ದಕ್ಕರ್ಥ. ಅಂತಪ್ಪ ಮನದ ಬಯಕೆ ಘನವಾಗಿ ದೇಹೇಂದ್ರಿಯ ವಿಷಯ ಸಂಸಾರ ಸಾರವನೆ ಬಯಸುತ್ತಿರ್ದಿತ್ತೆಂಬುದೀಗ 'ಉದಕದೊಳಗೆ ಹುಟ್ಟಿರ್ದ ತೃಷ್ಣೆ ಉದಕವನಱಸಿತ್ತಲ್ಲಾ' ಎಂಬ ಶಬ್ದಕ್ಕರ್ಥ. ಅಂತು ದೇಹಸಂಸಾರ ಸುಖವ ಬಯಸುವ ಮನವುಳ್ಳ ದೇಹಿಯ ಅಂತರಂಗದಲ್ಲಿ ಶಿವಜ್ಞಾನ ಶೂನ್ಯವಾಯಿತ್ತೆಂಬುದೀಗ 'ಒಳಗೆ ಸತ್ತು' ಎಂಬ ಶಬ್ದಕ್ಕರ್ಥ. ಅಂತು ಅಂತರಂಗದ ಜ್ಞಾನ ಶೂನ್ಯವಾಗಿ ಬಹಿರ್ಮುಖದಲ್ಲಿ ದೇಹ ಕರಣ ಇಂದ್ರಿಯ ವಿಷಯವ್ಯವಹಾರಿಯಾಗಿರ್ದ ಜೀವನೆಂಬುದೀಗ 'ಹೊಱಗೆ ಆಡುತ್ತದೆ' ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮನಲ್ಲಿರ್ದ ಪರಶಿವಲಿಂಗವು ಆ ಆತ್ಮಾಂತರ್ಗತವಾಗಿ ನಿಂದು ನಿಶ್ಚಲವಾಗಿ ಕಾಣಿಸದೆ ಇರ್ದನೆಂಬುದೀಗ 'ಗುಹೇಶ್ವರ ಬೆರಗಾಗಿ ಅಲ್ಲಿಯೆ ನಿಂದನು' ಎಂಬ ಶಬ್ದಕ್ಕರ್ಥ. ೯

ವ. ಶಿಲೆಯೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಃಶಬ್ದದಂತೆ ಗುಹೇಶ್ವರಾ ನಿಮ್ಮ ಶರಣಸಂಬಂಧ.

ಟೀ. ಶಿವಾಂಶಿಕನಾದ ಆತ್ಮನು ಜಡಪಿಂಡಸಂಬಂಧಿಯಾಗಿ ತನ್ನ ನಿಜದ ನಿಲವಪ್ಪ ಪರಬ್ರಹ್ಮವ ಮಱೆದಿಪ್ಪಲ್ಲಿ ಆ ಆತ್ಮನ ನಿಜದಱಿವಪ್ಪ ಪರಬ್ರಹ್ಮವು ಸಂಶಿಪ್ಪಿತ್ತೆಂದಡೆ ಶಿಲೆಯೊಳಗಿಪ್ಪ ಅಗ್ನಿ ವ್ಯಕ್ತದೋಱದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಕಾಣಿಸಬಾರದೆಂಬುದೀಗ 'ಶಿಲೆಯೊಳಗಣ ಪಾವಕನಂತೆ' ಎಂಬ ಶಬ್ದಕ್ಕರ್ಥ. ಉದಕದೊಳಗೆ ಪ್ರತಿಬಿಂಬವು ಉದಕದ ಗುಣಧರ್ಮಕರ್ಮವ ಹೊದ್ದದ ಹಾಂಗೆ ಆ ಪರಬ್ರಹ್ಮವು ಪಿಂಡದ ಗುಣಧರ್ಮಕರ್ಮವ ಹೊದ್ದದಿಪ್ಪುದೆಂಬುದೀಗ 'ಉದಕದೊಳಗಣ ಪ್ರತಿಬಿಂಬದಂತೆ' ಎಂಬ ಶಬ್ದಕ್ಕರ್ಥ. ಬೀಜದೊಳಗಡಗಿಪ್ಪ ವೃಕ್ಷದ ಹಾಂಗೆ ಆ ಪರಬ್ರಹ್ಮವು ಪಿಂಡಮಧ್ಯದಲ್ಲಿ ಗೂಢವಾಗಿಪ್ಪುದೆಂಬುದೀಗ 'ಬೀಜದೊಳಗಣ ವೃಕ್ಷದಂತೆ' ಎಂಬ ಶಬ್ದಕ್ಕರ್ಥ.

ಆ ಶಬ್ದದೊಳಗೆ ನಿಃಶಬ್ದವಾಗಿದ್ದುದನು ಭೇದಿಸಬಾರದ ಹಾಂಗೆ ಆ ಪರಬ್ರಹ್ಮವು ಪಿಂಡಸ್ಥವಾಗಿರ್ದು ಅಭೇದ್ಯವಾಗಿಪ್ಪುದೆಂಬುದೀಗ 'ಶಬ್ದದೊಳಗಣ ನಿಃಶಬ್ದದಂತೆ' ಎಂಬ ಶಬ್ದಕ್ಕರ್ಥ. ಅಂತು ಶಿವಾಂಶಿಕವಾದ ಆತ್ಮನು ಶಿವಾಜ್ಞೆಯಿಂದ ಜಡಪಿಂಡ ಸಂಬಂಧಿಯಾಗಿ ತನ್ನ ನಿಜವ ಮಱೆದಿಪ್ಪಲ್ಲಿ ಆ ಆತ್ಮನ ನಿಜಸ್ವರೂಪಮಪ್ಪ ಪರಬ್ರಹ್ಮವು ಪಿಂಡಸ್ಥವಾದ ಆತ್ಮನಲ್ಲಿ ವಿಯೋಗವಿಲ್ಲದೆ ಪರಿಪೂರ್ಣವಾಗಿರ್ದು ಸ್ಫುರಿಸದೆ ಅಡಗಿಪ್ಪುದು. ಅಂತು ಆತ್ಮನು ತನ್ನಲ್ಲಿ ವಿಯೋಗವಿಲ್ಲದೆ ತಾನೆಯಾಗಿರ್ದ ಪರಬ್ರಹ್ಮವೆ ತಾನೆಂಬ ಶಿವಜ್ಞಾನ ಆತ್ಮಂಗೆ ತಲೆದೋಱದೆ ಆತ್ಮನ ಜಡಪಿಂಡ ಸ್ವರೂಪವಾಗಿಪ್ಪನು. ಅಂತಿಪ್ಪಲ್ಲಿ ಮುಂದೆ ಶಿವಜ್ಞಾನ ತಲೆದೋಱಿದಲ್ಲಿ ಲಿಂಗ ಶರಣನೆನಿಸುವನೆಂಬುದೀಗ 'ಗುಹೇಶ್ವರಾ ನಿಮ್ಮ ಶರಣ ಸಂಬಂಧ' ವೆಂಬ ಶಬ್ದಕ್ಕರ್ಥ. ೧೦

ಪಿಂಡಸ್ಥಲ ಸಂಪೂರ್ಣ

## ಅಂತು ಸ್ಥಲ ೬ಕ್ಕಂ ಶ್ಲೋಕ ೬೩ಕ್ಕಂ ವಚನ ೭೩ಕ್ಕಂ

## ಮಂಗಳಂ

## ಶ್ರೀ

# ೭. ಪಿಂಡಜ್ಞಾನಸ್ಥಲ

*

**ಸೂತ್ರ.** ಅಂತು ಶಿವಕಲಾಸ್ವರೂಪನಪ್ಪ ಆತ್ಮನು ಮಿಥ್ಯಾಪಿಂಡಸಂಬಂಧಿಯಾಗಿ ದೇಹೋಽಹಮೆಂದು ತನ್ನ ನಿಜ ಸ್ವರೂಪಮಂ ಮಱೆದು ಬಹಿರ್ಮುಖನಾಗಿ ವಿಷಯಾಸಕ್ತನಾಗಿಪ್ಪ ಜೀವಾತ್ಮಂಗೆ ಶಿವಕೃಪೆಯಾಗಲು ಜ್ಞಾನೋದಯವಾಗಿ ತನ್ನ ನಿಜವ ತಿಳಿದು ನೋಡಿ ತಾನು ಪರಶಿವನೆಂದಱಿದು ತನ್ನ ಕಂಡು ನಿಶ್ಚಯಿಸಿದ ಸಮ್ಯಗ್ಜ್ಞಾನಮಂ ಪಿಂಡಜ್ಞಾನವೆಂದು ಹೇಳಲಾದುದು.

**ಪಿಂಡಜ್ಞಾನಸ್ಥಲಕ್ಕೆ ಶ್ಲೋಕ :**

ಸಮ್ಯಗ್ಜ್ಞಾನಮಹಂ ಸಾಕ್ಷಾಚ್ಛಿವ ಇತ್ಯೇವ ವೇದನಂ
ವೇದನೇನೈವ ತೇನಾಯಮವಾಪ್ತಕಾಮಃ ಸುಖೀ ಭವೇತ್

**ಟೀಕು.** ಅಹಂ-ನಾನು, ಸಾಕ್ಷಾತ್-ಪ್ರತ್ಯಕ್ಷವಾದ, ಶಿವಃ-ಶಿವನೆ, ಇತಿ-ಹೀಂಗೆಂಬ, ವೇದನಂ-ಅಱಿವು, ಸಮ್ಯಗ್ಜ್ಞಾನಂ-ಸಮ್ಯಗ್ಜ್ಞಾನವೆನಿಸಿಕೊಂಬುದು. ತೇನ ವೇದನೇನೈವ-ಆ ಸಮ್ಯಗ್ಜ್ಞಾನದಿಂದವೆ, ಅಯಂ-ಈಯಾತ್ಮನು, ಆಪ್ತಕಾಮಃ-ಆಪ್ತ-ಪರಿಪೂರ್ಣವಾದ, ಕಾಮಃ-ಬಯಕೆಯನುಳ್ಳಾತನಾಗಿ, ಸುಖೀ-ನಿತ್ಯಸುಖಿಯಾದಾತನು, ಭವೇತ್-ಅಹನು. ೧

ಲಿಂಗಾಂಗಪದ ಸಂಭೂತ್ವಾ(ತಿಃ?) ಸಮ್ಯಗ್ಧೀಜನ್ಮಮಾತ್ರತಃ
[೧]ಅವಿದ್ಯಾ[೨]ಸಹಕಾರ್ಯೇಣ ನಾಭೂದ್ವೇಽಸ್ಥಿತಿ ಭವಿಷ್ಯತಿ[೧]

೧. (ಅನಾದಿ ವೀರಶೈವಸಾರ ಸಂಗ್ರಹ ಪು. ೧೨೪) ಅವಿದ್ಯಾಸಹಕಾರೋಽಪಿ ನಾಭೂತ್ತದ್ವಸ್ತು ಭಾವತಃ

೨. ಸಹಕಾರೇಣ (ದಾ)

ಟೀ. ಲಿಂಗಾಂಗಪದಸಂಭೂತ್ವಾ ಸಮ್ಯಗ್‌ಧೀ ಜನ್ಮಮಾತ್ರತಃ-ತತ್ಪದಾರ್ಥಮಪ್ಪ ಲಿಂಗಪದದಿಂದ ಹುಟ್ಟಿದಂಥಾ, ತ್ವಂ ಪದಾರ್ಥಮಪ್ಪ ಅಂಗಪದದಿಂದ ಹುಟ್ಟಿದಂಥಾ ಅತ್ಯುತ್ತಮವಪ್ಪ ಐಕ್ಯ ಬುದ್ಧಿ ಹುಟ್ಟಿದ ಮಾತ್ರದಿಂದವೆ, ಅವಿದ್ಯಾಸಹಕಾರ್ಯೇಣ-ಅವಿದ್ಯಾಶಕ್ತಿಯ ಸಹಾಯದಿಂದ ಸಂಭವಿಸುವಂಥಾ, ಭವಿಷ್ಯತಿ-ಕ್ರಿಯೆಗಳು-ಭವಿಷ್ಯತ್ ವರ್ತಮಾನ ಭೂತಗಳೆಂಬ ಕಾಲಕಕ್ಷೆಗಳು ಎಂಬ ಸ್ಥಿತಿ, ನಾಭೂತ್-ಆಗದು, ತಾನೆತಾನಾಗಿಹನಾಗಿ, ಸ್ಮರೇತ್-ಚಿಂತಿಸುವುದು. ೨

ಪಿಂಡಜ್ಞಾನಸ್ಥಲಕ್ಕೆ ವಚನ :

ವ. ಕಣ್ಣಿಂಗೆ ಸತ್ವ ರಜ ತಮವೆಂಬ ತಿಮಿರ ಕವಿದು ಅಜ್ಞಾನವಶನಾದಲ್ಲಿ ಸದ್ಗುರುವನುಪಧಾವಿಸಿ ಔಷಧಿಯ ಬೇಡಲೊಡನೆ ಶಿವಜ್ಞಾನವೆಂಬ ಅಂಜನವನೆಚ್ಚಿ ಎನ್ನ ಕಣ್ಣ ಮುಸುಕಿಹ ಅಜ್ಞಾನಕಾಳಿಕೆಯ ಬೇರ್ಪಡಿಸಿ ತನ್ನ ಪಾದವನಱುಹಿಸಿಕೊಂಡನಯ್ಯಾ ಎನ್ನ ಕಪಿಲಸಿದ್ಧಮಲ್ಲಿನಾಥನು.

ಟೀ. ಶಿವಾಂಶಿಕವಾದ ಆತ್ಮನು ಶಿವಾಜ್ಞೆಯಿಂದ ದೇಹಸಂಬಂಧವಾದಲ್ಲಿ ಆ ದೇಹದ ವಿವರ : ಸ್ಥೂಲದೇಹವೇ ರಜೋಗುಣಸಂಬಂಧ, ಸೂಕ್ಷ್ಮದೇಹವೇ ಸತ್ವಗುಣಸಂಬಂಧ, ಕಾರಣದೇಹವೇ ತಮೋಗುಣಸಂಬಂಧ. ಅಂತು ಗುಣತ್ರಯ ಸಂಬಂಧವಾದ ದೇಹವಾಸನೆಯ ಮಱವೆ ಕವಿದು ಆತ್ಮನ ಸುಜ್ಞಾನದೃಕ್ಕು ಮಱಸಿ ಅಜ್ಞಾನಸಂಬಂಧವಾದನೆಂಬುದೀಗ 'ಕಣ್ಣಿಂಗೆ ಸತ್ವ ರಜ ತಮವೆಂಬ ತಿಮಿರ ಕವಿದು ಅಜ್ಞಾನವಶನಾದ'ನೆಂಬ ಶಬ್ದಕ್ಕರ್ಥ. ಅಂತು ಆತ್ಮನು ದೇಹಸಂಬಂಧದಿಂದ ಅಜ್ಞಾನಿಯಾಗಿ ತನ್ನ ನಿಜ ಶಿವತತ್ತ್ವವ ಕಾಣದೆ ಅಱಸುತ್ತಲಿರ್ದು ತನ್ನ ಸ್ವಸ್ವರೂಪವನಱುಹಿಸಿಕೊಡುವ ಜ್ಞಾನಗುರುಪೂಜೆಯ ಮಾಡಿ, ಮತ್ತೇನನೂ ಬೇಡದೆ ತನ್ನ ನಿಜ ಶಿವತತ್ತ್ವವ ಕಾಬ ಶಿವಜ್ಞಾನ ವರಪ್ರಸಾದವ ಬೇಡಲೊಡನೆ ಗುರು ಕರುಣಿಸಿ ಅಜ್ಞಾನವನಳಿದು ಸಮ್ಯಗ್‌ಜ್ಞಾನವನಿತ್ತು ತನ್ನ ನಿಜ ಶಿವಸ್ವರೂಪನಱುಹಿಸಿದನೆಂಬುದೀಗ ಈ ವಚನದ ತಾತ್ಪರ್ಯಾರ್ಥ. ೧

ವ. ಹಿಂದಣ ಭವಸಾಗರವನು ದಾಂಟಿಪೆ. ಮುಂದಣ ಮುಕ್ತಿಪಥಕ್ಕೆ ಜ್ಞಾನವಂಕುರಿಸಿತ್ತು. ಇನ್ನಂಜೆನಂಜೆನಯ್ಯಾ. ಎನ್ನ ಮನೋಮೂರುತಿಯಪ್ಪ ಚಂಡೇಶ್ವರನ ಕಾರುಣ್ಯವಾಯಿತ್ತು. ಗೆದ್ದೆ ಗೆದೆ ಮಹಾ ಮಾಯೆಯ.

**ಟೀ.** ಶಿವನು ತನ್ನ ತದಂಶವಾದ ಆತ್ಮಂಗೆ ತಾನೆ ದೇಹಸಂಬಂಧಮಂ ಮಾಡಿ, ತಾನಾ ಆತ್ಮನ ಮನಃಪ್ರೇರಕನಾಗಿರ್ದು ಬಳಿಕ ಶಿವ ತಾನೆ ಕರುಣಿಸಿ ಸಮ್ಯಗ್‌ಜ್ಞಾನವ ಪ್ರಕಾಶಿಸಿಕೊಡಲು, ಆ ಸಮ್ಯಗ್‌ಜ್ಞಾನೋದಯದಿಂದ ಆತ್ಮನು ತನ್ನ ನಿಜವ ತಿಳಿದುನೋಡಿ ತಾ ಮೊದಲಾಗಿ ಮನ ಕರಣಸ್ವರೂಪವಾದುದೆಲ್ಲಾ ಪರಬ್ರಹ್ಮವೆಂದಱಿದು ಹಿಂದಣ ಮಿಥ್ಯಾಮಾಯಾಮಱವೆಯ ಭವಭಯದ ಚಿಂತೆ ಹೋಗಿ ಮುಂದೆ ಮೋಕ್ಷಾಧಿಕಾರಿಯಾಗಿರ್ದ ಶಿವಜ್ಞಾನೋದಯದಿಂದಲೆಂಬುದೀ ವಚನದ ತಾತ್ಪರ್ಯಾರ್ಥ. ೬

**ವ.** ಜೀವಕುಳವಳಿಯಿತ್ತು. ಜ್ಞಾನಕುಳ ಉಳಿಯಿತ್ತು. ಭವಪಾಶ ಹಱಿಯಿತ್ತು. ಅಜ್ಞಾನ ಹಿಂಗಿತ್ತು. ಎಲೆ ಗೋಪತಿನಾಥ ವಿಶ್ವೇಶ್ವರಲಿಂಗ ನಿಮ್ಮತ್ತ ಮನವಾಯಿತ್ತೆನಗೆ ಕೃಪೆ ಮಾಡು ಕೃಪೆಮಾಡು ಶಿವಧೋ ಶಿವಧೋ.

**ಟೀ.** ಶಿವಾಂಶಿಕವಾದ ಆತ್ಮನು ಜಡಪಿಂಡಸ್ಥನಾಗಿರ್ದು ತನ್ನ ನಿಜವ ಮಱೆದಿರ್ದಲ್ಲಿ ಶಿವಕೃಪೆಯಿಂದ ಸಮ್ಯಗ್‌ಜ್ಞಾನೋದಯವಾಗಿ ಜೀವನ ಗುಣ ಧರ್ಮವಳಿದು ಚಿತ್ಪರಮನ ಧರ್ಮವಳವಟ್ಟು ಮಾಯಾ ಮಲಂಗಳ ಅಜ್ಞಾನಪಾಶ ಹಱಿದು ಭವಭಯ ಚಿಂತೆ ಹೆಱಿಹಿಂಗಿ ಮನವೆಲ್ಲಾ ಜ್ಞಾನವೆಯಾಗಿ ಶಿವಾಪೇಕ್ಷೆಯಿಂದ ಶಿವಚಿಂತನೆಯುಳವಟ್ಟು ಪಿಂಡದಲ್ಲಿರ್ದ ಆತ್ಮನು ಜ್ಞಾನೋದಯವಾಗಿ ಎಂಬುದೀ ವಚನದ ತಾತ್ಪರ್ಯಾರ್ಥ. ೩

**ವ.** ನೆಲದ ಬೊಂಬೆಯ ಮಾಡಿ, ಜಲದ ಬಣ್ಣವನುಡಿಸಿ, ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ, ವಾಯುವನಲನ ಸಂಚಕ್ಕೆ ಅರಳೆಲೆಯ ಶೃಂಗಾರವ ಮಾಡಿ ಆಡಿಸುವ ಯಂತ್ರವಾಹಕನಾರೋ ? ಬಯಲ ಕಂಭಕ್ಕೆ ತಂದು ಸ್ವಯವೆಂದು ಪರವ ಕಟ್ಟಿದರೆ ಸ್ವಯ ವದ್ವಯವಾಯಿತ್ತೇನೆಂಬೆ ಗುಹೇಶ್ವರಾ ?

**ಟೀ.** ಪೃಥ್ವಿಯಂಶದ ತನುವೆಂಬುದೀಗ ' ನೆಲದ ಬೊಂಬೆ ' ಯೆಂಬ ಶಬ್ದಕ್ಕರ್ಥ. ಆ ತನುವಿಂಗೆ ಅಪ್ಪುವಿನ ಅಂಶದ ರಸದಿಂದ ಬದ್ಧವ ಮಾಡಿ ಎಂಬುದೀಗ ' ಜಲದ ಬಣ್ಣವನುಡಿಸಿ ' ಎಂಬ ಶಬ್ದಕ್ಕರ್ಥ. ಆ ಪೃಥ್ವಿಯಪ್ಪುವಿನ ಅಂಶದಿಂದ ಹಲವು ಪ್ರಕಾರದ ಪ್ರಕೃತಿಯ ಗುಣದಿಂದ ಉಲಿವ ಕರಣಂಗಳೆಂಬವೀಗ ' ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ ' ಎಂಬ ಶಬ್ದಕ್ಕರ್ಥ.

ಅಗ್ನಿ ವಾಯುಗಳೆರಡೂ ತನುಜೀವರ ಸಂಚಯವಾಯಿತ್ತೆಂಬುದೀಗ 'ವಾಯು-ವನಲನ ಸಂಚ' ವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಹಣೆಯಲ್ಲಿ ಪ್ರಾರಬ್ಧ ಸಂಕಲ್ಪಿತವಾಯಿತ್ತೆಂಬುದೀಗ 'ಅರಳೆಲೆಯ ಶೃಂಗಾರವ ಮಾಡಿ' ಎಂಬ ಶಬ್ದಕ್ಕರ್ಥ. ಇಂತು ಜೀವಂಗೆ ಸಂಸಾರವನೊಪ್ಪವಿಟ್ಟು ಪರಶಿವನು ಯಂತ್ರವಾಹಕನಾಗಿ ಆಡಿಸುತ್ತಿರ್ದನೆಂಬುದೀಗ 'ಆಡಿಸುವ ಯಂತ್ರವಾಹಕನಾರೋ' ಎಂಬ ಶಬ್ದಕ್ಕರ್ಥ. ಇದು ಮಿಥ್ಯೆಯೆಂದಱಿವುದೆ 'ಬಯಲೆ'ಂಬುದಕ್ಕರ್ಥ. ಆ ಅಱಿದ ದೃಢಬುದ್ಧಿ ಬುದ್ಧಿಸ್ತಂಭವೆಂಬುದೀಗ 'ಕಂಭ' ವೆಂಬ ಶಬ್ದಕ್ಕರ್ಥ. ಆ ಸ್ತಂಭದಲ್ಲಿ ಪರಬ್ರಹ್ಮವೆ ನಿತ್ಯವೆಂದಱಿದು ಸ್ಥಿರಭಾವದಲ್ಲಿ ನೆಲೆಗೊಳಿಸಿದನೆಂಬುದೀಗ 'ಸ್ವಯವೆಂದು ಪರವ ಕಟ್ಟಿದರೆ' ಎಂಬ ಶಬ್ದಕ್ಕರ್ಥ. ಆ ನೆಲೆಗೊಂಡ ನಿತ್ಯದಿಂ ದ್ವೈತಭಾವವಳಿಯಿತ್ತಾಗಿ 'ಸ್ವಯವದ್ವಯವಾಯಿತ್ತೆ'ಂಬ ಶಬ್ದಕ್ಕರ್ಥ. ೪

ವ. ಎಲೆ ಮನವೆ, ನೀ ನಿನ್ನ ನಿಜವ ತಿಳಿವಡೆ ಆ ನಿನ್ನ ನಿಜವ ಹೇಳುವೆ ಕೇಳು. ಅದು ಕೇವಲ ಜ್ಯೋತಿ, ಅದು ವರ್ಣಾತೀತ. ನೀನದನಱಿ-ಸುವಾಗ ನಿನಗಾವಲ್ಲಿ ನಿಶ್ಚಯ ತೋಱಿತ್ತು ಅದೀಗ ನಿನ್ನ ಪರಿಪೂ-ರ್ಣತ್ವದ ನೆಲೆ. ಆ ನಿನ್ನ ನಿಜವ ನಿಶ್ಚೈಸಿ ನಿರ್ಗಮನಿಯಾದಲ್ಲಿ ಅದೇ ನಿನ್ನ ಸಮ್ಯಗ್ಜ್ಞಾನದ ತೋಱಿಕೆ. ಆ ತೋಱಿಕೆಯ ಅಖಂಡ ಬೆಳಗಿನ ಹೊಳಹಿನೊಳಗೆ ನೀ ನಮ್ಮ ಗುಹೇಶ್ವರಲಿಂಗದ ಶ್ರೀಚರಣವನಱಿಸಿಕೊಂಡು ನಿಶ್ಚಿಂತನಾಗೆಲೆ ಮನವೆ.

ಟೀ. ದೇಹಧರ್ಮದಿಂದ ಭವಬಾಧೆಗಂಜಿ ತನ್ನ ನಿಜವಪ್ಪ ಪರಬ್ರಹ್ಮವ ಕೂಡುವ ಅವಸ್ಥೆ ಮನಕ್ಕೆ ತೋಱಿ ಪರಬ್ರಹ್ಮ ವೇದಾಗಮಂಗಳಿಂದ ತಿಳಿವ ಜ್ಞಾನಸಾಧಕರುಗಳ ಮನದಱಿವ ನೋಡಿ ಪ್ರಭುದೇವರು ಕೃಪೆಯ ಮಾಡಿ ತನ್ನ ನಿಜವ ಕೂಡುವ ವರ್ಮದ ಸಮ್ಯಗ್ಜ್ಞಾನದ ನಿಜವ ನಿರೂಪಿಸಿದ ನಿರೂಪ: ವಾಙ್ಮನಕ್ಕೆ ಬಾರದ ಅನಕ್ಷರಸ್ವರೂಪನಾಗಿಪ್ಪ ಅಖಂಡ ಪರಂಜ್ಯೋತಿರ್ಲಿಂಗವು ಪರಿಪೂರ್ಣವೆಂದಱಿದು, ಆ ಪರಿಪೂರ್ಣ ಬ್ರಹ್ಮಕ್ಕೆ ತಾನು ಅನನ್ಯನೆಂದಱಿದು, ಶಿವೋಹಂ ಎಂದು ದ್ವೈತಭಾವವಳಿದು ಬೇಱಿಟ್ಟಱಿಸುವ ಗಮನಗೆಟ್ಟು ನಿಂದ ನಿಶ್ಚಯದಱಿವೀಗ ತನ್ನ ನಿಜಸ್ವಯಂಪ್ರಕಾಶಮಪ್ಪ ಸಮ್ಯಗ್ಜ್ಞಾನ. ಅಂತು ತನ್ನಲ್ಲಿ ಸಮ್ಯಗ್ಜ್ಞಾನ ಪ್ರಕಾಶಿಸಿ ಅಖಂಡಲಿಂಗದ ಬೆಳಗೆಲ್ಲಾ ತಾನೆಯಾಗಿ, ತನ್ನಲ್ಲಿ ತೋಱಿದ ನಿಜವು ಹೊಳೆದು ಹೋಗದ ಮುನ್ನ ಭಕ್ತಿಯಿಂದ ಬಂದಿವಿಡಿದು ಶಿವಪದವ ಸಾಧಿಸಿ ನಿಶ್ಚಿಂತ ಸುಖದಲ್ಲಿರೆಂದು ನಿರೂಪಿಸಿದರೆಂಬುದೀ ವಚನದ ತಾತ್ಪರ್ಯಾರ್ಥ. ೫

**ಟೀ.** ಶಿವನು ತನ್ನ ತದಂಶವಾದ ಆತ್ಮಂಗೆ ತಾನೆ ದೇಹಸಂಬಂಧಮಂ ಮಾಡಿ, ತಾನಾ ಆತ್ಮನ ಮನಃಪ್ರೇರಕನಾಗಿರ್ದು ಬಳಿಕ ಶಿವ ತಾನೆ ಕರುಣಿಸಿ ಸಮ್ಯಗ್ಜ್ಞಾನವ ಪ್ರಕಾಶಿಸಿಕೊಡಲು, ಆ ಸಮ್ಯಗ್ಜ್ಞಾನೋದಯದಿಂದ ಆತ್ಮನು ತನ್ನ ನಿಜವ ತಿಳಿದುನೋಡಿ ತಾ ಮೊದಲಾಗಿ ಮನ ಕರಣಸ್ವರೂಪವಾದುದೆಲ್ಲಾ ಪರಬ್ರಹ್ಮವೆಂದಱಿದು ಹಿಂದಣ ಮಿಥ್ಯಾಮಾಯಾಮಱವೆಯ ಭವಭಯದ ಚಿಂತೆ ಹೋಗಿ ಮುಂದೆ ಮೋಕ್ಷಾಧಿಕಾರಿಯಾಗಿರ್ದ ಶಿವಜ್ಞಾನೋದಯದಿಂದಲೆಂಬುದೀ ವಚನದ ತಾತ್ಪರ್ಯಾರ್ಥ. ೨

**ವ.** ಜೀವಕುಳವಳಿಯಿತ್ತು. ಜ್ಞಾನಕುಳ ಉಳಿಯಿತ್ತು. ಭವಪಾಶ ಹಱಿಯಿತ್ತು. ಅಜ್ಞಾನ ಹಿಂಗಿತ್ತು. ಎಲೆ ಗೋಪತಿನಾಥ ವಿಶ್ವೇಶ್ವರಲಿಂಗ ನಿಮ್ಮತ್ತ ಮನವಾಯಿತ್ತೆನಗೆ ಕೃಪೆ ಮಾಡು ಕೃಪೆಮಾಡು ಶಿವಧೋ ಶಿವಧೋ.

**ಟೀ.** ಶಿವಾಂಶಿಕವಾದ ಆತ್ಮನು ಜಡಪಿಂಡಸ್ಥನಾಗಿರ್ದು ತನ್ನ ನಿಜವ ಮಱೆದಿರ್ದಲ್ಲಿ ಶಿವಕೃಪೆಯಿಂದ ಸಮ್ಯಗ್ಜ್ಞಾನೋದಯವಾಗಿ ಜೀವನ ಗುಣ ಧರ್ಮವಳಿದು ಚಿತ್ಪರಮನ ಧರ್ಮವಳವಟ್ಟು ಮಾಯಾ ಮಲಂಗಳ ಅಜ್ಞಾನಪಾಶ ಹಱಿದು ಭವಭಯ ಚಿಂತೆ ಹೆಱೆಹಿಂಗಿ ಮನವೆಲ್ಲಾ ಜ್ಞಾನವೆಯಾಗಿ ಶಿವಾಪೇಕ್ಷೆಯಿಂದ ಶಿವಚಿಂತನೆಯುಳವಟ್ಟು ಪಿಂಡದಲ್ಲಿರ್ದ ಆತ್ಮನು ಜ್ಞಾನೋದಯವಾಗಿ ಎಂಬುದೀ ವಚನದ ತಾತ್ಪರ್ಯಾರ್ಥ. ೩

**ವ.** ನೆಲದ ಬೊಂಬೆಯ ಮಾಡಿ, ಜಲದ ಬಣ್ಣವನುಡಿಸಿ, ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ, ವಾಯುವನಲನ ಸಂಚಕ್ಕೆ ಅರಳೆಲೆಯ ಶೃಂಗಾರವ ಮಾಡಿ ಆಡಿಸುವ ಯಂತ್ರವಾಹಕನಾರೋ ? ಬಯಲ ಕಂಭಕ್ಕೆ ತಂದು ಸ್ವಯವೆಂದು ಪರವ ಕಟ್ಟಿದರೆ ಸ್ವಯವದ್ವಯವಾಯಿತ್ತೇನೆಂಬೆ ಗೊಹೇಶ್ವರಾ ?

**ಟೀ.** ಪೃಥ್ವಿಯಂಶದ ತನುವೆಂಬುದೀಗ ' ನೆಲದ ಬೊಂಬೆ ' ಯೆಂಬ ಶಬ್ದಕ್ಕರ್ಥ. ಆ ತನುವಿಂಗೆ ಅಪ್ಪುವಿನ ಅಂಶದ ರಸದಿಂದ ಬದ್ಧವ ಮಾಡಿ ಎಂಬುದೀಗ ' ಜಲದ ಬಣ್ಣವನುಡಿಸಿ ' ಎಂಬ ಶಬ್ದಕ್ಕರ್ಥ. ಆ ಪೃಥ್ವಿಯಪ್ಪುವಿನ ಅಂಶದಿಂದ ಹಲವು ಪ್ರಕಾರದ ಪ್ರಕೃತಿಯ ಗುಣದಿಂದ ಉಲಿವ ಕರಣಂಗಳೆಂಬವೀಗ ' ಹಲವು ಪರಿಯಾಶ್ರಮದಲ್ಲಿ ಉಲಿವ ಗೆಜ್ಜೆಯ ಕಟ್ಟಿ ' ಎಂಬ ಶಬ್ದಕ್ಕರ್ಥ.

ಅಗ್ನಿ ವಾಯುಗಳೆರಡೂ ತನುಜೀವರ ಸಂಚಯುವಾಯಿತ್ತೆಂಬುದೀಗ 'ವಾಯು-ವನಲನ ಸಂಚ' ವೆಂಬ ಶಬ್ದಕ್ಕರ್ಥ. ಅಂತಪ್ಪ ಜೀವನ ಹಣೆಯಲ್ಲಿ ಪ್ರಾರಬ್ಧ ಸಂಕಲ್ಪಿತವಾಯಿತ್ತೆಂಬುದೀಗ 'ಅರಳೆಲೆಯ ಶೃಂಗಾರವ ಮಾಡಿ' ಎಂಬ ಶಬ್ದಕ್ಕರ್ಥ. ಇಂತು ಜೀವಂಗೆ ಸಂಸಾರವನೊಪ್ಪವಿಟ್ಟು ಪರಶಿವನು ಯಂತ್ರವಾಹಕನಾಗಿ ಆಡಿಸುತ್ತಿರ್ದನೆಂಬುದೀಗ 'ಆಡಿಸುವ ಯಂತ್ರವಾಹಕನಾರೋ' ಎಂಬ ಶಬ್ದಕ್ಕರ್ಥ. ಇದು ಮಿಥ್ಯೆಯೆಂದಱಿವುದೆ 'ಬಯಲೆ'ಂಬುದಕ್ಕರ್ಥ. ಆ ಅಱಿದ ದೃಢಬುದ್ಧಿ ಬುದ್ಧಿಸ್ತಂಭವೆಂಬುದೀಗ 'ಕಂಭ' ವೆಂಬ ಶಬ್ದಕ್ಕರ್ಥ. ಆ ಸ್ತಂಭದಲ್ಲಿ ಪರಬ್ರಹ್ಮವೆ ನಿತ್ಯವೆಂದಱಿದು ಸ್ಥಿರಭಾವದಲ್ಲಿ ನೆಲೆಗೊಳಿಸಿದನೆಂಬುದೀಗ 'ಸ್ವಯವೆಂದು ಪರವ ಕಟ್ಟಿದರೆ' ಎಂಬ ಶಬ್ದಕ್ಕರ್ಥ. ಆ ನೆಲೆಗೊಂಡ ನಿತ್ಯದಿಂ ದ್ವೈತಭಾವವಳಿಯಿತ್ತಾಗಿ 'ಸ್ವಯವದ್ವಯವಾಯಿತ್ತೆ'ಂಬ ಶಬ್ದಕ್ಕರ್ಥ. ೪

**ವ.** ಎಲೆ ಮನವೆ, ನೀ ನಿನ್ನ ನಿಜವ ತಿಳಿವಡೆ ಆ ನಿನ್ನ ನಿಜವ ಹೇಳುವೆ ಕೇಳು. ಅದು ಕೇವಲ ಜ್ಯೋತಿ, ಅದು ವರ್ಣಾತೀತ. ನೀನದನಱಿ-ಸುವಾಗ ನಿನಗಾವಲ್ಲಿ ನಿಶ್ಚಯ ತೋಱಿತ್ತು ಅದೀಗ ನಿನ್ನ ಪರಿಪೂ-ರ್ಣತ್ವದ ನೆಲೆ. ಆ ನಿನ್ನ ನಿಜವ ನಿಶ್ಚೈಸಿ ನಿರ್ಗಮನಿಯಾದಲ್ಲಿ ಅದೇ ನಿನ್ನ ಸಮ್ಯಗ್ಜ್ಞಾನದ ತೋಱಿಕೆ. ಆ ತೋಱಿಕೆಯ ಅಖಂಡ ಬೆಳಗಿನ ಹೊಳಹಿನೊಳಗೆ ನೀ ನಮ್ಮ ಗೊಹೇಶ್ವರಲಿಂಗದ ಶ್ರೀಚರಣವನಱಿಸಿಕೊಂಡು ನಿಶ್ಚಿಂತನಾಗೆಲೆ ಮನವೆ.

**ಟೀ.** ದೇಹಧರ್ಮದಿಂದ ಭವಬಾಧೆಗಂಜಿ ತನ್ನ ನಿಜವಪ್ಪ ಪರಬ್ರಹ್ಮವ ಕೂಡುವ ಅವಸ್ಥೆ ಮನಕ್ಕೆ ತೋಱಿ ಪರಬ್ರಹ್ಮ ವೇದಾಗಮಂಗಳಿಂದ ತಿಳಿವ ಜ್ಞಾನಸಾಧಕರುಗಳ ಮನದಱಿವ ನೋಡಿ ಪ್ರಭುದೇವರು ಕೃಪೆಯ ಮಾಡಿ ತನ್ನ ನಿಜವ ಕೂಡುವ ವರ್ಮದ ಸಮ್ಯಗ್ಜ್ಞಾನದ ನಿಜವ ನಿರೂಪಿಸಿದ ನಿರೂಪ: ವಾಙ್ಮನಕ್ಕೆ ಬಾರದ ಅನಕ್ಷರಸ್ವರೂಪನಾಗಿಪ್ಪ ಅಖಂಡ ಪರಂಜ್ಯೋತಿರ್ಲಿಂಗವು ಪರಿಪೂರ್ಣವೆಂದಱಿದು, ಆ ಪರಿಪೂರ್ಣ ಬ್ರಹ್ಮಕ್ಕೆ ತಾನು ಅನನ್ಯನೆಂದಱಿದು, ಶಿವೋಹಂ ಎಂದು ದ್ವೈತಭಾವವಳಿದು ಬೇಱಿಟ್ಟಱಿಸುವ ಗಮನಗೆಟ್ಟು ನಿಂದ ನಿಶ್ಚಯದಱಿವೀಗ ತನ್ನ ನಿಜಸ್ವಯಂಪ್ರಕಾಶಮಪ್ಪ ಸಮ್ಯಗ್ಜ್ಞಾನ. ಅಂತು ತನ್ನಲ್ಲಿ ಸಮ್ಯಗ್ಜ್ಞಾನ ಪ್ರಕಾಶಿಸಿ ಅಖಂಡಲಿಂಗದ ಬೆಳಗೆಲ್ಲಾ ತಾನೆಯಾಗಿ, ತನ್ನಲ್ಲಿ ತೋಱಿದ ನಿಜವು ಹೊಳೆದು ಹೋಗದ ಮುನ್ನ ಭಕ್ತಿಯಿಂದ ಬಂದಿ ವಿಡಿದು ಶಿವಪದವ ಸಾಧಿಸಿ ನಿಶ್ಚಿಂತ ಸುಖದಲ್ಲಿರೆಂದು ನಿರೂಪಿಸಿದರೆಂಬುದೀ ವಚನದ ತಾತ್ಪರ್ಯಾರ್ಥ. ೫

ವ. ಎಲೆ ಮನವೇ, ಎಲ್ಲಿ ಹವಣಿಸಬಾರದ ಅಖಂಡ ಬೆಳಗು ತೋಱುತ್ತಿಹುದು ಅದೀಗ ನಿನ್ನ ನಿಜ. ಎಲೆ ಮನವೇ, ಅವಲ್ಲಿ ನೀನೆಂಬ ಶಂಕೆ ಹಿಂಗಿ ತಾನೆ ತೋಱುತ್ತಿಹುದು ಅದೀಗ ನಿನ್ನ ನಿಜ. ಎಲೆ ಮನವೇ, ನಿನ್ನ ನಿಜವನಱಿಯಬಲ್ಲಡೆ ಅದೇ ಬ್ರಹ್ಮಜ್ಞಾನ. ಅದೇ ಕೇವಲ ಮುಕ್ತಿ. ಅದೇ ನಮ್ಮ ಗೊಹೇಶ್ವರ ಲಿಂಗವನಱಿವ ಸಹಜಭಕ್ತಿಯ ಕುಳ ಕಾಣಾ! ಎಲೆ ಮನವೇ, ನೀನಿದ ನಿಶ್ಚಯಿಸಿಕೋ ಮಱೆಯದೆ.

ಟೀ. ಶಿವಾಂಶಿಕನಾದ ಆತ್ಮನು ದೇಹಸಂಬಂಧದಿಂದ ತನ್ನ ನಿಜವ ಮಱೆದು ಭವದುಃಖದಿಂದ ನೊಂದು ಬೆಂದು ತನ್ನ ನಿಜವಪ್ಪ ಪರಬ್ರಹ್ಮವ ಕೂಡುವ ಮನವಾದ ಮನದಲ್ಲಿ ಜ್ಞಾನೋದಯವಾಗಿ ಆ ಮನದ ಸಂಶಯವ ತನ್ನ ತಾ ನಿವೃತ್ತಿಯ ಮಾಡಿ ತಿಳಿದುಕೊಂಬ ಜ್ಞಾನನಿಶ್ಚಯದ ಬೋಧೆ ಅದೆಂತೆಂದಡೆ: ಆತ್ಮನ ಮನಕ್ಕೆ ಜ್ಞಾನ ವಿವೇಕದೋಱೆ ತನ್ನ ನಿಜದ ನಿಲವಾವ ಪರಿಯೆಂದು ಶ್ರುತ ಗುರು ಸ್ವಾನುಭಾವದಿಂದ ವಿವೇಕಿಸಿ ನೋಡಲು ತ್ರಿವಿಧದೊಳಗಾವ ಮುಖದಲಾದಡೆಯೂ ಉಪಮಿಸಬಾರದ ಅಖಂಡ ಬೆಳಗು ತನ್ನ ಮನದ ಕಣ್ಣಿಂಗೆ ಭೇದದೋಱದೆ ಗೋಚರಿಸಿ ಕಾಣುತ್ತಿರ್ದ ಕಣ್ಣಿನ ಶಿವಜ್ಞಾನ. ಅಂತಪ್ಪ ಶಿವಜ್ಞಾನವೀಗವೆ ಶಿವನ ನಿಜದಂಗದ ಬೆಳಗು. ಅದೇ ಮುಕ್ತಿಸ್ವರೂಪು. ಅಂತಾದ ಶಿವಜ್ಞಾನವ ದೇಹವುಳ್ಳನ್ನಕ್ಕರ ಮಱೆಯದೆ ಸಾಧಿಸುತ್ತಿರಬೇಕೆಂಬುದೀ ವಚನದ ತಾತ್ಪರ್ಯಾರ್ಥ. ೬

ವ. ಊರೊಳಗಣ ಕಿಚ್ಚು ಕಾನನದಲ್ಲಿ ಉರಿಯಿತ್ತು. ಕಾನನದ ಕಿಚ್ಚು ಬಂದು ಊರೊಳಗೆ ಉರಿಯಿತ್ತು. ಆಲಿಸಿರೋ, ಆಲಿಸಿರೋ, ನಾಲ್ಕು ದಿಕ್ಕಿನ ಬೇಗೆಯ! ಆ ಭೂಭೂಕಾರವ ದೃಷ್ಟಿ ಮುಟ್ಟಿದರೆ ಅಟ್ಟಿ ಸಹಸ್ರವಾಡಿತ್ತು! ಲೆಕ್ಕವಿಲ್ಲದ ಮರಣ ಮಡಿಯಿತ್ತು ಗೊಹೇಶ್ವರಾ!!

ಟೀ. ಊರೆಂದರೆ ಪಂಚಭೂತಗ್ರಾಮವಪ್ಪ ದೇಹ. ಆ ದೇಹದೊಳಗೆ ಉದಯಿಸಿದ ಮಹಾ ಜ್ಞಾನಾಗ್ನಿಯಿಂದವೆ ಭವವೆಂಬ ಅರಣ್ಯವ ದಹನವ ಮಾಡಿತ್ತೆಂಬುದೀಗ 'ಊರೊಳಗಣ ಕಿಚ್ಚು ಕಾನನದಲ್ಲುರಿಯಿತ್ತು' ಎಂಬ ಶಬ್ದಕ್ಕರ್ಥ. ಆ ಭವಕರ್ಮವೆಲ್ಲವೂ ನಾಶವಾಗಲಾಗಿ ಆ ಜ್ಞಾನಾಗ್ನಿಯಿಂದವೆ ಆತನ ಧರ್ಮವಾಸನೆ ದಗ್ಧವಾಯಿತ್ತೆಂಬುದೀಗ 'ಕಾನನದ ಕಿಚ್ಚು ಬಂದು ಊರೊಳಗೆ ಉರಿಯಿತ್ತು' ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಾಗ್ನಿಯ ಪ್ರಭೆ ಸರ್ವತೋಧಿಕ

ತಾನೆಯಾಗಿರಲು ಅದನ್ನು ವಿವೇಕಬುದ್ಧಿಯಿಂದ ನೋಡಿ ಕಾಣುತ್ತಿರಲು ಅದೀಗ 'ಆಲಿಸಿರೋ, ಆಲಿಸಿರೋ, ನಾಲ್ಕು ದಿಕ್ಕಿನ ಬೇಗೆಯು' ನೆಂಬ ಶಬ್ದಕ್ಕರ್ಥ. ಆ ಅತ್ಯಂತ ಉಜ್ವರದ ವೃತ್ತಿಜ್ಞಾನಪ್ರಭೆಯನು ಮಹಾಜ್ಞಾನದೃಷ್ಟಿಯಲ್ಲಿ ವಿಲೀನವ ಮಾಡುತ್ತಿರಲು ಅಲ್ಲಿ ಇದಿರಿಟ್ಟು ತೋಱುತ್ತಿರ್ದ ಸಕಲ ಕರಣಂಗಳೆಲ್ಲವು ಲಯವಾದವೆಂಬುದೀಗ 'ಆ ಭೂಭೂಕಾರವ ದೃಷ್ಟಿ ಮುಟ್ಟಿದರೆ ಅಟ್ಟಿ ಸಹಸ್ರ ವಾಡಿತ್ತು! ಲೆಕ್ಕವಿಲ್ಲದ ಮರಣ ಮಡಿಯಿತ್ತು' ಎಂಬ ಶಬ್ದಕ್ಕರ್ಥ. ೭

ವ. ಸ್ಫಟಿಕದ ಘಟದಂತೆ ಒಳಹೊಱಗು ಇಲ್ಲ ನೋಡಾ! ವಿಗಡ ಚರಿತ್ರಕ್ಕೆ ನಾ ಬೆಱಗಾದೆನು! ನೋಡುವರೆ ಕಾಣಬರುತ್ತಿದೆ. ಮುಟ್ಟುವರೆ ಕೈಗೆ ಸಿಲುಕದು. ಹೊದ್ದುವಡೆ ಸಮೀಪ. ಹತ್ತೆಸಾರಿದಡತ್ತತ್ತ ತೋಱುತ್ತಿದೆ. ಆಕಾರ ನಿರಾಕಾರವ ನುಂಗಿ ಬಯಲುಸಮಾಧಿಯಲ್ಲಿ ಸಿಲುಕಿತ್ತು ನೋಡಾ! ದರುಶನದಿಂದ ಅಮೃತಾಹಾರವಾಯಿತ್ತು, ಬೆರಸಿದಡಿನ್ನೆಂತೋ ಗುಹೇಶ್ವರಾ?

ಟೀ. ಶಿವಾಂಶಿಕನಾದ ಆತ್ಮನು ದೇಹಸಂಬಂಧಿಯಾಗಿರ್ದಲ್ಲಿ ಶಿವಕೃಪೆಯಿಂದ ಜ್ಞಾನೋದಯವಾಗಿ ತನ್ನ ನಿಜವಪ್ಪ ಚಿತ್ಪ್ರಭಾಲಿಂಗವು ತನ್ನ ಒಳಹೊಱಗೆಲ್ಲಾ ಅಖಂಡವಾಗಿ ಬೆಳಗುತ್ತಿರ್ದುದನ ಕಂಡನೆಂಬುದೀಗ 'ಸ್ಫಟಿಕದ ಘಟದಂತೆ ಒಳಹೊಱಗು ಇಲ್ಲ ನೋಡಾ' ಎಂಬ ಶಬ್ದಕ್ಕರ್ಥ. ಅಂತು ತನ್ನ ಒಳಹೊಱಗೆ ಅಖಂಡವಾಗಿರ್ದು ತನಗೆ ಕಾಣಿಸದಿರ್ದ ಪರಿಯು ಜ್ಞಾನೋದಯದಿಂದ ಕಂಡು ಚೋದ್ಯಂಬಡುತಿರ್ದನೆಂಬುದೀಗ 'ವಿಗಡ ಚರಿತ್ರಕ್ಕೆ ನಾ ಬೆರಗಾದೆ'ನೆಂಬ ಶಬ್ದಕ್ಕರ್ಥ. ಅಂತು ತನ್ನ ಒಳಹೊಱಗೆ ಅಖಂಡವಾಗಿ ತನ್ನಲ್ಲಿರ್ದ ನಿರವಯ ಪ್ರಕಾಶಲಿಂಗವು ತನ್ನ ಜ್ಞಾನದೃಕ್ಕಿಂಗೆ ಕಾಣಬಹುದಲ್ಲದೆ ದೃಷ್ಟವಾಗಿ ಕೈಗೆ ಸಿಲುಕದು. ಅಱಿವಡೆ ತೆಱಹಿಲ್ಲದಿಪ್ಪುದು. ಅಱಿದು ಬೆರಸಿಹೆನೆಂದೊಡೆ ಕುಱುಹುದೋಱದು ಎಂಬುದೀಗ 'ನೋಡುವರೆ ಕಾಣಬರುತ್ತಿದೆ. ಮುಟ್ಟುವರೆ ಕೈಗೆ ಸಿಲುಕದು. ಹೊದ್ದುವರೆ ಸಮೀಪ. ಹತ್ತೆಸಾರಿದಡತ್ತತ್ತ' ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮದ ಸ್ವರೂಪವೆಲ್ಲವು ನಿರಾಕಾರವೆಯಾಗಿಪ್ಪತ್ತೆಂಬುದೀಗ 'ಆಕಾರ ನಿರಾಕಾರವ ನುಂಗಿ' ಎಂಬ ಶಬ್ದಕ್ಕರ್ಥ. ಅಂತಿರ್ದ ಪರಬ್ರಹ್ಮದ ನಿಜದಱಿವು ತನ್ನ ನಿರವಯದಲ್ಲಿ ನಿಷ್ಪತ್ತಿಯನೈದಿತ್ತೆಂಬುದೀಗ 'ಬಯಲು ಸಮಾಧಿಯಲ್ಲಿ ಸಿಲುಕಿತ್ತು ನೋಡಾ' ಎಂಬ ಶಬ್ದಕ್ಕರ್ಥ. ಅಂತಿಪ್ಪ ಪರಬ್ರಹ್ಮವ ಜ್ಞಾನದೃಕ್ಕಿಂದ ಕಂಡ ಮಾತ್ರದಲ್ಲಿ ಸತ್ತು ಹುಟ್ಟುವ ಮರಣಬಾಧೆ ಕೆಟ್ಟು ಹೋಗಿ ಅಮರಗಣತ್ವ ವಾಯಿತ್ತೆಂಬುದೀಗ 'ದರುಶನದಿಂದ ಅಮೃತಾಹಾರವಾಯಿತ್ತು' ಎಂಬ

ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವ ಅಭಿನ್ನಭಕ್ತಿಯಿಂದ ಕೂಡಿ ತದಾಕಾರವಾದ ಸುಖವನುಪಮಿಸಬಾರದೆಂಬುದೀಗ 'ಬೆರಸಿದಡಿನ್ನೆಂತೋ' ಎಂಬ ಶಬ್ದಕ್ಕರ್ಥ. ೮

ವ. ಅಯ್ಯಾ ನೀನು ನಿರಾಕಾರವಾಗಿರ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯನೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನು ಸಾಕಾರವಾಗಿರ್ದಲ್ಲಿ ನಾನು ವೃಷಭನೆಂಬ ವಾಹನವಾಗಿರ್ದೆ ಕಾಣಾ. ಅಯ್ಯಾ ನೀನೆನ್ನ ಭವವ ಕೊಂದಹೆನೆಂದು ಜಂಗಮಲಾಂಛನವಾಗಿ ಬಂದಡೆ ನಾನು ಭಕ್ತನೆಂಬ ವಾಹನವಾಗಿರ್ದೆ ಕಾಣಾ, ಕೂಡಲಸಂಗಮದೇವಾ.

ಟೀ. ಬಸವೇಶ್ವರದೇವರು ತಮ್ಮ ಪೂರ್ವಾಪರವಂ ಜ್ಞಾನೋದಯದಿಂದ ನಿರೂಪಿಸಿದ ನಿರೂಪ: ನಿಃಕಲವಾಗಿರ್ದ ಪರಬ್ರಹ್ಮಕ್ಕೆ ಅಖಂಡಜ್ಞಾನಪ್ರಕಾಶವೆ ಅಂಗ. ಆ ಅಂಗವೆಂಬುದೀಗ ಆಧಾರವೆನಿಸಿತ್ತು. ಅಂತು ಆಧಾರವೆನಿಸಿದ ಜ್ಞಾನ ಸ್ವರೂಪವೆ ಬಸವಣ್ಣನೆಂಬುದೀಗ 'ಅಯ್ಯಾ ನೀನು ನಿರಾಕಾರವಾಗಿದ್ದಲ್ಲಿ ನಾನು ಜ್ಞಾನವೆಂಬ ವಾಹನವಾಗಿರ್ದೆ ಕಾಣಾ' ಎಂಬ ಶಬ್ದಕ್ಕರ್ಥ. ಅಂತು ನಿಃಕಲವಾಗಿರ್ದಲ್ಲಿ ಪರಶಿವಂಗೆ ತನ್ನ ಚಿತ್ತುವೆ ತನಗೆ ಅಂಗವಾಗಿರ್ದು ಆ ಚಿಚ್ಚೈತನ್ಯಪ್ರಭಾಂಗವನೆ ಮುಂದುಗೊಂಡು ತನ್ನ ಸ್ವಲೀಲೆಯಿಂದ ಲಿಂಗಮೂರ್ತಿಯಾಯಿತ್ತೆಂಬುದೀಗ 'ಅಯ್ಯಾ ನೀನು ನಾಟ್ಯಕ್ಕೆ ನಿಂದಲ್ಲಿ ನಾನು ಚೈತನ್ಯನೆಂಬ ವಾಹನವಾಗಿರ್ದೆ ಕಾಣಾ' ಎಂಬ ಶಬ್ದಕರ್ಥ. ಅಂತಿರ್ದ ಚಿಲ್ಲಿಂಗವು ತನ್ನ ಚಿಚ್ಚೈತನ್ಯವನೆ ಮುಂದುಗೊಂಡು ಸಾಕಾರವಾಗಿರ್ದಲ್ಲಿ ಆ ಚಿತ್ತುವೇ ವೃಷಭನೆಂಬ ವಾಹನವಾಯಿತ್ತು ಎಂಬುದೀಗ 'ಅಯ್ಯಾ ನೀನು ಸಾಕಾರವಾಗಿರ್ದಲ್ಲಿ ನಾನು ವೃಷಭನೆಂಬ ವಾಹನವಾಗಿರ್ದೆ ಕಾಣಾ' ಎಂಬ ಶಬ್ದಕರ್ಥ. ಅಂತು ಸಾಕಾರವಾದ ಪರಶಿವಂಗೆ ವಾಹನವಾದ ಆ ಚಿಚ್ಚೈತನ್ಯದ ಚಿದಂಶವೆ ಆತ್ಮರುಗಳಾಗಲು ಆ ಆತ್ಮರುಗಳ ಭವವಿಚ್ಛೇದನವ ಮಾಡಬೇಕೆಂದು ಶಿವ ತಾನೆ ಜಂಗಮಸ್ವರೂಪವಾಗಿ ಬಂದಲ್ಲಿ ಆ ಆತ್ಮರುಗಳ ನಿಜಸ್ವರೂಪಮಪ್ಪ ಚಿತ್‌ಸ್ವರೂಪವೆ ಪ್ರಭಾವಿಸಿ ಭಕ್ತಿಯ ತಾಳಿತ್ತೆಂಬುದೀಗ 'ಅಯ್ಯಾ ನೀನೆನ್ನ ಭವವ ಕೊಂದಹೆನೆಂದು ಜಂಗಮವಾಗಿ ಬಂದಡೆ ನಾನು ಭಕ್ತನೆಂಬ ವಾಹನವಾಗಿರ್ದೆ ಕಾಣಾ' ಎಂಬ ಶಬ್ದಕರ್ಥ. ಇಂತು ಚತುರ್ವಿಧವಾದ ವಾಹನವು ಚಿತ್ತುವೆಯಾಯಿತ್ತಾಗಿ ಆ ಚಿತ್‌ಸ್ವರೂಪವೆ ಶರಣ ಬಸವಣ್ಣನೆಂಬುದೀ ವಚನದ ತಾತ್ಪರ್ಯಾರ್ಥ. ೯

ವ. ಸಂಜೆಯ ಮಂಜಿನ ಕಪ್ಪು ಅಂಜಿದಡೆ ಶಂಕೆ ತದ್ರೂಪವಾಗಿ ನಿಂದಿತ್ತು. ತನ್ನ ಭಾವದ ನಟನೆ ನಡೆವನ್ನಕ್ಕರ ನಡೆಯಿತ್ತು. ಅದು ನಿಂದಲ್ಲಿಯೆ

ನಿಂದಿತ್ತು. ಅದರಂತುವನಱಿದಡೆ ಹಿಂದೆ ಹುಸಿ, ಮುಂದೆ ಕೂಡಲ ಸಂಗಮದೇವರ ನಿಲವು ತಾನೆ.

ಟೀ. ಹಗಲಿನ ಇರುಳಿನ ಸಂಧಿ ಸಂಜೆಯೆನಿಸಿಪಂತೆ ಆತ್ಮನ ಅಱಿವು, ಆ ದೇಹದ ಮಱವೆ ಎರಡಱ ಸಂಗದ ಸಂಧಿಯಲ್ಲಿ ಮನವೆಂಬ ಅಜ್ಞಾನ ಹುಟ್ಟಿತ್ತೆಂಬುದೀಗ 'ಸಂಜೆಯ ಮಂಜಿನ ಕಪ್ಪು' ಎಂಬ ಶಬ್ದಕರ್ಥ. ಅಂತಪ್ಪ ಮನದಿಂದ ದೇಹೋಹಮೆಂದು ಭವಭೀತಿಯ ಶಂಕೆದೋಱಿ ಆ ದೇಹ ಶಂಕಾರೂಪವಾಗಿ ಜೀವವೆನಿಸಿ ದೃಶ್ಯನಾದನೆಂಬುದೀಗ 'ಅಂಜಿದಡೆ ಶಂಕೆ ತದ್ರೂಪವಾಗಿ ನಿಂದಿತ್ತು' ಎಂಬ ಶಬ್ದಕ್ಕರ್ಥ. ಅಂತು ಆತ್ಮನ ಭಾವ ದೇಹದ ಭ್ರಾಂತಿಯನ್ನೈದಿ ಚರಿಸುವನ್ನಕ್ಕ ದೇಹಿಯಾಗಿ ಭವದಲ್ಲಿ ಬರುತ್ತಿರ್ದನೆಂಬುದೀಗ 'ತನ್ನ ಭಾವದ ನಟನೆ ನಡೆವನ್ನಕ್ಕರ ನಡೆಯಿತ್ತು' ಎಂಬ ಶಬ್ದಕ್ಕರ್ಥ. ಅಂತು ದೇಹಿಯಾಗಿರ್ದಾತ್ಮಂಗೆ ಜ್ಞಾನೋದಯವಾಗಲೊಡನೆ ಆ ದೇಹೋಹಮೆಂಬ ಭಾವದ ಭ್ರಾಂತಿಯುಳಿಯಿತ್ತು. ಆ ದೇಹದ ಭ್ರಾಂತಿಯುಳಿದಲ್ಲಿಯೆ ದೇಹತೋಱಿಕೆಯು ಹುಸಿ ನಿಂದು ಹೋಯಿತ್ತು. ಅಂತು ತನ್ನಲ್ಲಿ ತೋಱಿದ ಹುಸಿದೇಹವಾಸನೆಯುನಡಗಿಸುವ ಕ್ರಿಯಾಭೇದವನಱಿದಡೆ ಹಿಂದಣ ಜನನ ಮರಣವಿಲ್ಲ, ಮುಂದೆ ಶಿವ ತಾನೆಂಬುದೀಗ 'ಅದು ನಿಂದಲ್ಲಿಯೆ ನಿಂದಿತ್ತು. ಅದರಂತುವನಱಿದಡೆ ಹಿಂದೆ ಹುಸಿ, ಮುಂದೆ ಕೂಡಲ ಸಂಗಮದೇವರ ನಿಲವು ತಾನೆ' ಎಂಬ ಶಬ್ದಕ್ಕರ್ಥ. ೧೦

ವ. ತನ್ನೊಳಗಣ ಅಱಿವು ತನ್ನಲ್ಲಿಯೆ ತೋಱಿದಲ್ಲದೆ ಅನ್ಯದಲ್ಲಿ ತೋಱಬಲ್ಲುದೇ ? ತನ್ನಲ್ಲಿ ತಾನೆ ಇದ್ದಿತ್ತು. ತನ್ನ ತಾನೆ ಪಕ್ವಕ್ಕೆ ಬಂದು ತನ್ನಲ್ಲಿ ಹುಟ್ಟಿದ ನೆನಹಿನ ಬಿನ್ನಾಣವನೇನೆಂಬೆನಯ್ಯಾ ರಾಮನಾಥಾ !

ಟೀ. ದೇಹಸಂಬಂಧದಿಂದ ಆತ್ಮನ ನಿಜದಱಿವು ಮಱವೆಯನ್ನೈದಿ ಆತ್ಮನಲ್ಲಿ ಇದ್ದಿತ್ತು. ಅಂತು ತನ್ನಲ್ಲಿರ್ದ ಸಮ್ಯಗ್‌ಜ್ಞಾನವ ವೇದಾಗಮಂಗಳಿಂದ ಸಾಧಿಸಿಹೆನೆಂದಡೆ ಸಾಧ್ಯವಾಗದು. ಮತ್ತೆಂತಹುದಯ್ಯಾ ಎಂದಡೆ : ತನ್ನಿಂದ ತಾನೆ ಪಕ್ವಕ್ಕೆ ಬಂದು ಸಮ್ಯಗ್‌ಜ್ಞಾನೋದಯವಾಗಿ ತಾನು ಶಿವನೆಂಬ ತನ್ನ ನಿಜವನಱಿದು ನೆನೆವ ಘನಚಿಂತನೆಯನುಪಮಿಸಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೧೧

ವ. ಖಂಡಿತವಿಲ್ಲದ ಅಖಂಡಿತನೆ, ನಿಮ್ಮ ಕಂಡವರುಂಟೇ ಹೇಳಯ್ಯಾ ? ಕಂಡೆನೆಂಬವರೆಲ್ಲಾ ಬಂಜೆಯ ಮಕ್ಕಳು. ನೀ ನಿಂದ ಹಜ್ಜೆಯ

ಕೆಳಗೊಂದು ಬಿಂದು ಹುಟ್ಟಿ ಬೆಳಗುವ ಛಂದವ ಕಂಡು ಕಣ್ದೆಱೆದೆ ಕಾಣಾ, ರಾಮನಾಥಾ !

**ಟೀ.** ಅಖಂಡಿತವಾಗಿಪ್ಪ ಪರಬ್ರಹ್ಮವ ವೇದಾಗಮಂಗಳಿಂದ ಸಾಧಿಸಿ ಕಂಡವರಿಲ್ಲವೆಂಬುದೀಗ 'ಖಂಡಿತವಿಲ್ಲದ ಅಖಂಡಿತನ,ನಿಮ್ಮ ಕಂಡವರುಂಟೆ ಹೇಳಯ್ಯಾ' ಎಂಬ ಶಬ್ದಕ್ಕರ್ಥ. ಅಜ್ಞಾನಸ್ವರೂಪಿಯಾದ ಮಾಯಾಂಗನೆಗೆ ಶಿವಜ್ಞಾನವೆಂದೂ ಹುಟ್ಟಲಿಲ್ಲದ ಬಂಜೆಯಾದ ಕಾರಣ ಮಾಯೆಯೆಂಬವಳೀಗ 'ಬಂಜೆ' ಎಂಬ ಶಬ್ದಕ್ಕರ್ಥ. ಅಂತು ಪರಬ್ರಹ್ಮವ ಶ್ರುತಜ್ಞಾನದಿಂದ ಕಂಡೆನೆಂಬವರೆಲ್ಲಾ ಮಾಯೆಯ ಮಕ್ಕಳೆಂಬುದೀಗ 'ಕಂಡೆನೆಂಬವರೆಲ್ಲಾ ಬಂಜೆಯ ಮಕ್ಕಳು' ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವು ಹೃದಯದಲ್ಲಿ ಬೆಳಗುತ್ತ ಚಿಚ್ಚಾರಿತ್ರನಾಗಿ ನಿಂದಿದ್ದನೆಂಬುದೀಗ 'ನೀ ನಿಂದ ಹಜ್ಜೆ'ಯೆಂಬ ಶಬ್ದಕ್ಕರ್ಥ. ಅಂತು ಹೃದಯದಲ್ಲಿ ಬೆಳಗುತ್ತಿರ್ದ ಪರಮಲಿಂಗದ ಚಿಚ್ಚಾರಿತ್ರದ ಚಿತ್ತುವೆ ಜನಿಸಿ ಆತ್ಮಾಂಗದಲ್ಲಿ ಪ್ರಭಾವಿಸಿತ್ತೆಂಬುದೀಗ 'ನೀ ನಿಂದ ಹಜ್ಜೆಯ ಕೆಳಗೆ ಒಂದು ಬಿಂದು ಹುಟ್ಟಿತ್ತೆ'ಂಬ ಶಬ್ದಕ್ಕರ್ಥ. ಅಂತಾದ ಜ್ಞಾನೋದಯದಿಂದ ಶಿವನ ಮಹಾಪ್ರಕಾಶವ ಕಂಡ ಶರಣ. ಅಂತು ಕಾಬ ಜ್ಞಾನದ ಕಣ್ದೆಱೆದು ಕಾನೆ ತನ್ನ ನಿಜವ ಕಾಣಿಸಿಕೊಂಡ ಲಿಂಗವು ಕೃಪೆಯಿಂವಲೆಂಬುದೀಗ 'ಬೆಳಗುವ ಛಂದವ ಕಂಡು ಕಣ್ದೆಱೆದೆ ಕಾಣಾ, ರಾಮನಾಥಾ' ಎಂಬ ಶಬ್ದಕ್ಕರ್ಥ. ೧೨

**ವ.** ಅನುದಿನಂಗಳೆಂಬವು ಪ್ರಣಿತೆಯಾಗಿ, ವರುಷಂಗಳೆಂಬವು ಬತ್ತಿಯಾಗಿ, ಜೀವಜಾತಿಯು ಬೆಳಗಿನ ಬೆಳಗ ಬೆಳಗಿನಲಱಿಸಬೇಕು. ಬೆಳಗುಳ್ಳಲ್ಲಿ ಆತ ನಡೆಸಿದಂತೆ ನಡೆಯಬೇಕು. ಬೆಳಗುಳ್ಳಲ್ಲಿ ಆತ-ನಿರಿಸಿದಂತೆ ಇರಬೇಕು. ಎಣ್ಣೆಯೆಂಬ ಜವ್ವನ ಸವೆಯದ ಮುನ್ನ, ಬೆಳಗು ಕತ್ತಲೆಯಾಗದ ಮುನ್ನ ರೇಕಣ್ಣಪ್ರಿಯನಾಗಿನಾಥನ ಬೆಳಗ ಬೆಳಗಿನಲಱಿಸಬೇಕು.

**ಟೀ.** ಆನು ನೀನೆಂಬ ಅಱಿವು ಮಱವೆಗಳಿಂದ ದೇಹವೆಂಬ ಪ್ರಣಿತೆಯಾಯಿತ್ತಾಗಿ 'ಅನುದಿನಂಗಳೆಂಬವು ಪ್ರಣಿತೆಯಾಗಿ' ಎಂಬ ಶಬ್ದಕ್ಕರ್ಥ. ಆ ದೇಹದ ವಿಷಯಾನಂದರಸವೆಂಬುದು ಶಿವಾನಂದರಸವಿಲ್ಲದ ನಿರಸವಾದ ಹತ್ತಿಯೆಂಬುದೀಗ 'ವರುಷಂಗಳೆಂಬವು ಬತ್ತಿಯಾಗಿ' ಎಂಬ ಶಬ್ದಕ್ಕರ್ಥ. ಅಂತು ನಿರಸವಪ್ಪ ವಿಷಯಾನಂದರಸವ ಕಚ್ಚಿಕೊಂಡು ಬಿಡದೆ ದೇಹದಲ್ಲಿ ಜೀವಾತ್ಮಂಗಳು ಪ್ರಕಾಶಿಸುತ್ತಿಹವೆಂಬುದೀಗ 'ಜೀವಜಾತಿಯು ಬೆಳಗಿನ' ಎಂಬ ಶಬ್ದ

ಕ್ಕರ್ಥ. ಅಂತಪ್ಪ ಜೀವಾತ್ಮಪ್ರಕಾಶಂಗಳ ಪ್ರಕಾಶಿಸಿದ ಮೂಲಪ್ರಕಾಶವೀಗ ಶಿವಪ್ರಕಾಶ. ಆ ಶಿವಪ್ರಕಾಶವ ಜ್ಞಾನಪ್ರಕಾಶದಿಂದ ಭೇದಿಸಿ ಕಾಣಬೇಕೆಂಬುದೀಗ 'ಬೆಳಗಿನ ಬೆಳಗ ಬೆಳಗಿನಲಱಸಬೇಕು' ಎಂಬ ಶಬ್ದಕ್ಕರ್ಥ. ಅಂತು ಜ್ಞಾನಪ್ರಕಾಶ ಉದಯಿಸಿ ತನ್ನ ನಿಜವೆ ಶಿವಪ್ರಕಾಶವೆಂದು ತಿಳಿದ ಶರಣನು ತನಗೆ ದೇಹ ಪ್ರಾರಬ್ಧಭೋಗ ಸ್ಥಿತಿಗತಿಯ ಶಿವಾಧೀನವೆಂದು ತಿಳಿಯಬೇಕೆಂಬುದೀಗ 'ಬೆಳಗುಳ್ಳಲ್ಲಿ ಆತ ನಡೆಸಿದಂತೆ ನಡೆಯಬೇಕು. ಬೆಳಗುಳ್ಳಲ್ಲಿ ಆತನಿರಿಸಿದಂತೆ ಇರಬೇಕು' ಎಂಬ ಶಬ್ದಕ್ಕರ್ಥ. ಸಮ್ಯಗ್ಜ್ಞಾನರಸವೆಂಬುದೀಗ 'ಎಣ್ಣೆ'ಯೆಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನ ಪಕ್ವವಾದುದೆಂಬುದೀಗ 'ಜವ್ವನ' ವೆಂಬ ಶಬ್ದಕ್ಕರ್ಥ. ಅಂತು ಜ್ಞಾನಪಕ್ವವಾದ ಅಱಿವ ಬಱಿದೆ ಅಹಂಕರಿಸಿ ಕೆಡಿಸದೆ, ಶಿವಪದವ ಸಾಧಿಸಿಯೆಂಬುದೀಗ 'ಎಣ್ಣೆಯೆಂಬ ಜವ್ವನ ಸವೆಯದ ಮುನ್ನ' ಎಂಬ ಶಬ್ದಕ್ಕರ್ಥ. ಅಂತಾದ ಜ್ಞಾನಪ್ರಕಾಶವ ಮಾಯಾದೇಹಧರ್ಮದ ಮಱವೆಯೆ ಕಂಟಕವಾಗಿ ಮಱಸುವದಾಗಿ ಅಂತಪ್ಪ ಮಱವೆಗೊಳಗಾಗದೆ ಜ್ಞಾನಪ್ರಕಾಶದಿಂದ ತನ್ನ ನಿಜ ಶಿವಪ್ರಕಾಶವ ಸಾಧಿಸಬೇಕೆಂಬುದೀಗ 'ಬೆಳಗು ಕತ್ತಲೆಯಾಗದ ಮುನ್ನ ರೇಕಣ್ಣಪ್ರಿಯ ನಾಗಿನಾಥನ ಬೆಳಗ ಬೆಳಗಿನಲಱಸಬೇಕೆ'ಂಬ ಶಬ್ದಕ್ಕರ್ಥ. ೧೩

ವ. ತಾನಿದಿರೆಂಬುದೊಂದು ಮಾಯೆ ತೋಱತ್ತಾಗಿ ತಾನಲ್ಲ. ಈ ತೋಱುವುದು ಉಳುಮೆ. ಜ್ಞಾನಾನಂದ ತಾನೆಂಬುದನಾರೂ ಅಱಯರಲ್ಲಾ ! ನೋಡಲೇನೂ ಇಲ್ಲವಾಗಿ ನಿಜಸಿದ್ಧ ನೀನೆ ಚೆಮ್ಮಲಿಗೆಯ ಚೆನ್ನರಾಮಾ.

ಟೀ. ಮಾಯಾದೇಹಸಂಬಂಧದಿಂದ ತಾನು ಶಿವನೆಂಬುದ ಮಱದು ತಾನಲ್ಲದ ತನ್ನದಲ್ಲದ ದೇಹವ ತನ್ನದೆಂದು ತಥ್ಯ ಮಿಥ್ಯದಿಂದ ಭವಕರ್ಮಕ್ಕೊಳಗಾಗಿಪ್ಪರು ಜೀವರು ತಮ್ಮ ನಿಜವನಱಯದೆ. ಅಂತಿಪ್ಪ ದೇಹಿಗಳೊಳಗೆ ಸಮ್ಯಗ್ಜ್ಞಾನೋದಯವಾದ ಶರಣನ ದೃಕ್ಕಿಂಗೆ ಮಾಯಾದೇಹತೋಱಕೆ ಹುಸಿಯಾಗಿ ತಾನೆ ಶಿವನೆಂಬ ದಿಟ ತೋಱುತ್ತಿದ್ದಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೧೪

ವ. ಹಾಲು ತುಪ್ಪವ ನುಂಗಿ ಬೇಱಾಗಬಲ್ಲುದೆ ? ಸೂರ್ಯಕಾಂತದ ಅಗ್ನಿಯನಾರು ಭೇದಿಸಬಲ್ಲರು ? ಅಪಾರ ಮಹಿಮ ಚೆನ್ನಮಲ್ಲಿಕಾರ್ಜುನನೆನ್ನೊಳಗಡಗಿಪ್ಪ ಪರಿಯ ಬೇಱಲ್ಲದೆ ಕಂಡು ಕಣ್ದೆಱದೆನು!

ಟೀ. ಹಾಲೊಳಗೆ ತುಪ್ಪವು ಸಮರಸವಾಗಿಪ್ಪುದು. ಅಂತಿರ್ದು ತನ್ನ ಬೇರ್ಪಡಿಸಿ ತೋಱದಂತೆ ಪರಬ್ರಹ್ಮವು ಪಿಂಡದಲ್ಲಿ ಸಮರಸವಾಗಿರ್ದು ತನ್ನ ನಿಜವ ಕಾಣಿಸಿ ತೋಱದಿಪ್ಪುದೆಂಬುದೀಗ ' ಹಾಲು ತುಪ್ಪವ ನುಂಗಿ ಬೇಱಾಗ ಬಲ್ಲುದೆ ?' ಎಂಬ ಶಬ್ದಕ್ಕರ್ಥ. ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿಯಿರ್ದು ಪ್ರಕಾಶಿಸದೆ ಅಡಗಿಪ್ಪಂತೆ ಪಿಂಡಮಧ್ಯದಲ್ಲಿ ಶಿವಜ್ಞಾನಾಗ್ನಿಯಿರ್ದು ಪ್ರಕಾಶಿಸದೆ ಅಡಗಿಪ್ಪುದೆಂಬುದೀಗ ' ಸೂರ್ಯಕಾಂತದ ಅಗ್ನಿಯನಾರು ಭೇದಿಸಬಲ್ಲರು ? ' ಎಂಬ ಶಬ್ದಕ್ಕರ್ಥ. ಅಂತು ಜಗದ ಒಳಗೆ ಹೊಱಗೆ ತುಂಬಿ ಅಖಂಡವಾಗಿರ್ದ ಪರಬ್ರಹ್ಮವ ಸಮ್ಯಗ್‌ಜ್ಞಾನೋದಯವಾದ ಶರಣನು ತನ್ನ ಸಮ್ಯಗ್‌ಜ್ಞಾನದೃಕ್ಕಿಂದ ಭಿನ್ನವಿಡದೆ ನೋಡಿ ಕಾಣಲಾಗಿ ಶರಣ ತಾನೆಲ್ಲಾ ಪರಬ್ರಹ್ಮವೆಂಬುದು ತನಗೆ ಕಣ್ದೆಱವಾಗಿ ತೋಱುತ್ತಿದ್ದಿತ್ತೆಂಬುದೀಗ ' ಅಪಾರಮಹಿಮ ಚೆನ್ನಮಲ್ಲಿಕಾರ್ಜುನನೆನ್ನೊಳಗಡಗಿಪ್ಪ ಪರಿಯ ಬೇಱಿಲ್ಲದೆ ಕಂಡು ಕಣ್ದೆಱೆದೆ ' ನೆಂಬ ಶಬ್ದಕ್ಕರ್ಥ. ೧೫

ವ. ಸುಖವ ಬಲ್ಲಾತ ಸುಖಿಯಲ್ಲ. ದುಃಖವ ಬಲ್ಲಾತ ದುಃಖಿಯಲ್ಲ. ಸುಖದುಃಖವೆರಡನು ಬಲ್ಲಾತ ಜ್ಞಾನಿಯಲ್ಲ. ಹುಟ್ಟಿದ ಮುನ್ನ ಸತ್ತವರ ಕುಱುಹ ಬಲ್ಲಡೆ ಅದೇ ಜ್ಞಾನ, ಅದೇ ಬಲ್ಲತನದ ಕುಳ ಗೊಹೇಶ್ವರಾ!

ಟೀ. ದುಃಖದಲ್ಲಿದ್ದ ಜೀವಂಗೆ ಆ ದುಃಖ ಬಿಡುಗಡೆಯಾಗಿ ಸುಖವಾದಲ್ಲಿ ಸುಖವನಱದು ಹೇಳುವನಾಗಿ ಆತ ಮುನ್ನ ಸುಖಿಯಲ್ಲವೆಂಬುದೀಗ ' ಸುಖವ ಬಲ್ಲಾತ ಸುಖಿಯಲ್ಲ ' ವೆಂಬ ಶಬ್ದಕ್ಕರ್ಥ. ಸುಖದಲ್ಲಿರ್ದ ಜೀವನು ದುಃಖ ಬಂದಲ್ಲಿ ದುಃಖವನಱದು ಹೇಳುವನಾಗಿ ಆತ ಮುನ್ನ ದುಃಖಿಯಲ್ಲವೆಂಬುದೀಗ ' ದುಃಖವ ಬಲ್ಲಾತ ದುಃಖಿಯಲ್ಲ ' ವೆಂಬ ಶಬ್ದಕ್ಕರ್ಥ. ಅಂತು ಸುಖದುಃಖವೆಂಬ ಪುಣ್ಯಪಾಪವನಱದು ಮಾಡಿ ಅನುಭವಿಸುತ್ತಿಪ್ಪ ಜೀವಂಗೆ ತನ್ನ ನಿಜವನಱವ ಜ್ಞಾನವಿಲ್ಲವೆಂಬುದೀಗ ' ಸುಖದುಃಖವೆರಡನೂ ಬಲ್ಲಾತ ಜ್ಞಾನಿಯಲ್ಲ ' ವೆಂಬ ಶಬ್ದಕ್ಕರ್ಥ. ಸತ್ತುವೆಂದಡೆ ಪರಬ್ರಹ್ಮ. ಅಂತಪ್ಪ ಪರಬ್ರಹ್ಮವೆ ಆತ್ಮರ ಪ್ರಥಮ ಜನನಸ್ಥಲವಾಗಿಪ್ಪುದಾಗಿ, ಅಂತು ಆತ್ಮರು ಜನಿಸಿದ ಮೊದಲೆ ಇದ್ದಿತ್ತು ಪರಬ್ರಹ್ಮವೆಂಬುದೀಗ ' ಹುಟ್ಟಿದ ಮುನ್ನ ಸತ್ತವರ ' ಎಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವು ತನ್ನ ನಿಜದ ನಿಲವೆಂದಱದು ಸಮ್ಯಗ್‌ಜ್ಞಾನಿಯಾದಾತನೆ ಬಲ್ಲಾತನೆಂಬುದೀಗ ' ಹುಟ್ಟಿದ ಮುನ್ನ ಸತ್ತವರ ಕುಱುಹ ಬಲ್ಲಡೆ ಅದೇ ಜ್ಞಾನ, ಅದೇ ಬಲ್ಲತನದ ಕುಳ ' ವೆಂಬ ಶಬ್ದಕ್ಕರ್ಥ. ೧೬

ವ. ಬಲ್ಲನಿತ ಬಲ್ಲರಲ್ಲದೆ ಅಱಿಯದುದನೆಂತು ಬಲ್ಲರಯ್ಯಾ, ಅಱಿವು ಸಾಮಾನ್ಯವೇ ? ಅಱಿಯದುದನಾರಿಗೂ ಅಱಿಯಬಾರದು ಗೊಹೇಶ್ವರನೆಂಬ ಲಿಂಗವು ಅಱಿಯದಿದ್ದರೆ ಎರಡು, ಅಱಿದಡೆ ಒಂದೇ.

ಟೀ. ವೇದ ಶಾಸ್ತ್ರಂಗಳು ಪ್ರಮಾಣಿಸಿ ಅಱಿದು ಹೇಳಿದ ಅಱಿವನಱಿದು ಬ್ರಹ್ಮವಾರ್ತೆಯನು ನುಡಿವ ಅಜ್ಞಾನಿಗಳ ವಾಙ್ಮನಸ್ಸಿಗೆ ಅಗೋಚರವಾಗಿಹುದು ಪರಬ್ರಹ್ಮವು ಕಾಣಿಸದೆ. ಮತ್ತೆಂತೆಂದೊಡೆ ತಾನು ಶಿವನೆಂಬುದ ಮಱಿದು ಎರಡಾಗಿರ್ದಲ್ಲಿ ಸಮ್ಯಗ್ ಜ್ಞಾನೋದಯವಾಗಿ ತಿಳಿದು ನೋಡಲು ಶರಣ ತಾನೆಲ್ಲಾ ಲಿಂಗವೆಯಾಗಿ ದ್ವೈತವಿಲ್ಲದೆ ಇರ್ದನೆಂಬುದೀಗ ಈ ವಚನದ ತಾತ್ಪರ್ಯಾರ್ಥ.೧೭

ವ. ಬೆಳಗಿನ ಬೀಜ ಮಹಾಬೆಳಗು ಕತ್ತಲೆಯನೊಳಕೊಂಡು ಕಣ್ದೆಱೆವ ಪರಿಯ ನೋಡಾ, ತಿಳಿವಡೆ ಬೆಳಗಲ್ಲ. ಒಳಗೊಳಗೆ ಹೊಳೆವ ಕಳೆ ಇದೇನೋ ! ಅದೆಲ್ಲಿಂದ ಹುಟ್ಟಿ ಅದೆಲ್ಲಿಂದ ತೋಱಿತ್ತು ? ಅಲ್ಲಿಯೆ ಆಗಾಗಿ ಅಲ್ಲಿಯೆ ಬೆಳೆಯಿತ್ತು. ಚಿಮ್ಮಲಿಗೆಯ ಚೆನ್ನರಾಮನೆಂಬ ಮಹಾ ಘನಲಿಂಗದಲ್ಲಿಯೆ ಕಾಲೂಱಿ ನಿಂದ ಪರಿಯನೇನೆಂಬೆ ?

ಟೀ. ಆತ್ಮಪ್ರಕಾಶವ ಪ್ರಕಾಶಿಸಿದ ಮೂಲಪ್ರಕಾಶವೆ ಶಿವಪ್ರಕಾಶವೆಂಬುದೀಗ 'ಬೆಳಗಿನ ಬೀಜ ಮಹಾಬೆಳಗು' ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವ ಪ್ರಕಾಶವು ತನುಧರ್ಮದ ಮಱವೆಯನೊಳಕೊಂಡು ಸಮ್ಯಗ್ ಜ್ಞಾನ ಪ್ರಕಾಶವಾಗಿ ತನ್ನ ನಿಜವ ಕಾಣಿಸಿದ ಪರಿ ಚೋದ್ಯವೆಂಬುದೀಗ 'ಮಹಾಬೆಳಗ ಕತ್ತಲೆಯನೊಳಕೊಂಡು ಕಣ್ದೆಱೆವ ಪರಿಯ ನೋಡಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಸಮ್ಯಗ್ ಜ್ಞಾನೋದಯದಿಂದ ಶರಣ ತನ್ನ ನಿಜವ ತಿಳಿಯಲು ಆ ತಿಳಿದ ತಿಳಿವಿನ ಬೆಳಗಿನೊಳಗೆ ಶರಣ ತಾನೆಲ್ಲಾ ಚಿತ್ಕಲಾಸ್ವರೂಪನೆಯಾಗಿ ಕಾಣಿಸಲು ಆಶ್ಚರ್ಯಬಟ್ಟನೆಂಬುದೀಗ 'ತಿಳಿವಡೆ ಬೆಳಗಲ್ಲ ಒಳಗೊಳಗೆ ಹೊಳೆವ ಕಳೆ ಇದೇನೋ ?' ಎಂಬ ಶಬ್ದಕ್ಕರ್ಥ. ಅಂತು ಶರಣ ತಾನೆಲ್ಲಾ ಚಿತ್ಕಲಾಸ್ವರೂಪನೆಯಾಗಿರ್ದುದ ತಾನೆ ಕಂಡು ಶರಣ ತನ್ನ [೧]ಚಿತ್ಸ್ವರೂಪಾದ[೧] ತೋಱಿಕೆಯೆಲ್ಲಾ ಪರಬ್ರಹ್ಮದ ವಿಲಾಸದಿಂದ ತೋಱಿದ ತೋಱಿಕೆಯೆಂದು ತನ್ನ ನೆಲೆಯನಱಿದು ಶರಣ ತನ್ನ ಚಿತ್ತುವ ಪರಬ್ರಹ್ಮದಲ್ಲಿಯೆ ನೆಲೆಗೊಳಿಸಿ ಬ್ರಹ್ಮಭಾವವೆಡೆಗೊಂಡು ದೇಹಪ್ರಪಂಚಿನತ್ತ ಶರಣನ ಚಿತ್ತುವೆಳಸಿ ಗಮಿಸದೆ ಇದ್ದಿತ್ತೆಂಬುದೀಗ 'ಅದೆಲ್ಲಿಂದ ಹುಟ್ಟಿ

[೧] ಚಿತ್ಸ್ವರೂಪದ (ಎ)

ಅದೆಲ್ಲಿಂದ ಕೋಱಿತ್ತು ಅಲ್ಲಿಯೆ ಆಗಾಗಿ ಅಲ್ಲಿಯೆ ಬೆಳೆಯಿತ್ತು. ಚಿಮ್ಮಲಿಗೆಯ ಚೆನ್ನರಾಮನೆಂಬ ಮಹಾಘನಲಿಂಗದಲ್ಲಿಯೆ ಕಾಲೂಱಿ ನಿಂದ ಪರಿಯನೇನೆಂಬೆ' ನಂಬ ಶಬ್ದಕ್ಕರ್ಥ. ೧೮

ವ. ಎನ್ನ ನಾನಱಿಯದ ಮುನ್ನ ನೀನೇನಾಗಿರ್ದೆ ಹೇಳಾ ? ಮುನ್ನ ನೀ ಬಾಯ ಮುಚ್ಚಿಕೊಂಡು ಇದ್ದೆಯೆಂಬುದ ನಾ ನಿನ್ನ ಕಣ್ಣಿಂದ ಕಂಡೆನು. ಎನ್ನ ನಾನಱಿದ ಬಳಿಕ ಇನ್ನು ನೀ ಬಾಯ್ದೆಱೆದು ಮಾತನಾಡಿದರೆ ಅದನೆನ್ನ ಕಣ್ಣಿಂದ ಕಂಡು ನಾಚಿದೆ ನೋಡಾ ! ಎನ್ನ ಕಾಬ ನಿನಗೆ ನಿನ್ನ ಕಾಬ ಎನಗೆ ಸಂಚದ ನೋಟ ಒಂದೆ ನೋಡಾ, ಗೊಹೇಶ್ವರಾ ನಿಮ್ಮ ಬೆಡಗಿನ ಬಿನ್ನಾಣವನಱಿದೆ ನೋಡಾ

ಟೀ. ಶಿವಜ್ಞಾನೋದಯವಾದ ಶರಣನು ಅನಾದಿಯಲ್ಲಿ ಪರಶಿವತತ್ವವು ನಿಃಶಬ್ದವೆಂಬುದನು ಆ ಶಿವಜ್ಞಾನ ದೃಷ್ಟಿಯಲ್ಲಿ ನೋಡಿ ಕಂಡನೆಂಬುದೀಗ ' ಎನ್ನ ನಾನಱಿಯದ ಮುನ್ನ ನೀನೇನಾಗಿರ್ದೆ ಹೇಳಾ ? ಮುನ್ನ ನೀ ಬಾಯ ಮುಚ್ಚಿಕೊಂಡಿರ್ದೆಯೆಂಬುದನು ನಾ ನಿನ್ನ ಕಣ್ಣಿಂದ ಕಂಡೆ ' ನೆಂಬ ಶಬ್ದಕ್ಕರ್ಥ. ಆ ಪರತತ್ವದ ನಿಲವು ನಾನೆಂದಱಿದು ನುಡಿವ ನುಡಿಯನು ತನ್ನ ಜ್ಞಾನದೃಷ್ಟಿಯಿಂದ ಕಂಡು ನಿವೃತ್ತಿಯ ಮಾಡಿದನೆಂಬುದೀಗ ' ಎನ್ನ ನಾನಱಿದ ಬಳಿಕ ಇನ್ನು ನೀ ಬಾಯದೆಱೆದು ಮಾತನಾಡಿದರೆ ಎನ್ನ ಕಣ್ಣಿಂದ ಕಂಡು ನಾಚಿದೆ ' ನೆಂಬ ಶಬ್ದಕ್ಕರ್ಥ. ಇಂತು ಶಿವತತ್ವವ ಕಾಬ ಶರಣಂಗೂ ಆ ಶರಣನ ಕಾಬ ಶಿವತತ್ವಕ್ಕೂ ಮೂಲಜ್ಞಾನದೃಷ್ಟಿ ಒಂದೇ ಎಂದಱಿದು ಪ್ರಭುದೇವರು ತಮ್ಮ ತಾವಱಿದು ವಿವೇಕಿಸುತ್ತಿರ್ದರೆಂಬುದೀಗ ' ನಿನ್ನ ಕಾಬ ಎನಗೆ ಎನ್ನ ಕಾಬ ನಿನಗೆ ಸಂಚದ ನೋಟವೊಂದೆ ಎಂಬ ಬೆಡಗಿನ ಬಿನ್ನಾಣವನಱಿದೆ ನೋಡಾ ' ಎಂಬ ಶಬ್ದಕ್ಕರ್ಥ. ೧೯

ವ. ಮಾಯದ ಬಲೆಯಲ್ಲಿ ಸಿಲುಕಿದ ಮರುಳ ನಾನೆಂದಱಿದ ಪರಿಯ ನೋಡಾ ! ಲಿಂಗವೆಂದಱಿದ ಪರಿಯ ನೋಡಾ ! ತನ್ನ ವಿನೋದಕ್ಕೆ ಬಂದು ನಿಶ್ಚಿಂತ ನಿರಾಳ ಗೊಹೇಶ್ವರನೆಂದಱಿದ ಪರಿಯ ನೋಡಾ !

ಟೀ. ತಾನು ಶಿವನೆಂಬುದ ಮಱೆದ ಮಱವೆಯಿಂದ ಮಾಯಾದೇಹಪಾಶದಲ್ಲಿ ಸಿಕ್ಕಿ ಭ್ರಾಂತುಸೂತಕವೆಡೆಗೊಂಡಿರ್ದಲ್ಲಿ ಶಿವಜ್ಞಾನೋದಯವಾಗಿ ಶರಣ ತನ್ನ ನಿಜವನಱಿದು ಮಾಯಾದೇಹಭ್ರಾಂತಿಯನಳಿದುದು ಚೋದ್ಯವೆಂಬುದೀಗ ' ಮಾಯದ ಬಲೆಯಲ್ಲಿ ಸಿಲುಕಿದ ಮರುಳ ನಾನೆಂದಱಿದ ಪರಿಯ ನೋಡಾ ' ಎಂಬ ಶಬ್ದಕ್ಕರ್ಥ. ಅಂತು ಮಾಯಾದೇಹ ಭ್ರಾಂತಿಯನಳಿದು ಮಹಾಘನ

ಲಿಂಗವು ತಾನೆಂದಱಿದುದು ಚೋದ್ಯವೆಂಬುದೀಗ ' ತನ್ನ ವಿನೋದಕ್ಕೆ ಬಂದು ನಿಶ್ಚಿಂತ ನಿರಾಳ ಗೊಹೇಶ್ವರನೆಂದಱಿದ ಪರಿಯ ನೋಡಾ ' ಎಂಬ ಶಬ್ದಕ್ಕರ್ಥ. ೨೦

ವ. ಸತ್ತ ಕೋಳಿಯೆದ್ದು ಕೂಗಿತ್ತ ಕಂಡೆ ! ಮೊತ್ತದ ಮಾಮರ ಉಲಿಯಿತ್ತ ಕಂಡೆ ! ಕತ್ತಲೆ ಬೆಳಗಾಯಿತ್ತ ಕಂಡೆ ! ಹೊತ್ತಾಱಿಯೆದ್ದು ಹೊಲಬುದಪ್ಪಿತ್ತ ಕಂಡೆ ! ಇದೇನು ಹತ್ತಿತ್ತೆಂದಱಿಯೆ ಗೊಹೇಶ್ವರಾ ?

ಟೀ. ಪರಬ್ರಹ್ಮವೆಂಬುದೀಗ 'ಸತ್ತು' ವೆಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವೆ ತಾನೆಂಬ ನಿಜವನಱುಹಿದ ಸಮ್ಯಗ್ಜ್ಞಾನೋದಯವೇ ಕುಕ್ಕುಟನ ಗುಣಧರ್ಮಕರ್ಮವಪ್ಪ ಪ್ರಾತಜ್ಞಾನಧ್ವನಿಯೆಂಬುದೀಗ ' ಸತ್ತ ಕೋಳಿಯೆದ್ದು ಕೂಗಿತ್ತ ಕಂಡೆ ' ನೆಂಬ ಶಬ್ದಕ್ಕರ್ಥ. ಅಂತು ಸಮ್ಯಗ್ಜ್ಞಾನೋದಯವಾದ ಶರಣನಂಗದ ಷಡುಚಕ್ರದ ಐವತ್ತೆರಡು ಅಕ್ಷರಂಗಳೆಲ್ಲಾ ಸದ್ವಿವೇಕವೃಕ್ಷಸ್ವರೂಪವನೈದಿ ಶಿವೋಹಂ ಎಂದು ಧ್ವನಿಗೆಯ್ದುವೆಂಬುದೀಗ ' ಮೊತ್ತದ ಮಾಮರನುಲಿಯಿತ್ತ ಕಂಡೆ ' ನೆಂಬ ಶಬ್ದಕ್ಕರ್ಥ. ಅಂತಾದ ಕಾರಣ ಅಜ್ಞಾನತಿಮಿರವಳಿದು ಸುಜ್ಞಾನಪ್ರಕಾಶವಾಯಿತ್ತೆಂಬುದೀಗ ' ಕತ್ತಲೆ ಬೆಳಗಾಯಿತ್ತೆಂಬ ' ಶಬ್ದಕ್ಕರ್ಥ. ಆ ಸುಜ್ಞಾನೋದಯವೇ 'ಹೊತ್ತಾಱಿ'ಯೆಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನಪ್ರಕಾಶದಿಂದ ಸರ್ವತೋಧಿಕವೂ ತಾನೆಯಾಗಿ ಖಂಡಿತದ ಹೊಲಬುದಪ್ಪಿತ್ತೆಂಬುದೀಗ ' ಏನು ಹತ್ತಿತ್ತೆಂದಱಿಯೆನು ' ಎಂಬ ಶಬ್ದಕ್ಕರ್ಥ. ೨೧

ವ. ಮತಿಯೊಳಗೊಂದು ದುರ್ಮತಿ ಹುಟ್ಟಿದ ಬಳಿಕ ಮತಿಯು ಮಱವೆಯೊಳಕೊಂಡು ಭವಕ್ಕೆ ಗುಱಿಮಾಡಿ ಕೆಡಹಿತ್ತು ನೋಡಾ ! [1]ಖಂಡಿತವ[1] ಕಂಡು ಮತಿಯೊಳಗೆ ವೇಧಿಸಲು ಗತಿಗೆಟ್ಟು ನಿಂದಿತ್ತು ಗೊಹೇಶ್ವರಾ.

ಟೀ. ಚಿದಾತ್ಮನಪ್ಪ ಆತ್ಮನ ಚಿತ್ತುವಿಗೆ ನಾನೆಂಬ ಅಹಂಕಾರದ ಮಱವೆ ತನ್ನಲ್ಲಿ ತೋಱಿತ್ತೆಂಬುದೀಗ ' ಮತಿಯೊಳಗೊಂದು ದುರ್ಮತಿ ಹುಟ್ಟಿತ್ತೆ ' ಂಬ ಶಬ್ದಕ್ಕರ್ಥ. ಅಂತು ತನ್ನ ಅಱಿವಿನಲ್ಲಿ ಹುಟ್ಟಿದ ಮಱವೆ ಆತ್ಮನ ಅಱಿವ ಮಱಿಸಿ ದೇಹಸಂಬಂಧಿಯ ಮಾಡಿ ಜನನ ಮರಣಕ್ಕೆ ತಂದಿತ್ತೆಂಬುದೀಗ ' ಮತಿಯ ಮಱ

[1] ಅಖಂಡಿತವ (ಎ)

ರೆಯೊಳಕೊಂಡು ಭವಕ್ಕೆ ಗುಱಿಮಾಡಿ ಕೆಡಹಿತ್ತೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮನು ತನ್ನ ಅಱುಹಿನ ಮಱವೆಯ ಭಿನ್ನದೋಱಿಕೆಯ ಜ್ಞಾನೋದಯವಾಗಿ ತಿಳಿದುನೋಡಿ ಕಂಡು ಭಿನ್ನವಿಟ್ಟು ನೇತಿ ಮಾಡಲು ಆತ್ಮಚೈತನ್ಯವಗಲಿ ಸಂಚಲಿಪ ಸ್ವತಂತ್ರತೆಯಿಲ್ಲದೆ ಅಡಗಿಹೋಯಿತ್ತು ಮಾಯಾಮರವೆಯೆಂಬುದೀಗ ‘ ಖಂಡಿತವ ಕಂಡು ಮತಿಯೊಳಗೆ ವೇಧಿಸಲು ಗತಿಗೆಟ್ಟು ನಿಂದಿತ್ತು ’ ಎಂಬ ಶಬ್ದಕ್ಕರ್ಥ. ೨೨

ವ. ನಿಜದಿಂದ ಕ್ಷತ್ರಿಯನೆಂದು ತನ್ನ ನಿಜವನಱಿದ ಕರ್ಣನ ವ್ಯಾಧಭಾವ ಬಿಡದಂತೆ ತಾನು ತನ್ನ ನಿಜವನಱಿದರೂ ಜಾತಿಯಾಶ್ರಮ ಗುಣ ಧರ್ಮ ಜೀವಾದಿ ಭೇದಂಗಳೊಳಗಾದ ಮಾಯಾಮಯಂಗಳೆಂಬ ಮುನ್ನಿನ ಭ್ರಮೆಗಳ ಬಿಡಲಱಿಯದ ಒಡಮನದ ಮನುಜರೆಲ್ಲರೂ ನಿಜಗುಣನ ನಿಜಭಾವದಲೂ ನಿಲ್ಲದವಂಗೆ ನಿಜಸುಖವು ಸಾಧ್ಯವಪ್ಪುದೇ ಹೇಳಾ ಚಿಮ್ಮಲಿಗೆಯ ಚೆನ್ನರಾಮಾ ?

ಟೀ. ಕ್ಷತ್ರಿಯನೆಂದು ತನ್ನ ಮುನ್ನಿನ ನಿಜವ ತಿಳಿದಡೆಯೂ ಕರ್ಣಂಗೆ ವ್ಯಾಧಧರ್ಮಗುಣ ಬಿಡದಿಪ್ಪಂತೆ ಜ್ಞಾನೋದಯದಿಂದ ತಾನು ಬ್ರಹ್ಮಾಂಶಿಕನೆಂದು ತನ್ನ ನಿಜವ ತಿಳಿದಡೆಯೂ ಮಾಯಾದೇಹಸಂಸಾರ ಭ್ರಾಂತಿ ಗುಣ ಧರ್ಮ ಕರ್ಮ ತನ್ನ ಬಿಡದಿಪ್ಪವಾಗಿ ತಾನವ ಬಿಡದಿಪ್ಪನಾಗಿ ಜೀವಂಗೆ ಅಱಿದ ಮಾತ್ರದಲ್ಲಿ ೧ಶಿವತ್ವ೧ ಘಟಿಸದು. ಮತ್ತೆಂತೆಂದಡೆ ಸಮ್ಯಗ್ ಜ್ಞಾನೋದಯದಿಂದ ತನ್ನ ನಿಜವನಱಿದಱಿವಿಂದ ಸಂಸಾರಭ್ರಾಂತಿಯ ನೇತಿಮಾಡಿ ಶಿವಕ್ರೀಯನಾಚರಿಸಲು ದೇಹಸಂಸಾರವಾಸನೆಯಳಿವುದು. ಅದುಕಾರಣ ಭಕ್ತಿಭಾವವಳವಟ್ಟ ಶರಣಂಗೆ ತನ್ನ ನಿಜಪದ ಸಾಧ್ಯವಪ್ಪುದೆಂಬುದೀ ವಚನದ ತಾತ್ಪರ್ಯಾರ್ಥ. ೨೩

ಪಿಂಡಜ್ಞಾನಸ್ಥಲ ಸಂಪೂರ್ಣ

**ಅಂತು ಸ್ಥಲ ೭ಕ್ಕಂ ಶ್ಲೋಕ ೬೫ಕ್ಕಂ ವಚನ ೯೬ಕ್ಕಂ**

**ಮಂಗಳಂ**

**ಶ್ರೀ**

೧ ಶಿವತತ್ವ (೨)

# ಸಂಸಾರಹೇಯಸ್ಥಲ

*

ಸೂತ್ರ. ಅಂತು ಸಮ್ಯಗ್‌ಜ್ಞಾನೋದಯದಿಂದ ಆತ್ಮನು ತನ್ನ ಪೂರ್ವಾಪರಸಂಬಂಧಮಂ ವಿವೇಕಿಸಿ ತಿಳಿದುನೋಡಿ ತಾನು ಶಿವನೆಂದಱಿದು ತನ್ನಿಂದ ಲನ್ಯವಾದ ದೇಹಸಂಸಾರ ಭ್ರಾಂತಿಭಾವಮಂ ನಿವೃತ್ತಿಯಂ ಮಾಡುತ್ತಿರ್ದನಾಗಿ ಸಂಸಾರಹೇಯಸ್ಥಲವೆಂದು ಹೇಳಲಾದುದು.

ಸಂಸಾರಹೇಯಸ್ಥಲಕ್ಕೆ ಶ್ಲೋಕ :

ವಾಸಿಷ್ಠೇ

ಕೋಽಹಂ ಕಥಮಯಂ ದೋಷಸ್ಸಂಸಾರಾಖ್ಯ ಉಪಾಗತಃ
ನ್ಯಾಯೇನೇತಿ ಪರಾಮರ್ಶೋ ವಿಚಾರ ಇತಿ ಕಥ್ಯತೇ

ಟೀ. ಅಹಂ-ನಾನು, ಕಃ-ಆರು, ಸಂಸಾರಾಖ್ಯ-ಸಂಸಾರವೆಂದು ಹೆಸರನುಳ್ಳುದಾದ, ಅಯಂ ದೋಷಃ-ಈ ದೋಷವು, ಕಥಂ-ಹೇಂಗೆ, ಉಪಾಗತಃ-ಬಂದಿತ್ತು, ಇತಿ-ಹೀಂಗೆಂಬ, ನ್ಯಾಯೇನ-ಮಾರ್ಗದಿಂದ, ಪರಾಮರ್ಶಃ-ವಿಚಾರಿಸುಹವು, ವಿಚಾರ ಇತಿ-ವಿಚಾರವೆಂದು, ಕಥ್ಯತೇ-ಹೇಳಲ್ಪಡುತ್ತಿಹುದು. ೧

ತದೇವ ಆ ವಾಸಿಷ್ಠದಲ್ಲಿ

ಜನ್ಮನ್ಯತ್ರ ಮಹಾದುಃಖಂ ಮ್ರಿಯಮಾಣಸ್ಯ ಚಾಪಿ ಯತ್
ಯಾತನಾಸು ಯಮಸ್ಯೋಗ್ರಂ ಗರ್ಭಸಂಕ್ರಮಣೇಷು ಚ

ಟೀ. ಅತ್ರಜನ್ಮನಿ-ಹುಟ್ಟುವಲ್ಲಿಯೂ, ದುಃಖಂ-ದುಃಖವು, ಮಹತ್-ಅಧಿಕವಾದುದು, ಮ್ರಿಯಮಾಣಸ್ಯ ಚಾಪಿ-ಸಾಯುತ್ತಯಿದ್ದಂಥಾ ಆತ್ಮಂಗೆಯೂ, ಯತ್-ಆವುದಾನೊಂದು ದುಃಖವುಂಟು, ತತ್-ಅದು, ಮಹತ್-ಅಧಿಕವಾದುದು, ಯಮಸ್ಯ-ಯಮನ, ಯಾತನಾಸು-ಯಾತನೆಗಳಲ್ಲಿಯೂ, ಉಗ್ರಂ-ಉಗ್ರವಾದ ದುಃಖವು, ಗರ್ಭಸಂಕ್ರಮಣೇಷು ಚ-ಗರ್ಭಂಗಳಲ್ಲಿ ಕೊಳಲುವಲ್ಲಿಯುಂ ಉಗ್ರವಾದ ದುಃಖವು. ೨

ಶಿವಧರ್ಮೋತ್ತರೇ

ತಥಾ ಶರೀರಂ ನಿಸ್ಸಾರಂ ಯೋನಿಯಂತ್ರ ಪ್ರಪೀಡನಂ
ಸಂವರ್ತೀ ಸಾಂಗಪ್ರತ್ಯಂಗಂ ಜರಾಯುಪರಿವೇಷ್ಟಿತಂ

ಟೀ. ಸಾಂಗಪ್ರತ್ಯಂಗಂ-ಅಂಗಪ್ರತ್ಯಂಗಗಳೊಡನೆ ಕೂಡಿದುದಾಗಿ, ಜರಾಯುಪರಿವೇಷ್ಟಿತಂ ಜರಾಯು-ಮಾಸಿನಿಂದ, ಪರಿವೇಷ್ಟಿತಂ-ಸುತ್ತಲ್ಪಟ್ಟುದಾಗಿ, ಸಂವರ್ತಿ-ಜನನಕ್ಕೆ ಸಮ್ಮುಖವಾಗಿ ವರ್ತಿಸುವದಾಗಿ, ಯೋನಿಯಂತ್ರ-ಯೋನಿಯೆಂಬ ಯಂತ್ರದಿಂದ, ಪ್ರಪೀಡಿತಂ-ಮಿಗೆ ಪೀಡಿಸಲ್ಪಟ್ಟುದಾದ, ತಥಾ-ಅಪರಿಯಾದ, ಶರೀರಂ-ದೇಹವು, ನಿಸ್ಸಾರಂ-ಸಾರವಿಲ್ಲದದು. ೩

ಜಿಘ್ರನ್ನಪಿ ಸ್ವದುರ್ಗಂಧಂ ಪಶ್ಯನ್ನಪಿ ಮಲಂ ಸ್ವಕಂ
ನ ವಿರಜ್ಯತಿ ಲೋಕೋಯಂ ಪೀಡಯನ್ನಪಿ ನಾಸಿಕಾಂ

ಟೀ. ಅಯಂ ಲೋಕಃ-ಈ ಜಗವು, ಸ್ವದುರ್ಗಂಧಂ-ತನ್ನ ದುರ್ಗಂಧವನ್ನು, ಜಿಘ್ರನ್ನಪಿ-ಘ್ರಾಣಿಸುತ್ತಿರ್ದು, ಮಲಂ-ಮಲವನು, ಪಶ್ಯನ್ನಪಿ-ನೋಡುತ್ತಿರ್ದು, ತಥಾ-ಹಾಂಗೆ, ನಾಸಿಕಾಂ-ಮೂಗನು, ಪೀಡಯನ್ನಪಿ-ಮುಚ್ಚಿಕೊಳ್ಳುತ್ತಂ ಇರ್ದುದಾಗಿ ಇರ್ದು, ನ ವಿರಜ್ಯತಿ-ವಿರಕ್ತಿಯನೆಯಿದದು. ೪

ಮಾಂಸಾಸ್ರಕ್ಪೂಯವಿಣ್ಮೂತ್ರಸ್ನಾಯುಮಜ್ಜಾಸ್ಥಿಸಂಹತೌ
ದೇಹೇ ಚೇತ್ ಪ್ರೀತಿಮಾನ್ ಮೂಢೋ ಭವಿತಾ ನರಕೇಪಿ ಸಃ

ಟೀ. ಮಾಂಸ-ಮಾಂಸದ, ಅಸ್ರಕ್-ನೆತ್ತರದ, ಪೂಯ-ಕೀವಿನ, ವಿಣ್-ಮಲದ, ಮೂತ್ರ-ಮೂತ್ರದ, ಸ್ನಾಯು-ನರವಿನ, ಮಜ್ಜಾ-ಕೊಬ್ಬಿನ, ಅಸ್ಥಿ-ಎಲುಗಳ, ಈ ಹೇಳಿದವಱ ಸಂಹತೌ-ಸಮೂಹವಾದ, ದೇಹೇ-ದೇಹದಲ್ಲಿ, ಮೂಢಃ-

ಮೂಢನಾದವನು, ಪ್ರೀತಿಮಾನ್ ಚೇತ್-ಸಂತೋಷವುಳ್ಳವನಹನೆ, ಸಃ-ಆತನು, ನರಕೇಽಪಿ-ನರಕದಲ್ಲಿಯೂ, ಪ್ರೀತಿಮಾನ್-ಪ್ರೀತಿಯುಳ್ಳಾತನು, ಭವಿತಾ-ಆಗಲುಳ್ಳವನು. ೫

ಸಿದ್ಧಾಂತಶೇಖರೇ

ತಸ್ಮಾದತ್ರ ಸುಖಂ ನೈವ ವಿದ್ಯತೇ ದೋಷಹೇತುಕೇ
ಮೋಕ್ಷೇಽಸ್ತಿಸುಖಮತ್ಯರ್ಥಂ ಸ ವಿವೇಕಾದಿಭಿರ್ಭವೇತ್

ಟೀ. ತಸ್ಮಾತ್-ಅದುಕಾರಣ, ದೋಷಹೇತುಕೆದೋಷ-ರಾಗದ್ವೇಷದಿಂದ ದೋಷಗಳಿಗೆ, ಹೇತುಕೇ-ಉತ್ಪತ್ತ್ಯಕಾರಣವಾಗಿ ಉಳ್ಳ, ಅತ್ರ-ಈ ಸಂಸಾರದಲ್ಲಿ, ಸುಖಂ-ಸುಖವು, ನ ವಿದ್ಯತೇ ಇಲ್ಲವು, ಮೋಕ್ಷೇ-ಮೋಕ್ಷದಲ್ಲಿ, ಅತ್ಯರ್ಥಂ-ಒಹಳವಾದ, ಸುಖಂ-ಸುಖವು, ಅಸ್ತಿ-ಉಂಟು, ಸಃ-ಆ ಮೋಕ್ಷವು, ವಿವೇಕಾದಿಭಿಃ-ವಿವೇಕಜ್ಞಾನ ಮೊದಲಾದವಱಿಂದ, ಭವೇತ್-ಅಹುದು. ೬

ಸಂಸಾರಹೇಯಸ್ಥಲಕ್ಕೆ ವಚನ :

ವ. ಚಂದ್ರಮನಂತೆ ಕಳೆ ಸಮನಿಸಿತ್ತೆನಗೆ. ಸಂಸಾರವೆಂಬ ರಾಹು ಸರ್ವಗ್ರಾಸಿಯಾಗಿ ನುಂಗಿತ್ತಯ್ಯ ! ಇಂದೆನ್ನ ದೇಹಕ್ಕೆ ಗ್ರಹಣವಾಯಿತ್ತು. ಇನ್ನೆಂದಿಂಗೆ ಮೋಕ್ಷವಹುದೋ ಕೂಡಲಸಂಗಮದೇವಾ ?

ಟೀ. ಜ್ಞಾನಕಳಾತ್ಮನ ಮಾಯಾದೇಹಸಂಸಾರವವಗ್ರಹಿಸಿದಲ್ಲಿ ಜ್ಞಾನೋದಯದಿಂದ ತನ್ನ ನಿಜವ ತಿಳಿದು ಮೋಕ್ಷಾಪೇಕ್ಷನಾಗಿ ಸಂಸಾರದ ಬಿಡುಗಡೆಯ ಬಯಸಲು, ಆ ಬಯಸಿದ ಮಾತ್ರದಲ್ಲಿಯೆ ಬಿಡದಿಪ್ಪುದ ಕಂಡು ಜ್ಞಾನಿಗಳು ಚಿಂತಿಸುತ್ತಿರ್ದರೆಂಬುದೀಗ ಈ ವಚನದ ತಾತ್ಪರ್ಯಾರ್ಥ. ೧

ವ. ಅಂಗದ ನೋಟ, ಸಿಂಗದ ಗಾತ್ರ, ಹಿಂಗದು ಮನದಲ್ಲಿ ನಾನಾವಿಕಾರವು. ಬಂದೆನೆಂದಱಿಯಲಿಲ್ಲಾಗಿ ಸಂದೇಹ ಬಿಡದು. ಮುಂದುಗಾಣದು ಲೋಕ. ಬೆಂದ ಮಾಯೆಗಂಜಿ ನಿಮ್ಮ ಮಱೆಹೊಕ್ಕೆ ಕೂಡಲಸಂಗಮದೇವಾ.

ಟೀ. ತನುಮನಂಗಳಿಗೆ ಭೇದವಿಲ್ಲವಾಗಿ ಮನೋದೃಕ್ಕೆಂಬುದೀಗ 'ಅಂಗದ ನೋಟವೆ'ಂಬ ಶಬ್ದಕ್ಕರ್ಥ. ಅಂತಪ್ಪ ಮನೋದೃಕ್ಕು ತಾನು ಸೂಕ್ಷ್ಮವಾಗಿರ್ದ

ಡೆಯೂ ಆ ಮನೋದ್ವೃಕ್ಕಿನ ಬಯಕೆ ಸರ್ವವೂ ತನ್ನದೆಂದು ಅಹಂಕರಿಸುತಿಪ್ಪ ಅಹಂಕಾರವೆಂಬ ಮದಕರಿಗಳ ಗ್ರಹಿಸುತ್ತಿಪ್ಪ ಘನತೆಯನುಳ್ಳುದೆಂಬುದೀಗ 'ಅಂಗದ ನೋಟ ಸಿಂಗದ ಗಾತ್ರ' ವೆಂಬ ಶಬ್ದಕ್ಕರ್ಥ. ಅಂತಪ್ಪ ಮನದ ಕರಣಂಗಳು ಹಲವುಂಟಾಗಿ ಒಚ್ಚಿಹೊತ್ತು ನಿಲುಕಡೆಯಿಲ್ಲದೆ ವಿಕಾರಿಸುತ್ತಿಹುದೆಂಬುದೀಗ 'ಹಿಂಗದು ಮನದಲ್ಲಿ ನಾನಾ ವಿಕಾರವೆ' ಂಬ ಶಬ್ದಕ್ಕರ್ಥ. ಅಂತಪ್ಪ ಮನದ ಗುಣವಿಕಾರದಿಂದ, ತಾನಾರು ತಾನೆಲ್ಲಿಂದ ಬಂದೆನೆಂಬ ತನ್ನ ನಿಜವ ಕಾಬ ಜ್ಞಾನವಿಲ್ಲವೆಂಬುದೀಗ 'ಬಂದೆನೆಂದಱಿಯಲಿಲ್ಲಾಗಿ' ಎಂಬ ಶಬ್ದಕ್ಕರ್ಥ. ಅಂತು ತನ್ನ ನಿಜವ ಕಾಣದೆ ಮನದ ಸಂಕಲ್ಪ ಸಂಶಯ ಭ್ರಾಂತಿಗೊಳಗಾಗಿ ಮುಂದೆ ಬಪ್ಪ ಜನನ ಮರಣದ ಬಾಧೆಯ ಕಾಣರು, ಮುಕ್ತಿಯ ಸಾಧಿಸಬೇಕೆಂಬ ಯುಕ್ತಿಯ ಕಾಣರು ಜೀವರೆಂಬುದೀಗ 'ಸಂದೇಹ ಬಿಡದು ಮುಂದುಗಾಣದು ಲೋಕ' ಎಂಬ ಶಬ್ದಕ್ಕರ್ಥ. ಅಂತಪ್ಪ ಮನವೆ ಮಾಯೆ ಆ ಮಾಯೆಯ ಮನವು ತಾಪತ್ರಯಾಗ್ನಿಗಳಲ್ಲಿ ಬೆಂದು ಬೆಂದು ಅಳಿಯದೆ ಅಳುಕದೆ ಉಳಿದಿಹುದು ಮನ. ಆ ಮನದ ಕಾಟಕ್ಕಂಜಿ ಲಿಂಗದ ಮಱೆಹೊಕ್ಕ ಶರಣನೆಂಬುದೀಗ 'ಬೆಂದ ಮಾಯೆಗಂಜಿ ನಿಮ್ಮ ಮಱೆಹೊಕ್ಕೆ ಕೂಡಲಸಂಗಮದೇವಾ' ಎಂಬ ಶಬ್ದಕ್ಕರ್ಥ. ೨

**ವ.** ವಿಷವೆಂಬ ಹಸುರ ಎನ್ನ ಮುಂದೆ ತಂದು [೧]ಪಸರಿಸಿವೆಯಯ್ಯಾ ![೧] ಪಶುವೇನ ಬಲ್ಲುದು ಹಸುರೆಂದೆಳಸುವುದು. ವಿಷಯರಹಿತನ ಮಾಡಿ ಭಕ್ತಿರಸವ ದಣಿಯ ಮೇಯಿಸಿ ಸುಬುದ್ಧಿಯೆಂಬ ಉದಕವನೆಱೆದು ನೋಡಿ ಸಲಹಯ್ಯಾ ಕೂಡಲಸಂಗಮದೇವಾ !

**ಟೀ.** ಆತ್ಮಂಗೆ ದೇಹೇಂದ್ರಿಯ ವಿಷಯಸುಖಂಗಳ ಮುಂದುದೋಱಿ ಮಚ್ಚಿಸಿ ತನ್ನ ನಿಜವ ಮಱಸಿ ಪಶುವೆಂದೆನಿಸಿ ಭವಕ್ಕೆ ತಂದು ಕರ್ತೃವಾದ ಶಿವನು ಭಕ್ತಿಜ್ಞಾನವನಿತ್ತು ಭವಸಂಸಾರವ ಕೆಡಿಸಿ ಸಲಹೆಂದು ಶಿವನ ಬೇಡಿದ ಬೇಡಿಕೆಯೆಂಬುದೀವಚನದ ತಾತ್ಪರ್ಯಾರ್ಥ. ೩

**ವ.** ಅನಂತಾನಂತಕಾಲ ನಿತ್ಯವೆಂಬಿರಿ ಸಂಸಾರ, ಸಂಸಾರವೆಂಬುದು ಹುಸಿ, ಹುಸಿ ಕಂಡಾ ಎಲವೋ ! ಇಂದಿನಿಂದಿನ ಸುಖ ಇಂದಿಂಗೆ ಪರಿಣಾಮ. ದಿನದಿನದ ಸುಖ ಹುಸಿ ಕಂಡಾ ಎಲವೋ ! ಘನ ಘನವೆಂಬ ರೂಪಿಂಗೆ ರತಿಯಿಲ್ಲಯ್ಯಾ. ಮಹಾಲಿಂಗಗಜೇಶ್ವರನಲ್ಲಿ ತಿಳಿದು ನೋಡಾ ಎಲವೋ !

೧ ಪಸರಿಸದಿರಯ್ಯಾ (ಎ)

ಟೀ. ಅನಿತ್ಯವಾದ ದೇಹಸಂಸಾರಸುಖವ ನಿತ್ಯವೆಂದು ಬಗೆದು ಜೀವನು ಸತ್ತು ಹುಟ್ಟುತಿಹನು, ತನ್ನ ನಿಜವಪ್ಪ ಮಹಾಘನಲಿಂಗದಲ್ಲಿ ಜ್ಞಾನರತಿ ಹುಟ್ಟಿಲ್ಲದ ಕಾರಣ ಅಂತಪ್ಪ ಜ್ಞಾನಭಕ್ತಿಯ ಸಾಧಿಸಿ ಮುಕ್ತನಾಗೆಂಬುದೀ ವಚನದ ತಾತ್ಪರ್ಯಾರ್ಥ. ೪

ವ. ಜಾತಸ್ಯ ಮರಣಂ ಆವಂಗೆಯೂ ತಪ್ಪದು. ಅಱಿದು ಮಱೆಯ ಬೇಡಯ್ಯಾ. ಉರಗನ ಬಾಯ ಕಪ್ಪೆಯಂತೆ ಸಂಸಾರ ಹರಿಗೊಳುತ್ತಿರ್ದುದಲ್ಲಾ. ರೋಮಜರು ಮೀನಜರು ಕಾಲಕಲ್ಪಿತಕ್ಕೊಳಗಾದರು. ಮಹಾಲಿಂಗಗಜೇಶ್ವರಯ್ಯನೊಬ್ಬನೆ ಶಾಶ್ವತನು.

ಟೀ. ನರರು ಸುರರು ದೇವಾದಿ ಮನುಮುನಿಗಳಿಗೆಯೂ ಜನನ ಮರಣ ತಪ್ಪದೆಂದಱಿದ ಬಳಿಕ ಮಱೆಯದೆ ನಿತ್ಯವಾದ ಶಿವನ ಪೂಜಸಿ ನಿತ್ಯರಾಗಿಯೆಂಬುದೀ ವಚನದ ತಾತ್ಪರ್ಯಾರ್ಥ. • ೫

ವ. ಹಿಂಡನಗಲಿ ಹಿಡಿವಡೆದ ಕುಂಜರ ತನ್ನ ವಿಂಧ್ಯವ ನೆನೆವಂತೆ ನೆನೆವೆನಯ್ಯಾ. ಬಂಧನಕ್ಕೆ ಬಂದ ಗಿಳಿ ತನ್ನ ಬಂಧುವ ನೆನೆವಂತೆ ನೆನೆವೆನಯ್ಯಾ ಕಂದಾ ನೀನಿತ್ತ ಬಾ ಎಂದು ನೀವು ನಿಮ್ಮ ಅಂದವ ತೋಱಯ್ಯಾ ಚೆನ್ನಮಲ್ಲಿಕಾರ್ಜುನಾ.

ಟೀ. ಶಿವಾಂಶಿಕವಾದ ಚಿತ್‌ಸ್ವರೂಪವೆ ಶರಣರೂಪಾಗಿ ಶಿವಾಜ್ಞೆಯಿಂದ ಮಾಯಾದೇಹ ಕರಣ ಮೊದಲಾದ ನಾನಾ ಪ್ರಪಂಚಿನ ಭವಾರಣ್ಯದೊಳಗೆ ಸಿಕ್ಕಿ ತಪ್ಪಿ ತನ್ನ ನಿಜವ ಕಾಣದೆ ಅಱಸುತ್ತ ಮನದಲ್ಲಿ ತನ್ನ ಆತ್ಮಜನಕನಪ್ಪ ಶಿವ ನೀನೆ ಕರುಣಿಸಿ ನಿಮ್ಮ ನಿಜವ ತೋಱಯ್ಯಾ ಎನುತ್ತ ಮೋಕ್ಷಾಪೇಕ್ಷಿಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೬

ವ. ವನದ ಕೋಗಿಲೆ ಮನೆಗೆ ಬಂದರೆ ತನ್ನ ವನವ ನೆನೆವುದ ಮಾಣ್ಬುದೇ? ಮಲೆಯ ಗಜವು ಮನೆಗೆ ಬಂದರೆ ತನ್ನ ಮಲೆಯ ನೆನೆವುದ ಮಾಣ್ಬುದೇ ? ಕೂಡಲ ಸಂಗನ ಶರಣರು ಮಱೆದು ಮರ್ತ್ಯಕ್ಕೆ ಬಂದರೆ ತಮ್ಮ ಆದಿಮಧ್ಯಾಂತರಂಗದ ಲಿಂಗವ ನೆನೆವುದ ಮಾಣ್ಬರೇ ?

ಟೀ. ಆನೆಗಳು ಕೋಗಿಲೆಗಳು ತಮ್ಮ ನಿಜ ಜನನಸ್ಥಲವನಗಲಿ ಬಂಧನಕ್ಕೆ ಬಂದಲ್ಲಿ ತಮ್ಮ ನಿಜಸ್ಥಲವನೆ ಚಿಂತಿಸುತಿಪ್ಪಂತೆ ಶಿವನ ಚಿದಂಶವಾದ ಶರಣರು

ಶಿವಾಜ್ಞೆಯಿಂದ ತಮ್ಮ ನಿಜವ ಮಱೆದು ಮಾಯಾದೇಹಸಂಸಾರಯುಕ್ತವಾಗಿ ಮರ್ತ್ಯಕ್ಕೆ ಬಂದಲ್ಲಿ ಶಿವಜ್ಞಾನೋದಯದಿಂದ ತಮ್ಮ ನಿಜಸ್ವರೂಪವೆ ಲಿಂಗವೆಂದಱಿದು ಅಂತರಂಗದ ಅಱಿವೆಲ್ಲಾ ಲಿಂಗವ ಬೆರಸುವ ನೆನಹಿನ ಚಿಂತನೆಯ ಆತುರಗುಂದದೆ ಇಪ್ಪರು ಶರಣರೆಂಬುದೀ ವಚನದ ತಾತ್ಪರ್ಯಾರ್ಥ. ೭

ವ. ಸಾವು ತಡವಲ್ಲ, ನರಕ ದೂರವಲ್ಲ, ಕೆಮ್ಮನೆ ಕೆಡಬೇಡಾ ವಿಷಯವ ಬಿಡು. ಗುರುಭಕ್ತಿಯಲ್ಲಿ ನಂಬು. ಸುಜಿಯಪ್ಪೆ ಚಿಮ್ಮಲಿಗೆಯ ಚೆನ್ನರಾಮಾ.

ಟೀ. ಅನಿತ್ಯವಾದ ಶರೀರ ಭೋಗಕ್ಕಾಗಿ ಮಾಡಬಾರದ ಪಾಪವ ಮಾಡಿದರೆ ನರಕ ತಪ್ಪದು ಕೆಡಬೇಡ ಮನುಜಾ. ಗುರುಭಕ್ತಿಯ ಮಾಡಿದರೆ ನಿತ್ಯಮುಕ್ತಿಯಹುದೆಂಬುದೀ ವಚನದ ತಾತ್ಪರ್ಯಾರ್ಥ. ೮

ವ. [1]ಬಟ್ಟೆಗೊಂಡುಪೋಗುತ್ತಿಪ್ಪ[1] ಮನುಜನೊಬ್ಬ ಹುಲಿ ಕಾಡುಗಿಚ್ಚು ರಕ್ಕಸಿ ಕಾಡಾನೆಗಳು ನಾಲ್ಕುದೆಸೆಯಲಟ್ಟುತ್ತ ಬರೆ ಕಂಡು, ಭರದಿಂದ ಹೋಗದೆಸೆಯಿಲ್ಲದೆ ಬಾವಿಯ ಕಂಡು ತಲೆಯನೂಱಿ ಬೀಳುವಲ್ಲಿ ಹಾವ ಕಂಡು ಇಲಿ ಕಡಿದ ಬಳ್ಳಿಯ ಹಿಡಿದು ನಿಲೆ ಜೇನಹುಳುಗಳು ಮೈಯ್ಯನೂಱುವಾಗ ಮೂಗಿನ ತುದಿಯಲ್ಲಿ ಒಂದು ಹನಿ ಮಧು [2]ಬಂದು[2] ಬೀಳೆ, ಆ ಮಧುವ ಕಂಡು ಹಿರಿದಪ್ಪ[3] ದುಃಖವನೆಲ್ಲಾ ಸೈರಿಸಿ ನಾಲಗೆಯ ತುದಿಯಲ್ಲಿ ಆ ಮಧುವ ಸೇವಿಸುವಂತೆ, ಈ ಸಂಸಾರಸುಖ ವಿಚಾರಿಸಿ ನೋಡಿದಡೆ ದುಃಖದಾಗರ. ಇದನಱಿದು ಸಕಲ ವಿಷಯಂಗಳಲ್ಲಿ ಸುಖವಿಂತುಂಟೆಂದು ನಿರ್ವಿಷಯನಾಗಿ ನಿಂದ ನಿಲವು ಚಿಮ್ಮಲಿಗೆಯ ಚೆನ್ನರಾಮಾ.

ಟೀ. ಸಂಸಾರ ವಿಷಯಸುಖವಲ್ಪ ಅದಱಿಂದಹಿಲಪ್ಪುಹ ದುಃಖವನಂತವೆಂದಱಿದು ದೇಹೇಂದ್ರಿಯ ವಿಷಯಸುಖವ ಬಿಟ್ಟು ತನ್ನ ನಿಜಸುಖವನಱಿದು ಮಾನ ನಿಂದಡೆ ನಿಜವಸ್ತುವಪ್ಪುದು ತಪ್ಪದೆಂಬುದೀ ವಚನದ ತಾತ್ಪರ್ಯಾರ್ಥ. ೯

ವ. ಹೆಗ್ಗಣವನಿಕ್ಕಿ ನೆಲಗಟ್ಟ ಕಟ್ಟಿದಂತೆ ಆಯಿತ್ತೆನ್ನ ಕಾಯಗುಣ. ಅಹಂಕಾರ ಪ್ರಬೋಧೆಗಳೇಕಯ್ಯಾ ? ಕಾಮ ಕ್ರೋಧ ಲೋಭ

೧ ಬಟ್ಟೆಯಲ್ಲಿ ಹೋಗುತ್ತಿಪ್ಪ (ಎ) ೨ ಬಿಂದು (ಎ) ೩ ಬಪ್ಪ (ಎ)

ಮೋಹ ಮದ ಮತ್ಸರಂಗಳನಿಕ್ಕಿ ಎನ್ನ ಮಾಡಿದಿರಿ ಎನ್ನ ಬಾಧಿಸ ಲೆಂದು ಲಿಂಗಯ್ಯ ತಂದೆ ! ಆಧಿವ್ಯಾಧಿಗಳೆಲ್ಲವ ಕಳೆದು ನಿರ್ವಾಣ ವಪ್ಪ ಪದವ ಕರುಣಿಸಯ್ಯಾ ಕೂಡಲ ಚೆನ್ನಸಂಗಮದೇವ.

ಟೀ. ಪರಶಿವನು ತನ್ನ ತದಂಶವನೆ ಆತ್ಮರ ಮಾಡಿ ಹುಟ್ಟಿಸಿದಂತೆ ದೇಹ ಕರಣಗುಣ ಧರ್ಮಕರ್ಮಂಗಳ ಅಹಂ ಮಮತೆಗಳನೆಲ್ಲವ ಕೂಡೆ ಹುಟ್ಟಿಸಿ ಭವಕ್ಕೆ ತಂದು ನೋಯಿಸಿ ವಿನೋದಿಸುತ್ತಿಪ್ಪಾತನು ಶಿವನೆಂದರಿದು ಶರಣರು ಶರಣುವೊಕ್ಕು ಭವರೋಗವ ಬಿಡಿಸಿ ದೇಹವಾಸನೆಯ ಕೆಡಿಸಿ ನಿರ್ವಾಸನೆಯಪ್ಪ ಶಿವಸುಖವ ಬಯಸಿ ಬೇಡುತ್ತಿರ್ದರೆಂಬುದೀ ವಚನದ ತಾತ್ಪರ್ಯಾರ್ಥ. ೧೦

ವ. [1]ಉತ್ಪತ್ತಿಯಲ್ಲಿ[1] ಶುಕ್ಲ ಶೋಣಿತದಿಂದಾದ ಲಜ್ಜೆ ಸಾಲದೆ ? ಅಂತು ಬಲಿದ ಸಪ್ತಧಾತುವಿನ ನರಕ ದೇಹದೊಳಿಪ್ಪ ಹೇಸಿಕೆ ಸಾಲದೆ ? ಮತ್ತೆಯು ಪಾಪಂಗಳ ಮಾಡಿ ದುರಿತಂಗಳ ಹೊರುವ ಹೆಗಣನ ವೇಕಯ್ಯಾ ? ಕಾಲನ ಕಯ್ಯ ಬಡಿಸಿಕೊಂಡು ನರಕವನುಂಬುದು ವಿಧಿಯೆ ಎಲೆ ಮನುಜಾ ? ಒತ್ತೊತ್ತೆಯ ಜನನವ ಗೆಲುವಡೆ ಕರ್ತನ ಪೂಜಿಸು ನಮ್ಮ ಕೂಡಲ ಸಂಗಮದೇವನ.

ಟೀ. ಪ್ರತ್ಯಕ್ಷ ನರಕದೇಹವನನುಭವಿಸುತ್ತ ಮತ್ತೆಯೂ ಪಾಪವ ಮಾಡಿ ಕಾಲನ ಕಯ್ಯ ಬಡಿಸಿಕೊಂಡು ನರಕಕ್ಕಿಳಿವುದು ಬುದ್ಧಿಯಲ್ಲ. ಜಗದ ಕರ್ತೃ ಶಿವನ ಪೂಜಿಸಿದಡೆ ಜನನ ಮರಣವಿಲ್ಲ ಮನುಜಾ ಎಂಬುದೀ ವಚನದ ತಾತ್ಪ ರ್ಯಾರ್ಥ. ೧೧

ವ. ದಿಟವುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ ಟಿವಕ ಟೆಂಬಕನಾಡಿಸು ತ್ತಿದ್ದಿತ್ತಯ್ಯಾ ನಿನ್ನ ಮಾಯೆ ಕೂಡಲ ಸಂಗಮದೇವಯ್ಯಾ ಹೊನ್ನು ಹೆಣ್ಣು ಮಣ್ಣು ತೋರಿ.

ಟೀ. ತನ್ನ ನಿಜ ಶಿವತತ್ತ್ವವನರಿದು ಕೂಡುವ ಕೂಟದ ನಿಜ ಭಕುತಿ ಹುಟ್ಟದು ಜೀವರಿಗೆಂಬುದೀಗ ‘ ದಿಟ ಪುಟ ಭಕುತಿ ಸಂಪುಟ ನೆಲೆಗೊಳ್ಳದಾಗಿ ’ ಎಂಬ ಶಬ್ದಕ್ಕರ್ಥ. ಅಂತು ತನ್ನ ನಿಜ ಶಿವತತ್ತ್ವದಲ್ಲಿ ಕೂಟವಿಲ್ಲವಾಗಿ ಜೀವಂಗೆ ಹೊನ್ನು ಹೆಣ್ಣು ಮಣ್ಣು ಮೊದಲಾದ ದೇಹಸಂಸಾರಸುಖದಲಿ ಮಚ್ಚನಿಕ್ಕಿ ಭವಭವ

೧ ಉತ್ಕೃಷ್ಟದಲ್ಲಿ (ಎ)   ೨ ವ (ಎ)

ದಲ್ಲಿ ತಿರುಗಿಸಿ ಜಿಹ್ವೆಯ[1] ತುಟಿಗಳು ಮೂಗಿನ ಟೆಂಬೆಗಳು ಹೊಡೆದಾಡುವ ಉಸುರತೆ ಕಟದ ವಿಕಾರದಲ್ಲಿ ಹೊಕ್ಕು ಹೊದಕುಳಿಗೊಳಿಸುತ್ತಿಹುದು ಶಿವಾಜ್ಞೆ ಯಿಂದ ಮಾಯೆ ಜೀವರನೆಂಬುದೀಗ 'ಟಿವಕ ಟೆಂಬಕನಾಡಿಸುತ್ತಿದ್ದಿತ್ತಯ್ಯಾ ನಿನ್ನ ಮಾಯೆ ಕೂಡಲ ಸಂಗಮದೇವಯ್ಯ ಹೊನ್ನು ಹೆಣ್ಣು ಮಣ್ಣು ತೋಱಿ' ಎಂಬ ಶಬ್ದಾರ್ಥ. ೧೨

ವ. ಎಲುವಿನ [2]ಹಂಜರ[2] ಕರುಳಿನ ಜಾಳಿಗೆ, ಅಮೇಧ್ಯದ ಹುತ್ತು, ಮೂತ್ರದ ಬಾವಿ, ಶ್ಲೇಷ್ಮದ ಕೆಸಱು, ಕೀವಿನ ಸೋನೆ, ನೆತ್ತರ ಮಡು, ನಾಡಿಗಳ ಸುತ್ತುವಳಿ, ನರವಿನ ನೆಣಜಂತ್ರ, ಮಾಂಸದ ಪುಟ್ಟಿಯ ತೆಪ್ಪ, [3]ಕಿಸುಕುಳಿನ[3] ಹೇಸಿಕೆ, ಅತಿಹೇಯದ ಮಲಿನ, ಅಸ್ಥಿ ರೋಮ ತೊಗಲ ಪಾಕುಳ, ಕ್ರಿಮಿಯ ಸಂಕುಳ, ಉತ್ಪತ್ತಿ ಸ್ಥಿತಿಲಯದ ಬೀಜ, ರೇತ ರಜಸ್ಸಿನಲ್ಲಿ ಜನಿತ, ಆಧಿವ್ಯಾಧಿಯ ತವರು ಮನೆ, ವಿಷಯದ ಭಯ, ದುಃಖದಾಗರ, ಮೋಹದ ಬಲೆ, ತೋಱಿ ಕೆಡುವ ತನು ಇದು ನೀನೆಂದು ನಿನ್ನದೆಂದು ಮಾಡಬಾರದ ಪಾಪವ ಮಾಡಿ ಮುಚ್ಚಿ ಹೂಸಿ ಹೊದಸಿ ಈ [4]ದೇಹಂಗಂಡು[4] ಮಱುಗುವೆ. ಅಘೋರ ನರಕದಲ್ಲಿಕ್ಕುವಾಗ ಅಡ್ಡಬಪ್ಪರಾರೋ? ಅಹಂಮಮತೆಯ ಬಿಟ್ಟು ಸೋಹಂ ಬ್ರಹ್ಮಾಸ್ಮಿ [5]ಎಂಬ[5] ಕೇಡಿಲ್ಲದ ಪದವಿಯ ಮಾಡಿಕೊಳ್ಳಾ ಮರುಳೇ! ಬೇಡ ಕೆಡುವೆ ನಿನ್ನ ನೀ ತಿಳಿದುನೋಡಾ ಚಿಮ್ಮಲಿಗೆಯ ಚೆನ್ನರಾಮಾ.

ಟೀ. [6]ಅಪೇಯವಾದ[6] ದೇಹಭೋಗಕ್ಕಾಗಿ ಪಾಪವ ಮಾಡಿ ನರಕಕ್ಕಿಳಿ ಯದೆ ದೇಹೋಹಂ ಮಮತೆಗಳ ಬಿಟ್ಟು, ನಾನು ಶಿವನೆಂಬ ನಿಜವ ತಿಳಿದು ಶಿವೋಹಂ ಎಂಬ ಶಿವಭಾವವ ಸಾಧಿಸಿಡಡೆ ನಿತ್ಯನಪ್ಪೆ ಮನುಜಾ ಎಂಬುದೀ ವಚನದ ತಾತ್ಪರ್ಯಾರ್ಥ. ೧೩

ವ. ಒಲೆ ಹೊತ್ತಿ ಉರಿದಡೆ ನಿಲಬಹುದಲ್ಲದೆ ಧರೆ ಹೊತ್ತಿ ಉರಿದಡೆ ನಿಲ ಬಹುದೆ? ಏರಿ ನೀರನುಂಬಡೆ, ಬೇಲಿ ಕೆಯ್ಯ ಮೇವರೆ ನಾರಿ ತನ್ನ ಮನೆಯಲಿ ಕಳುವರೆ ತಾಯ ಮೊಲೆವಾಲು ನಂಜಾಗಿ ಕೊಲುವರೆ

೧ ಯು (ಎ) ೨ ಪಂಜರ ೩ ಕಿಸುಕುಳದ (ಎ) ೪ ದೇಹಂಗೊಂಡು (ಎ)
೫ ಎಂದು (ಎ) ೬ ಆಪೇಯುವಾದ (ಎ)

ಇನ್ನಾರಿಗೆ ದೂರುವೆ ತಂದೆ ? ಕೂಡಲ ಸಂಗಮದೇವಾ ನೀ ಹುಟ್ಟಿಸಿ ಜೀವನ ಭವದುಃಖಿಯ ಮಾಡಿದ ಬಳಿಕ ಬಿಡಿಸುವವರಾರುಂಟು ?

ಟೀ. ಈ ವಚನ ಕಾಣಬಂದರ್ಥ. ೧೪

ವ. ಬಡಪಶು ಪಂಕದಲ್ಲಿ ಬಿದ್ದರೆ ಕಾಲ ಬಡಿವುದಲ್ಲದೆ ಬೇರೆ ಗತಿಯುಂಟೇ ? ಶಿವಶಿವಾ [1]ಹೋದೆಹೆ ಹೋದೆಹೆನಲಾ ![1] ನಿಮ್ಮ ಮನದತ್ತಲೆನ್ನ ತೆಗೆಯಯ್ಯಾ. ಪಶು ನಾನು ಪಶುಪತಿ ನೀನು. ತುಡುಗುಣಿಯೆಂದೆನ್ನ ಜಡಿದು ಬಡಿಯದ ಮುನ್ನ ಒಡೆಯ ನಿಮ್ಮ ಬಯ್ಕದಂತೆ ಮಾಡು ಕೂಡಲಸಂಗಮದೇವಾ.

ಟೀ. ನಿಮ್ಮ ನಿಜವ ಮರೆಸಿ ಪಶುಜೀವನಂ ಮಾಡಿ ಸಂಸಾರವೆಂಬ ಕೆಸರೊಳಗೆ ಕೆಡಹಿದ ಬಳಿಕ ಏಳುವ ಸ್ವತಂತ್ರ ಇಲ್ಲವಯ್ಯಾ. ಪಶುಪತಿ ನೀ ಮಾಡಿದ ಸಂಸಾರದ ಸುಖವ ನೀ ಮುಂತಾಗಿ ಭೋಗಿಸದೆ ಭೋಗಿಸಿದ ಪಶುಜೀವನನು ಕಾಲನವರು ಕೊಲುತ್ತ ನಿನ್ನ ಬಿಡಿಸುವ ಒಡೆಯರಾರೋ ಎಂದು ಬೈವ ಬೈಗಳು ಶಿವ ನಿಮಗಿಲ್ಲದ ಮೊದಲೆ ಎನ್ನ ಭವಸಂಸಾರವ ಬಿಡಿಸಿ ನಿಮ್ಮತ್ತ ತೆಗೆದುಕೋ ಎಂದು ಶರಣರು ಶಿವಂಗೆ ವಾಸಿಯ ಹುಟ್ಟಿಸಿ ಬೇಡುತ್ತಿರ್ದರೆಂಬುದೀ ವಚನದ ತಾತ್ಪರ್ಯಾರ್ಥ. ೧೫

ವ. [2]ಬೆಳೆಯ[2] ಭೂಮಿಯಲೊಂದು ಪ್ರಳಯದ ಕಸ ಹುಟ್ಟಿ ತಿಳಿಯಲೀಯದು ಎಚ್ಚಱಲೀಯದು. ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ ಲಿಂಗತಂದೆ. ಸುಳಿದೆಗೆದು ಬೆಳೆವೆನು ಕೂಡಲಸಂಗಮದೇವಾ.

ಟೀ. ಮೋಕ್ಷದ ಫಲ ಕೊಡುವ ಬೆಳಸೀಗ ಭಕ್ತಿ. ಅಂತಪ್ಪ ಭಕ್ತಿಯ ಬೆಳೆಗೆ ಸಾಧನ ಮನುಜದೇಹವೆಂಬುದೀಗ 'ಬೆಳೆಯ ಭೂಮಿ' ಯೆಂಬ ಶಬ್ದಕ್ಕರ್ಥ. ಅಂತು ಭಕ್ತಿಯ ಬೆಳೆಗೆ ಸಾಧನವಾದ ಮನುಜದೇಹದಲ್ಲಿ ಅಜ್ಞಾನವೆಂಬ ಕಸ ಅಡಿಗಡಿಗೆ ಹುಟ್ಟಿತ್ತು. ಭಕ್ತಿ ಜ್ಞಾನವ ಹುಟ್ಟಲೀಯದೆ ಕಂಟಕವಾಗಿಹುದೆಂಬುದೀಗ 'ಒಂದು ಪ್ರಳಯದ ಕಸ ಹುಟ್ಟಿ' ಎಂಬ ಶಬ್ದಕ್ಕರ್ಥ. ಅಂತು ತನ್ನ ನಿಜವ ತಿಳಿದು ಎಚ್ಚತ್ತು ಶಿವಪದವ ಕೂಡುವ ಭಕ್ತಿ ಜ್ಞಾನಕ್ಕೆ ಕಂಟಕವಾ

೧ ಹೋದೆಹೋದೆನಯ್ಯಾ (ಹು) ೨ ಬೆಳೆ (ಎ)

ಗಿಪ್ಪ ಅಜ್ಞಾನವ ಹುಟ್ಟಿಸಿದ ಶಿವನೇ, ಅಜ್ಞಾನವ ನಷ್ಟವ ಮಾಡಿ ಕರುಣಿಸಿದರೆ ಭಕ್ತಿಜ್ಞಾನ ಪ್ರಭಾವಿಸಿ ಮುಕ್ತಿಯ ಫಲವಪ್ಪುದೆಂಬುದೀಗ 'ತಿಳಿಯಲೀಯದು ಎಚ್ಚಱಲೀಯದು ಎನ್ನವಗುಣವೆಂಬ ಕಸವ ಕಿತ್ತು ಸಲಹಯ್ಯಾ ಲಿಂಗತಂದೆ. ಸುಳಿದೆಗೆದು ಬೆಳೆವೆನು' ಎಂಬ ಶಬ್ದಕ್ಕರ್ಥ. ೧೬

ವ. ಸಟೆಯುಳ್ಳದಂತೆ ಪ್ರಪಂಚಿಲ್ಲದಂತೆ ವೈಸಿಕವಿಲ್ಲದಂತೆ ನಡೆಸಯ್ಯಾ ಲಿಂಗತಂದೆ. ಒಂದು ನಿಮಿಷವಾದಡೆಯೂ ನಿಮ್ಮ ಶರಣರ ಸಂಗದಲ್ಲಿರಿಸಯ್ಯಾ. ^೧^ಬೇಱೆ ಮತ್ತೆ ಅನ್ಯವ ತೋಱದಿರಯ್ಯಾ^೧^ ಹೊಲಬುಗೆಟ್ಟೆನಯ್ಯಾ ಕೂಡಲಸಂಗಮದೇವಾ.

ಟೀ. ಶಿವಜ್ಞಾನೋದಯವಾದ ಶರಣನು ತನ್ನ ಅಱಿವಿಂಗೆ ಕಂಟಕವಾಗಿಪ್ಪ ಅಜ್ಞಾನಗುಣ ಹೊದ್ದದಂತೆ ಶರಣಸಂಗವ ಕರುಣಿಸಿ ನಿಜವ ಮಱೆಯದಂತೆ ಇರಿಸಯ್ಯಾ ಎಂದು ಲಿಂಗವ ಬೇಡುತ್ತಿರ್ದರು ಶರಣರೆಂಬುದೀ ವಚನದ ತಾತ್ಪರ್ಯಾರ್ಥ. ೧೭

ವ. ಹುಟ್ಟೆಂದು ಲೋಕದೊಳು ಹುಟ್ಟಿಸಿ ಇಳಿಯಬಿಟ್ಟರೆ ನಿಮ್ಮ ನಗುವರಯ್ಯಾ. ಹರನೆ ಹೊಲಬುಗೆಟ್ಟೆನು ಬಟ್ಟೆಯ ತೋಱಯ್ಯಾ. ಹುಯ್ಯಲಿಟ್ಟೆನು ಗಣಂಗಳು ಕೇಳಿರಯ್ಯ. ಕೂಡಲಸಂಗಮದೇವನೆನ್ನ ಕಾಡಿಹನಯ್ಯ.

ಟೀ. ಶಿವ ತನ್ನ ತದಂಶವಾದ ಆತ್ಮನಿಗೆ ತಾನೆ ದೇಹಸಂಬಂಧಿಯ ಮಾಡಿ ಹುಟ್ಟಿಸಿ ತನ್ನ ನಿಜವ ಕೂಡುವ ಭಕ್ತಿಪಥವ ಮಱಸಿ ಕಾಡುತ್ತಿರ್ದಾತ ಶಿವನೆಂದಱಿದು ಶರಣರು ತಮ್ಮ ನಿಜವ ಕೂಡುವ ಭಕ್ತಿಪಥವ ತೋಱಿ ಮುಕ್ತನ ಮಾಡೆಂದು ಶಿವಂಗೆ ಮೊಱೆಯಿಟ್ಟು ಬೇಡುತ್ತಿರ್ದರೆಂಬುದೀ ವಚನದ ತಾತ್ಪರ್ಯಾರ್ಥ. ೧೮

ವ. ಎಂದೋ ಸಂಸಾರದಂದುಗ ಹಿಂಗೂದೆನಗೆಂದೋ? ಮನದಲ್ಲಿ ಪರಿಣಾಮವೆನಗಹುದೆಂದೋ? ಕೂಡಲಸಂಗಮದೇವಾ ಇನ್ನೆಂದೋ ಪರಮಸಂತೋಷದೊಳಿಹುದೆನಗೆಂದೋ?

೧ ಇದು (ಎ) ಪ್ರತಿಯುಲ್ಲಿಲ್ಲ

ಟೀ. ಜ್ಞಾನೋದಯವಾದ ಶರಣನು ಸಂಸಾರಬಂಧನದ ದುಃಖಕ್ಕಲಸಿ ಶಿವಾನಂದಸುಖ ದೊರಕಿ ಪರಿಣಾಮದಲ್ಲಿಪ್ಪುದದೆಂದಹುದೋ ಎಂದು ಮೋಕ್ಷಾಪೇಕ್ಷೆಯ ಚಿಂತನೆಯಲ್ಲಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೧೯

ವ. ಒಂದು ಯೋನಿಯಲ್ಲಿ ಬಂದ ದುಃಖವ ನಾನು ಎಂದೆಂದಿಗೂ [೧]ಕಳೆಯಲಾರೆ.[೧] ಇನ್ನು ಎಂಬತ್ತುನಾಲ್ಕು ಲಕ್ಷವೆಂದರೆ ನಾನಿನ್ನೇವೆನಯ್ಯಾ? ಒಂದುವನಱಿಯದ ಶಿಶು ನಾ ನೊಂದೆನಯ್ಯಾ! ಎನ್ನ ಕಂದ ಬಾ ಎಂದು ಕಂಬನಿಯ ತೊಡದೆತ್ತಿ ಆನಂದದಿಂದ ಕಣ್ದೆಱೆ ಉಳಿಯು ಮೇಶ್ವರಾ.

ಟೀ. ಜ್ಞಾನೋದಯದಿಂದ ತಾನು ಶಿವಾಂಶಿಕನೆಂದಱಿದ ಶರಣನು ತನಗೆ ಅನಾದಿಯಲ್ಲಿ ದೇಹ ಕರಣ ಜನನ ಮರಣವಿಲ್ಲದಿರ್ದು ಶಿವಾಜ್ಞೆಯಿಂದ ದೇಹಿಯಾಗಿ ಹುಟ್ಟಿ ಭವದಲ್ಲಿ ನೊಂದು ಅಳಲುವ ಭವದುಃಖವ ಬಿಡಿಸಿ ಶಿವ ನಿಮ್ಮ ನಿಜಾತ್ಮನೆಂದೆತ್ತಿಕೊಂಡು ಆನಂದದಿಂದ ಪ್ರತ್ಯಕ್ಷವಾಗಿ ನಿಂದು ಮೂರ್ತಿಯ ತೋಱಿ ಕರುಣಿಸೆಂಬುದೀ ವಚನದ ತಾತ್ಪರ್ಯಾರ್ಥ. ೨೦

ವ. ಅಱಿಯದೆ ಜನನಿಯ ಜಠರದಲ್ಲಿ ಹುಟ್ಟಿದೆನಾಗಿ ಬಾರದ ಭವಂಗಳಲ್ಲಿ ಬರಿಸಿದೆ ತಂದೆ. ಹುಟ್ಟಿತ್ತೆ ತಪ್ಪಾಯಿತ್ತೆ ಎಲೆ ಲಿಂಗವೆ? ಮುನ್ನ ಹುಟ್ಟಿದುದಕ್ಕೆ ಕೃಪೆಮಾಡು ಲಿಂಗವೆ! ಇನ್ನು ಹುಟ್ಟಿದೆನಾದಡೆ ಕೂಡಲ ಸಂಗಮದೇವಾ ನಿಮ್ಮಾಣೆ.

ಟೀ. ಜ್ಞಾನೋದಯದಿಂದ ತನ್ನಾದಿಯ ಶರಣ ತಿಳಿದುನೋಡಿ ಶಿವ ತಾನೆ ತನ್ನ ನಿಜವ ಮಱಸಿ ತಾನೆ ಹುಟ್ಟಿಸಿದಲ್ಲಿ ಹುಟ್ಟಿದೆನಲ್ಲದೆ ಆ ಹುಟ್ಟಿದ ದೇಹಧರ್ಮದ ಮಱವೆಯ ತಪ್ಪನೊಮ್ಮಿಂಗೆ ನೋಡದೆ ಲಿಂಗವು ಕೃಪೆಯ ಮಾಡಿದಡೆ ಮುಂದೆ ಭವದಲ್ಲಿ ಹುಟ್ಟೆನೆಂಬುದೀ ವಚನದ ತಾತ್ಪರ್ಯಾರ್ಥ. ೨೧

ವ. ಹೃದಯದಲ್ಲಿಪ್ಪುದೆಲ್ಲಾ ನಂಜು ಕಂಡಯ್ಯಾ! ಕಂಗಳಲೊಬ್ಬನ ಕರೆವಳು, ಮನದಲೊಬ್ಬನ ನೆನೆವಳು, ವಚನದಲೊಬ್ಬನ [೧]ನೆರೆವಳು[೧]. ಇಂತವಳ ತನು ಒಂದೆಸೆ ಮನವೊಂದೆಸೆ ಮಾತೊಂದೆಸೆ ಕೂಡಲ ಸಂಗಮದೇವಾ ಈ ಮಾನಸಗಳ್ಳೆಯ ನನ್ನವಳೆಂದು ನಂಬುವ ಕುಱಿ ನರರನೇನೆಂಬೆನಯ್ಯಾ?

೧ ನೆನೆವಳು (ಎ)

ಟೀ. ಈ ವಚನ ಕಾಣಬಂದರ್ಥ. ೨೨

ವ. ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನ್ನವಳಲ್ಲ, ಅದು ಜಗಕ್ಕಿಕ್ಕಿದ ವಿಧಿ. ನಿನ್ನೊಡವೆಯೆಂಬುದು ಜ್ಞಾನರತ್ನ. ಅಂತಪ್ಪ ದಿವ್ಯ ರತ್ನವ ಕೆಡಗುಡದೆ ಆ ರತ್ನವ ನೀನಲಂಕರಿಸಿದೆಯಾದಡೆ ನಮ್ಮ ಗೊಹೇಶ್ವರಲಿಂಗದಲ್ಲಿ ನಿನ್ನಿಂದ ಬಿಟ್ಟು ಸಿರಿವಂತರಿಲ್ಲ ಕಾಣಾ ಎಲೆ ಮನವೆ !

ಟೀ. ಶಿವ ತನ್ನ ಕಾಣದಂತೆ ಹೊನ್ನು ಹೆಣ್ಣು ಮಣ್ಣೆಂಬ ಮಾಯಾವಿಧಿಯ ಹುಟ್ಟಿಸಿ ಜೀವರ ತಿನಿಸಿ ಕೊಲುವುದನಱಿದು ಅವು ನಿನ್ನದೆಂಬ ಭ್ರಾಂತಿ ಬಿಟ್ಟು ನಿನ್ನ ನಿಜದಱಿವಪ್ಪ ಸಮ್ಯಗ್‌ಜ್ಞಾನವ ಸಾಧಿಸಿ ನಿನ್ನಲ್ಲಿ ಅಳವಡಿಸಿಕೊಂಡು ಮಱೆಯದೆ ಇರ್ದಡೆ ನೀನೇ ಪರಶಿವನೆಂದೇ ಅಱಿದುಕೋ ಎಂಬುದೀ ವಚನದ ತಾತ್ಪರ್ಯಾರ್ಥ. ೨೩

ವ. ಭವಬಂಧನ ಭವಪಾಶಂಗಳಾದ ಕಾರಣವೇನಯ್ಯಾ ? ಹಿಂದಣ ಜನ್ಮದಲ್ಲಿ ಲಿಂಗವ ಮಱೆದೆನಾಗಿ, ಹಿಂದಣ ಸಿರಿಯಲ್ಲಿ ಜಂಗಮವ ಮಱೆದೆನಾಗಿ. ಅಱಿದಡೆ ಸಂಸಾರವ ಹೊದ್ದಲೀವೆನೇ ಕೂಡಲ ಸಂಗಮದೇವಾ ?

ಟೀ. ಜ್ಞಾನೋದಯದಿಂದ ಶರಣ ತನ್ನ ಮುನ್ನಿನ ನಿಜವ ತಿಳಿದು ನೋಡಿ ಅನಾದಿಯಲ್ಲಿ ತಾನು ಪರಶಿವನ ಚಿತ್ತುವಾಗಿರ್ದಲ್ಲಿ ಆ ಪರಶಿವನ ಚಿತ್ತುವಿಗೆ ಲೀಲೆದೋಱಿ ಸಾಕಾರವನವಲಂಬಿಸಿಕೊಂಡು ತೋಱಿದ ತೋಱಿಕೆಯೀಗ ಚಿತ್ತುವಿನ ಹಿಂದಣ ಪ್ರಥಮಜನನ. ಅಂತು ಸಾಕಾರವನವಲಂಬಿಸಿಕೊಂಡು ಅಹಂಭಾವದಲ್ಲಿ ವಿಶ್ರಮಿಸಿ ತಾನು ಲಿಂಗವೆಂಬುವ ಮಱೆದ ಮಱವೆಯೇ ಚಿತ್ಸ್ವರೂಪನಾದ ಶರಣಂಗೆ ದೇಹಸಂಸಾರದ ಭವಬಂಧನವಾಯಿತ್ತೆಂಬುದೀಗ ' ಭವಬಂಧನ ಭವಪಾಶಂಗಳಾದ ಕಾರಣವೇನಯ್ಯಾ ? ಹಿಂದಣ ಜನ್ಮದಲ್ಲಿ ಲಿಂಗವ ಮಱೆದೆನಾಗಿ, ಹಿಂದಣ ಸಿರಿಯಲ್ಲಿ ಜಂಗಮವ ಮಱೆದೆನಾಗಿ ' ಎಂಬ ಶಬ್ದಕ್ಕರ್ಥ. ಅಂತು ಮಱೆದ ಮಱವೆಯಿಂದ ಜನ್ಮ ಜನ್ಮದ ದೇಹೇಂದ್ರಿಯ ವಿಷಯಭೋಗಸುಖಂಗಳ ಲಿಂಗವ ಮಱೆದು ಭೋಗಿಸಿ ಭವಬಂಧನಕ್ಕೊಳ

ಗಾದರು ಜೀವರು. ಇಂತೆಂಬುದನಱಿದು ಸರ್ವಭೋಗಂಗಳ ಲಿಂಗಕ್ಕರ್ಪಿಸಿ ಲಿಂಗಭೋಗೋಪಭೋಗಿಯಾದಾತಂಗೆ ಭವಸಂಸಾರ ಬಂಧನವಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ.

ಸಂಸಾರಹೇಯಸ್ಥಲ ಸಂಪೂರ್ಣ

**ಅಂತು ಸ್ಥಲ ೮ಕ್ಕಂ ಶ್ಲೋಕ ೭೧ಕ್ಕಂ ವಚನ ೧೨೦ಕ್ಕಂ**

**ಮಂಗಳಂ**

ಶ್ರೀ

# ೯. ಗುರುಕರುಣಸ್ಥಲ

ಸೂತ್ರ: ಇಂತು ಸಮ್ಯಗ್ಜ್ಞಾನೋದಯದಿಂದ ಅಱಿದು ನೋಡಿ ಅನಾದಿ ಪರಶಿವ ತಾನೆಂದಱಿದು ತನ್ನ ನಿಜವ ತಿಳಿದು ತನ್ನಿಂದನ್ಯವಪ್ಪ ದೇಹ-ಸಂಸಾರ-ಭ್ರಾಂತಿ-ಭಾವಂಗಳನೆಲ್ಲವ ನೇತಿಮಾಡಿ ಶಿವಾಪೇಕ್ಷನಾಗಿ ಶಿವತತ್ತ್ವವನೈದುವ ಭಕ್ತಿ ಮಾರ್ಗವ ತಿಳಿದು ಗುರೂಪಾವಸ್ಥೆಯಂ ಮಾಡಲು, ಆ ಗುರುಕರುಣದಿಂದ ಮಲತ್ರಯಾದಿಗಳ ಕಳೆದು ಪುನರ್ಜಾತನಂ ಮಾಡಿ, ಆ ಆತ್ಮನ ನಿಜಸ್ವರೂಪವಪ್ಪ ಮಹಾಘನಲಿಂಗಮಂ ಕರಸ್ಥಲದಲ್ಲಿ ಕೊಟ್ಟು ಲಿಂಗಾಂಗಸಂಬಂಧಮಂ ಮಾಡಿ, ಆ ಲಿಂಗಾಂಗಸಂಬಂಧವಾದ ಅಂಗೇಂದ್ರಿಯಂಗಳೆಲ್ಲಾ ಲಿಂಗೇಂದ್ರಿಯಂಗಳೆಂದು, ಆ ಲಿಂಗೇಂದ್ರಿಯಂಗಳ ಸುಖಭೋಗವೆಲ್ಲಾ ಲಿಂಗಭೋಗೋಪಭೋಗವೆಂದು, ಆ ಲಿಂಗಭೋಗೋಪಭೋಗವೆ ಪರಮಪ್ರಸಾದವೆಂದು, ಆ ಪರಮಪ್ರಸಾದಸೇವನೆಯಿಂದ ಪರತತ್ತ್ವ ನೀನೆಂದಱಿದು ದ್ವೈತಭಾವವಳಿದು ಅದ್ವೈತಜ್ಞಾನವೆ ಪ್ರಾಣಲಿಂಗಸಂಬಂಧವೆಂದು, ಆ ಪ್ರಾಣಲಿಂಗದ ಪರಮಚೈತನ್ಯಜ್ಞಾನವಪ್ಪ ಪರತತ್ತ್ವಸ್ವರೂಪೇ ಜಂಗಮವೆಂದು, ಅಂತು ಶಿವ ತಾನೆ ತನ್ನ ಲೀಲಾವಿಲಾಸದಿಂದ ಗುರು ಲಿಂಗ ಜಂಗಮವೆಂಬ ತ್ರಿವಿಧವಾಗಿ ಪೂಜ್ಯನೆನಿಸಿದ ಆ ತ್ರಿವಿಧಲಿಂಗಕ್ಕೆ ತ್ರಿವಿಧ ಭಕ್ತಿಯ ಬಿಡದೆ ಮಾಡುವ ಪೂಜಕನಾದಾತನು ಶಿವನೆಂದು ನಿರೂಪಿಸಿ ಆ ಶಿವನ ಲೀಲಾವಿಲಾಸದಿಂದ ದೇಹೇಂದ್ರಿಯ ಸಕಲ ತತ್ತ್ವಪದಾರ್ಥಂಗಳ ರಚಿಸಿದ ರಚನೆಯನಱಿದು, ಆ ರಚಿಸಿದ ತತ್ತ್ವಪದಾರ್ಥಂಗಳ ಗುರುಲಿಂಗ ಜಂಗಮದ ಸೊಮ್ಮೆಂದರ್ಪಿಸುತ್ತ ಷಟ್ಸ್ಥಲ ಜ್ಞಾನಕ್ರೀಯಿಂದ ಷಡ್ವಿಧ ಭಕ್ತಿಯನಾಚರಿಸುತ್ತಿಪ್ಪ ಸದ್ಭಕ್ತನೆ ಸ್ವತಂತ್ರ ಶಿವನೆಂದು ಉಪದೇಶಿಸಿದ ಗುರುಕರುಣದಿಂದ. ಅದುಕಾರಣ ಗುರುಕರುಣಸ್ಥಲವೆಂದು ಹೇಳಲಾದುದು.

**ಗುರುಕರುಣಸ್ಥಲಕ್ಕೆ ಶ್ಲೋಕ :**

ಚೈತನ್ಯಂ ಶಾಶ್ವತಂ ಶಾಂತಂ ವ್ಯೋಮಾತೀತಂ ನಿರಂಜನಮ್
ನಾದಬಿಂದುಕಲಾತೀತಂ ತಸ್ಮೈ ಶ್ರೀಗುರವೇ ನಮಃ

ಟೀಕು. ಚೈತನ್ಯಾತ್ಮಕನಾದಂಥಾ ನಿತ್ಯನಾದಂಥಾ ಶಾಂತನಾದಂಥಾ ಆಕಾಶಾದಿ ತತ್ತ್ವವನು ಮೀಱಿದಂಥಾ ನಿರಂಜನನಹಂಥಾ ನಾದಬಿಂದುಕಳೆಗಳ ಮೀಱಿದಂಥಾ ಆ ಶ್ರೀಗುರುವಿಂಗೋಸ್ಕರ ನಮಸ್ಕಾರವು. ೧

ಗುರುದೇವೋ ಮಹಾದೇವೋ ಗುರುದೇವಸ್ಸದಾಶಿವಃ
ಗುರುದೇವಃ ಪರಂ ತತ್ತ್ವಂ ತಸ್ಮೈ ಶ್ರೀಗುರವೇ ನಮಃ

ಟೀ. ಗುರುದೇವನೇ ಮಹಾದೇವನು. ಗುರುದೇವನೇ ಸದಾಶಿವನು. ಗುರುದೇವನೇ ಪರತತ್ತ್ವವು. ಅಂಥ ಶ್ರೀಗುರುವಿಂಗೋಸ್ಕರ ನಮಸ್ಕಾರವು. ೨

ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನ ಶಲಾಕಯಾ
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀ ಗುರವೇ ನಮಃ

ಟೀ. ಅಜ್ಞಾನವೆಂಬ ಕತ್ತಲೆಯಿಂದ ಕಾಣಬಾರದೆ ಇದ್ದಂಥ ಕಣ್ಣು ಸುಜ್ಞಾನವೆಂಬ ಶಲಾಕೆಯಿಂದ ಆವನಾನೊಬ್ಬ ಶ್ರೀಗುರುವಿಂದ ಪ್ರಕಾಶಿಸಲ್ಪಟ್ಟಿತು ಅಂಥ ಶ್ರೀಗುರುವಿಂಗೋಸ್ಕರ ನಮಸ್ಕಾರವು. ೩

ದೀಯತೇ ಲಿಂಗಸಂಬಂಧಃ ಕ್ಷೀಯತೇ ಚ ಮಲತ್ರಯಂ
ದೀಯತೇ ಕ್ಷೀಯತೇ ಯಸ್ಮಾಃ ಸಾ ದೀಕ್ಷೇತಿ ನಿಗದ್ಯತೇ

ಟೀ. ದೀಕ್ಷಾಶಬ್ದಕ್ಕೆ ಅವಯವಾರ್ಥಮಂ ಪೇಳುತ್ತಿದ್ದಾನು : ಲಿಂಗಸಂಬಂಧಃ-ಅಂಗಕ್ಕೆ ಲಿಂಗದೊಡತಣ ಸಂಬಂಧವು, ದೀಯತೇ-ಕೊಡಲು ಪಡುತ್ತಿಹುದು, ಮಲತ್ರಯಂ ಮಲ-ಮಲಂಗಳ, ತ್ರಯಂ-ಮೂಱು, ಕ್ಷೀಯತೇ-ಕ್ಷಯವನೆಯ್ದುತ್ತಿಹುದು, ದೀಯತೇ-ದೀಯತೇ ಎಂಬರ್ಥವು, ಕ್ಷೀಯತೇ-ಕ್ಷೀಯತೇ ಎಂಬರ್ಥವು, ಯಸ್ಮಾಃ-ಆವ ದೀಕ್ಷೆಗೆ ಉಂಟು, ಸಾ-ಅದು, ದೀಕ್ಷೇತಿ-ದೀಕ್ಷೆಯೆಂದು, ನಿಗದ್ಯತೇ-ಹೇಳಲ್ಪಡುತ್ತಿಹುದು. ೪

ಸಾ ದೀಕ್ಷಾ ಪರಮಾ ಶೈವೀ ತ್ರಿಧಾ ಭವತಿ ನಿರ್ಮಲಾ
ಏಕಾ ವೇಧಾತ್ಮಿಕಾ ಸಾಕ್ಷಾದನ್ಯಾ ಮಂತ್ರಾತ್ಮಿಕಾ ಮತಾ
ಕ್ರಿಯಾತ್ಮಿಕಾ ಪರಾ ಕಾಚಿತ್ ಏವಮೇವ ತ್ರಿಧಾ ಭವೇತ್

ಟೀ. ಪರಮಾ-ಉತ್ಕೃಷ್ಟವಾದ, ಶೈವೀ-ಶಿವಸಂಬಂಧಿಯಾದ, ನಿರ್ಮಲಾ-ಮಲತ್ರಯವ ತೊಲಗಿಸುವದಾದ, ಸಾ ದೀಕ್ಷಾ-ಆ ದೀಕ್ಷೆಯು, ತ್ರಿಧಾ-ಮೂರು ಪ್ರಕಾರವಾದುದು, ಭವತಿ-ಆಗುತ್ತಿಹುದು. ಏಕಂ-ಒಂದು ದೀಕ್ಷೆಯು, ಸಾಕ್ಷಾತ್-ಪ್ರತ್ಯಕ್ಷವಾದ, ವೇಧಾತ್ಮಿಕಂ-ವೇಧಸ್ವರೂಪವಾದುದು, ಅನ್ಯಾ-ಮತ್ತೊಂದು ದೀಕ್ಷೆಯು, ಮಂತ್ರಾತ್ಮಿಕಾ-ಮಂತ್ರಸ್ವರೂಪವಾದುದಾಗಿ, ಮತಾ-ನೆನೆಯಲು ಪಟ್ಟಿತ್ತು, ಪರಾ-ಬೇರೊಂದಾದ, ಕಾಚಿತ್-ಆವುದಾನೊಂದು ದೀಕ್ಷೆ, ಕ್ರಿಯಾತ್ಮಿಕಾ-ಕ್ರಿಯಾಸ್ವರೂಪವಾದುದು. ಏವಮೇವ-ಈ ಪ್ರಕಾರದಿಂದವೆ, ತ್ರಿಧಾ-ಮೂರು ಪರಿಯಾದುದು, ಭವೇತ್-ಅಹುದು. ೫

ಹಸ್ತಮಸ್ತಕಸಂಯೋಗಜ್ಫಲಾದ್ವೇಧೇತಿ ಗೀಯತೇ
ಗುರುಣೋದೀರಿತಾ ಕರ್ಣೇ ಯಾ ಸಾ ಮಾಂತ್ರೀತಿ ಕಥ್ಯತೇ
ಶಿಷ್ಯಪಾಣಿತಲೇ ದತ್ತಾ ಯಾ ದೀಕ್ಷಾ ಸಾ ಕ್ರಿಯಾತ್ಮಿಕಾ

ಟೀ. ಹಸ್ತ-ಆ ಶ್ರೀ ಗುರುವಿನ ಹಸ್ತಕ್ಕೆ, ಮಸ್ತಕ-ಶಿಷ್ಯನ ಮಸ್ತಕದೊಡತಣ, ಸಂಯೋಗ-ಸಂಯೋಗದ, ಫಲಾತ್-ಸವದಿಂದಾದ ದೀಕ್ಷೆ, ವೇಧೇತಿ-ವೇಧಾದೀಕ್ಷೆಯೆಂದು, ಗೀಯತೇ-ಹೇಳಲ್ಪಡುತ್ತಿಹುದು. ಯಾ-ಆವುದಾನೊಂದು ದೀಕ್ಷೆ, ಗುರುಣಾ-ಶ್ರೀಗುರುವಿನಿಂದ, ಕರ್ಣೇ-ಶಿಷ್ಯನ ಕರ್ಣದಲ್ಲಿ, ಉದೀರಿತಾ-ಹೇಳಲ್ಪಟ್ಟುದು, ಸಾ-ಆ ದೀಕ್ಷೆ, ಮಾಂತ್ರೀತಿ-ಮಂತ್ರದೀಕ್ಷೆಯೆಂದು, ಕಥ್ಯತೇ-ಹೇಳಲ್ಪಡುತ್ತಿಹುದು. ಯಾ ದೀಕ್ಷಾ-ಆವುದಾನೊಂದು ದೀಕ್ಷೆ, ಶಿಷ್ಯಪಾಣಿತಲೇ-ಶಿಷ್ಯನ ಕರಸ್ಥಲದಲ್ಲಿ, ದತ್ತಾ-ಕೊಡಲ್ಪಟ್ಟುದು, ಸಾ-ಆ ದೀಕ್ಷೆ, ಕ್ರಿಯಾತ್ಮಿಕಾ-ಕ್ರಿಯಾದೀಕ್ಷೆಯೆಂದು, ಉಚ್ಯತೇ-ಹೇಳಲ್ಪಡುತ್ತಿಹುದು. ೬

ಯಥಾ ವಹ್ನಿಸ್ತಥಾ ಕಾಷ್ಠೇ ಯಥಾ ಕ್ಷೀರೇ ತಥಾ ಘೃತಂ
ಯಥಾ ತಿಲೇ ತಥಾ ತೈಲಂ ಸರ್ವತ್ರಾವಸ್ಥಿತಾ ಕಲಾ

ಟೀ. ಕಾಷ್ಠದಲ್ಲಿ ಅಗ್ನಿ ಹೇಂಗೆ ಹಾಂಗೆ, ಕ್ಷೀರದಲ್ಲಿ ಘೃತ ಹೇಂಗೆ ಹಾಂಗೆ, ತಿಲದಲ್ಲಿ ತೈಲ ಹೇಂಗೆ ಹಾಂಗೆ, ಎಲ್ಲಾ ಠಾವಿನಲ್ಲಿಯೂ ಶಿವಕಳೆಯಿರುತ್ತಿಹುದು. ೭

ಜ್ವಲತ್ಕಾಲಾನಲಾಭಾಭಾ ತಟಿತ್ಕೋಟಿಸಮಪ್ರಭಾ
ತಸ್ಯೋರ್ಧ್ವಂ ಚ ಶಿಖಾ ಸೂಕ್ಷ್ಮಾ ಚಿದ್ರೂಪಾ ಪರಮಾ ಕಲಾ

ಟೀ. ಹೊಳೆವುತ್ತಿರ್ದ ಕಾಲಾಗ್ನಿಯೋಪಾದಿಯ ಕಾಂತಿಯನುಳ್ಳಂಥಾ, ಕೋಟಿಮಿಂಚುಗಳಿಗೆ ಸಮಾನವಹ ಪ್ರಭೆಯನುಳ್ಳಂಥಾ, ಜ್ಞಾನಸ್ವರೂಪವಹಂಥಾ, ಸೂಕ್ಷ್ಮವಹಂಥಾ, ಉತ್ತಮವಹಂಥಾ ಕಳೆ ಶಿಖಾಗ್ರದಲ್ಲಿರುತ್ತಿಹುದು. ೮

ವಾಚಾತೀತಾಂ ಮನೋತೀತಾಂ ವರ್ಣಾತೀತಾಂ ಚ ತತ್ಪರಾಂ
ಜ್ಞಾನಾತೀತಾಂ ನಿರಂಜನ್ಯಾಂ ಕಲಾಂ ಸೂಕ್ಷ್ಮೇತಿ ಭಾವಯೇತ್

ಟೀ. ಆ ಕಳೆ ವಾಕುಗಳ ಮೀಱಿತ್ತು. ಮನಸ್ಸನೂ ಮೀಱಿತ್ತು. ಅಕ್ಷರಂಗಳ ಮೀಱಿತ್ತು. ಜ್ಞಾನವ ಮೀಱಿತ್ತು. ನಿರಂಜನವಹಂಥಾ ಸೂಕ್ಷ್ಮಕಳೆಯೆಂದು ಭಾವಿಸುವುದು. ೯

ಏವಂಭೇದಕಲಾ ದೇವಿ ಸದ್ಗುರೋಃ ಶಿಷ್ಯಮಸ್ತಕೇ
ಹಸ್ತಾಬ್ಜಮಥನಾದ್ಗ್ರಾಹ್ಯಾ ತಸ್ಯ ಭಾವಕರೋದಿತಾ

ಟೀ. ಎಲೆ ದೇವಿ, ಶ್ರೀಗುರು ಶಿಷ್ಯನ ಮಸ್ತಕದಲ್ಲಿ ತನ್ನ ಹಸ್ತಕಮಲವನು ಇರಿಸಿ, ಈ ಪ್ರಕಾರವಹ ಕಳೆಯನು ಪ್ರತಿಷ್ಠೆಯ ಮಾಡಿದಾತನಾಗಿ ಸದ್ಗುರುವಿನ ಹಸ್ತದಿಂದ ಆ ಕಳೆ ಹುಟ್ಟಿತ್ತೆಂದಱಿವುದು. ೧೦

ಯಥಾ ಕಲಾ ತಥಾ ಭಾವೋ ಯಥಾ ಭಾವಸ್ತಥಾ ಮನಃ
ಯಥಾ ಮನಸ್ತಥಾ ದೃಷ್ಟಿರ್ಯಥಾ ದೃಷ್ಟಿಸ್ತಥಾ ಸ್ಥಲಂ

ಟೀ. ಹೇಂಗೆ ಕಳೆ ಹಾಂಗೆ ಭಾವವು, ಹೇಂಗೆ ಭಾವ ಹಾಂಗೆ ಮನಸ್ಸು, ಹೇಂಗೆ ಮನಸ್ಸು ಹಾಂಗೆ ದೃಷ್ಟಿ, ಹೇಂಗೆ ದೃಷ್ಟಿ ಹಾಂಗೆ ಸ್ಥಲವು ಎಂದು ಈಶ್ವರನು ಹೇಳಿದನು. ೧೧

ಸಾ ಬಾಹ್ಯಾಭ್ಯಾಂತರಂ ಸಾಕ್ಷಾಲ್ಲಿಂಗಂ ಜ್ಯೋತಿಃ ಪರಂ ಸ್ವಕಂ
ತಿಲೇ ತೈಲಮಿವಾಭಾತಿ ಹ್ಯರಣ್ಯಾಮಿವ ಪಾವಕಃ
ಕ್ಷೀರೇ ಸರ್ಪಿರಿವ ಸ್ರೋತಸ್ಯಂಬುವತ್‌ಸ್ಥಿತಮಾತ್ಮನಿ

ಟೀ. ಸಾ ಬಾಹ್ಯಾಭ್ಯಾಂತರಂ-ಒಳಹೊಱಗೆ ಸಹಿತವಾಗಿ, ಸ್ವಕಂ-ನಿಜವಾದ, ಜ್ಯೋತಿಃ ಪರಂ-ಪರಂಜ್ಯೋತಿಸ್ವರೂಪವಾದ, ಸಾಕ್ಷಾತ್-ಪ್ರತ್ಯಕ್ಷವಾದ, ಲಿಂಗಂ-ಲಿಂಗವು, ತೈಲಂ-ತೈಲವು, ತಿಲೇ ಇವ-ತಿಲದಲ್ಲಿ ಹೇಂಗೆ, ಪಾವಕಃ-ಅಗ್ನಿಯು, ಅರಣ್ಯಾಮಿವ-ಅರಣಿಯಲ್ಲಿ ಹೇಂಗೆ, ಸರ್ಪಿಃ-ತುಪ್ಪವು, ಕ್ಷೀರೇ ಇವ-ಹಾಲಿನಲ್ಲಿ

ಹೇಂಗೆ, ಸ್ರೋತಸಿ-ಪ್ರವಾಹದಲ್ಲಿ, ಅಂಬುವತ್-ಉದಕವು ಹೇಂಗೆ ಹಾಂಗೆ, ಆತ್ಮನಿ-ಆತ್ಮನಲ್ಲಿ, ಸ್ಥಿತಂ-ಇದ್ದುದಾಗಿ, ಆಭಾತಿ-ಕಾಣಬಂದುದು. ೧೬

ತದ್ಭಾಗಲಕ್ಷಣಾಂ ಭಕ್ತಿಂ ಸುಸೂಕ್ಷ್ಮಾಂ ಪರಮಾಮಪಿ
ದರ್ಶಯಾಮಾಸ ಶಿಷ್ಯಸ್ಯ ದೇಶಿಕಃ ಪರಮೇಶ್ವರಃ

ಟೀ. ತದ್ಭಾಗ-ಲಿಂಗದ ಅಂಶವನು, ಲಕ್ಷಣಾಂ-ತೋಱುವುದಾಗಿ, ಸುಸೂಕ್ಷ್ಮಾಂ-ಮಿಗೆ ಸೂಕ್ಷ್ಮವಾಗಿ, ಪರಮಾಮಪಿ-ಎಲ್ಲಕಿಂದವು ಮೇಲಣದಾಗಿ ಇದ್ದಂಥಾದಾದಡೆಯೂ, ಭಕ್ತಿಂ-ಭಕ್ತಿಯನು, ಪರಮೇಶ್ವರಃ-ಶಿವನು, ದೇಶಿಕಃ ಗುರುವಾಗಿ, ಶಿಷ್ಯಸ್ಯ-ಶಿಷ್ಯಂಗೆ, ದರ್ಶಯಾಮಾಸ-ತೋಱಿಸಿದನು. ೧೪

ತಸ್ಮಿನ್ ಲಿಂಗೇ ಪರೇ ದೃಷ್ಟೇ ನಿಷ್ಕಲೇ ನಿರುಪಾಧಿಕೇ
ಅಸ್ಯ ಜೀವಸ್ಯ ಕರ್ಮಾಣಿ ಕ್ಷೀಯಂತೇ ಸಕಲಾನಿ ವೈ

ಟೀ. ನಿಷ್ಕಲೇ-ಕಳಾತೀತನಾಗಿ, ನಿರುಪಾಧಿಕೇ-ಉಪಾಧಿಯಿಲ್ಲದ, ಪರೇ-ಪರವಾದ, ತಸ್ಮಿನ್‌ಲಿಂಗೇ-ಆ ಲಿಂಗವು, ದೃಷ್ಟೇ ಸತಿ-ಕಾಣಲ್ಪಡುತ್ತಿರಲಾಗಿ, ಅಸ್ಯ ಜೀವಸ್ಯ-ಈ ಜೀವನ, ಸಕಲಾನಿ-ಸಮಸ್ತವಾದ, ಕರ್ಮಾಣಿ-ಕರ್ಮಂಗಳು, ಕ್ಷೀಯಂತೇ ವೈ-ಕ್ಷಯವನೈದುತ್ತಿಹವೇ ಸಂದೇಹವಿಲ್ಲ. ೧೮

ತತಸ್ತಲ್ಲಿಂಗಮಸ್ಯಾಂಗೇ ಶಿಷ್ಯಸ್ಯಾಮಿತತೇಜಸಃ
ಗುರುಸ್ಸಂಯೋಜಯಾಮಾಸ ಪೂರ್ವೋಕ್ತೇನೈವ ವರ್ತ್ಮನಾ

ಟೀ. [1]ಆ ಮೇಲೆ[1] ಗುರುಃ-ಶ್ರೀಗುರುವು, ಪೂರ್ವೋಕ್ತೇನ-ಹಿಂದೆ ಹೇಳಲ್ಪಟ್ಟಂಥಾ, ವರ್ತ್ಮನೈವ-ಮಾರ್ಗದಿಂದವೆ, ಅಮಿತ-ಹವಣಿಸಲುಪಡದ, ತೇಜಸಃ-ಸಾಮರ್ಥ್ಯವುಳ್ಳ, ಅಸ್ಯ ಶಿಷ್ಯಸ್ಯ-ಈ ಶಿಷ್ಯನ, ಅಂಗೇ-ಶರೀರದಲ್ಲಿ, ತಲ್ಲಿಂಗಂ-ಆ ಲಿಂಗವನು, ಸಂಯೋಜಯಾಮಾಸ-ಕೂಡಿಸಿದನು. ೧೫

ತತ್ಪ್ರಾಣೋ ಲಿಂಗದೇಹಶ್ಚ ಜಾತೋ ಗುರುಕರೇಪಿ ಚ
ಆಚಾರಂ ಗೌರವಂ ಲೈಂಗ್ಯಂ ಜಂಗಮಂ ಚ ಪ್ರಸಾದಕಂ
ಮಹಾಲಿಂಗಮಿದಂ ಜ್ಞೇಯಂ ಷಡ್ವಿಧಂ ವ್ರತಮಾಚರೇತ್
ಇತಿ ಭೇದಂ ನ ಜಾನಾತಿ ಪ್ರಸಾದೋ ನಿಷ್ಫಲೋ ಭವೇತ್

೧ ಆ ಲಿಂಗದ ಮೇಲೆ (ಹು. ಎ.)

ಟೀ. ಆ ಪ್ರಾಣನು ಗುರುವಿನ ಹಸ್ತದಲ್ಲಿ ಹುಟ್ಟಿ ಲಿಂಗದೇಹಿಯೆನಿಸಿಕೊಂಡನು. ಈ ಪ್ರಕಾರವಹಂಥಾ ಜ್ಞಾನಪುರುಷನು ಆಚಾರಲಿಂಗ ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ ಮಹಾಲಿಂಗ ಇಂತೀ ಆಱು ಪ್ರಕಾರವಹಂಥಾ ಲಿಂಗವ್ರತವನು ಅಱಿದು ಆಚರಿಸುವುದು. ಈ ಭೇದವನಱಿಯದೆ ಇದ್ದರೆ ಪ್ರಸಾದವು ನಿಷ್ಫಲವಹುದು.

ತಥಾಪಿ ಪ್ರಾಣಲಿಂಗಸ್ಯ ವೇಧ್ಯತೇ ಸರ್ವಮಿಂದ್ರಿಯಂ
ವೇಧ್ಯತೇ ಸರ್ವದೇಹಾನಾಂ ಪಾವಕೋ ಸಲಿಲಂ ಯಥಾ

ಟೀ. ಅಗ್ನಿ ಉದಕವನು ಹೇಂಗೆ ಉಷ್ಣವನು ಮಾಡುವುದು ಆ ಪ್ರಕಾರದಲ್ಲಿ ಲಿಂಗಸಂಪರ್ಕದಿಂದ ಸರ್ವೇಂದ್ರಿಯಂಗಳನುಳ್ಳಂಥಾ ಪ್ರಾಣನು ಪೂರ್ವಗುಣವನು ಬಿಟ್ಟು ಲಿಂಗಕಳೆಯನೆ ವೇಧಿಸಿ, ಪ್ರಾಣಲಿಂಗಕಳೆಯೆನಿಸಿ ಪ್ರಾಣಲಿಂಗವೆನಿಸಿದನು ಎಂದು ಈಶ್ವರನು ಹೇಳಿದನು. ೧೭

ಘಟಮಧ್ಯಸ್ಥಿತಂ ತೋಯಮಗ್ನಿರ್ಜ್ವಲತಿ ಬಾಹ್ಯತಃ
ಅಗ್ನಿಜ್ವಲನಸಂಯೋಗೇ ಉಷ್ಣಂ ಭವತಿ ವಾರಿಣಾಂ

ಟೀ. ಮಡಕೆಯೊಳಗೆ ಉದಕವಿಹುದು. ಅಗ್ನಿ ಹೊಱಗೆ ಉರಿಯುತ್ತಿಹುದು. ಅಗ್ನಿಜ್ವಾಲೆಯ ಸಂಪರ್ಕದಿಂದ ಉದಕ ಉಷ್ಣವಹುದು. ಈ ಪ್ರಕಾರದಲ್ಲಿ ಸತ್‌ಕ್ರಿಯನೆ ಮಾಡುತ್ತಿರಲಾಗಿ ಪ್ರಾಣಂಗೆ ಲಿಂಗಕಳೆ ಸಂಬಂಧಿಸುವುದು. ೧೮

ವೃತ್ತ:

ಯೋ ಹಸ್ತಪೀಠೇ ನಿಜಲಿಂಗಮಿಷ್ಟಂ
ವಿನ್ಯಸ್ಯ ತಲ್ಲೀನಮನಃಪ್ರಚಾರಃ
ಬಾಹ್ಯಕ್ರಿಯಾಸಂಕುಲನಿಸ್ಪೃಹಾತ್ಮಾ
ಸಂಪೂಜಯತ್ಯಂಗ ಸ ವೀರಶೈವಃ

ಟೀ. ಆವನಾನೋರ್ವನು ಕರಪೀಠದಲ್ಲಿ ತನ್ನ ಶ್ರೀಗುರು ಕೊಟ್ಟ ಪ್ರಾಣಲಿಂಗವನಿರಿಸಿ, ಆ ಶಿವಲಿಂಗದಲ್ಲಿ ಲಯವನ್ನೈದಿದ ಮನಸ್ಸಂಚಾರವುಳ್ಳವನಾಗಿ, ಹೊಱಗಣ ಕ್ರಿಯಾಸಮೂಹದಲ್ಲಿ ಬಯಕೆಯನುಳಿದ ಬುದ್ಧಿಯುಳ್ಳಾತನಾಗಿ ತನ್ನ ಪ್ರಾಣಲಿಂಗಮಂ ಪೂಜಿಸುತ್ತಿಹನು ಆ ಪ್ರಾಣಲಿಂಗಾರ್ಚಕನಾದ ಲಿಂಗಾಂಗಸಂಬಂಧಿಯೆ ವೀರಶೈವನೆಂದಱಿವುದು. ೧೯

ನಿರಾಮಯೋ ನಿರಾಚಾರಃ ಪ್ರಮಾಣಾತೀತಗೋಚರಃ
ಗುರುವಕ್ತ್ರೇಣ ಚ ಲಭ್ಯೇತ ನೋದಿತಾಗಮಕೋಟಿಭಿಃ

**ಟೀ.** ಜನ್ಮ ಜರಾ ಮರಣಂಗಳಿಲ್ಲದ ಕರ್ಮವಿಲ್ಲದ ಷೋಡಶಪ್ರಮಾಣಂಗಳಿಂದ ಅತೀತವಾಗಿದ್ದಂಥಾ ಗೋಚರಿಸದೆ ಇದ್ದಂಥಾ ಆವುದಾನೊಂದು ಶಿವತತ್ತ್ವವುಂಟು. ಆ ಶಿವತತ್ತ್ವವು ಸದ್ಗುರೂಪದೇಶಂಗಳಿಂದಲ್ಲದೆ ಅಭ್ಯಾಸವ ಮಾಡಿದ ಆಗಮಕೋಟಿಗಳಿಂದ ಎಯ್ದಲ್ಪಡದು. ೨೦

**ಪ್ರಥಮದಲ್ಲಿ ಗುರುಮಹಾತ್ಮೆಯ ವಚನ :**

**ವ.** ^೧ಗುರುದೇವ^೧ ಸದಾಶಿವನು, ^೧ಗುರುದೇವ^೧ ಮಹಾಮಹಿಮನು, ^೧ಗುರುದೇವ^೧ ಅಕಲ್ಪಿತ ನಿತ್ಯ ನಿರವಯನು. ಸಾಕಾರವಿಡಿದು ಗುರುಲಿಂಗವಾದ. ನಿರಾಕಾರವಿಡಿದು ಪ್ರಾಣಲಿಂಗವಾದ. ಉಭಯಸ್ಥಲವೇಕವಾದಲ್ಲಿ ಭವವಿರಹಿತ ಭಕ್ತ ಜೀವನ್ಮುಕ್ತನಾದ. ಅಂತು ಗುರು ನಿಂದ ಸ್ಥಾನ ಕಾಶೀಕ್ಷೇತ್ರ, ಗುರುಚರಣಪ್ರಕ್ಷಾಲೋದಕವೆ ಗಂಗಾತೀರ್ಥ. ಗುರುಲಿಂಗ ಸಾಕ್ಷಾತ್ ಪರಶಿವನಿಂದ ವಿಶೇಷ. ಗುರುದರ್ಶನ ಪರಮಬೋಧೆ. ಗುರುಪಾದ ರುದ್ರಗಾಯತ್ರಿ. ಗುರುವಿನಿಂದ ಅತಿಶಯ ಘನವೇನೂ ಇಲ್ಲ. ಕೂಡಲಚೆನ್ನಸಂಗಯ್ಯ ಎನ್ನ ಪರಮಗುರುಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು.

**ಟೀ.** ಕಲ್ಪನೆಗೆ ಬಾರದ ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣವಸ್ತುವೆ ತನ್ನ ಲೀಲೆಯಿಂದ ಸಾಕಾರವಾಗಿ ಗುರುವೆನಿಸಿದ. ನಿರಾಕಾರವಿಡಿದು ಪ್ರಣವ ನಾದ ಚೈತನ್ಯನಾಗಿ ಪ್ರಾಣಲಿಂಗವೆನಿಸಿದನಾಗಿ ಆ ಸಾಕಾರವಾದ ಗುರುವೆ ಚಿತ್ತುವೆನಿಸಿ ಆತ್ಮನೆಂಬಂಗವಾಯಿತ್ತು. ಆ ನಿರಾಕಾರವಾದ ಚೈತನ್ಯವೇ ಪ್ರಾಣವೆಂಬ ಲಿಂಗವಾಯಿತ್ತು. ಅಂತು ಲಿಂಗಾಂಗವಾದುದು ಒಂದೆ ವಸ್ತುವೆಂದರಿದು ತನ್ನ ಅಂಗ ಪ್ರಾಣ ಗುರು ಲಿಂಗ ಜಂಗಮವೆಂದು ಭಿನ್ನವಳಿದು ಭಕ್ತಿಯ ಮಾಡಬಲ್ಲಾತನ ಜೀವನ್ಮುಕ್ತನ ಮಾಡುವ ಶ್ರೀಗುರುವಿನ ಮಹತ್ವವನುಪಮಿಸಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೧

---

೧ ಗುರುವೆ (ಎ)

ವ. ಮೂಱು ಲಿಂಗಕ್ಕೆ ಮೂಲಸೂತ್ರವಾದಾತ ಗುರು. ಮೂಱು ವಿದ್ಯಕ್ಕೆ ವಿದ್ಯಾರೂಪನಾದಾತ ಗುರು. ಹೊದ್ದಿದ [೧]ಪ್ರಪಂಚನಳಿದ[೧] ರೂಪೆ ತಾ ರೂಪಾದಾತ ಗುರು. ಲೋಕತ್ರಯಕ್ಕೆ ಕಪಿಲಸಿದ್ಧಮಲ್ಲಿಕಾರ್ಜುನನೆ ಗುರುರೂಪಾದ.

ಟೀ. ಇಷ್ಟ ಪ್ರಾಣ ಭಾವಂಗಳೆಂಬ ಲಿಂಗತ್ರಯಂಗಳಲ್ಲಿ ಅಧಿಷ್ಠಿಸಿಕೊಂಡಿಹ ಚಿತ್ಕಲೆಯೆಂಬ ಜ್ಞಾನಸೂತ್ರವೀಗ 'ಮೂಱು ಲಿಂಗಕ್ಕೆ ಮೂಲಸೂತ್ರ' ವೆಂಬ ಶಬ್ದಕ್ಕರ್ಥ. ಅಂತು ತ್ರಿವಿಧಲಿಂಗದಲ್ಲಿ ಅಧಿಷ್ಠಿಸಿಕೊಂಡ ಚಿತ್ಕಲಾಸ್ವರೂಪಿ ಗುರುವೆಂಬುದೀಗ 'ಮೂಱು ಲಿಂಗಕ್ಕೆ ಮೂಲಸೂತ್ರವಾದಾತ ಗುರು' ವೆಂಬ ಶಬ್ದಕ್ಕರ್ಥ. ಅಂತು ಮೂಱು ಲಿಂಗವ ಸಾಧಿಸುವ ಭಕ್ತಿ ಜ್ಞಾನ ವೈರಾಗ್ಯವೆಂಬುದೀಗ 'ಮೂಱು ವಿದ್ಯ' ವೆಂಬ ಶಬ್ದಕ್ಕರ್ಥ. ಅಂತು ಸಾಧಿಸುವ ಭಕ್ತಿ ಜ್ಞಾನ ವೈರಾಗ್ಯಸ್ವರೂಪಾದುದು ಸುಜ್ಞಾನವಾದ ಕಾರಣ ಆ ಸುಜ್ಞಾನಸ್ವರೂಪಿ ಗುರುವೆಂಬುದೀಗ 'ಮೂಱು ವಿದ್ಯಕ್ಕೆ ವಿದ್ಯಾಸ್ವರೂಪನಾದಾತ ಗುರು' ವೆಂಬ ಶಬ್ದಕ್ಕರ್ಥ. ಮಾಯಾಪ್ರಪಂಚ ಹೊದ್ದದೆ ಇದ್ದ ನಿಷ್ಕಲವಸ್ತುವೆ ಗುರುಸ್ವರೂಪವಾಯಿತ್ತೆಂಬುದೀಗ 'ಹೊದ್ದಿದ ಪ್ರಪಂಚನಳಿದ ರೂಪೆ ತಾ ರೂಪಾದಾತ ಗುರು' ವೆಂಬ ಶಬ್ದಕ್ಕರ್ಥ. ಅಂತು ಪರಶಿವನೆ ಗುರುಸ್ವರೂಪಾದನೆಂಬುದೀಗ 'ಲೋಕತ್ರಯಕ್ಕೆ ಕಪಿಲಸಿದ್ಧಮಲ್ಲಿಕಾರ್ಜುನನೆ ಗುರುಸ್ವರೂಪಾದ' ನೆಂಬ ಶಬ್ದಕ್ಕರ್ಥ. ೨

ವ. ತನುವಿನೊಳಗೆ ತನುವಾಗಿ ಮನದೊಳಗೆ ಮನವಾಗಿ ಪ್ರಾಣದೊಳಗೆ ಪ್ರಾಣವಾಗಿಪ್ಪುದೆಂದರೆ ಕೆಲಬರಿಗೆ ಅಱಿಯಬಪ್ಪುದೆ ? ಅಂತರಂಗದಲಿದೆಯೆಂದಡೇನು ಹೇಳಾ? ಮನಮುಟ್ಟಿ ಕಾಣಬಾರದು. ಬಹಿರಂಗದಲಿದೆಯೆಂದಡೇನು ? ಪೂಜಿಸುವನ್ನಕ್ಕ ಕಾಣಬಾರದು. ಸಾಕಾರವಲ್ಲದ ನಿರಾಕಾರಲಿಂಗವು ವ್ಯಾಕುಳವನ್ನಕ್ಕರ ಸಾಧ್ಯವಾಗದು. ಎನ್ನ ಮನದೊಳಗೆ ಘನವ ನೆಲೆಗೊಳಿಸಿ ತೋಱುವರಿಲ್ಲದ ಕಾರಣ ಎನ್ನ ಅಜಗಣ್ಣನಿಕ್ಕಿದ [೨]ದಶರಿ[೨]ದೊಡಕಿಗೆ ನಾ ಬೆಱಗಾದೆನು !

ಟೀ. ತನು ಮನ ಪ್ರಾಣಂಗಳೊಳಹೊಱಗೆ ಪರಿಪೂರ್ಣವಾಗಿಪ್ಪ ನಿರವಯ ವಸ್ತುವ ಜ್ಞಾನವಿಂದಱಿದು ಕೂಡಿಹೆನೆಂದಡೆ ಸಾಧ್ಯವಾಗದು. ಗುರು ಕರುಣಿಸಿ

೧ ಪ್ರಪಂಚನತಿಗಳೆದು (ಹು) ೨ ದಸರಿ (ಎ)

ಪ್ರತ್ಯಕ್ಷವ ಮಾಡಿ, ಮನ ಭಾವ ಕರದಲ್ಲಿ ನೆಲೆಗೊಳಿಸಿ ತೋಱಿಕೊಟ್ಟಲ್ಲದೆ ಘನ ಲಿಂಗದ ಕೂಟ ಸಾಧ್ಯವಾಗದೆಂಬುದೀ ವಚನದ ತಾತ್ಪರ್ಯಾರ್ಥ. ೩

ವ. ಗುರುವಚನದಿಂದಲ್ಲದೆ ಲಿಂಗವನಱಿಯಬಾರದು. ಗುರುವಚನ-ದಿಂದಲ್ಲದೆ ಜಂಗಮವನಱಿಯಬಾರದು. ಗುರುವಚನದಿಂದಲ್ಲದೆ ಪ್ರಸಾದವನಱಿಯಬಾರದು. ಗುರುವಚನದಿಂದಲ್ಲದೆ ತನ್ನನಱಿಯ-ಬಾರದು. ಹಿಂದಣ ಜನ್ಮದಲ್ಲಿ ಗುರುವ ಪೂಜಿಸಿ ಇಂದು ಜ್ಞಾನೋ-ದಯವಾದಡೆ ಗುರುವಿಲ್ಲದ ಮುನ್ನ ಆಯಿತ್ತೆನಬಹುದೇ ? ತನ್ನಲ್ಲಿ ತಾನು ಸನ್ನಿಹಿತನಾದೆನೆಂಡಡೆ ಗುರುವಿಲ್ಲದೆ ಆಗದು ಕೇಳಾ ! ಎನ್ನ ಅಜಗಣ್ಣನೆಂಬ ಗುರುವಿಲ್ಲದೆ ಆ ರೂಢಿಯ ಕೂಟ ಸಮನಿಸದು ಕೇಳಾ !

ಟೀ. ಜ್ಞಾನೋದಯದಿಂದ ತನ್ನ ನಿಜವ ತಾನಱಿದು ಬ್ರಹ್ಮವಾದೆನೆಂಬಡೆ ಸಾಧ್ಯವಾಗದು. ಅದೇಕಯ್ಯಾ ಎಂಡಡೆ : ದೇಹವಾಸನೆ ತನ್ನಾಧೀನದಲ್ಲಿ ಹಿಂಗಿ ಹೋಗದಾಗಿ ಅದು ಶಿವಾಧೀನದಲ್ಲಿಪ್ಪುದಾಗಿ ಸ್ವಯಾಧೀನಮುಕ್ತಿ ಆರಿಗೂ ಇಲ್ಲ. ಮತ್ತೆಂತೆಂದಡೆ : ಜ್ಞಾನೋದಯವಾದ ಬಳಿಕ ಗುರುವಚನಪ್ರಮಾಣವಿಡಿದು ಪರಬ್ರಹ್ಮವು ಗುರು ಲಿಂಗ ಜಂಗಮ ಪ್ರಸಾದಸ್ವರೂಪಾಗಿಪ್ಪುದೆಂದಱಿದು ತನು ಮನ ಪ್ರಾಣಂಗಳ ನಿವೇದಿಸಿ ತನ್ನ ನಿಜವ ಕೂಡುವ ಮಾರ್ಗವ ಗುರುಮುಖದಿಂದ ಲ್ಲದೆ ಸಾಧ್ಯವಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೪

ವ. ಕಂಡುದ ಹಿಡಿಯಲೊಲ್ಲದೆ ಕಾಣದುದನಱಸಿ ಹಿಡಿದಿಹೆನೆಂದಡೆ ಸಿಕ್ಕದೆಂಬ ಬಳಲಿಕೆಯ ನೋಡಾ ! ಕಂಡುದನೆ ಕಂಡು ಗುರುಪಾದವ ಹಿಡಿದಲ್ಲಿ ಕಾಣದುದ ಕಾಣಬಹುದು ಕಾಣಾ ಗೊಹೇಶ್ವರಾ !

ಟೀ. ವಾಙ್ಮನಸ್ಸಿಗೆ ಗೋಚರಿಸಿ ಕಾಣಬಾರದಿಹ ಪರಬ್ರಹ್ಮವನು ಅದ್ವೈತ ಜ್ಞಾನಂಗಳಿಂದ ಸಾಧಿಸಿ ಹಿಡಿದು ಕೂಡಿಹೆನೆಂದು ಅಂತರಂಗದಲ್ಲಿ ಬಯಲವಿಚಾರ ವ್ಯಾಕುಲರಾದವರಿಗೆ ಕಾಣಬಾರದಾಗಿ, ಅದುಕಾರಣ ನಿಷ್ಕಲಪರಬ್ರಹ್ಮವೆ ಸಕಲತತ್ತ್ವ ಸನ್ನಿಹಿತವಾಗಿ ಗುರುಸ್ವರೂಪವಾಯಿತ್ತೆಂದಱಿದು ಗುರುಪಾದವ ಹಿಡಿದರೆ ಕಾಣ ಬಾರದ ನಿರವಯ ವಸ್ತುವ ಪ್ರತ್ಯಕ್ಷವ ಮಾಡಿ ಕರಸ್ಥಲದಲ್ಲಿ ತೋಱಿಕೊಡುವ ನೆಂಬುದೀ ವಚನದ ತಾತ್ಪರ್ಯಾರ್ಥ. ೫

ವ. ಅಱಿದಿಹೆನೆಂದಡೆ ಅಱುಹಿಂಗಸಾಧ್ಯ. ನೆನೆದಿಹೆನೆಂದಡೆ ನೆನಹಿಂಗಸಾಧ್ಯ. ಭಾವಿಸಿಹೆನೆಂದಡೆ ಭಾವಕ್ಕಸಾಧ್ಯ. ವಾಙ್ಮನಕ್ಕಗೋಚರವಾನಱಿವ ಪರಿಯೆಂತಯ್ಯ ಗುರು ತೋಱದನ್ನಕ್ಕ? ಗುರು ಶಿಷ್ಯರ ಮಧ್ಯದಲ್ಲಿ ಸ್ವಯಂಜ್ಯೋತಿಲಿಂಗ ಉದಯವಪ್ಪುದೆಂಬ ಶ್ರುತಿ ಹುಸಿಯೆ ಕೂಡಲ ಸಂಗಮದೇವಯ್ಯ? ನಿಮ್ಮ ಮಹಾನುಭಾವರ ಮಥನದಿಂದ ಎನ್ನಲ್ಲಿ ನಿಜವ ನೆಲೆಗೊಳಿಸಾ ಪ್ರಭುವೇ.

ಟೀ. ಮನ ಭಾವ ಜ್ಞಾನಂಗಳಿಗೆ ಅಗೋಚರವಾಗಿಪ್ಪ ಪರಬ್ರಹ್ಮವು ಗುರು ಮುಖದಿಂದಲುದಯಿಸಿ ಪ್ರತ್ಯಕ್ಷವಾಗಿ ಶಿಷ್ಯನ ಕರದಲ್ಲಿ ಬೆಳಗುವನೆಂಬ ಶ್ರುತಿ ಹುಸಿಯಲ್ಲ. ಎನ್ನಲ್ಲಿ ನಿಜಲಿಂಗವ ಸಾಹಿತ್ಯವ ಮಾಡೆಂದು ಗುರುವಿಂಗೆ ಬಿನ್ನೈಸುವ ಶಿಷ್ಯನ ಬಿನ್ನಹವೆಂಬುದೀ ವಚನದ ತಾತ್ಪರ್ಯಾರ್ಥ. ೬

ವ. ಎನಗೆ ನಿಮ್ಮ ನೆನಹಾದಾಗವೇ ಉದಯ. ಎನಗೆ ನಿಮ್ಮ ಮಱವೆಯಾದಾಗವೇ ಅಸ್ತಮಾನ. ಎನಗೆ ನಿಮ್ಮ ನೆನಹವೇ ಜೀವ. ಎನಗೆ ನಿಮ್ಮ ನೆನಹವೇ ಪ್ರಾಣ ಕಾಣಾ ತಂದೆ! ಎನ್ನ ಹೃದಯದಲ್ಲಿ ನಿಮ್ಮ ಚರಣದುಂಡಿಗೆಯನೊತ್ತಯ್ಯಾ. ವದನದಲ್ಲಿ ಷಡಕ್ಷರಿಯ ಬರೆಯಯ್ಯ ಕರುಣದಿಂದ ಕೂಡಲಸಂಗಮದೇವಯ್ಯಾ!

ಟೀ. ಜ್ಞಾನೋದಯದಿಂದ ಶಿವಾಪೇಕ್ಷೆಯ ಚಿಂತನೆ ಹಿಡಿದು [1]ಗುರೂಪಾಸ್ಥೆಯ[1] ಮಾಡಿ ಲಿಂಗವನಂಗದಲ್ಲಿ ಶಿವಮಂತ್ರವ ಜಿಹ್ವೆಯಲ್ಲಿ ಕರುಣಿಸಿ ಸಲಹೆಂದು ಬಿನ್ನೈಸಿದ ಶಿಷ್ಯನ ಬಿನ್ನಹವೆಂಬುದೀ ವಚನದ ತಾತ್ಪರ್ಯಾರ್ಥ. ೭

ವ. ಕಾಣಬಾರದ ಗುರು ಕಣ್ಗೆ ಗೋಚರವಾದಡೆ ಹೇಳಲಿಲ್ಲದ ಬಿನ್ನಪ, ಮುಟ್ಟಲಿಲ್ಲದ ಹಸ್ತಮಸ್ತಕಸಂಯೋಗ, ಹೂಸಲಿಲ್ಲದ ವಿಭೂತಿಯ ಪಟ್ಟ, ಕೇಳಲಿಲ್ಲದ ಕರ್ಣಮಂತ್ರ, ತುಂಬಿ ತುಳುಕದ ಕಳಶಾಭಿಷೇಕ, ಆಗಮವಿಲ್ಲದ ದೀಕ್ಷೆ, ಪೂಜೆಗೆ ಬಾರದ ಲಿಂಗ, ಸಂಗವಿಲ್ಲದ ಸಂಬಂಧ, ಸ್ವಯಮಪ್ಪನುಗ್ರಹಮಂ ಅನುಗೊಂಬಂತೆ ಮಾಡಾ ಗುಹೇಶ್ವರಾ.

ಟೀ. ನಿರವಯ ಪರಬ್ರಹ್ಮವೆ ಸಾವಯವಾಗಿ ಶಿಷ್ಯಂಗೆ ಜ್ಞಾನೋದಯವಾಯಿತ್ತು. ಕಂಗಳಿಗೆ ಪ್ರತ್ಯಕ್ಷವಾಗಲು ಆ ಶಿಷ್ಯನು ನುಡಿಗೆಡೆಯಿಲ್ಲದ ಪರ

---

೧ ಗುರೋಪಾವಸ್ಥೆಯ (ಎ)

ಬ್ರಹ್ಮವು [೧]ತನಗಸನ್ಯವಾಗಿಪ್ಪ[೧] ಸಾಹಿತ್ಯವ ಮನದಲ್ಲಿ ಚಿಂತನೆ ಮಾಡಿದನೆಂಬುದೀಗ 'ಕಾಣಬಾರದ ಗುರು ಕಣ್ಗೆ ಗೋಚರವಾದಡೆ ಹೇಳಲಿಲ್ಲದ ಬಿನ್ನಪ' ವೆಂಬ ಶಬ್ದಕ್ಕರ್ಥ. ಅಂತು ಬಿನ್ನೈಸಿದ ಶಿಷ್ಯನ ಚಿತ್ತದ ಚಿಂತನೆಯನರಿದು ಸದ್ಗುರು ಭಿನ್ನಭಾವಹಸ್ತದಿಂ ಕಲ್ಪನೆಗೆ ತಾರದೆ ಪರಬ್ರಹ್ಮವ ನಿರ್ವಿಕಲ್ಪಭಾವದಿಂದ ಶಿಷ್ಯನ ಮಸ್ತಕದಲ್ಲಿ. ಹಸ್ತವನಿರಿಸಿ ಅಭಿನ್ನಕಳಾಸಂಯೋಗವ ಮಾಡಬೇಕೆಂಬುದೀಗ 'ಮುಟ್ಟಲಿಲ್ಲದ ಹಸ್ತಮಸ್ತಕಸಂಯೋಗ' ವೆಂಬ ಶಬ್ದಕ್ಕರ್ಥ. ಶ್ರೀಗುರುವಿನ ಚಿದ್ಬೆಳಗು ಶಿಷ್ಯನ ಅಂಗದಲ್ಲಿ ಭಿನ್ನವಿಡದಿಪ್ಪಂತೆ ಪ್ರಕಾಶಿಸಿತೆಂಬುದೀಗ 'ಹೂಸಲಿಲ್ಲದ ವಿಭೂತಿಯ ಪಟ್ಟ' ವೆಂಬ ಶಬ್ದಕ್ಕರ್ಥ. ಶಬ್ದದೊಳಗೆ ನಿಃಶಬ್ದವಾಗಿಪ್ಪ ಚಿತ್ಪ್ರಣಮವ ಶಬ್ದಕ್ಕೆ ತಾರದೆ ಅವಿರಳಜ್ಞಾನ ಮುಖದಲ್ಲಿ ಅರುಹೆಂಬುದೀಗ 'ಕೇಳಲಿಲ್ಲದ ಕರ್ಣಮಂತ್ರ' ವೆಂಬ ಶಬ್ದಕ್ಕರ್ಥ. ಒಳಕೆಗೆ ಬಾರದ ಅಖಂಡ ಪರಿಪೂರ್ಣಾನಂದಜಲವ ಅಂಗದಲ್ಲಿ ತುಂಬಿಯೆಂಬುದೀಗ 'ತುಂಬಿ ತುಳುಕದ ಕಳಶಾಭಿಷೇಕ' ವೆಂಬ ಶಬ್ದಕ್ಕರ್ಥ. ಭಿನ್ನವಿಟ್ಟು ಪ್ರಮಾಣಿಸಿ ಹೇಳುವ ಆಗಮಕ್ರಿಯೋಪದೇಶವಲ್ಲದ ಅಪ್ರಮಾಣವಾದ ಅಭಿನ್ನ ಕ್ರಿಯೋಪದೇಶವ ಮಾಡಬೇಕೆಂಬುದೀಗ 'ಆಗಮವಿಲ್ಲದ ದೀಕ್ಷೆ' ಯೆಂಬ ಶಬ್ದಕ್ಕರ್ಥ. ಸಾಕಾರವಾಗಿ ಭಜನೆಗೆ ಬಾರದ ಮೂರ್ತಿಯಲ್ಲದ ನಿರಾಕಾರವಾಗಿಪ್ಪ ಪರಬ್ರಹ್ಮವೆಂಬುದೀಗ 'ಪೂಜೆಗೆ ಬಾರದ ಲಿಂಗ' ವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಸಾಹಿತ್ಯವ ಎರಡಿಟ್ಟು ಮಾಡಲಿಲ್ಲವಾಗಿ ಆ ಲಿಂಗವು ತನ್ನ ಸ್ವರೂಪೇ ಎಂದು ತನಗೆ ಭಿನ್ನವಿಲ್ಲದರುಹಿಕೊಡಬೇಕೆಂಬುದೀಗ 'ಸಂಗವಿಲ್ಲದ ಸಂಬಂಧ' ವೆಂಬ ಶಬ್ದಕ್ಕರ್ಥ. ಅಂತು ನಿತ್ಯನಪ್ಪ ಲಿಂಗವು ತಾನಾಗಿಪ್ಪ ಉಪದೇಶ ತನಗೆ ನೆಲೆಗೊಂಡಿಪ್ಪಂತೆ ಸಾಹಿತ್ಯವ ಮಾಡು ಗುರುವೇ ಎಂದು ಶಿಷ್ಯ ಬಿನ್ನೈಸಿದ ಬಿನ್ನಹವೆಂಬುದೀಗ 'ಸ್ವಯವಪ್ಪ ಅನುಗ್ರಹಮಂ ಅನುಗೊಂಬಂತೆ ಮಾಡಾ ಗೊಹೇಶ್ವರಾ' ಎಂಬ ಶಬ್ದಕ್ಕರ್ಥ. ೮

೯. ಗುರುಕರುಣವ ಪಡೆದುದಕ್ಕೆ ಚಿಹ್ನವಾವುದೆಂದಡೆ : ಅಂಗದ ಮೇಲೆ ಲಿಂಗಸ್ವಾಯತವಾಗಿರಬೇಕು. ಅಂಗದ ಮೇಲೆ ಲಿಂಗಸ್ವಾಯತವಿಲ್ಲದೆ ಬರಿದೆ ಗುರುಕರುಣವಾಯಿತ್ತೆಂದಡೆ ಅದೆಂತೊ ? ಲಿಂಗವಿಹೀನವಾಗಿ ಗುರುಕರುಣವುಂಟೆ? ಇಲ್ಲ. ಆ ಮಾತ ಕೇಳಲಾಗದು. ಇದುಕಾರಣ ಲಿಂಗಧಾರಣವುಳ್ಳುದೆ ಸದಾಚಾರ. [೨]ಇಲ್ಲದಿರೆ[೨] ಅನಾಚಾರವೆಂಬೆನಯ್ಯಾ ತೆಲುಗೇಶ್ವರಾ.

೧ ತನಗನ್ಯವಾಗಿಪ್ಪ (ಎ)    ೨ ಇಲ್ಲದಿರ್ದಡೆ (ಎ)

ಟೀ. ಅಂಗದ ಮೇಲೆ ಲಿಂಗವಿಲ್ಲದೆ ಅಱೆಮಾಡದೆ ಗುರುಕರುಣವೆಂದು ವಾಗದ್ವೈತವ ನುಡಿವರು ಶಿವಪಥಕೆ ದೂರವೆಂಬುದೀ ವಚನದ ತಾತ್ಪರ್ಯಾರ್ಥ. ೯

ವ. ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ ಆ ತೃಣವ ಕೆಂಡ
ನುಂಗಿದಂತೆ ಗುರುಚರಣದ ಮೇಲೆ ತನುತೃಣವನಿಳುಹಿದರೆ ಆತನ
ಸರ್ವಾಂಗವೆಲ್ಲಾ ಲಿಂಗ ಕಾಣಾ ರಾಮನಾಥಾ !

ಟೀ. ರಸವಱಿತು ಒಣಗಿರ್ದ ತೃಣವು ಅಗ್ನಿ ಸೋಂಕಲೊಡನೆ ಅಳಿವಂತೆ ಜ್ಞಾನೋದಯದಿಂದ [೧]ಸಂಸಾರವ[೧] ನಿರಸವ ಮಾಡಿ ಅಱೆದು ಬಂದು ಶಿವದೀಕ್ಷೆಯ ಕರುಣಿಸೆಂದು ಗುರುಚರಣಕ್ಕೆಱಗಿ[೨] ಸೋಂಕಲೊಡನೆ ಆ ಶಿಷ್ಯನ ಅಂಗದೊಳಗೆ ಲಿಂಗ ಪ್ರವೇಶವಾಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೧೦

ವ. ಅಱಲುಗೊಂಡ ಕೆಱೆಗೆ ತೊಱೆ ಬಂದು ಹಾಯ್ದಂತೆ, ಒಱಗೊಂಡ
ಸಸಿಗೆ ಮಳೆ ಸುರಿದಂತಾಯಿತ್ತು ನೋಡಾ! ಇದೆನಗೆ ಇಹದ ಸುಖ
ಪರದ ಗತಿ ನಡೆದು ಬಂದಂತಾಯಿತ್ತೆನಗೆ. ಚೆನ್ನಮಲ್ಲಿಕಾರ್ಜುನಯ್ಯ
ಗುರುಪಾದವ ಕಂಡು ಧನ್ಯನಾದೆನು.

ಟೀ. ಜ್ಞಾನೋದಯದಿಂದ ಸಂಸಾರದಲ್ಲಿ ಹೇಹ ತೋಱಿ ಮೋಕ್ಷಾಪೇಕ್ಷೆಯಿಂದ ಗುರುಕರುಣವ ಪಡೆವೆನೆಂಬ ಚಿತ್ತದ ಆತುರದಲ್ಲಿರ್ದ ಶಿಷ್ಯನ ಮೇಲಣ ಕೃಪೆಯಿಂದ ಗುರು ಮುಂದೆ ಬಂದು ನಿಲಲು ಶಿಷ್ಯಂಗೆ ಪರಮ ಹರುಷವಾಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೧೧

ವ. ಅಱಸುವ ಬಳ್ಳಿ ಕಾಲ ಸುತ್ತಿತ್ತೆಂಬಂತೆ, ಬಯಸುವ ಬಯಕೆ ಕೈಸಾರಿ-
ದಂತೆ, ಒಡವ ನಿಧಾನವನೆಡಹಿ ಕಂಡಂತೆ ನಾನಱಸುತ್ತಲಱಸುತ್ತ
ಬಂದು ಭಾವಕ್ಕಗಮ್ಯವಾದ ಮೂರ್ತಿಯ ಕಂಡೆ ನೋಡಾ! ಎನ್ನ
ಅಱುವಿನ ಹರುವ ಕಂಡೆ ನೋಡಾ! ಎನ್ನ ಒಳಹೊಱಗೆ ಎಡೆದೆಱ-
ಹಿಲ್ಲದೆ ಥಳಥಳಿಸಿ ಬೆಳಗಿ ಹೊಳೆವುತಿಪ್ಪ ಅಖಂಡಜ್ಯೋತಿಯ ಕಂಡೆ
ನೋಡಾ! ಕುಱುಹಳಿದ ಕರಸ್ಥಳದ ನಿಬ್ಬೆರಗಿನ ನೋಟದ ಎನ್ನ
ಪರಮಗುರುವ ಕಂಡು ಒದುಕಿದೆನು ಕಾಣಾ ಗೊಹೇಶ್ವರಾ !

೧ ಸಂಸಾರಸಾರವ (ಎ)   ೨ ಗಿ (ಎ)

ಟೀ. ಜ್ಞಾನೋದಯದಿಂದ ತನ್ನ ನಿಜವ ಕೂಡುವ ಅವಸ್ಥೆಯಿಂದ ಗುರುವ ನರಿಸುತ್ತಿಹ ಶಿಷ್ಯಂಗೆ ಶ್ರೀಗುರು ಕೃಪೆಯಿಂದ ಪ್ರತ್ಯಕ್ಷವಾಗುತ್ತ ತನ್ನ ನಿಜಸ್ವರೂಪ ಮಪ್ಪ ಮಹಾಪ್ರಕಾಶವ ಕರದಲ್ಲಿ ಪಿಡಿದು ನೋಡುತ್ತಿಪ್ಪ ಗುರುವಿನ ಅಂತರಂಗ ಬಹಿರಂಗದ ಜ್ಞಾನಕ್ರಿಯೆಯ್ಕ ಕಂಡರಿದು ಶಿಷ್ಯನು ತನಗಿಂತಪ್ಪ ಉಪದೇಶ ದೊರಕಿ ತೆಂದು ಹರುಷಿತನಾದನೆಂಬುದೀ ವಚನದ ತಾತ್ಪರ್ಯಾರ್ಥ. ೧೨

> ವ. ನೀನೆನಗೆ ಗುರುವಪ್ಪಡೆ ನಾ ನಿನಗೆ ಶಿಷ್ಯನಪ್ಪಡೆ, ಎನ್ನ ಕರಣಾದಿ ಗುಣಂಗಳ ಕಳೆದು, ಎನ್ನ ಕಾಯಧರ್ಮವ ತೊಡೆದು, ನೀನೆನ್ನ ಕಾಯದಲಡಗಿ, ನೀನೆನ್ನ ಪ್ರಾಣದಲಡಗಿ, ನೀನೆನ್ನ ಭಾವದಲಡಗಿ, ನೀನೆನ್ನ ಕರಸ್ಥಲಕೆ ಬಂದು ಕಾರುಣ್ಯವ ಮಾಡು ಗೊಹೇಶ್ವರಾ!

ಟೀ. ಆ ಶ್ರೀಗುರು ಉಪದೇಶವ ಮಾಡುವ ಕಾಲದಲ್ಲಿ ಶಿಷ್ಯನು ತನ್ನ ಕಾಯಧರ್ಮವ ಕಳೆದು ಪ್ರಾಣಧರ್ಮವ ತೊಡೆದು ಕರಣಂಗಳ ನಿವೃತ್ತಿಯ ಮಾಡಿ ಶಿವಕಾಯದಲಡಗಿಸಿ ಶಿವಪ್ರಾಣದಲಡಗಿಸಿ ಶಿವಭಾವದಲಡಗಿಪ್ಪ ಭೇದವ ತಿಳಿಸಿ ನೀನೆನ್ನ ಕರಸ್ಥಲಕ್ಕೆ ಬಂದು ಲಿಂಗವಾಗಿ ಬಂದು ಕಾರುಣ್ಯವ ಮಾಡೆಂದು ಬಿನ್ನಹವ ಮಾಡುತ್ತಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೧೩

> ವ. ಕಾಣದುದನರಿಸುವರಲ್ಲದೆ ಕಂಡುದನರಸುವರೇ ಹೇಳಾ! ಘನಕ್ಕೆ ಘನವಾದ ವಸ್ತು ತಾನೆ ಗುರುವಾದ, ತಾನೆ ಲಿಂಗವಾದ, ತಾನೆ ಜಂಗಮವಾದ, ತಾನೆ ಪ್ರಸಾದವಾದ, ತಾನೆ ಮಂತ್ರವಾದ, ತಾನೆ ಯಂತ್ರವಾದ, ತಾನೆ ಸಕಲವಿದ್ಯಾಸ್ವರೂಪವಾದ. ಇಂತಿದನೆಲ್ಲವನೊಳಕೊಂಡು ಎನ್ನ ಕರಸ್ಥಲಕ್ಕೆ ಬಂದು ಇನ್ನು ನಿರ್ವಿಕಾರ ಕಾಣಾ ಗೊಹೇಶ್ವರಾ !

ಟೀ. ಕಾಣಬಾರದ ಪರಬ್ರಹ್ಮವನರಿಸಿ ಕಾಣೆನೆಂದು ಬಳಲಬೇಡ. ಕಾಣ ಬಂದ ಶ್ರೀಗುರು ಮುಂದೆ ಪ್ರತ್ಯಕ್ಷವಾಗಿರಲು ಅಲ್ಲಿಯೇ ಕಾಣದುದ ಕಂಡು ಕೊಂಬುದು ಎಂಬುದೀಗ 'ಕಾಣದುದನರಿಸುವರಲ್ಲದೆ ಕಂಡುದನರಿಸುವರೆ ಹೇಳಾ' ಎಂಬ ಶಬ್ದಕ್ಕರ್ಥ. ಅದುಕಾರಣ ಘನಕ್ಕೆ ಘನವಾದ ಮಹಾಘನ ಶ್ರೀಗುರು ಶಿಷ್ಯನ ಮೇಲಣ ಕರುಣದಿಂದ ಗುರುವಾಗಿ ದೀಕ್ಷೆಯ ಕೊಟ್ಟು ಲಿಂಗವಾಗಿ ಪೂಜೆ ಗೊಂಡು ಜಂಗಮವಾಗಿ ಬೋಧಿಸಿ ಪ್ರಸಾದವಾಗಿ ಬಂದು ಪರಿಣಾಮವಾಗಿ ತೋರಿ ಮಂತ್ರವಾಗಿ ಷಡಕ್ಷರಿ ರೂಪವಾಗಿ ಬಂದು ಅಂತರಂಗದಲ್ಲಿ ನೆಲೆಗೊಂಡು ಯಂತ್ರ ವಾಗಿ ಸಕಲ ಕ್ರೀಗಳಲ್ಲಿ ನೆಲಸಿ ಸಕಲ ವಿದ್ಯಾಸ್ವರೂಪನಾಗಿ ಬಂದು ಮಹಾನುಭಾವ

ದೊಳಗೆ ನೆಲೆಗೊಂಡು ಇನ್ನು ಸರ್ವಾಂಗಲಿಂಗ ಸ್ವಾಯತನಾಗಿ ಸರ್ವಾಂಗದ ವಿಕಾರ ನಿರ್ವಿಕಾರವಾಯಿತ್ತೆಂಬುದೀಗ ಈ ವಚನದ ತಾತ್ಪರ್ಯಾರ್ಥ. ೧೪

ವ. ಪಾತಾಳದಿಂದತ್ತ ಮಾತ ಬಲ್ಲವರಿಲ್ಲ. ಗಗನದಿಂದಂ ಮೇಲೆ ಅನುಭಾವ ತಾನಿಲ್ಲ. ಒಳಗಣ ಜ್ಯೋತಿಯ ಬೆಳಗಬಲ್ಲವರಿಲ್ಲ. ಹೊಱಗಣ ಹೊಱಗುವನು ಅಱಿಯಬಲ್ಲವರಿಲ್ಲ. ಹಿಂದಣ ಹಿಂದುವನು ಮುಂದಣ ಮುಂದನು ತಂದೆ ತೋಱಿದನು ನಮ್ಮ ಗುಹೇಶ್ವರನು.

ಟೀ. ಆರಾರೂ ವಚಿಸುವ ವಾಗದ್ವೈತವೆಲ್ಲವು ಆರಾರೂ ಅಱಿವ ಖಂಡಿತ ಜ್ಞಾನವೆಂಬುದೆಲ್ಲವು ದ್ಯಾವಾಭೂಮೀಜನಯಂ ದೇವಾ ಏಕಯೆಂಬ ಶ್ರುತಿ ಪ್ರಮಾಣದಿಂ ಮೀಱಿ ಕಾಣಿಸಲಱಿಯದಾಗಿ ಪಾತಾಳಲೋಕ ಸತ್ಯಲೋಕದೊಳಗಾದ ಬ್ರಹ್ಮಾಂಡದೊಳಗೆ ವರ್ತಿಸುತ್ತ ಇದ್ದಿತ್ತೆಂಬುದೀಗ 'ಪಾತಾಳದಿಂದತ್ತ ಮಾತ ಬಲ್ಲವರಿಲ್ಲ. ಗಗನದಿಂದಂ ಮೇಲೆ ಅನುಭಾವ ತಾನಿಲ್ಲ' ಎಂಬ ಶಬ್ದಕ್ಕರ್ಥ. ಇಂತಪ್ಪ ಖಂಡಿತ ವಿವೇಕದೊಳಗಿಪ್ಪ ಮಹಾಜ್ಞಾನ ಜ್ಯೋತಿಯ ಬೆಳಗು ಅಭೇದ್ಯವಾದ ಕಾರಣ ಅದನಱಿಯಬಾರದೆಂಬುದೀಗ 'ಒಳಗಣ ಜ್ಯೋತಿಯ ಬೆಳಗಬಲ್ಲವರಿಲ್ಲ' ವೆಂಬ ಶಬ್ದಕ್ಕರ್ಥ. ತನಗೆ ಇದಿರಿಟ್ಟು ತೋಱುವ ತೋಱಿಕೆಯೆಲ್ಲವು ತನ್ನಿಂದ ಹೊಱಗು. ಆ ಹೊಱಗಿಂಗೆ ಹೊಱಗಾಗಿಪ್ಪುದು ಬ್ರಹ್ಮ. ಅದನಾರೂ ತಿಳಿಯಬಾರದೆಂಬುದೀಗ 'ಹೊಱಗಣ ಹೊಱಗನು ತಿಳಿಯಬಲ್ಲವರಿಲ್ಲ' ವೆಂಬ ಶಬ್ದಕ್ಕರ್ಥ. ತನ್ನಿಂದ ಹಿಂದಾದುದು ಜೀವಭಾವ. ಆ ಜೀವಭಾವದಿಂದ ಹಿಂದಾದುದು ಮೂಲಜ್ಞಾನ. ಈ ಎರಡು ಭೇದವೆಂಬುದೀಗ 'ಹಿಂದಣ ಹಿಂದನು' ಎಂಬ ಶಬ್ದಕ್ಕರ್ಥ. ತನ್ನಿಂದ ಮುಂದಾದುದು ತತ್ತ್ವವಿವೇಕ. ಆ ತತ್ತ್ವವಿವೇಕದಿಂದ ಮುಂದಿಪ್ಪುದು ತನ್ನ ಸ್ವಭಾವದ ನಿಲವೆಂಬುದೀಗ 'ಮುಂದಣ ಮುಂದನು' ಎಂಬ ಶಬ್ದಕ್ಕರ್ಥ. ಇಂತಪ್ಪ ಸದ್ವಿವೇಕ ಸುಖವನು ಸದ್ಗುರು ಕೃಪೆಯಿಂದ ಅಱಿವೆನು ಎಂಬುದೀಗ 'ತಂದೆ ತೋಱಿದನು ನಮ್ಮ ಗುಹೇಶ್ವರನು' ಎಂಬ ಶಬ್ದಕ್ಕರ್ಥ. ೧೫

ವ. ಎತ್ತಣ ಮಾಮರ, ಎತ್ತಣ ಕೋಗಿಲೆ, ಎತ್ತಣಿಂದೆತ್ತ ಸಂಬಂಧವಯ್ಯ? ಬೆಟ್ಟದ ನೆಲ್ಲಿಕಾಯಿ ಸಮುದ್ರದ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ? ಗುಹೇಶ್ವರಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯಾ?

**ಟೀ.** ಅಂಗಕ್ಕೆಯೂ ಲಿಂಗಕ್ಕೆಯೂ ಸಂಬಂಧವೆಂದೂ ಇಲ್ಲ. ಅದೇನು ಕಾರಣವೆಂದರೆ : ಅಂಗವೇ ಜಡ, ಲಿಂಗವೇ ಜಡಾಜಡರಹಿತನಾಗಿ ಮನಕ್ಕೆಯೂ ಅಱುವಿಂಗೆಯೂ ಸಂಬಂಧವಿಲ್ಲ. ಅದೇನು ಕಾರಣವೆಂದಡೆ : ಮನವೆ ಮಱವೆ. ಅಱಿವೆ ಬೆಳಗಾಗಿ ಇಂತಪ್ಪ ತನುಮನವಿಡಿದಾತಂಗೆ ಮಹಾಲಿಂಗಸಂಗ ಒಮ್ಮೆಯೂ ಇಲ್ಲದೆ ಇರುತ್ತಿರಲಾ ಗುರುಕರುಣದಿಂದ ತನುಧರ್ಮ ಮನಧರ್ಮವಳಿದು ಮಹಾಲಿಂಗವು ಕರಸ್ಥಲಕ್ಕೆ ಇಷ್ಟಲಿಂಗವಾಗಿ ಬರಲು ಆ ಲಿಂಗದ ಮಹಿಮೆಯನು ತನ್ನ ಕ್ಷೀಣವನು ತಾನೆ ನೋಡಿ ಆಶ್ಚರ್ಯಂಬಡುತ್ತಿರ್ದನೆಂಬುದೇ ವಚನದ ತಾತ್ಪರ್ಯಾರ್ಥ. ೧೬

**ವ.** ಕಾಣಬಾರದ ಲಿಂಗ ಕರಸ್ಥಲಕ್ಕೆ ಬಂದರೆ ಎನಗಿದು ಸೋಜಿಗ! ಎನಗಿದು ಸೋಜಿಗ! ಅಹುದೆನಲಮ್ಮೆನು, ಅಲ್ಲೆನಲಮ್ಮೆನು, ಗುಹೇಶ್ವರಲಿಂಗವು ನಿರಾಳ ನಿರಾಕಾರ ಬಯಲು ಆಕಾರವಾದಡೆ.

**ಟೀ.** ಅಗಮ್ಯ ಅಗೋಚರ ನಿರವಯ ನಿರಾಕಾರಮಪ್ಪ ಮಹಾಲಿಂಗವು ಭಕ್ತಿಕಾರಣದಿಂದ ಸಾಕಾರರೂಪಾಗಿ ಕರಸ್ಥಲದಲ್ಲಿ ಮೂರ್ತಿಗೊಂಡಿತ್ತೆಂಬುದೀಗ 'ಕಾಣಬಾರದ ಲಿಂಗ ಕರಸ್ಥಲಕ್ಕೆ ಬರಲು' ಎಂಬ ಶಬ್ದಕ್ಕರ್ಥ. ಅಂತು ತನ್ನ ಭಕ್ತಿಕಾರಣವಾಗಿ ನಿರಾಕಾರವಾದ ಲಿಂಗವು ಸಾಕಾರವಾದಡೆ ಅಂತೆ ಸಾಕಾರವಾದನೆನಬಹುದೇ? ಎನ್ನಬಾರದು. ಅದೇಕೆಂದಡೆ : ನಿರಾಕಾರವಾಗಿರ್ದ ವಸ್ತು ತನ್ನ ಕುಱಿತು ಜಡ ಸಾಕಾರಮೂರ್ತಿಯಾಗಬಹುದು ಎನಬಾರದೆಂಬುದೀಗ 'ಅಹುದೆನಲಮ್ಮೆ' ನೆಂಬ ಶಬ್ದಕ್ಕರ್ಥ. ಅಂತು ಭಕ್ತಿಕಾರಣವಾಗಿ ಸಾಕಾರವಾದ ಲಿಂಗವನಲ್ಲೆನಲಮ್ಮೆ. ಅದೇಕೆಂದಡೆ : ಲಿಂಗವು ಸಾಕಾರವಾಗದಿರ್ದಡೆ ತನ್ನ ಭಕ್ತಿಯ ಕೈಕೊಂಡು ತನಗೆ ಮುಕ್ತಿಯ ಕೊಡುವ ದೇವರಿಲ್ಲದೆ ಹೋಹನಾಗಿ 'ಅಲ್ಲೆನಲಮ್ಮೆನು' ಎಂಬ ಶಬ್ದಕ್ಕರ್ಥ. ಅಂತು ಅಹುದೆನಲಮ್ಮದೆ ಅಲ್ಲವೆನಲಮ್ಮದೆ ನಿರಾಕಾರ ವಸ್ತು ಸಾಕಾರವಾಗಿ ತನಗೆ ಕೃಪೆಯ ಮಾಡಿ ಕರಸ್ಥಲಕ್ಕೆ ಬಂದುದೇ ಆಶ್ಚರ್ಯವೆಂದು ಚೋದ್ಯಂಬಡುತ್ತಿರ್ದ ಶರಣನೆಂಬುದೀಗ 'ನಿರಾಕಾರ ಬಯಲು ಆಕಾರವಾದಡೆ ಎನಗಿದು ಸೋಜಿಗ' ವೆಂಬ ಶಬ್ದಕ್ಕರ್ಥ. ೧೭

**ವ.** ಕಸ್ತುರಿಯ ಮೃಗ ಬಂದು ಸುಳಿಯುತ್ತಯ್ಯ! ಸಕಲ ವಿಸ್ತಾರದ ರೂಪು ಬಂದು ನಿಂದಿತ್ತಯ್ಯ! ಆವ ಗ್ರಹ ಬಂದು ನೋಂಕಿತ್ತೆಂದಱಿಯೆನಯ್ಯ! ಆವ ಗ್ರಹ ಬಂದು ಹಿಡಿಯಿತ್ತೆಂದಱಿಯೆನಯ್ಯ! ಹೃದಯ ಕಮಲಮಧ್ಯದಲ್ಲಿ ಗುರುವನಱಿದು ಪೂಜಿಸಿ ಗುರುಶಿಷ್ಯಸಂಬಂಧ

ನಾನಱಿದೆನಯ್ಯ. ಗೊಹೇಶ್ವರಲಿಂಗದಲ್ಲಿ ಹಿಂದಣ ಹುಟ್ಟಱಿತು ಹೋದುದ ಕಂಡೆನಯ್ಯ.

**ಟೀ.** ಅಂತರಂಗದಲ್ಲಿ ಸ್ವಾನುಭಾವ ಉದಯವಾಗಿ ಲಿಂಗನಿಜದ ಸದ್ವಾಸನೆ ದೋಱಲು ಅದು 'ಕಸ್ತುರಿಯ ಮೃಗ ಬಂದು ಸುಳಿಯಿತ್ತೆ'ಂಬ ಶಬ್ದಕ್ಕರ್ಥ. ಆ ಸದ್ವಾಸನೆ ಅಂತರಂಗ ಬಹಿರಂಗದಲ್ಲಿ ದರ್ಪಣಪ್ರತಿಬಿಂಬನ್ಯಾಯದಂತೆ ಪರಶಿವ ಮೂರ್ತಿಯಾಗಿ ನೆಲೆಗೊಂಡಿತ್ತೆಂಬುದೀಗ 'ಸಕಲ ವಿಸ್ತಾರದ ರೂಪು ಬಂದು ನಿಂದಿತ್ತಯ್ಯ' ಎಂಬ ಶಬ್ದಕ್ಕರ್ಥ. ಆ ಲಿಂಗಸೋಂಕಿನ ಸಂಬಂಧದಿಂದ ಅನ್ಯವನಱಿಯ ತೆಱಹಿಲ್ಲದಿರ್ದನೆಂಬುದೀಗ 'ಆವ ಗ್ರಹ ಬಂದು ಸೋಂಕಿತ್ತೆಂದಱಿಯೆನಯ್ಯಾ' ಎಂಬ ಶಬ್ದಕ್ಕರ್ಥ. ಆ ಲಿಂಗ ಸರ್ವಾಂಗವನವಗ್ರಹಿಸಿತ್ತೆಂಬುದೀಗ 'ಆವ ಗ್ರಹ ಬಂದು ಹಿಡಿಯಿತ್ತೆಂದಱಿಯೆನಯ್ಯ' ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗದ ನಿಲವ ತೋಱಿದ ಜ್ಞಾನಗುರು ತನ್ನಂತರಂಗದಲ್ಲಿ ಅವಿರಳನಾಗಿರ್ದುದನಱಿದು, ತಾನೆಂಬ ಆತ್ಮಾಂಗವ ಗುರುಪಾದಕೆ ಸಮರ್ಪಿಸಿ, ಗುರುಸ್ವರೂಪವೆಯಾಗಿ ತ್ರೈಲೋಕದಲ್ಲಿ ಕೀರ್ತಿವಡೆದನೆಂಬುದೀಗ 'ಹೃದಯಕಮಲಮಧ್ಯದಲ್ಲಿ ಗುರುವ ನಱಿದು ಪೂಜಿಸಿ ಗುರುವಿಖ್ಯಾತನೆಂಬುದನಾನಱಿದೆನಯ್ಯಾ' ಎಂಬ ಶಬ್ದಕ್ಕರ್ಥ. ಇಂತಾದಕಾರಣ ಭವಪಾಶ ಹಱಿಯಿತ್ತೆಂಬುದೀಗ 'ಗೊಹೇಶ್ವರ ಲಿಂಗದಲ್ಲಿ ಹಿಂದಣ ಹುಟ್ಟಱಿತು ಹೋದುದ ಕಂಡೆನಯ್ಯ' ಎಂಬ ಶಬ್ದಕ್ಕರ್ಥ. ೧೮

ಸಿದ್ಧರಾಮಯ್ಯದೇವರ ಗುರುಕರುಣಸ್ಥಲದ ವಚನ :

**ವ.** ಪುಣ್ಯಪಾಪಂಗಳನಱಿಯದ ಮುನ್ನ ಅನೇಕಭವಂಗಳಲ್ಲಿ ಬಂದು ನಿಮ್ಮ ನಿಲವನಱಿಯದೆ ಕೆಟ್ಟೆನಯ್ಯಾ. ಇಂದು ನಿಮಗೆ ಶರಣು ವೊಕ್ಕೆನು. ಪ್ರಭುಗುರುವೇ ನಾ ನಿಮ್ಮನೆಂದೂ ಅಗಲದಂತೆ ಮಾಡಯ್ಯ. ನಿಮ್ಮ ಧರ್ಮದಲೊಂದ ಬೇಡುವೆ, ಎನ್ನ ಕರ್ಮಬಂಧನ ಬಿಡುವಂತೆ ಉಪದೇಶ ಮಾಡಯ್ಯಾ ಪ್ರಭುವೇ ಕಪಿಲಸಿದ್ಧಮಲ್ಲಿ ನಾಥಾ.

**ಟೀ.** ಸಿದ್ಧರಾಮಯ್ಯದೇವರು ಪ್ರಭುದೇವರು ಬಂದಲ್ಲಿ ಶರಣುವೊಕ್ಕು ಬಿನ್ನೈಸಿದ ಬಿನ್ನಹ. ಪುಣ್ಯಪಾಪಂಗಳಿಂದ ಭವಬಂಧನವುಂಟೆಂದು ಅವ ಬಿಟ್ಟು ತಪಯೋಗಂಗಳಿಂದ ಮುಕ್ತಿಯ ಸಾಧಿಸಿಹೆನೆಂಬನ್ನಕ್ಕ ತಾನು ಯೋಗಕರ್ಮಪಾಶ ದಲ್ಲಿ ಸಿಲುಕಿ ನಿಮ್ಮ ನಿಜವ ಕೂಡುವ ಪಥವ ಕಾಣದೆ ಬಳಲುತ್ತಿದ್ದೇನೆ, ನಿಮ್ಮ ನಿಜ

ದಲ್ಲಿ ಕೂಡಿ ಅಗಲದೆಯಿಪ್ಪ ನಿಜೋಪದೇಶವ ಕರುಣಿಸಿ ಭವಕರ್ಮವ ಬಿಡಿಸೆಂದು ಬಿನ್ನೈಸಿದ ಗುರುವಿಂಗೆಂಬುದೀ ವಚನದ ತಾತ್ಪರ್ಯಾರ್ಥ. ೧೯

ವ. ಅಯ್ಯಾ, ಕಾಯ ಲಿಂಗವೋ ಕಾಯದಲ್ಲಿ ಸಾರಿಪ್ಪ ಲಿಂಗ ಲಿಂಗವೋ? ಪ್ರಾಣ ಲಿಂಗವೋ ಪ್ರಾಣವ ಸಾರಿಪ್ಪ ಲಿಂಗ ಲಿಂಗವೋ ? ಜ್ಞಾನ ಲಿಂಗವೋ ಜ್ಞಾನದ [1]ವೊನೆಯ[1] ಬೆಳಗುವ ಲಿಂಗ ಲಿಂಗವೋ ? ಲಿಂಗ ಪ್ರಾಣ ಪ್ರಾಣ ಲಿಂಗವೆಂಬುದೆಂತೆಂದಱಿಯೆನು. ನಿಮ್ಮ ಕಾಯದ ಕರಸ್ಥಲವ ಸಾರಿಪ್ಪ ಲಿಂಗ ಪ್ರಾಣದೊಳಗೆ ವೇದ್ಯವಾದ ಪರಿಯನುಪದೇಶಿಸಿ ಕೃಪೆಯ ಮಾಡಾ ಪ್ರಭುವೇ [2]ಕಪಿಲಸಿದ್ಧ ಮಲ್ಲಿನಾಥಾ[2] !

ಟೀ. ತನು ಪ್ರಾಣ ಜ್ಞಾನಂಗಳೆಂಬ ಅಂಗಸ್ವರೂಪು ತಾ ಲಿಂಗವೋ ? ಅಂಗತ್ರಯಂಗಳ ಕಯ್ಯಲ್ಲಿ ಇಷ್ಟನಾಗಿರ್ದ ಲಿಂಗ ಲಿಂಗವೋ ? ಈ ಕರಸ್ಥಲದ ಲಿಂಗವು ತನು ಪ್ರಾಣ ಭಾವವ ವೇಧಿಸಿ, ತನು ಪ್ರಾಣಂಗಳು ಲಿಂಗವಾದ ಭೇದವ ನಿರೂಪಿಸಿ ಕರುಣಿಸಬೇಕೆಂದು ಪ್ರಭುದೇವರ ಸಿದ್ಧರಾಮಯ್ಯದೇವರು ಇಷ್ಟಲಿಂಗದ ಪ್ರಾಣಲಿಂಗದ ಭೇದವ ಬೆಸಗೊಂಡರೆಂಬುದೀ ವಚನದ ತಾತ್ಪರ್ಯಾರ್ಥ. ೨೦

ಇದಕ್ಕೆ ಪ್ರಭುದೇವರು ಸಿದ್ಧರಾಮಯ್ಯದೇವರಿಗೆ ಇಷ್ಟಲಿಂಗಸಂಬಂಧವ ನಿರೂಪಿಸಿದ ನಿರೂಪ :

ವ. ಇಷ್ಟಲಿಂಗ ಪ್ರಾಣಲಿಂಗವೆಂಬ ಭೇದವನಾರು ಬಲ್ಲರು ಹೇಳಾ ? ಅಂತರಂಗವೆಂಬ ಶಬ್ದಕ್ಕೆ ಬಹಿರಂಗ ಮುಂದುಗೊಂಡಿಪ್ಪುದು. ಬಹಿರಂಗವೆಂಬ ಶಬ್ದಕ್ಕೆ ಅಂತರಂಗ ಮುಂದುಗೊಂಡಿಪ್ಪುದು. ಮನವ ನೆಡೆಗೊಂಡ ಲಿಂಗದ ಅಱಿವು ವಿಚಾರವ್ಯಾಕುಲಕ್ಕೊಳಗಾಗಬಾರದೆಂದು ಮನ ಭಾವ ಜ್ಞಾನನೋಟವ ತಂದು ಕರಸ್ಥಲದಲ್ಲಿ ನಿಕ್ಷೇಪಿಸಿ, ಅಂತರಂಗ ಬಹಿರಂಗವೆರಡಱಿಯದೆ ಅನುಮಿಷನಾಗಿಪ್ಪನಾ ಶರಣನು. ಪ್ರಾಣಲಿಂಗದ ಪ್ರಸನ್ನದ ಮುಖವ ನೋಡಿ ಪರಿಣಾಮಿಸಲೋಸುಗ ತೇಜವೆಂಬ ದರ್ಪಣವ ಹಿಡಿದಿಪ್ಪ, ನೋಡಯ್ಯ ! ಗೊಹೇಶ್ವರ ಲಿಂಗದಲ್ಲಿ ನಿಜವನೈದಿಹೆನೆಂದಡೆ ಕುಱುಹುವಿಡಿದು ಕುಱುಹುಗೆಡಬೇಕು ನೋಡಾ ಸಿದ್ಧರಾಮಯ್ಯಾ !

೧ ವೊನೆಯಲ್ಲಿ (ಎ, ರಾ.) ೨ ಕಪಿಲಸಿದ್ಧಮಲ್ಲಿಕಾರ್ಜುನ (ಎ, ರಾ.)

ಟೀ. ಜ್ಞಾನೋದಯವಾದ ಶರಣನು ಅಂತರಂಗದಲ್ಲಿ ತನ್ನ ನಿಜವಪ್ಪ ಚಿತ್ಕಳಾಲಿಂಗವನಱಿದಱಿವು ಬಾಹ್ಯವಿಚಾರಕ್ಕೆ ಬಂದಲ್ಲಿ ಮಱೆದು ಶೂನ್ಯವಾಗಿರಬಾರದೆಂದು ತನ್ನಂತರಂಗದಲ್ಲಿಪ್ಪ ಚಿತ್ಕಳಾಲಿಂಗವ ಕರಸ್ಥಲಕ್ಕೆ ತಂದು, ಕಣ್ಮನಭಾವಂಗಳಿಗೆ ಪ್ರತ್ಯಕ್ಷವ ಮಾಡಿಕೊಂಡು, ತನ್ನ ಪ್ರಾಣಲಿಂಗದ ಮೂರ್ತಿಯ ೧ತ್ರೆಱಹಿಲ್ಲದೆ೧ ನೋಡಿ ರತಿಸುಖಭಾವ ಬಲಿದು, ನಿಜವು ಸಾಧ್ಯವಾಗಿ ದೇಹವಾಸನೆಯಳಿಯಿತ್ತೆಂಬುದೀಗ ಈ ವಚನದ ತಾತ್ಪರ್ಯಾರ್ಥ. ೨೧

ವ. ಮತ್ತಂ ಆ ಇಷ್ಟಲಿಂಗವೆ ಅಂಗಲಿಂಗ ಪ್ರಾಣಲಿಂಗ ಮನಲಿಂಗವಾಯಿತ್ತು ನೋಡಾ. ಅಂಗಲಿಂಗವಾಗಿ ನಡೆನುಡಿಗತಿಯನಱಿಯದು. ಪ್ರಾಣಲಿಂಗವಾಗಿ ನವನಾಳದ ಸುಳುಹನಱಿಯದು. ಮನಲಿಂಗವಾಗಿ ನೆನಹುಗೆಟ್ಟಿತ್ತು. ಅನುಭಾವಲಿಂಗವಾಗಿ ವಿಚಾರವಱಿಯಿತ್ತು. ಭಾವಲಿಂಗವಾಗಿ ನಿರ್ಭಾವವನಳವಟ್ಟಿತ್ತು. ಸರ್ವಕ್ರೀಗಳೆಲ್ಲಾ ಲಿಂಗವಾಗಿ ಮಾರ್ಗಕ್ರೀಯ ಹೊಲಬನಱಿಯದು. ಅಱಿವು ಲಿಂಗವಾಗಿ ಮಱಹುಗೆಟ್ಟಿತ್ತು. ಅಂತರಂಗ ಲಿಂಗವಾಗಿ ಬಹಿರಂಗವೆಂತೆಂದಱಿಯದು. ಬಹಿರಂಗ ಲಿಂಗವಾಗಿ ಅಂತರಂಗದ ಶುದ್ಧಿಯನಱಿಯದು. ಇಂತು ಸರ್ವಾಂಗಲಿಂಗವಾಗಿ ಸರ್ವೇಂದ್ರಿಯ ಗಮನಗೆಟ್ಟಿತ್ತು. ಮಹಾಘನವಿಂಬುಗೊಂಡಿತ್ತಾಗಿ ನಿಃಪ್ಪತಿ ಕಱಿಗೊಂಡಿತ್ತು. ಗೊಹೇಶ್ವರಲಿಂಗದಲ್ಲಿ ಪ್ರಾಣಲಿಂಗಸಂಬಂಧ ಸ್ವಯವಾಯಿತ್ತು ನೋಡಾ ಸಿದ್ಧರಾಮಯ್ಯಾ!

ಟೀ. ಅಂತರಂಗದ ಚಿತ್ಕಳೆಯೆ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬಂದು, ಆ ಕರಸ್ಥಲದ ಲಿಂಗವೆ ಸರ್ವಾಂಗವನವಗ್ರಹಿಸಿ ತನು ಮನ ಪ್ರಾಣ ಇಂದ್ರಿಯಂಗಳು ಮೊದಲಾದುವೆಲ್ಲಾ ಲಿಂಗಸ್ವರೂಪಂಗಳಾಗಿ, ಅಱಿವುದೆಲ್ಲಾ ಲಿಂಗವೆಯಾಗಿ, ಜೀವಭಾವವಳಿದು ತನ್ನ ಪ್ರಾಣವು ಲಿಂಗವಾಯಿತ್ತೆಂದು ಪ್ರಭುದೇವರು ಸಿದ್ಧರಾಮಯ್ಯದೇವರಿಗೆ ಇಷ್ಟಲಿಂಗದ ಮಹತ್ವವ ಬೋಧಿಸಿದರೆಂಬುದೀ ವಚನದ ತಾತ್ಪರ್ಯಾರ್ಥ. ೨೨

ವ. ಮತ್ತಂ ಅಂಗದ ಮೇಲೆ ಲಿಂಗಸಂಬಂಧವಾದ ಬಳಿಕ ಪ್ರಾಣವ ಮೇಲೆ ಜ್ಞಾನ ನಿರ್ಧರವಾಯಿತ್ತು ನೋಡಾ! ಒಳಹೊಱಗೆಂಬವು-

೧ ತೆವಿಲ್ಲದೆ (ಹು)

ಭಯವು ಏಕಾರ್ಥವಾಯಿತ್ತು. ಗೊಹೇಶ್ವರ ಲಿಂಗವನಿಂತು ನೆರೆದು ಸುಖಿಯಾದೆನು ಕಾಣಾ ಸಿದ್ಧರಾಮಯ್ಯ !

**ಟೀ.** ಅಂಗದ ಮೇಲೆ ಇಷ್ಟಲಿಂಗ ಸಂಬಂಧವಾಗಲಾಗಿ [೧]ಲಿಂಗವಾಯಿತ್ತು. ಮೂರ್ತಿಯ[೧] ಕಣ್ಮನ ಭಾವಂಗಳಿಗೆ ಪ್ರತ್ಯಕ್ಷವಾಗಿ ಕಾಣಲಾಯಿತ್ತು. ಅಂತು ಕಂಡು ಮನ ಭಾವ ಜ್ಞಾನದಿಂದ ನಿರ್ಧರಿಸಿ ಪ್ರಾಣನಲ್ಲಿ ನೆಲೆಗೊಂಡು ಪ್ರಾಣಲಿಂಗ ವಾಯಿತ್ತು. ಇಂತು ಒಳಹೊರಗೆಲ್ಲಾ ಲಿಂಗಸ್ವರೂಪವೆಯಾಗಿ ನಿತ್ಯ ಸುಖಿಯಾದೆ ನೆಂದು ಪ್ರಭುದೇವರು ಈ ಇಷ್ಟಲಿಂಗ ಸಂಬಂಧದ ಮಹತ್ವಮಂ ಸಿದ್ಧರಾಮಯ್ಯ ದೇವರಿಗೆ ಬೋಧಿಸಿದರೆಂಬುದೀ ವಚನದ ತಾತ್ಪರ್ಯಾರ್ಥ. ೨೩

ಇದಕ್ಕೆ ಸಿದ್ಧರಾಮಯ್ಯದೇವರ ಬಿನ್ನಹ :

**ವ.** ಅಯ್ಯಾ ನಿಮ್ಮ ಕರಸ್ಥಲದ ಇಷ್ಟಲಿಂಗದ ಘನವನುಪಮಿಸ[೨]ಬಲ್ಲವ ರಾರಯ್ಯಾ?[೨] ಅಯ್ಯಾ ನಿಮ್ಮ ಮಹಿಮೆಯನರಿವಡೆ ನಾನೇತರಿಗೊಳ ಗೇನಪ್ಪೆನಯ್ಯಾ ? ಅಯ್ಯಾ ಇಷ್ಟಲಿಂಗವ [೩]ಮುಟ್ಟಿಹ[೩] ಶರಣರೊಳಗೆ ಹುಟ್ಟಿದ ಸ್ಥಲವೆಷ್ಟೆಂಬುದ ತಿಳುಹಿ ಎನ್ನನುಳುಹಿಕೊಳ್ಳಾ ಪ್ರಭುವೇ ಕಪಿಲಸಿದ್ಧ ಮಲ್ಲಿಕಾರ್ಜುನಾ!

**ಟೀ** ಇಂತು ಪ್ರಭುದೇವರ ಸಿದ್ಧರಾಮಯ್ಯದೇವರು ಕೇಳಿದರೆಂಬುದು ಕಾಣಬಂದರ್ಥ. ೨೪

ಇದಕ್ಕೆ ಪ್ರಭುದೇವರ ನಿರೂಪ :

**ವ.** ಆಚಾರಲಿಂಗವಿಡಿದು ಗುರುಲಿಂಗವ ಕಾಣಬೇಕು. ಗುರುಲಿಂಗ ವಿಡಿದು ಶಿವಲಿಂಗವ ಕಾಣಬೇಕು. ಶಿವಲಿಂಗವಿಡಿದು ಜಂಗಮ ಲಿಂಗವ ಕಾಣಬೇಕು. ಜಂಗಮಲಿಂಗವಿಡಿದು ಪ್ರಸಾದಲಿಂಗವ ಕಾಣಬೇಕು. ಪ್ರಸಾದಲಿಂಗವಿಡಿದು ಮಹಾಲಿಂಗವ ಕಾಣಬೇಕು. ಇಂತೀ ಷಡುಸ್ಥಲದ ಧಾತುವ ಸಂಬಂಧಿಸಿ ಒಂದು ಮಾಡಿಕೊಂಡಿಪ್ಪ ಈ ಕರಸ್ಥಲದ ಅನುವ ಗೊಹೇಶ್ವರನ ಶರಣ ಸಂಗನಬಸವಣ್ಣ ಬಲ್ಲ, ಬೆಸಗೊಂಬ ಬಾರಾ ಸಿದ್ಧರಾಮಯ್ಯಾ.

೧ ಲಿಂಗಮೂರ್ತಿಯ (ಎ)   ೨ ಬಲ್ಲವರಿಲ್ಲಯ್ಯಾ (ಎ. ರಾ.)   ೩ ಮುಟ್ಟಿದ (ಹು)

ಟೀ. ಅಂಗದಲ್ಲಿ ಇಷ್ಟಲಿಂಗಸಂಬಂಧಿಯಾದ ಶರಣನ ಷಡಿಂದ್ರಿಯಂಗಳಲ್ಲಿ ಆ ಇಷ್ಟಲಿಂಗವೆ ಪ್ರಭಾವಿಸಿ ಷಡ್ವಿಧಲಿಂಗವಾಗಿ ಬೆಳಗುತ್ತಿಪ್ಪುದು. ಅಂತು ಷಡ್ವಿಧಲಿಂಗವಾಗಿಪ್ಪುದು ಈ ಕರಸ್ಥಲದ ಲಿಂಗವೆಂಬುದನು ವರ್ಮವ ಬಸವಣ್ಣ ಬಲ್ಲ, ಬೆಸಗೊಂಬ ಬಾರಾ ಎಂದು ಕರೆತಂದು ಪ್ರಭುದೇವರು ಸಿದ್ಧರಾಮಯ್ಯ ದೇವರಿಗೆ ಗುರು ಬಸವಣ್ಣನೆಂದು ತೋಱಿದರೆಂಬುದೀ ವಚನದ ತಾತ್ಪರ್ಯಾರ್ಥ. ೨೫

ಅಂತುಮಲ್ಲದೆ ಬಸವಣ್ಣನೇ ಪರಮಗುರುವೆಂಬ ಗುರುಮಹತ್ವಮಂ ಪ್ರಭು ದೇವರು ನಿರೂಪಿಸಿದ ವಚನ :

ವ. ಆದಿಯಾಧಾರವಿಲ್ಲದ ಆಗಮನಾಸ್ತಿಯಾಗಿಪ್ಪ ಸಾಗರವಿರಹಿತನನಾರು ಅಱಿಯರಲ್ಲಾ ! ದಶಮುಖದ ಮಾಣಿಕ್ಯದೆಸಳ ಕಂಗಳು ಪರಿ ಪಸರಿಸಿರ್ದುದನಾರು ಅಱಿಯರಲ್ಲಾ ! ಪಿರಿದೊಂದು ವೃಕ್ಷವು ಅತಿ ಶಯದ ರೂಪಾಗಿ ಪೃಥ್ವಿಗಿಂಬಾಗಿರ್ದುದನಾರು ಅಱಿಯರಲ್ಲಾ ! ಅಂತರಂಗದ ಭುವನವ ಮೆಟ್ಟಿ ನೋಡುತಿಪ್ಪ ಬೆಡಗಿನ ತಾವರೆಯ ಮಧ್ಯದ ತಾರಕಿಯನಾರು ಅಱಿಯರಲ್ಲಾ ! ರವಿಶಶಿಗಳಿಬ್ಬರು ನಯನ ನೋಟದ ಪುಷ್ಪಪರಿಮಳವಾಗಿರ್ದುದನಾರು ಅಱಿಯರಲ್ಲಾ ! ಇಂಬು ನಯನದಲ್ಲಿ ಸಂಭ್ರಮವಿಲ್ಲದ ರೂಪು ಮಹತ್ತಾಗಿರ್ದುದನಾರು ಅಱಿ ಯರಲ್ಲಾ ! ಸಾಗರದೊಳಗಣ ಜ್ಯೋತಿಯಂತೆ ಗೊಹೇಶ್ವರಲಿಂಗ ದೊಳಗೆ ಎನ್ನ ಪರಮಾರಾಧ್ಯರು ಸಂಗನಬಸವಣ್ಣ ನಿಂದ ನಿಲವನುಪ ಮಿಸಬಾರದು ಕಾಣಾ ಸಿದ್ಧರಾಮಯ್ಯಾ !

ಟೀ. ಆದಿಯೆಂದರೆ ನಾದ, ಆಧಾರವೆಂದರೆ ಬಿಂದು, ಸಾಗರವೆಂದಡೆ ಸಂಸಾರ. ಅಂತಪ್ಪ ನಾದಬಿಂದುಯುಕ್ತವಾದ ದೇಹಸಂಸಾರವಿಲ್ಲದೆ ಇರ್ದ ನಿಃಕಲ ವಸ್ತು ವೇದಾಗಮಂಗಳಿಗೆ ಅಗೋಚರವೆಂಬುದೀಗ ‘ ಆದಿಯಾಧಾರವಿಲ್ಲದ ಆಗಮ ನಾಸ್ತಿಯಾಗಿಪ್ಪ ಸಾಗರವಿರಹಿತ ’ ನೆಂಬ ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವೆ ಬಸವಣ್ಣನೆಂಬುದನಾರೂ ತಿಳಿಯರೆಂಬುದೀಗ ‘ ಆತನನಾರು ಅಱಿಯರಲ್ಲಾ ’ ಎಂಬ ಶಬ್ದಕ್ಕರ್ಥ. ದಶದಿಕ್ಕುಗಳಲ್ಲಿ ಪರಿಪೂರ್ಣವಾಗಿರ್ದ ಚಿತ್‌ಪ್ರಕಾಶವೆಂಬು ದೀಗ ದಶಮುಖದ ಮಾಣಿಕ್ಯವೆಂಬ ಶಬ್ದಕ್ಕರ್ಥ. ಅಂತಪ್ಪ ಪರಿಪೂರ್ಣವಸ್ತುವಿಗೆ ಸಾಕಾರದ ಲೀಲಾಚಿಂತನೆ ತನ್ನಲ್ಲಿ ಎಸಗಿ ನೋಡಿದ ಚಿತ್ತಿನ ದೃಕ್ಕೆಂಬುದೀಗ ‘ಎಸಳ ಕಂಗಳ’ೆಂಬ ಶಬ್ದಕ್ಕರ್ಥ. ಅಂತು ತೋಱಿದ ಚಿತ್ತುವೆ ಪ್ರಕಾಶಿಸಿ ಅಖಂಡ ತೇಜೋಮೂರ್ತಿಯಾಗಿ ಬೆಳೆದು ಮಹಾಲಿಂಗವಾಗಿ ನಿಂದಿತ್ತೆಂಬುದೀಗ ‘ ಎಸಳ

ಕಂಗಳು ಪರ್ಬಿ ಪಸರಿಸಿರ್ದುದೆಂಬ ಶಬ್ದಕ್ಕರ್ಥ. ಅಂತಪ್ಪ ಮಹಾಲಿಂಗವೇ ಬಸವಣ್ಣನೆಂಬುದನಾರೂ ತಿಳಿಯರೆಂಬುದೀಗ 'ಅಂತಿರ್ದುದನಾರು ತಿಳಿಯರಲ್ಲಾ' ಎಂಬ ಶಬ್ದಕ್ಕರ್ಥ. ಅಖಂಡ ತೇಜೋಮೂರ್ತಿಯಾಗಿಪ್ಪ ಮಹಾಲಿಂಗವೆಂಬುದೇ ಬ್ರಹ್ಮವೃಕ್ಷವೆನಿಸಿತ್ತಾದಕಾರಣ ಪಿರಿದೊಂದು ವೃಕ್ಷವೆಂಬ ಶಬ್ದಕ್ಕರ್ಥ. ಅಂತಪ್ಪ ಮಹಾಲಿಂಗವು ತನ್ನ ಚಿದ್ವಿಲಾಸಾನಂದದ ಹೆಚ್ಚುಗೆಯಿಂದ ಮೂರ್ತಿಯಾಗಿ ಪೃಥ್ವಿ ಕಡೆಯಾದ ತತ್ತ್ವಂಗಳ ಜನನಸ್ಥಲವು ಸ್ಥಿತಿಲಯಕ್ಕಾಲಯವು ತಾನೆಯಾಗಿಪ್ಪು ದೆಂಬುದೀಗ 'ಅತಿಶಯದ ರೂಪಾಗಿ ಪೃಥ್ವಿಗಿಂಬಾಗಿದ್ದುದ' ಎಂಬ ಶಬ್ದಕ್ಕರ್ಥ. ಅಂತಾದ ಲಿಂಗದ ಸಾಕಾರವೇ ಈ ಬಸವಣ್ಣನೆಂಬುದನಾರೂ ತಿಳಿಯರೆಂಬುದೀಗ 'ಇಂಬಾಗಿದ್ದುದನಾರೂ ಅಱಿಯರಲ್ಲಾ' ಎಂಬ ಶಬ್ದಕ್ಕರ್ಥ. ದೇಹಿಗಳ ಹೃತ್ಕಮಲಮಧ್ಯದಲ್ಲಿ ಕಾಲೂಱಿ ನಿಂದು ವಿಶ್ವವಿಲಾಸಿಯಾಗಿ ನೋಡುತ್ತಿಪ್ಪನು ಪರಮ ಚಿತ್ಕಲಾಲಿಂಗವೆಂಬುದೀಗ 'ಅಂತರಂಗದ ಭುವನವ ಮೆಟ್ಟಿ ನೋಡುತಿಪ್ಪ ಬೆಡಗಿನ ತಾವರೆಯ ಮಧ್ಯದ ತಾರಕಿ'ಯೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗವೇ ಬಸವಣ್ಣನೆಂಬುದನಾರೂ ತಿಳಿಯರೆಂಬುದೀಗ 'ಆರು ಅಱಿಯರೆ'ಂಬ ಶಬ್ದಕ್ಕರ್ಥ. ಚಂದ್ರ ಸೂರ್ಯರಿಬ್ಬರು ಎರಡು ನಯನಪುಷ್ಪ, ಆ ನಯನಪುಷ್ಪದ ಪರಿಮಳವೀಗ ಚೈತನ್ಯಪ್ರಕಾಶ. ಆ ಚೈತನ್ಯಪ್ರಕಾಶವನಾರಿಗೆಯೂ ಕಾಣಬಾರದು. ಆ ಕಾಣಬಾರದ ಚೈತನ್ಯವೇ ಬಸವಣ್ಣನೆಂಬುದನಾರೂ ತಿಳಿಯರೆಂಬುದೀಗ 'ರವಿಶಶಿಗಳಿಬ್ಬರು ನಯನ ನೋಟದ ಪುಷ್ಪಪರಿಮಳವಾಗಿರ್ದುದನಾರೂ ಅಱಿಯರಲ್ಲಾ' ಎಂಬ ಶಬ್ದಕ್ಕರ್ಥ. ಕಡೆ ಮೊದಲಿಲ್ಲದ ಅಖಂಡ ಚಿದ್ವ್ಯಕ್ತಿನ ಬೆಳಗೆ ಮೂರ್ತಿಯಾಗಿರ್ದ ಚಿಲ್ಲಿಂಗವು ದೇಹಕರಣಂಗಳ ವೈಭವವಿಲ್ಲದ ವಸ್ತುವೆಂಬುದೀಗ 'ಇಂಬುನಯನದಲ್ಲಿ ಸಂಭ್ರಮವಿಲ್ಲದ ರೂಪು' ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗವು ಅನಂತ ಬ್ರಹ್ಮಾಂಡಂಗಳನೊಳಕೊಂಡಿಪ್ಪ ಮಹಾಘನಲಿಂಗವೆಂಬುದೀಗ 'ಮಹತ್ತೆ'ಂಬ ಶಬ್ದಕ್ಕರ್ಥ. ಅಂತಪ್ಪ ಮಹಾಘನವೇ ಬಸವಣ್ಣನೆಂಬುದನಾರೂ ತಿಳಿಯರೆಂಬುದೀಗ 'ಮಹತ್ತಾಗಿರ್ದುದನಾರು ತಿಳಿಯಲಱಿಯರಲ್ಲಾ' ಎಂಬ ಶಬ್ದಕ್ಕರ್ಥ. ಸಮುದ್ರದೊಳಿಪ್ಪ ಅಗ್ನಿಯ ಪ್ರಕಾಶವನಾರು ಭೇದಿಸಿ ಕಾಣಬಾರದಿಪ್ಪಂತೆ ದೇಹಸಂಸಾರಸಾಗರದಲ್ಲಿಯಡಗಿಪ್ಪ ಚಿಜ್ಯೋತಿಸ್ವರೂಪನಪ್ಪ ಬಸವಣ್ಣನ ನಿಲವನಾರಿಗೆಯೂ ಕಾಣಬಾರದೆಂಬುದೀ 'ಸಾಗರದೊಳಗಣ ಜ್ಯೋತಿಯಂತೆ' ಎಂಬ ಶಬ್ದಕ್ಕರ್ಥ. ಅಂತು ಉಪಮಿಸಬಾರದ ಘನಲಿಂಗವಪ್ಪ ಬಸವಣ್ಣನೇ ಎನಗೆ ಪರಬ್ರಹ್ಮವ ಕರಸ್ಥಲಕ್ಕೆ ತಂದುಕೊಟ್ಟ ಗುರುವಿಗೆ ಗುರುವೆಂದು ಪ್ರಭುದೇವರು ಸಿದ್ಧರಾಮಯ್ಯದೇವರ ಕೂಡೆ ನಿರೂಪಿಸಿದರೆಂಬುದೀಗ 'ಎನ್ನ ಪರಮಾ

ರಾಧ್ಯ ಸಂಗನಬಸವಣ್ಣನ ನಿಲವನುಪಮಿಸಬಾರದು ಕಾಣಾ ಸಿದ್ಧರಾಮಯ್ಯಾ' ಎಂಬ ಶಬ್ದಕ್ಕರ್ಥ. ೨೬

ವ. ಮತ್ತಂ ಶಿವ ಗುರುವೆಂದು ಬಲ್ಲಾತನೆ ಗುರು. ಶಿವ ಲಿಂಗವೆಂದು ಬಲ್ಲಾತನೇ ಗುರು. ಶಿವ ಜಂಗಮವೆಂದು ಬಲ್ಲಾತನೇ ಗುರು. ೧ಶಿವಾಚಾರವೆಂದು೧ ಬಲ್ಲಾತನೇ ಗುರು. ಇಂತೀ ಪಂಚವಿಧವೆ ಪಂಚಬ್ರಹ್ಮವೆಂದು ಅಱಿದ ಮಹಾಮಹಿಮ ಸಂಗನಬಸವಣ್ಣನು ಎನಗೆಯೂ ಗುರು, ನಿನಗೆಯೂ ಗುರು, ಜಗವೆಲ್ಲಕ್ಕೆಯೂ ಗುರು ಕಾಣಾ ಗೊಹೇಶ್ವರಾ!

ಟೀ. ಇನ್ನು ಗುರು ಲಿಂಗ ಜಂಗಮ ಪ್ರಸಾದ ಆಚಾರವೆಂಬ ಪಂಚವಿಧವೇ ಪಂಚಬ್ರಹ್ಮವೆಂದಱಿದು ಆಚರಿಸಿ ಎಲ್ಲರಿಗೆಯೂ ಅಱುಹಿಕೊಟ್ಟ ಬಸವಣ್ಣನೆನಗೆಯೂ ಗುರು, ಶಿವನಿಗೆಯೂ ಗುರು, ಮೂಱು ಲೋಕಕ್ಕೆಯೂ ಗುರುವೆಂದು ಪ್ರಭುದೇವರು ಸಿದ್ಧರಾಮಯ್ಯದೇವರಿಗೆ ಬೋಧಿಸಿದರೆಂಬುದೀ ವಚನದ ತಾತ್ಪರ್ಯಾರ್ಥ. ೨೭

ಇದಕ್ಕೆ ಸಿದ್ಧರಾಮಯ್ಯದೇವರು ಮಾಡಿದ ಬಸವಣ್ಣನ ಸ್ತೋತ್ರ :

ವ. ಜಲದಲ್ಲಿ ಉದ್ಭವಿಸಿ ಮತ್ತೆ ಜಲವು ತಾನಲ್ಲ. ಜಲವೆಂದಿಪ್ಪುದೀ ಲೋಕವೆಲ್ಲಾ. ಪರಮಗುರು ಬಸವಣ್ಣ ಜಗವ ಪಾಲಿಸಬರಲು ಎನ್ನ ಪರಿಭವದ ದಂಡುಗ ಹಱಿಯಿತ್ತಯ್ಯ. ಆ ಶುದ್ಧಿಯನಱಿಯದೆ ಬೇಕಾದ ಪರಿಯಲ್ಲಿ ಅನೇಕ ಜಡರೆಲ್ಲಾ ನುಡಿವುತ್ತಿಹರು. ಸತ್ತ ಪ್ರಾಣವನೆತ್ತಿ ನೋಪ್ಪಿಪ್ಪ ನಿಶ್ಚಿಯವು ಮರ್ತ್ಯದವರಿಗುಂಟೇ ಶಿವಂಗಲ್ಲದೆ ? ಶಿವಗುರು ಬಸವಣ್ಣ, ಬಸವಗುರು ಶಿವನಾಗಿ ದೆಸೆಗೆಟ್ಟ ದೇವತಾಪಶುಗಳಿಗೆ ಪಶುಪತಿಯಾದನು. ಬಸವಣ್ಣನ ನೆನಹು ಸುಖಸಮುದ್ರವಯ್ಯ! ಕಪಿಲಸಿದ್ಧಮಲ್ಲಿನಾಥಾ ಬಸವಣ್ಣನ ತೋಱಿಸಿದ ಕಾರಣ ನಾನು ಬದುಕಿದೆನು!

ಟೀ. ಶುಕ್ಲ ಶೋಣಿತದಿಂದ ಜಲಬುದ್ಬುದ ಪಿಂಡವಾಯಿತ್ತೆಂಬುದೀಗ 'ಜಲದಲ್ಲಿ ಉದ್ಭವಿಸಿ' ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಿಯಲ್ಲ ಬಸವಣ್ಣ

೧ [ಶಿವ ಆಚಾರವೆಂದು]?



ನೆಂಬುದೀಗ ' ಮತ್ತೆ ಜಲವು ತಾನಲ್ಲ ' ಎಂಬ ಶಬ್ದಕ್ಕರ್ಥ. ಅಂತಪ್ಪ ಬಸವಣ್ಣನೇ ಶಿವನೆಂಬುದನಱಿಯದೆ ತಮ್ಮಂತೆ ದೇಹಿಯೆಂದಿಪ್ಪರು ಜೀವರೆಲ್ಲರು ಎಂಬುದೀಗ ' ಜಲವೆಂದಿಪ್ಪುದೀ ಲೋಕವೆಲ್ಲಾ ' ಎಂಬ ಶಬ್ದಕ್ಕರ್ಥ. ಅಂತು ಪರಶಿವನು ತಾನೆ ಬಸವಣ್ಣನೆಂಬ ಗುರುವಾಗಿ ಬಂದು ಸತ್ತ ಪ್ರಾಣವನೆತ್ತಿತೋಱಿ ಜಗತ್ತ ಪಾಲಿಸುತಿರಲು ಶಿವನೆಂದಱಿಯದೀ ಲೋಕ. ಬಸವಣ್ಣನೇ ಶಿವನೆಂದಱಿದ ಶಿವಭಕ್ತರುಗಳಿಗೆ ಭವಬಂಧನವಿಲ್ಲೆಂಬುದೀಗ ' ಪರಮಗುರು ಬಸವಣ್ಣ ಜಗವ ಪಾಲಿಸಬರಲು ಎನ್ನ ಪರಿಭವದ ದಂದುಗ ಹಱಿಯಿತ್ತಯ್ಯ. ಆ ಶುದ್ಧಿಯನಱಿಯದೆ ಬೇಕಾದ ಪರಿಯಲ್ಲಿ ಅನೇಕ ಜಡರೆಲ್ಲಾ ನುಡಿವುತ್ತಿಹರು. ಸತ್ತ ಪ್ರಾಣವ ನೆತ್ತಿವೊಪ್ಪಿಪ್ಪ ನಿಶ್ಚಯವು ಮರ್ತ್ಯದವರಿಗುಂಟೇ ಶಿವಂಗಲ್ಲದೆ?' ಎಂಬ ಶಬ್ದಕ್ಕರ್ಥ. ಶಿವನು ತನ್ನ ಸ್ವರೂಪಾದ ಘನತೆಯ ತನ್ನ ಜ್ಞಾನದಿಂದಲಱಿದನಾಗಿ [೧]ಆ ತನ್ನನಱುಹಿಸಿಕೊಟ್ಟ[೧] ಜ್ಞಾನವೇ ಶಿವಂಗೆ ಗುರು. ಅಂತು ಗುರುಸ್ವರೂಪಾದ ಜ್ಞಾನವೇ ಬಸವಣ್ಣನೆಂಬುದೀಗ ' ಶಿವಗುರು ಬಸವಣ್ಣ ' ನೆಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನವಾದ ಚೈತನ್ಯದಱಿವೆಲ್ಲಾ ಶಿವನೆಂಬುದೀಗ ' ಬಸವಗುರು ಶಿವನಾಗಿ ' ಎಂಬ ಶಬ್ದಕ್ಕರ್ಥ. ಅಂತು ನಿಷ್ಕಲವಾಗಿರ್ದ ಪರಶಿವನು ತನ್ನ ಚಿತ್ತಿನಿಂದ ತನ್ನ ಘನತೆಯನಱಿದು ಚಿದ್ವಿಲಾಸನಾಗಿ ಚಿತ್ತುವ ಮುಂದುಗೊಂಡು ಸಾಕಾರವಾದಲ್ಲಿ ತನ್ನ ಚಿತ್ಸಾಮರ್ಥ್ಯವೇ ಪ್ರಭಾವಿಸಿ ಅನಂತ ದೇವತಾಮೂರ್ತಿಗಳು ಮೊದಲಾದ ಜೀವಂಗಳಾಗಿ ತಾವು ಶಿವಾಂಶಿಕರೆಂಬ ನಿಜದ ದೆಸೆಯ ಕಾಣದೆ ಮಱೆದು ಪಶುಗಳಾಗಿರ್ದರಾಗಿ ಶಿವನೇ ಪಶುಗಳಿಗೆ ಪತಿಯಾಗಿ ಪೂಜ್ಯನಾಗಿ ಸಗುಣಾನಂದಸುಖವನಾನಂದಿಸುತ್ತಿರ್ದ ಶಿವನು ಚಿತ್ತಿನ ನೆನಹಿಂದ. ಅಂತಪ್ಪ ಚಿತ್‌ಸ್ವರೂಪವೇ ಬಸವಣ್ಣನೆಂಬುದೀಗ ' ಶಿವಗುರು ಬಸವಣ್ಣ ಬಸವಗುರು ಶಿವನಾಗಿ ದೆಸೆಗೆಟ್ಟ ದೇವತಾಪಶುಗಳಿಗೆ ಪತಿಯಾದನು. ಬಸವಣ್ಣನ ನೆನಹು ಸುಖದ ಸಮುದ್ರವಯ್ಯ ' ಎಂಬ ಶಬ್ದಕ್ಕರ್ಥ. ಇಂತಪ್ಪ ಬಸವಣ್ಣನ ತೋಱಿದಿರಾಗಿ ನಾನು ಬದುಕಿದೆನೆಂದು ಸಿದ್ಧರಾಮಯ್ಯದೇವರು ಪ್ರಭುದೇವರ ಕೂಡೆ [೨]ಕೊಂಡಾಡಿ[೨]ದರೆಂಬುದೀಗ ಈ ವಚನದ ತಾತ್ಪರ್ಯಾರ್ಥ. ೨೮

ಅಂತು ಪ್ರಭುದೇವರು ಸಿದ್ಧರಾಮಯ್ಯದೇವರು ಬಸವಣ್ಣನೇ ಗುರುವೆಂದು ಸ್ತೋತ್ರವ [೩]ಮಾಡಲು[೩] ಆ ಬಸವಣ್ಣನು ಸಿದ್ಧರಾಮಯ್ಯ

೧ ಆತನನಱಿಸಿಕೊಟ್ಟ (ಹು) ೨ ಕೊಂಡಾಡಿ ಬಿನ್ನಯಿಸಿದ (ಹು)
೩ ಮಾಡುತ್ತಿರಲು (ಹು)

ದೇವರ ನೋಡಿ ಅಂಗದ ಮೇಲೆ ಲಿಂಗವಿಲ್ಲದುದನಱಿದು ಲಿಂಗಾಂಗಸಂಬಂಧದ ಭೇದವ ಪ್ರಭುದೇವರಿಗೆ ನಮಸ್ಕಾರವ ಮಾಡುವ ಮುಖದಲ್ಲಿ ನಿರೂಪಿಸಿದ ವಚನ :

ವ. ಎನ್ನ ಕಾಯದ ಕರಸ್ಥಲದಲ್ಲಿ ಪ್ರಭುದೇವರ ಕಂಡೆನು. ಎನ್ನ ಮನದ ಕರಸ್ಥಲದಲ್ಲಿ ಚೆನ್ನಬಸವಣ್ಣನ ಕಂಡೆನು. ಎನ್ನಱುಹಿನ ಕರಸ್ಥಲ-ದಲ್ಲಿ ಮಡಿವಾಳಯ್ಯನ ಕಂಡೆನು. ಒಳಹೊಱಗು ಹೊಱಗೊಳಗೆಂಬ ಭೇದವನಱಿಯದೆ ಇದ್ದೆನು. ಕೂಡಲಸಂಗಮದೇವಯ್ಯ, ನಿಮ್ಮ ಶರಣರು ಎನ್ನ ಪಾವನ ಮಾಡಿದ ಪರಿಣಾಮವ ಅಂತಿಂತೆನಲಮ್ಮದೆ ನಮೋ ನಮೋ ಎನುತಿರ್ದೆನು!

ಟೀ. ಆನಂದಸ್ವರೂಪಾದ ಕಾರಣತತ್ತ್ವವೇ ಜಂಗಮವಾಯಿತ್ತಾಗಿ, ಆ ಜಂಗಮವೆ ಇಷ್ಟಲಿಂಗವಾಗಿ ಅನಿಷ್ಟವ ನಷ್ಟವ ಮಾಡಿ ಕರಸ್ಥಲದಲ್ಲಿ ನೆಲೆಗೊಂಡಿರ್ದುದ ಪ್ರತ್ಯಕ್ಷವಾಗಿ ಕಂಡ ಬಸವಣ್ಣನೆಂಬುದೀಗ 'ಎನ್ನ ಕಾಯದ ಕರಸ್ಥಲದಲ್ಲಿ ಅಲ್ಲಮಪ್ರಭುದೇವರ ಕಂಡೆನು' ಎಂಬ ಶಬ್ದಕ್ಕರ್ಥ. ಚಿತ್ಸ್ವರೂಪಾದ ಸೂಕ್ಷ್ಮತತ್ತ್ವವೇ ಚೆನ್ನಬಸವಣ್ಣನಾಗಿ ಬಂದು ತನ್ನ ಮನದ ಕರಸ್ಥಲದಲ್ಲಿ ಜ್ಞಾನಸ್ವರೂಪನಾಗಿ ನೆಲೆಗೊಂಡು ಪ್ರಾಣಲಿಂಗವಾಗಿ ತನ್ನ ವಾಯು ಪ್ರಾಣಗುಣವಳಿದಿರ್ದುದ ಪ್ರತ್ಯಕ್ಷವಾಗಿ ಕಂಡ ಬಸವಣ್ಣನೆಂಬುದೀಗ 'ಎನ್ನ ಮನದ ಕರಸ್ಥಲದಲ್ಲಿ ಚೆನ್ನಬಸವಣ್ಣನ ಕಂಡೆನು' ಎಂಬ ಶಬ್ದಕ್ಕರ್ಥ. ಸತ್ತುವೆನಿಸಿಹ ಅಖಂಡ ಘನವಸ್ತು ಸ್ಥೂಲಬ್ರಹ್ಮವೇ ಮಡಿವಾಳನಾಗಿ ಬಂದು ತನ್ನ ದುರ್ಭಾವದ ಮಲಿನವ ಕಳೆದು ಸದ್ಭಾವಲಿಂಗವಾಗಿ ತನ್ನಲ್ಲಿ ನೆಲೆಗೊಂಡಿರ್ದುದ ಪ್ರತ್ಯಕ್ಷವಾಗಿ ಕಂಡ ಬಸವಣ್ಣನೆಂಬುದೀಗ 'ಎನ್ನ ಅಱುವಿನ ಕರಸ್ಥಲದಲ್ಲಿ ಮಡಿವಾಳಯ್ಯನ ಕಂಡೆನು' ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧಲಿಂಗದಿಂದ ತನು ಮನ ಪ್ರಾಣಂಗಳೆಲ್ಲಾ ಲಿಂಗವಾಗಿ ಅಂತರಂಗ ಬಹಿರಂಗವೆಂಬ ಭೇದವಿಲ್ಲದೆ ಸರ್ವಾಂಗಲಿಂಗವಾಗಿರ್ದನೆಂಬುದೀಗ 'ಒಳಹೊಱಗು ಹೊಱಗೊಳಗು ಎಂಬ ಭೇದವನಱಿಯದೆ ಇದ್ದೆನು' ಎಂಬ ಶಬ್ದಕ್ಕರ್ಥ. ಇಂತು ಲಿಂಗಶರಣರ ಉಪದೇಶದಿಂದ ಲಿಂಗಾಂಗಸಂಬಂಧಿಯಾಗಿ ನಿತ್ಯಸುಖವಡೆದ ಕ್ರಿಯೋಪದೇಶವ ಇಷ್ಟಲಿಂಗವಿಲ್ಲದ ಸಿದ್ಧರಾಮಯ್ಯದೇವರಿಗೆ ಹೇಳಬಾರದು, ಹೇಳದಿರಲೂಬಾರದು ಎಂದು ಅನ್ಯೋಪದೇಶವಾಗಿ ನಮಸ್ಕಾರ ಮುಖದಲ್ಲಿ ಬಸವರಾಜದೇವರು ನಿರೂಪಿಸಿದರೆಂಬುದೀಗ 'ನಿಮ್ಮ ಶರಣರು ಎನ್ನ ಪಾವನವ ಮಾಡಿದ ಪರಿಣಾಮವ ಅಂತಿಂತೆನಲಮ್ಮದೆ ನಮೋ ನಮೋ ಎನುತಿರ್ದೆನು' ಎಂಬ ಶಬ್ದಕ್ಕರ್ಥ. ೨೯

ಅಂತು ಬಸವಣ್ಣನಿಂದ ಲಿಂಗಾಂಗಸಂಬಂಧದ ಉಪದೇಶವ ಕೇಳಿ ಸಿದ್ಧ-ರಾಮಯ್ಯದೇವರು ಪ್ರಭುದೇವರ ಕೂಡೆ ತಮ್ಮಂತರಂಗದ ಅಱಿವಿನ ನಿಶ್ಚಯಾರ್ಥವ ಬಿನ್ನೈಸುವ ವಚನ :

ವ. ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ ಉಳಿವುದೇ ಅಯ್ಯ ? ಶರಣರು ಶರಣರು ಮಹಾನುಭಾವಗೋಷ್ಠಿಯ ಮಾಡುವಲ್ಲಿ ಸಂಗದೊಳ-ಗಿರ್ದವರ ಅಜ್ಞಾನವಳಿದು ನಿಜವನೈದುವರಯ್ಯ! ನಿಮ್ಮ ಮಹಾನು-ಭಾವಿಗಳ ಸೋಂಕಿನ ಸೆಱಗಿನೊಳಗಿರ್ದು ನಾನು ಪರಮಸುಖಿ ಯಾಗಿ ಮಡಿವಾಳನ ಪಾದದಲ್ಲಿ ಮಗ್ನನಾದೆನು ಕಾಣಾ ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನಾ !

ಟೀ. ಶಿವಶರಣರ ಅನುಭಾವಗೋಷ್ಠಿಯಿಂದ ಅಜ್ಞಾನವಳಿದು ಸುಜ್ಞಾನ ವಳವಟ್ಟಿತ್ತೆಂಬುದೀಗ 'ನಿಮ್ಮ ಮಹಾನುಭಾವಿಗಳ ಸೋಂಕಿನ ಸೆಱಗಿನೊಳಗಿರ್ದು' ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನದಿಂದ ಮಡಿವಾಳನೆಂಬ ಪರಬ್ರಹ್ಮವ ತನ್ನಂತರಂಗದಲ್ಲಿ ಕಂಡು ಆ ಪರಬ್ರಹ್ಮಸಂಧಾನಧ್ಯಾನದಲ್ಲಿ ಮನಮಗ್ನನಾಗಿ ಶಿವಸುಖವ ಪಡೆದಿಪ್ಪನೆಂದು ಪ್ರಭುದೇವರ ಕೂಡೆ ಬಿನ್ನೈಸಿದರೆಂಬುದೀ ವಚನದ ತಾತ್ಪರ್ಯಾರ್ಥ. ೩೦

ಇಂತೆಂದು ಸಿದ್ಧರಾಮಯ್ಯದೇವರು ನುಡಿಯಲು ಚೆನ್ನಬಸವಣ್ಣ ಕೇಳಿ ಅಂಗದ ಮೇಲೆ ಲಿಂಗವಿಲ್ಲದವರಿಗೆ ಪ್ರಾಣಲಿಂಗಸಂಬಂಧವಿಲ್ಲವೆಂದು ನಿರೂಪಿಸಿದ ವಚನ :

ವ. ಅಂಗದ ಮೇಲೆ ಲಿಂಗವಿಲ್ಲದನ್ನಕ್ಕರ ಪ್ರಾಣದಲ್ಲಿ ಲಿಂಗ ಪರಿಣಾಮವ-ನ್ನೈದುವ ಪರಿಯೆಂತಯ್ಯಾ ? ಅಂಗತ್ರಯವುಳ್ಳವರು ಲಿಂಗತ್ರಯ ಸಂಪನ್ನರಾಗಬೇಕು. ಒಂದಂಗವಿರಹಿತರಾಗಿಪ್ಪವರುಂಟೇ ? ಕಂಗಳ ನೋಟಕ್ಕಿಂಬಾವುದು ಹೇಳಾ ? ಒಂದು ಬಿಟ್ಟು ಒಂದು ತೋಱದಾಗಿ ಸಂದು ಭೇದವಿಲ್ಲದಿಪ್ಪ ಮಡಿವಾಳನ ನಿಲವು ಕೂಡಲ ಚೆನ್ನಸಂಗಯ್ಯ ನಲ್ಲಿ ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯಾ ?

ಟೀ. ತನು ಮೂಱುಳ್ಳವರು ಲಿಂಗ ಮೂಱ ಸಾಹಿತ್ಯವ ಮಾಡಿಕೊಂಡ ಲ್ಲದೆ ತನುತ್ರಯವಳಿಯದು. ಲಿಂಗವಾಗಬಾರದಾರಿಗೆಯೂ. ಅದುಕಾರಣ ಸ್ಥೂಲ ತನುವಿನ ಮೇಲೆ ಇಷ್ಟಲಿಂಗ ಸಾಹಿತ್ಯವಾಗಿ, ಆ ಇಷ್ಟಲಿಂಗದ ಕಳೆ ಕರ್ಣಮನ

ಭಾವಂಗಳಿಗೆ ಪ್ರತ್ಯಕ್ಷವಾಗಿ ಅಱಿವು ನಿರ್ಧರಿಸಲು ಪ್ರಾಣನಲ್ಲಿ ಲಿಂಗಕಳೆ ನೆಲೆಗೊಂಡು ಅಂತರಂಗ ಬಹಿರಂಗವೆಲ್ಲಾ ಲಿಂಗವೆಯಾದ ಶರಣ ಮಡಿವಾಳನು. ಅಂತು ಅಂಗದ ಮೇಲೆ ಇಷ್ಟಲಿಂಗಸಾಹಿತ್ಯವಿಲ್ಲದ ಕಾರಣ ಪ್ರಾಣಲಿಂಗ ನಿಮಗಿಲ್ಲವೆಂದು ತ್ರಿವಿಧಲಿಂಗಾಂಗಸಂಬಂಧವ ಬೋಧಿಸಿದರೆಂಬುದೀ ವಚನದ ತಾತ್ಪರ್ಯಾರ್ಥ. ೩೦

**ವ.** ಮತ್ತಂ ಆಚಾರ ಅಂಗದ ಮೇಲೆ ಆಯತವಾದುದೇ ಇಷ್ಟಲಿಂಗ. ಆ ಇಷ್ಟಲಿಂಗವಿಡಿದಿಹುದೇ ಪ್ರಾಣಲಿಂಗಸ್ವಾಯತ. ಪ್ರಾಣಲಿಂಗ ಉದಯಿಸಿದಲ್ಲದೆ ಇಷ್ಟಲಿಂಗವ ಕಾಣಬಾರದು. ಈ ಭೇದವ ಭೇದಿಸಬಲ್ಲರೆ ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯ ಕಾಣಾ ಸಿದ್ಧರಾಮಯ್ಯಾ.

ಟೀ. ಅಂಗದ ಮೇಲೆ ಲಿಂಗಸಾಹಿತ್ಯವಾದ ಭಕ್ತನು ಕರ್ಮಕ್ರೀಗಳ ಬಿಟ್ಟು ಏಕಲಿಂಗನಿಷ್ಠಾವ್ರತಸ್ಥನಾಗಿ ಭಕ್ತಿಯಿಂದ ಆಚರಿಸುವುದೇ ಆಚಾರ. ಅಂತಪ್ಪ ಆಚಾರವೆಡೆಗೊಂಡ ಭಕ್ತನ ಕರಸ್ಥಲದ ಇಷ್ಟಲಿಂಗದಲ್ಲಿ ಲಿಂಗಕಳೆ ಇಹುದೆಂಬುದೀಗ 'ಆಚಾರ ಅಂಗದ ಮೇಲೆ ಆಯತವಾದುದೆ ಇಷ್ಟಲಿಂಗ' ವೆಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದಲ್ಲಿ ನೈಷ್ಠಿಕಾಭಾವ ನೆಲೆಗೊಂಡು ಪ್ರಾಣನಲ್ಲಿ ಲಿಂಗಸಾಹಿತ್ಯವಾಗಿಹುದೆಂಬುದೀಗ 'ಇಷ್ಟಲಿಂಗವಿಡಿದಿಹುದೇ ಪ್ರಾಣಲಿಂಗಸ್ವಾಯತ' ವೆಂಬ ಶಬ್ದಕ್ಕರ್ಥ. ಅಂತು ಪ್ರಾಣದಲ್ಲಿ ಲಿಂಗಭಾವ ಹುಟ್ಟಿದಾತಂಗೆ ಇಷ್ಟಲಿಂಗದ ಕಳೆ ಪ್ರತ್ಯಕ್ಷವಾಗಿ ಕಾಣಿಸುವುದೆಂಬುದೀಗ 'ಪ್ರಾಣಲಿಂಗ ಉದಯಿಸಿದಲ್ಲದೆ ಇಷ್ಟಲಿಂಗವ ಕಾಣಬಾರದು' ಎಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗದ ಕಳೆಯ ಕಾಬ ಲಿಂಗಭಾವ ಪ್ರಾಣದಲ್ಲಿ ಹುಟ್ಟಿದಾತಂಗೆ ಪ್ರಾಣಲಿಂಗವಿಲ್ಲ. ಇಂತೆಂಬ ವರ್ಮವ ತಿಳಿದು ಇಷ್ಟಲಿಂಗವೇ ಪ್ರಾಣಲಿಂಗವೆಂದು ಅಱಿದು ಭಿನ್ನವಳಿದಿರ್ದ ಶರಣ ಲಿಂಗಕ್ಕನನ್ಯನೆಂಬುದೀಗ 'ಈ ಭೇದವ ಭೇದಿಸಬಲ್ಲರೆ ಲಿಂಗೈಕ್ಯ' ನೆಂಬ ಶಬ್ದಕ್ಕರ್ಥ. ೩೨

## ಆ ಸಮಯದಲ್ಲಿ ಮೋಳಿಗೆಯ ಮಾರಿತಂದೆಗಳ ವಚನ :

**ವ.** ಗರಳವಿಲ್ಲದುರಗಂಗೆ ಹಲಬರಂಜಿದವರುಂಟೆ ? ಕೈದುವಿಲ್ಲದ ಬಂಟ ಘರ್ಜಿಸಿದಡೆ ಅಂಜಿದವರುಂಟೇ ? ಇಷ್ಟ ಬಾಹ್ಯದೃಷ್ಟದ ಮಾತನಾಡಿದರೆ ನೆಟ್ಟನೆ ಪ್ರಾಣಲಿಂಗಿಯಪ್ಪನೇ ? ಅದು ನಿಶ್ಚಯವಲ್ಲ ನಿಷ್ಕಳಂಕ ಮಲ್ಲಿಕಾರ್ಜುನಾ.

ಟೀ. ವಿಷವಿಲ್ಲದ ಹಾವೂ ಆಯುಧವಿಲ್ಲದ ಬಂಟನೂ ವೈರಿಗಳ ಜಯಿಸಲಱಿಯರು. ಅಂತು ಇಷ್ಟಲಿಂಗವಿಲ್ಲದವರು ಅನಿಷ್ಟವ ನಷ್ಟವ ಮಾಡಲಱಿಯರು. ಇಷ್ಟಲಿಂಗವಿಲ್ಲದೆ ಬಱಿಯ ವಾಗದ್ವೈತಿಗಳಿಗೆ ಪ್ರಾಣಲಿಂಗಸಂಬಂಧವಾಗಲಱಿಯದು ಎಂಬುದೀ ವಚನದ ತಾತ್ಪರ್ಯಾರ್ಥ. ೩೩

ಆ ಸಮಯದಲ್ಲಿ ಮೆಱೆಮಿಂಡದೇವರ ವಚನ :

ವ. ಮೊನೆಯಿಱವಡೆ ಕರದಲ್ಲಿ ಪಿಡಿದಲ್ಲದಾಗದು. ಮನವಱವಡೆ ಕುಱುಹಿನ [1]ನೆರಿಗೆಯಲ್ಲಿ[1] ಸಲೆ ಸಂದು ನಿಂದಲ್ಲದಾಗದು. ಕ್ರಿಯಾಭಾವ ಶುದ್ಧವಾದಲ್ಲದೆ [2]ಆಯಿಘಟ[2]ದೂರರಾಮೇಶ್ವರಲಿಂಗವ ಕೂಡಬಾರದು.

ಟೀ. ಮನವು ಇಷ್ಟಲಿಂಗದ ಕಳೆಯ ಕುಱುಹಿಟ್ಟಱಿದು ಭಾವ ನೆಲೆಗೊಂಡು ತನುತ್ರಯವ ಕ್ರೀಯಿಂದ ನಷ್ಟವ ಮಾಡಿದಲ್ಲದೆ ಲಿಂಗವ ಕೂಡಬಾರದೆಂಬುದೀಗ ಈ ವಚನದ ತಾತ್ಪರ್ಯಾರ್ಥ. ೩೪

ಇಂತು ಬಸವಣ್ಣ ಮೊದಲಾದ ಪುರಾತರೆಲ್ಲರು ಸಿದ್ಧರಾಮಯ್ಯದೇವರಿಗೆ ಇಷ್ಟಲಿಂಗ ಸಂಬಂಧವಾದಲ್ಲದೆ ಪ್ರಾಣಲಿಂಗಸಂಬಂಧವಿಲ್ಲವೆಂದು ಒಪ್ಪದೆ ಇರಲು ಸಿದ್ಧರಾಮಯ್ಯದೇವರು ಭಕ್ತಿಜ್ಞಾನಾತುರದಿಂದ ಅನುತಾಪಂಗೈದು ನುಡಿದ ವಚನ :

ವ. ಎಂದಿಪ್ಪೆನಯ್ಯಾ ಶುದ್ಧ ಸಿದ್ಧ ಪ್ರಸಿದ್ಧ ಪ್ರವೇಶಿಸಿ ? ಎಂದಿಪ್ಪೆನಯ್ಯಾ ಭಕ್ತಿಜ್ಞಾನವೈರಾಗ್ಯಸಂಪನ್ನನಾಗಿ ? ಎಂದಿಪ್ಪೆನಯ್ಯಾ ತತ್ತ್ವಾತತ್ತ್ವ ತೂರ್ಯಾತೂರ್ಯ ನೀನೆಯಾಗಿ ? ಎಂದಿಪ್ಪೆನಯ್ಯಾ ದೀಕ್ಷಾತ್ರಯದಲ್ಲಿ ಸಂಪನ್ನನಾಗಿ ? ಎಂದಿಪ್ಪೆನಯ್ಯಾ ಲಿಂಗತ್ರಯದಲ್ಲಿ ಪ್ರಸಾದಪ್ರಸನ್ನನಾಗಿ ? ಎಂದಿಪ್ಪೆನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ ನಿನ್ನವರ ನಡುವೆ ಓರಂತೆ ?

ಟೀ. ಶುದ್ಧವೆ ಗುರು, ಸಿದ್ಧವೆ ಲಿಂಗ, ಪ್ರಸಿದ್ಧವೆ ಜಂಗಮವಾದ ಕಾರಣ ಅಂತಪ್ಪ ಗುರುಲಿಂಗಜಂಗಮಸ್ವರೂಪು ತನ್ನಲ್ಲಿ ನೆಲಸಿ ತಾನೆಯಾಗಿ ಎಂದಿಪ್ಪೆನೋ

[1] ನೆಱಿಗೆ (ಎ.), ಸೆಱಿಗೆ (ಎ.ಹು.) [2] ಐಘಟ (ಎ.)

ಎಂಬುದೀಗ ' ಎಂದಿಪ್ಪೆನಯ್ಯಾ ಶುದ್ಧ ಸಿದ್ಧ ಪ್ರಸಿದ್ಧ ಪ್ರವೇಶಿಸಿ ' ಎಂಬ ಶಬ್ದ ಕ್ಕರ್ಥ. ಅಂತು ತ್ರಿವಿಧವು ಒಂದೆಯೆಂದಱಿದುದೆ ಜ್ಞಾನ, ವಿಶ್ವಾಸವೆ ಭಕ್ತಿ, ತ್ರಿವಿಧದಲ್ಲಿ ನಿರ್ವಂಚನೆಯೇ ವೈರಾಗ್ಯ. ಇಂತಪ್ಪ ಭಕ್ತಿಜ್ಞಾನವೈರಾಗ್ಯಸಂಪನ್ನ ನಾಗಿ ಎಂದಿಪ್ಪೆನೆಂಬುದೀಗ ' ಎಂದಿಪ್ಪೆನಯ್ಯಾ ಭಕ್ತಿಜ್ಞಾನವೈರಾಗ್ಯಸಂಪನ್ನನಾಗಿ' ಎಂಬ ಶಬ್ದಕ್ಕರ್ಥ. ಅಂಗತತ್ತ್ವವೇ ಶಿವತತ್ತ್ವವಾಗಿ, ಜ್ಞಾನವೇ ಮಹಾಜ್ಞಾನ ವಾಗಿ, ಇಂತು ಶಿವ ನೀನೆಯಾಗಿ ಎಂದಿಪ್ಪೆನೋ ಎಂಬುದೀಗ ' ಎಂದಿಪ್ಪೆನಯ್ಯಾ ತತ್ತ್ವಾತತ್ತ್ವ ತೂರ್ಯಾತೂರ್ಯ ನೀನೆಯಾಗಿ ' ಎಂಬ ಶಬ್ದಕ್ಕರ್ಥ. ಮಸ್ತಕದಲ್ಲಿ ಹಸ್ತವನಿರಿಸಿ ಕಳಾದೀಕ್ಷೆಯು, ಕರ್ಣದಲ್ಲಿ ಪರಮ ಮಂತ್ರೋಪದೇಶವ, ಅಂಗದ ಮೇಲೆ ಇಷ್ಟಲಿಂಗೋಪದೇಶವ ಮಾಡಿ ಪರಮೈಶ್ವರ್ಯದಲ್ಲಿ ಶ್ರೀಗುರು ಕರುಣಿಸಿ ಎಂದಿಪ್ಪೆನೋ ಎಂಬುದೀಗ ' ಎಂದಿಪ್ಪೆನಯ್ಯಾ ದೀಕ್ಷಾತ್ರಯದಲ್ಲಿ ಸಂಪನ್ನನಾಗಿ ' ಎಂಬ ಶಬ್ದಕ್ಕರ್ಥ. ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳು ಕರ್ಣಮನ ಭಾವಂಗಳಿಗೆ ಪ್ರಸನ್ನನಾಗಿರ್ದ ಭಾಗ್ಯವೆಂದಿಗಹುದೋ ಎಂಬುದೀಗ ' ಎಂದಿಪ್ಪೆ ನಯ್ಯಾ ಲಿಂಗತ್ರಯದಲ್ಲಿ ಪ್ರಸಾದಸಂಪನ್ನನಾಗಿ ' ಎಂಬ ಶಬ್ದಕ್ಕರ್ಥ. ಇಂತು ತ್ರಿವಿಧಲಿಂಗಾಂಗಸಂಪನ್ನರಪ್ಪ ಶರಣರ ಪದವ ಪಡೆದು ಶಿವಶರಣರ ನಡುವೆ ಶರಣನಾಗಿ ಎಂದಿಪ್ಪೆನೆಂಬುದೀಗ ' ಎಂದಿಪ್ಪೆನಯ್ಯಾ ನಿಮ್ಮವರ ನಡುವೆ ಓರಂತೆ ' ಎಂಬ ಶಬ್ದಕ್ಕರ್ಥ. ೩೫

ಅಂತು ಶೈವಯೋಗಾಭ್ಯಾಸದ ಕ್ರೀಯಿಂದ ಅಂತರ್ಲಕ್ಷವನುಸಂಧಾನಧ್ಯಾನಿ ಯಾಗಿ ನಾದದ ಬೆಳಗ ಹುಡುಕಿ ಅಱಿಸಿ ಕೂಡಿ ಪ್ರಾಣಲಿಂಗಿಯಾದೆನೆಂಬ ಭವಿ ತನದ ಭ್ರಾಂತಿಜ್ಞಾನವ ಬಿಟ್ಟು ಇಷ್ಟಲಿಂಗಸಂಬಂಧವಾಗಬೇಕೆಂದು ಪ್ರಭುದೇವರು ಮೊದಲಾದ ಬಸವಗಣಂಗಳಿಗೆ ಬಿನ್ನಹಂ ಮಾಡಿದ ವಚನ :

ವ. ನಾನೇನ ಮಾಡುವ ಜ್ಞಾನ ಕ್ರೀಯೆಲ್ಲವು ನೀನೆಂದಿರ್ದೆನಯ್ಯಾ. ನಾನೇನ ಮಾಡುವ ಅಱಿವಿನ ಕ್ರೀಯು ನೀನೆಯಲ್ಲವೆಂದಡೆ ಅದು ಮಾಣಲಿ ಮಾಣಲಿ ನಿಮ್ಮಾಣತಿ. ಕಾಣಬಾರದ ಘನವ ಕಾಯದಲಿ ಧರಿಸಿ, ಹೇಳಬಾರದ ನಿಜವ ಮನದಲ್ಲಿ ನೆಲೆಗೊಳಿಸಿ, ತೋಱಬಾರದ ಕುಱುಹ ಎನ್ನಱಿವಿನಲ್ಲಿ ಇರಿಸಿ, ಇನ್ನು ನಿಮ್ಮ ಕಂಡು ಕೂಡಿಪ್ಪಂತೆ ಮಾಡಾ ಪ್ರಭುವೇ ಕಪಿಲಸಿದ್ಧಮಲ್ಲಿಕಾರ್ಜುನಾ!

ಟೀ. ಸಿದ್ಧರಾಮಯ್ಯದೇವರು ತಾವು ಮಾಡುವ ಯೋಗದ ಅಂತರ್ಲ ಕ್ಷ್ಯದ ಜ್ಞಾನಕ್ರೀಯೆಲ್ಲವೂ ವೇದಾಗಮೋಕ್ತ. ಆ ವೇದಾಗಮೋಕ್ತ ಶಿವನಿರೂಪ

ವೆಂದು ಮಾಡುತ್ತಿರ್ದೆ. ಆ ಶಿವನೇ ಗುರುಸ್ವರೂಪನಾಗಿ ನೀವು ಬಂದು ಅದಲ್ಲ ವೆಂದರೆ ಬಿಟ್ಟೆನು. ಇನ್ನು ನಿಮ್ಮ ಕರುಣದಿಂದ ಕರ್ಣಮನಭಾವಂಗಳಿಗೆ ಅಗೋಚರವಾಗಿರ್ದ ಪರಬ್ರಹ್ಮವ ಇಷ್ಟಲಿಂಗವ ಮಾಡಿ ಕಾಯಮನಭಾವಂಗ ಳಿಗೆ ಸಾಹಿತ್ಯವ ಮಾಡಿ ಪ್ರತ್ಯಕ್ಷದಲ್ಲಿ ಕಂಡು ಕೂಡುವ ತ್ರಿವಿಧಲಿಂಗೋಪದೇಶವ ಮಾಡಬೇಕೆಂದು ಪ್ರಭು ಮೊದಲಾದ ಬಸವಗಣಂಗಳಿಗೆ ಬಿನ್ನಹಂ ಮಾಡಿದರು ಸಿದ್ಧರಾಮಯ್ಯದೇವರೆಂಬುದೀ ವಚನದ ತಾತ್ಪರ್ಯಾರ್ಥ. ೩೬

ಅಂತು ಪ್ರಭು ಮೊದಲಾದ ಬಸವಗಣಂಗಳಿಗೆ ಶರಣವೊಕ್ಕು ಚೆನ್ನಬಸ ವಣ್ಣನ ಹಸ್ತದಿಂದ ಸಿದ್ಧರಾಮಯ್ಯದೇವರು ದೀಕ್ಷೆವಡೆದು ನುಡಿದ ಶಿವೋಪದೇಶದ ವಚನ :

ವ. ಅಧ್ಯಾತ್ಮ ಅಧ್ಯಾತ್ಮವೆಂಬಿರಿ. ಅಧ್ಯಾತ್ಮವಾರಿಗೆ ? ಶ್ರೀಗುರುಸ್ವಾಮಿ ಬಹಳವಪ್ಪ ಶಿವಲಿಂಗವ ಸೂಕ್ಷ್ಮವ ಮಾಡಿ ಕೈಯ್ಯಲ್ಲಿ ಕೊಟ್ಟ ಬಳಿಕ ಬೇಱೆ ಯೋಗವುಂಟೇ ? ತನ್ನ ಹಸ್ತವ ಮಸ್ತಕದಲ್ಲಿ ಇಟ್ಟು ವಾಯು-ಪ್ರಾಣವಾಗಿರ್ದುದ ಕೊಂದು ಲಿಂಗಪ್ರಾಣಿಯ ಮಾಡಿದ ಬಳಿಕ, ಅಕ್ಷರವೈದರಲ್ಲಿ ಮುಕ್ತನ ಮಾಡಿದ ಬಳಿಕ ಮರಳಿ ಯೋಗವುಂಟೇ ಶಿವಯೋಗವಲ್ಲದೆ ? ಲಿಂಗಾರ್ಚನೆಯ ಮಾಡಿ ಜಂಗಮಪ್ರಸಾದವ ಕೊಂಡ ಬಳಿಕ ಮರಳಿ ಬೞಿಯ ಯೋಗಕ್ಕೆ ಒಡಂಬಡುವುದೇ ಅಱಿವು ? ಇಂತಪ್ಪವನತಿಗಳೆದು ಶುದ್ಧ ಶಿವಯೋಗಿಯ ಮಾಡಿದಾತ ಚೆನ್ನಬಸವಣ್ಣ. ಮಹಾಲೋಕದಲ್ಲಿಪ್ಪ ಆದ್ಯಕ್ಷರದ್ವಯದ ಭೇದವಂ ಭೇದಿಸಿ ತಂದು ಕರದಲ್ಲಿ ಇರಿಸಿ, ಇದು ಉರುತರ ಪದವೆಂದು ತೋಱಿಕೊಟ್ಟು ಎನ್ನ ತನ್ನಂತೆ ಮಾಡಿದ ಗುರು ಚೆನ್ನಬಸವಣ್ಣ. ಆನು ಚೆನ್ನಬಸವಣ್ಣನ ಕರುಣದಿಂದ ಅಭ್ಯಾಸಯೋಗವನತಿಗಳೆದು ಶಿವ-ಯೋಗದಲ್ಲಿ ನಿತ್ಯನಾಗಿ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯವೆಂಬ ಷಡುಸ್ಥಲಕ್ಕೆ ಅಧಿಕಾರಿಯಾದೆ. ನಿನ್ನವರ ಸಲಿಗೆಗೆ ಸಂದೆ. ಚೆನ್ನಬಸವಣ್ಣನ ಕೃಪೆಯೆನ್ನನಿಂತು ಮಾಡಿತ್ತು ಕಾಣಾ ಶ್ರೀಗುರುವೇ ಕಪಿಲಸಿದ್ಧಮಲ್ಲಿಕಾರ್ಜುನಾ !

ಟೀ. ವೇದಾಂತಜ್ಞಾನ ಮೊದಲಾದ ಯೋಗಮಾರ್ಗಂಗಳು ಕಡೆಯಾದ ಬಹುಮಾರ್ಗಂಗಳೆಲ್ಲವ ಬಿಡಿಸಿ, ಶ್ರೀಗುರು ಕರುಣಿಸಿ ಶಿವೋಹಂ ಎಂಬ ಎರಡ ಕ್ಷರನುಳ್ಳ ಶಿವಕಳೆಯ ಬ್ರಹ್ಮರಂಧ್ರದಲ್ಲಿರ್ದುದ ತಂದು ಕರಸ್ಥಲದಲ್ಲಿರಿಸಿ, ಷಡು

ಸ್ಥಲ ಲಿಂಗಾಂಗಸಂಬಂಧವ ಮಾಡಿ, ವಾಯುಪ್ರಾಣವನಳಿದು ಲಿಂಗಪ್ರಾಣವ ಮಾಡಿದ ಗುರು ಚೆನ್ನಬಸವಣ್ಣನ ಕೃಪೆಯಿಂದ ಬದುಕಿದೆನೆಂದು ಸಿದ್ಧರಾಮ(ಯ್ಯ) ದೇವರು ನುಡಿದರೆಂಬುದೀ ವಚನದ ತಾತ್ಪರ್ಯಾರ್ಥ. ೩೭

**ವ.** ಆದಿಯಾಧಾರವಿಲ್ಲದಂದಿನ ಸಾದಾಖ್ಯದೇಹವಿಲ್ಲದಂದಿನ ಸೀಮಾ ಸಂಬಂಧಗಳಿಲ್ಲದಂದಿನ ಅನಾದಿಸಂಸಿದ್ಧನ ಆಗುಮಾಡಿ ಹೆಸರಿಟ್ಟು ಕರಸ್ಥಲಕ್ಕೆ ತಂದುಕೊಟ್ಟ ಗುರು ಚೆನ್ನಬಸವಣ್ಣನಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ !

**ಟೀ.** ಆದಿಯೆಂದಡೆ ನಾದ. ಆಧಾರವೆಂದಡೆ ಬಿಂದು. ಅಂತು ನಾದ ಬಿಂದುಗಳು ಪಂಚಸಾದಾಖ್ಯಮೂರ್ತಿಗಳು ಇಹಪರಂಗಳೇನು ಇಲ್ಲದಿರ್ದಂದು ಪರಬ್ರಹ್ಮವೊಂದೇ ನಿಃಕಲವಾಗಿರ್ದಿತ್ತು. ಅಂತಿರ್ದ ನಿಃಕಲವಸ್ತುವ ಶ್ರೀಗುರು ಸಾಕಾರವ ಮಾಡಿ ಕರಸ್ಥಲಕ್ಕೆ ತಂದುಕೊಟ್ಟರೆಂದು ಸಿದ್ಧರಾಮಯ್ಯದೇವರು ನುಡಿದ ರೆಂಬುದೀ ವಚನದ ತಾತ್ಪರ್ಯಾರ್ಥ. ೩೮

**ವ.** ಶುದ್ಧವನಱಿದೆ ಚೆನ್ನಬಸವಣ್ಣ ನಿಮ್ಮಿಂದ. ಸಿದ್ಧವನಱಿದೆ ಚೆನ್ನ ಬಸವಣ್ಣ ನಿಮ್ಮಿಂದ. ಪ್ರಸಿದ್ಧವನಱಿದೆ ಚೆನ್ನಬಸವಣ್ಣ ನಿಮ್ಮಿಂದ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ, ಚೆನ್ನಬಸವಣ್ಣ ಗುರುವಾಗಿ ಬಂದು ಎನ್ನ ಜನ್ಮಕರ್ಮವ ನಿವೃತ್ತಿಯ ಮಾಡಿದನಯ್ಯಾ !

**ಟೀ.** ಶುದ್ಧವೆ ಗುರು, ಸಿದ್ಧವೆ ಲಿಂಗ, ಪ್ರಸಿದ್ಧವೆ ಜಂಗಮ. ಅಂತು ಗುರು ಲಿಂಗ ಜಂಗಮವ ಅಂಗ ಪ್ರಾಣ ಭಾವದಲ್ಲಿ ಸಾಹಿತ್ಯವ ಮಾಡಿ ಚೆನ್ನ ಬಸವಣ್ಣನೆನ್ನ ಭವಪಾಶವ ಹಱಿದನೆಂದು ಸಿದ್ಧರಾಮಯ್ಯದೇವರು ನುಡಿದ ರೆಂಬುದೀ ವಚನದ ತಾತ್ಪರ್ಯಾರ್ಥ. ೩೯

**ವ.** ಸೀಮೆಗೆಟ್ಟ ಬ್ರಹ್ಮದಾನತದ ಸಂಬಂಧ ಆದಿಅಕ್ಷರವೈದ ಮುಖವ ಮಾಡಿ ಭಾವದ ಕರದ ಹೊಱಗಿಟ್ಟು ಸರ್ವಾಂಗವನು ವೇಧಿಸಿದಾತ ಗುರು ಕಪಿಲಸಿದ್ಧಮಲ್ಲಿಕಾರ್ಜುನಾ.

**ಟೀ.** ನಾಮ ಸೀಮೆಗಳಿಗೆ ಬಾರದೆಯಿದ್ದ ಪರಬ್ರಹ್ಮವು ತನ್ನ ಚಿತ್ತುವಿನ ಮುಖದಿಂದ ಪಂಚಕಲಾಕ್ಷರಸ್ವರೂಪಾದ ಲಿಂಗದ ವರ್ಮವನಱುಹಿ ಶ್ರೀಗುರು ಆ ಪಂಚಾಕ್ಷರಿಯ ಮುಖದಿಂದವೆ ಆ ಲಿಂಗಕಳೆಯ ಶಿಷ್ಯನ ಭಾವಕ್ಕೆ ತಂದು, ಭಾವ

ದಿಂದ ಮನಕ್ಕೆ ತಂದು, ಮನದಿಂದ ಕಾಯಕ್ಕೆ ತಂದುದ ಕರಸ್ಥಲದಲ್ಲಿರಿಸಿ ಒಳ ಹೊಱಗೆನ್ನದೆ ಸರ್ವಾಂಗವ ಲಿಂಗಸ್ವರೂಪವ ಮಾಡಿಕೊಟ್ಟ ಗುರುವೆಂಬುದೀ ವಚನದ ತಾತ್ಪರ್ಯಾರ್ಥ. ೯೦

ವ. ರೂಪಿಂಗೆ ರೂಪು ಜ್ಞಾನಕ್ಕೆ ಸುಜ್ಞಾನ ಪ್ರಾಣಕ್ಕೆ ಪ್ರಸಾದ ಲಿಂಗ-ತ್ರಯದ ವೇಧೆಯಿಂದವೆ ತಂದು ಅವರವರ ಕರದಲ್ಲಿ ದೀಕ್ಷೆಯ ಮಾಡಿದನು ಗುರು ಚೆನ್ನಬಸವಣ್ಣ ಕಪಿಲಸಿದ್ಧಮಲ್ಲಿಕಾರ್ಜುನಾ.

ಟೀ. ಶಿವನ ಸ್ಥೂಲಸ್ವರೂಪದ ಕಳೆಯನೆ ಇಷ್ಟಲಿಂಗವೆಂದೆನಿಸಿ ತನುವಿಂಗೆ ಸಾಹಿತ್ಯವ ಮಾಡಿ, ಆ ಇಷ್ಟಲಿಂಗದ ಕಳೆಯ ಪ್ರಾಣಕ್ಕೆ ಪ್ರಸನ್ನತ್ವವ ಮಾಡಿಕೊಟ್ಟು ಪ್ರಾಣಲಿಂಗವೆಂದೆನಿಸಿ, ಆ ಪ್ರಾಣಲಿಂಗದ ಪ್ರಸನ್ನತ್ವವ ಕಾಬ ಜ್ಞಾನದ ಭಿನ್ನಭಾವವಳಿದು ಅಭಿನ್ನಜ್ಞಾನವನಿತ್ತು ಮಹಾಲಿಂಗವ ಸಾಹಿತ್ಯವ ಮಾಡಿ, ಎನ್ನ ತ್ರಿವಿಧಲಿಂಗಸ್ವರೂಪನ ಮಾಡಿದ ಗುರು ಚೆನ್ನಬಸವಣ್ಣನೆಂದು ಸಿದ್ಧರಾಮಯ್ಯದೇವರು ನುಡಿದರೆಂಬುದೀ ವಚನದ ತಾತ್ಪರ್ಯಾರ್ಥ. ೯೧

ವ. ಅಂದು ಆದಿಯಲಾದ ಆನಂದಬೀಜವನು ತಂದೆನ್ನ ಕರಭೂಮಿಯಲ್ಲಿ ಬಿತ್ತಿ ಅಂಕುರವು ಮೂಱಾಗಿ ಫಲವು ಆಱಾಗಲ್ಕೆ [೧]ಚಿಂತೆಗೆಟ್ಟೆವು[೧]. [೨]ಆಱಾಱ ಮೀಱಿ[೨] ನಿಶ್ಚಿಂತ ಪದದಲ್ಲಿ ಲಿಂಗದ ಉದಯವಾಗೆ ಸಚ್ಚಿದಾನಂದ ತಾ ಯೋಗಿನಾಥಾ!

ಟೀ. ಸತ್ತುಚಿತ್ತಾನಂದವಪ್ಪ ಪರಬ್ರಹ್ಮವನು ಶ್ರೀಗುರು ಕರಸ್ಥಲಕ್ಕೆ ತಂದುಕೊಟ್ಟ ಲಿಂಗವೆ ಇಷ್ಟ ಪ್ರಾಣ ಭಾವವಾಗಿ ತನುತ್ರಯವ ಕುಱಿತು ಮೂಱಾಯಿತ್ತು. ಇಂದ್ರಿಯಂಗಳ ಕುಱಿತು ಆಱಾಯಿತ್ತು. ಅಂತು ಅಂಗಮನಪ್ರಾಣೇಂದ್ರಿಯಂಗಳಲ್ಲಿ ಲಿಂಗವೇ ಪ್ರವೇಶಿಸಿ ಲಿಂಗಸ್ವರೂಪನಾದ ಶಿಷ್ಯಂಗೆ ಭವಬಂಧನದ ಚಿಂತೆಗೆಟ್ಟು ಹೋಗಿ ಮೂವತ್ತಾಱು ತತ್ತ್ವಂಗಳ ಮೇಲಿಪ್ಪ ಸಚ್ಚಿದಾನಂದ ಬ್ರಹ್ಮವು ತಾನೆಯೆಂಬುದೀ ವಚನದ ತಾತ್ಪರ್ಯಾರ್ಥ. ೯೨

ವ. ನೆರಥೇ(ದೇ?)ನು ಯೆಂಬಡೆ [೩]ನಾನೇನು ಎರವೆ[೩]?. ಶ್ರೀಗುರುಸ್ವಾಮಿ ಎನ್ನ ಕರಸ್ಥಲದಲ್ಲಿ ನಿನ್ನ ಸ್ಥಾಪ್ಯಂಗೊಳಿಸಿದ ಬಳಿಕ ಮಹಾ

೧ ಚಿಂತೆಗೆಂಟಿವು (ಎ) ೨ ಆಱಾಱನೆ ಮೀಱಿ (ಎ. ರಾ.) ೩ ನಾನೇನುಯುಱವೆ (ಎ)

ಜ್ಯೋತಿರ್ಮಯದಲ್ಲಿ ತಮಂಧವುಂಟೇ ? ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಮಹಾಸಮುದ್ರವನೊಡಗೂಡಿದ ಬಳಿಕ ಬೇಱೆ ನಾನೊಂದು ನದಿಯೆನಲುಂಟೇ?

ಟೀ. ಶ್ರೀಗುರು ಅಖಂಡ ಪರಂಜ್ಯೋತಿಲಿಂಗವ ಶಿಷ್ಯನ ಅಂಗ ಪ್ರಾಣ ಭಾವಂಗಳಲ್ಲಿ ಸಾಹಿತ್ಯವ ಮಾಡಿದ ಬಳಿಕ ಬೇಱೆ ಒಳಹೊಱಗೆನ್ನದೆ ಸರ್ವಾಂಗ ಲಿಂಗಸ್ವರೂಪಾಗಿ ಲಿಂಗವು ಒಳಕೊಂಡಿಪ್ಪ ಶರಣ ಲಿಂಗಕ್ಕೆ ಭಿನ್ನವಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೪೩

ವ. ಕರಸ್ಥಲದ ಅಚಲದಲ್ಲಿ ಸಕಲವ್ಯಾಪ್ತಿಯ ಕೂಡಿ ಅನುಕರಿಸಿ ಇಪ್ಪುದದು ಭೇದ ನೋಡಾ ! ಬಹಳ ಘನತೆಯನೊಂದು ಮಾಡಿ ಕರದೊಳಗಿಟ್ಟ ಭೇದ ನಿನ್ನಯ ರೂಪು ಯೋಗಿನಾಥಾ !

ಟೀ. ಶ್ರೀಗುರು ಕರುಣಿಸಿ ಅಖಂಡ ಪರಬ್ರಹ್ಮವ ಸೂಕ್ಷ್ಮವ ಮಾಡಿ ಕರಸ್ಥಲದ ಶಿಲಾಮೂರ್ತಿಯಲ್ಲಿ ನೆಲೆಗೊಳಿಸಿಯಿರ್ದ ಲಿಂಗಮೂರ್ತಿಯೇ ಶಿವನೆಂಬುದೀ ವಚನದ ತಾತ್ಪರ್ಯಾರ್ಥ. ೪೪

ವ. ಎಪ್ಪತ್ತೈದು ಗ್ರಾಮದೊಳಗೊಪ್ಪಿಪ್ಪ ನಿನ್ನುವನು ಉತ್ತಮಾಂಗಕೆ ತಂದು ಕರಸ್ಥಲದಲಿ ತತ್ತ್ವತುರಿಯಾರ್ಥದಿಂದತ್ತಲಾಗಿಹ ಬ್ರಹ್ಮ ಮತ್ತೆ ನಾ ನೀನಾದೆ ಯೋಗಿನಾಥಾ !

ಟೀ. ಎಪ್ಪತ್ತೈದು ತತ್ತ್ವಸ್ವರೂಪಾಗಿಪ್ಪ ಶರೀರವೆಂಬುದೇ ಗ್ರಾಮ. ಆ ಗ್ರಾಮದಲ್ಲಿಪ್ಪ ಜೀವನ ಪರಮಚೈತನ್ಯನಾಗಿಪ್ಪ ಶಿವಕಳೆಯ ಶ್ರೀಗುರು ಶಿಷ್ಯನ ಮಸ್ತಕದಲ್ಲಿ ಹಸ್ತವನಿರಿಸಿ ಮಥನಿಸಿ ತೆಗೆದು ಕರಸ್ಥಲದಲ್ಲಿರಿಸಿದ ಇಷ್ಟಲಿಂಗವೆಂಬ ತತ್ಪದವು ಆತ್ಮನೆಂಬ ಅಂಗವು ಸಂಬಂಧವಾಗಿ ಭೇದವಳಿದ ಅಱಿವಿಂದ ಪರಬ್ರಹ್ಮವಾದೆನೆಂಬುದೀ ವಚನದ ತಾತ್ಪರ್ಯಾರ್ಥ. ೪೫

ವ. ಜಗವ ನುಂಗಿದ ಬ್ರಹ್ಮ ಕರದೊಳಗೆ ಸ್ವಯವಾಗಿ ಎರಡೆಂಟನತಿಗಳೆದು ಸಾಯುಜ್ಯದಾ ಪದವ ತತ್ತ್ವಾರ್ಥವನು ಒದಗಲೀಯದೆ ಬಂದು ತುದಿಪದವನೆಯ್ದಿದೆನು ಯೋಗಿನಾಥಾ !

ಟೀ. ಅನಂತ ಬ್ರಹ್ಮಾಂಡಂಗಳನೊಳಕೊಂಡಿಪ್ಪ ಪರಬ್ರಹ್ಮವು ಇಷ್ಟಲಿಂಗವಾಗಿ ಶಿಷ್ಯನ ಕರಸ್ಥಲಕ್ಕೆ ಬಂದು ನಿತ್ಯನಾಗಿ ನೆಲಸಿ ಅಂಗಲಿಂಗ ಸಂಬಂಧವಾಯಿ

ತ್ತಾಗಿ ಎರಡೂ ಎಂಟೂ ಕೂಡಿ ಹತ್ತೆಂಬ ವಾಯುಪ್ರಾಣಗುಣವಳಿದು ಚತುರ್ವಿಧ ಪದಂಗಳು ಮೊದಲಾಗಿ ಮೂವತ್ತಾಱು ತತ್ತ್ವಂಗಳನೊಳಕೊಂಡಿಪ್ಪ ಪರಬ್ರಹ್ಮ ವಾದೆನೆಂಬುದೀ ವಚನದ ತಾತ್ಪರ್ಯಾರ್ಥ. ೪೬

ವ. [೧]ನೊಸಲಕ್ಷರವ[೧] ತೊಡದು ಭಸಿತವಮಂ ಬಾಸಣಿಸಿ ವಶವೃತ್ತಿ ಮಾಡಿ ದನು ಶಿವಲಿಂಗವಾ. [೨]ಈ ದೆಸೆಗೇಡಿಯೆನಿಸುವಾ[೨] ಹೊಸಬಂಟ ಕಾಯವನು ಭಸ್ಮವನು ಮಾಡಿದನು ಯೋಗಿನಾಥಾ.

ಟೀ. ಶ್ರೀಗುರು ಶಿಷ್ಯನ ಹಣೆಯ ದುರ್ಲಿಖಿತವನು ವಿಭೂತಿಯಿಂದ ತೊಡೆದು ಕಳೆದು, ಭವಿತನವ ಬಿಡಿಸಿ, ಶಿವಲಿಂಗವ ಸಾಕಾರವ ಮಾಡಿ ಕರಸ್ಥಲಕ್ಕೆ ಕೊಟ್ಟನೆಂಬುದು ಕಾಣಬಂದರ್ಥ. ಅಂತು ಕಡೆಮೊದಲಿಲ್ಲದ ಮಹಾಘನಲಿಂಗವು ನಿರಾಕಾರವಾಗಿರ್ದು ಭಕ್ತನ ಕುಱಿತು ಸಾಕಾರವಾದನೆಂಬುದೀಗ ' ಈ ದೆಸೆಗೇಡಿ ಯೆನಿಸುವ ಹೊಸಬಂಟ ಕಾಯವನು ' ಎಂಬ ಶಬ್ದಕ್ಕರ್ಥ. ಅಂತಪ್ಪ ತನ್ನ ಕರ ಸ್ಥಲದ ಲಿಂಗವು ಶರಣ ತಾನೆಯೆಂದಱಿದು ಭಿನ್ನಲಕ್ಷ್ಯವನಳಿದು ಅಭಿನ್ನಜ್ಞಾನಿ ಯಾಗಿಪ್ಪನೆಂಬುದೀಗ ' ಭಸ್ಮವನು ಮಾಡಿದನು ' ಎಂಬ ಶಬ್ದಕ್ಕರ್ಥ. ೪೭

ವ. ಇಹಲೋಕ ಪರಲೋಕವೆಂಬ ಸಂದಳಿಯಿತ್ತಯ್ಯ ಗುರುವಿನ ಹಸ್ತ ದಲ್ಲಿ ಸತ್ತು ಪಂಚಾಕ್ಷರಿಯಿಂದೆತ್ತಿದ ಕಾರಣದಲ್ಲಿ, ನಿತ್ಯವೂ ಲಿಂಗಾ ರ್ಚನೆಯ ಮಾಡುವ ಕಾರಣದಲ್ಲಿ, ನಿತ್ಯವೂ ವಿಭೂತಿ ರುದ್ರಾಕ್ಷಿಯ ಧಾರಣ ಮಾಡುವ ಕಾರಣದಲ್ಲಿ. ಇಹಲೋಕವೆಂದೇನು ? ಪರ ಲೋಕವೆಂದೇನು ? ಹಂಗು ಹಱಿದು ಒಂದಾದ ಬಳಿಕ ಮಲ ಮದಂಗಳು ಹಱಿದು ನಾನು ನೀನಾದ ಬಳಿಕ ಎಲೆ ಅಯ್ಯ, ಭಕ್ತರ ಸರ್ವಾಂಗ ಲಿಂಗತನು. ಭಕ್ತರಿಪ್ಪ ಲೋಕವೇ ರುದ್ರಲೋಕ, ಗುರುವೇ ಕಪಿಲಸಿದ್ಧಮಲ್ಲಿಕಾರ್ಜುನಯ್ಯಾ ನಿನ್ನ ಹಸ್ತವ ಮಸ್ತಕ ದಲ್ಲಿಟ್ಟಡಾಯಿತ್ತು.

ಟೀ. ಈ ವಚನ ಕಾಣಬಂದರ್ಥ. ೪೮

ವ. ನಿನ್ನೊಲುಮೆಯೆಂಬುದನು ನಿನ್ನವರೊಲ್ಲರಯ್ಯಾ ! ನೀನೆನ್ನ ಕರದಲ್ಲಿ ಇಲ್ಲವಾಗಿ ಚೆನ್ನಬಸವಣ್ಣಗುರು ಎನ್ನ ಪಾಲಿಸಲಾಗಿ ನಿಮ್ಮವರಿಗಾನು ಯೋಗ್ಯ ಯೋಗಿನಾಥಾ.

೧ ಹಣಿಯಕ್ಕರವ (ಎ., ರಾ.) ೨ ಇದ್ದೆಸೆಯುಗೆಡಿಸುವ (ಎ.)

ಟೀ. ಈ ವಚನ ಕಾಣಬಂದರ್ಥ. ೪೯

ವ. ದೃಷ್ಟವಪ್ಪ ಗುರುಕರುಣದಲ್ಲಿ ಇಷ್ಟಲಿಂಗವ ಸಂಬಂಧಿಸಿದ ಬಳಿಕ ಮತ್ತೆ ಯೋಗವುಂಟೇ ? ಸರ್ವಯೋಗಕ್ಕೆ ಶಿವಯೋಗ ಮಹಾಯೋಗವಾದ ಬಳಿಕ ಮತ್ತೆ ಕಿಱಿದು ಯೋಗಂಗಳೆಂದು ಪಾದೋದಕ ಪ್ರಸಾದಕ್ಕೆ ಹೊಱಗಾಗಿ ಗುರುವಾಜ್ಞೆಯ ಮೀಱಿದ [೧]ಗುರುದ್ರೋಹಿಗಳ ಎನ್ನತ್ತ[೧] ಹೊದ್ದಿಸದಿರಯ್ಯಾ ನಿಮ್ಮ ಧರ್ಮ. ದೀಕ್ಷಾತ್ರಯದಲ್ಲಿ ಸಂಪನ್ನರಾಗಿ ಪ್ರಸಾದಲೋಲುಪ್ತರಾಗಿ ಜಂಗಮವೆ ಲಿಂಗವೆಂಬವರ ಸಂಗದೊಳೆನ್ನನಿರಿಸಯ್ಯ ಕಪಿಲಸಿದ್ಧಮಲ್ಲಿಕಾರ್ಜುನ. ನಿಮ್ಮ ಧರ್ಮ.

ಟೀ. ಈ ವಚನ ಕಾಣಬಂದರ್ಥ. ೫೦

ವ. ಗುರುಲಿಂಗ ಬಸವಣ್ಣ. ಚರಲಿಂಗ ಬಸವಣ್ಣ. ಕರುಣಾಕರನು ಚೆನ್ನಬಸವಣ್ಣನು. ಶರಣಸ್ಥಲದ ಕಲ್ಪಸುಭೂಜಫಲವಿತ್ತ ಕರುಣಾಕರನು ಚೆನ್ನಬಸವಣ್ಣನು. ಆ ಬಸವಣ್ಣನ ಕೃಪೆಯಿಂದ ಆದಿ ಅಕ್ಷರವಱಿದೆ. ಸಾಧಿಸಿದೆ ನಿಮ್ಮುವನು ಕಪಿಲಸಿದ್ಧಮಲ್ಲಿಕಾರ್ಜುನಾ !

ಟೀ. ಗುರು ಲಿಂಗ ಜಂಗಮಸ್ವರೂಪವು ತಾನೆಯಾಗಿಪ್ಪ ಚೆನ್ನಬಸವಣ್ಣನು ತನ್ನ ಕೃಪೆಯಿಂದ ಶರಣಪದವನಿತ್ತನಾಗಿ ಶಿವೋಹಂ ಎಂಬ ಮರ್ಮವನಱಿದು ಶಿವನಾದೆನೆಂದು ಸಿದ್ಧರಾಮಯ್ಯದೇವರು ನುಡಿದರೆಂಬುದೀ ವಚನದ ತಾತ್ಪರ್ಯಾರ್ಥ. ೫೧

ಇಂತು ಸಿದ್ಧರಾಮಯ್ಯದೇವರು ಇಷ್ಟಲಿಂಗಸಂಬಂಧಿಗಳಾದ ವಚನ [೨]ಸಂಪೂರ್ಣ.[೨] ಮುಂದೆ ಎಲ್ಲಾ ಪುರಾತನರ ವಚನ :

ವ. ಅಯ್ಯಾ ಮರದೊಳಗೆ ಅಗ್ನಿಯಿರ್ದಡೇನಯ್ಯಾ ಮಥನಿಸಿ ತೋಱುವರಿಲ್ಲದನ್ನಕ್ಕರ ಕಾಣಬಹುದೇ ? ಜಗದೊಳಗೆ ಕೂಡೆ ಪರಿಪೂರ್ಣ ಶಿವನೆಂದಡೆ ಅಂತರಂಗದಲ್ಲಿ ಕಾಣಬಹುದೇ ? ಆದಿ ಲಿಂಗ ಅನಾದಿ

೧ ಗುರುದ್ರೋಹಿಗಳಿಗೆ ನರಕ ತಪ್ಪದು. ಅವರ ಎನ್ನತ್ತ (ಎ.) ೨ ಸಮಾಪ್ತ (ಹು.), ಮುಕ್ತ (ರಾ.)

ಶರಣನೆಂಬ ಭೇದವ ತಿಳುಹಿ, ನಿಜಪ್ರಾಣದೊಳಗಿಪ್ಪ ಸುಜ್ಞಾನ ಲಿಂಗವ ಕರಸ್ಥಲಕ್ಕೆ ತಂದು, ಆ ಕರಸ್ಥಲದ ಲಿಂಗವ ಎನ್ನ ಸರ್ವಾಂಗ ದೊಳಗೆ ಪ್ರತಿಷ್ಠಿಸಿ ತೋರಿ, ನಿತ್ಯ ನಿಜಲಿಂಗೈಕ್ಯದ ಹೊಲಬಿನ ¹ಹರಿವ¹ ತೋರಿಸಿ ಮರ್ತ್ಯಲೋಕದೊಳಗೆಲ್ಲಾ ಇಂದು ಮೊದ ಲಾಗಿ ಪ್ರಾಣಲಿಂಗದ ಘನವ ಹರಹಿ ಶಿವಭಕ್ತಿಯನುದ್ಧರಿಸಿದನು. ಕೂಡಲಸಂಗಮದೇವರಲ್ಲಿ ಚೆನ್ನಬಸವಣ್ಣನೆನ್ನನಾಗುಮಾಡಿ ಉಳು ಹಿದನಾಗಿ ಇನ್ನು ಮರ್ತ್ಯಲೋಕಕ್ಕೆ ಬಂದೆನಾದರೆ ಚೆನ್ನಬಸವಣ್ಣನ ಶ್ರೀಪಾದದಾಣೆ !

ಟೀ. ಏನೂ ಇಲ್ಲದಿರ್ದ ನಿಷ್ಕಲವಸ್ತುವಿನಲ್ಲಿ ಚಿತ್ತು ಉದಯಿಸಿತ್ತು. ಆ ²ಚಿತ್ತುವಿಂದ² ಮಹಾಲಿಂಗಸ್ವರೂಪವಾಯಿತ್ತಾಗಿ ಅಂತು ಲಿಂಗಕ್ಕಿಂದ ಅನಾದಿ ಚಿತ್ತುವಾದ ಕಾರಣ ಆ ಚಿತ ್ವರೂಪವೇ ಶರಣನೆಂಬುದೀಗ ' ಆದಿಲಿಂಗ ಅನಾದಿ ಶರಣ ' ನೆಂಬ ಶಬ್ದಕ್ಕರ್ಥ. ಅಂತು ತನ್ನಂತರಂಗವಾಗಿರ್ದ, ತನ್ನ ನಿಜವಪ್ಪ ಚಿತ್ಕಲಾಲಿಂಗವ ಪ್ರತ್ಯಕ್ಷವ ಮಾಡಿ ಕರಸ್ಥಲಕ್ಕೆ ತಂದು, ಆ ಲಿಂಗವ ತನ್ನ ನಿಜ ವೆಂದು ಭಿನ್ನ ಭಾವವ ಬಿಡಿಸಿ ಅಂಗವನೆಲ್ಲಾ ಲಿಂಗವ ಮಾಡಿದ ಗುರು ಚೆನ್ನ ಬಸವಣ್ಣನಿಂದ ಲಿಂಗವಾದೆನಾಗಿ ಇನ್ನು ತನಗೆ ಜನನ ಮರಣವಿಲ್ಲವೆಂದು ಬಸವಣ್ಣ ನುಡಿದನೆಂಬುದೀ ವಚನದ ತಾತ್ಪರ್ಯಾರ್ಥ. ೫೨

ವ. ಬಿಸಿಲ ಮುಂದಣ ಮಂಜಿನಂತಾಯಿತ್ತು. ದಿಟದ ಮುಂದಣ ಸಟೆ ಯಂತಾಯಿತ್ತು. ಪುಣ್ಯದ ಮುಂದಣ ಪಾಪದಂತಾಯಿತ್ತು. ಯೋಗಿಯ ಮುಂದಣ ಸಂಸಾರದಂತಾಯಿತ್ತು. ಧೀರನ ಮುಂದಣ ಹೇಡಿಯಂತಾಯಿತ್ತು. ಉರಗನ ಮುಂದಣ ಭೇಕನಂತಾಯಿತ್ತು. ಹರಿಯ ಮುಂದಣ ಕರಿಯಂತಾಯಿತ್ತು. ವಿವೇಕಿಯ ಮುಂದಣ ದುಃಖದಂತಾಯಿತ್ತು. ಪುಣ್ಯಾರಣ್ಯದಹನ ಭೀಮೇಶ್ವರನೆಂಬ ಸದ್ಗುರು ಕಾರುಣ್ಯವಾಗಲೊಡನೆ ಎನ್ನ ³ಸುತ್ತಿಹ ಪ್ರಪಂಚು ಸರ್ವವೂ ಓಡಿ ದವಯ್ಯಾ!³

ಟೀ. ಈ ವಚನ ಕಾಣಬಂದರ್ಥ. ೫೩

೧ ಹರಿವ (ಹು., ರಾ.) ೨ ಚಿತ್ತುವಿನಿಂದ (ಎ., ಹು.) ೩ ಸುತ್ತಿದ ಪ್ರಪಂಚು ಬಿಟ್ಟೋಡಿತ್ತಯ್ಯಾ (ಹು.)

ವ. ತನ್ನ ವಿನೋದಕ್ಕೆ ತಾನೆ ಸೃಜಿಸಿದ ಜಗತ್ತು. ತನ್ನ ವಿನೋದಕ್ಕೆ ತಾನೆ ಸುತ್ತಿದನದಕ್ಕೆ ಸಕಲ ಪ್ರಪಂಚ. ತನ್ನ ವಿನೋದಕ್ಕೆ ತಾನೆ ತಿರುಗಿಸಿದ ಅನಂತಭವದುಃಖಗಳಲ್ಲಿ. ಇಂತೆನ್ನ ಚೆನ್ನಮಲ್ಲಿಕಾರ್ಜುನನೆಂಬ ಪರಶಿವನು ತನ್ನ ಜಗದ್ವಿಲಾಸ ಸಾಕಾದ ಮತ್ತೆ ತಾನೇ ಪಱಿದ ನದಱ ಮಾಯಾಪಾಶವ.

ಟೀ. ಈ ವಚನ ಕಾಣಬಂದರ್ಥ. ೫೪

ವ. ಅಯ್ಯಾ ನೀ ಮಾಡಲಾದ ಜಗತ್ತು. ಅಯ್ಯಾ ನೀ ಮಾಡಲಾದ ಸಂಸಾರ. ಅಯ್ಯಾ ನೀ ಮಾಡಲಾದ ಮಱವೆ. ಅಯ್ಯಾ ನೀ ಮಾಡಲಾದ ದುಃಖ. ಅಯ್ಯಾ ನೀ ಬಿಡಿಸಿದರೆ ಬಿಟ್ಟಿತ್ತು ತಾಮಸ. ಅಯ್ಯಾ ನಾನೀ ಮಾಯೆಯ ಗೆದ್ದೆನೆಂಬ ಹಮ್ಮಿನ್ನೇಕೆ ಕೂಡಲಸಂಗಮದೇವಾ ?

ಟೀ. ಈ ವಚನ ಕಾಣಬಂದರ್ಥ. ೫೫

ವ. ಗುರು ಕರುಣಿಸೆ ಬಿಟ್ಟಿತ್ತು ಮಾಯೆ. ಗುರು ಕರುಣಿಸೆ ಬಿಟ್ಟಿತ್ತು ಮಱವೆ. ಗುರು ಕರುಣಿಸೆ ಬಿಟ್ಟಿತ್ತು ಪ್ರಪಂಚು. ಕೂಡಲ ಚೆನ್ನಸಂಗಮದೇವಾ, ಗುರುಕರುಣಿಸೆ ಬಿಟ್ಟಿತ್ತು ಎನ್ನ ಕರ್ಮಪಾಶ.

ಟೀ. ಈ ವಚನ ಕಾಣಬಂದರ್ಥ. ೫೬

ವ. ಹಸ್ತಾಬ್ಜಮಥನದಿಂದೊತ್ತಿ ಭಸ್ಮವ ಮಾಡಿ ಮತ್ತೆ ಪಂಚಾಕ್ಷರಿಯ ಜಪಾವಳಿಯ ಚಿತ್ತ ಶ್ರೋತ್ರದೊಳು ಮತ್ತೆ ಧಾರೆಯನೆಱೆಯೆ ಸತ್ಯವದು ನಿನ್ನಂತೆ ರಾಮನಾಥಾ !

ಟೀ. ಶ್ರೀಗುರು ಶಿಷ್ಯನ ಮಸ್ತಕದಲ್ಲಿ ಹಸ್ತವನಿರಿಸಿ ಚಿತ್ಕಲೆಯ ಪ್ರಭಾವಿಸಿ ತೆಗೆದು, ಆ ಕಲೆಯ ಪ್ರಣವ ಮಂತ್ರಸ್ವರೂಪವ ಮಾಡಿ ಶ್ರೋತ್ರಮುಖದಿಂದ ಆತನ ಚಿತ್ತದೊಳು ಕೂಡಿಸಲು ಆಕ್ಷಣವೆ ಶಿಷ್ಯ ಲಿಂಗವಾದನು. ಸತ್ಯವೆಂಬುದೀ ವಚನದ ತಾತ್ಪರ್ಯಾರ್ಥ. ೫೭

ವ. ಅಯ್ಯಾ ಎನ್ನ ಹೃದಯದಲ್ಲಿ ನ್ಯಸ್ತವಾಗಿಹ ಪರಮ ಚಿದ್ಬೆಳಗ ಹಸ್ತಮಸ್ತಕಸಂಯೋಗದಿಂದೊಂದುಗೂಡಿ ಮಹಾಬೆಳಗ

[1]ಮಾಡಿದಿರಲ್ಲಾ![1] ಅಯ್ಯಾ ಎನ್ನ ಮಸ್ತಕದೊಳಗೊಂದುಗೂಡಿದ ಮಹಾಬೆಳಗ ತಂದು ಭಾವದೊಳಗಿಂಬಿಟ್ಟಿರಲ್ಲಾ! ಅಯ್ಯಾ ಭಾವದೊಳಗೆ ಕೂಡಿದ ಮಹಾ ಬೆಳಗ ತಂದು ಮನಸ್ಸಿನೊಳಗಿಂಬಿಟ್ಟಿರಲ್ಲಾ ! ಅಯ್ಯಾ ಎನ್ನ ಮನಸ್ಸಿನೊಳು ಕೂಡಿದ ಮಹಾಬೆಳಗ ತಂದು ಎನ್ನ ಕಂಗಳೊಳಗಿಂಬಿಟ್ಟಿರಲ್ಲಾ ! ಅಯ್ಯಾ ಎನ್ನ ಕಂಗಳೊಳು ಕೂಡಿದ ಮಹಾ ಬೆಳಗ ತಂದು ಕರಸ್ಥಲದೊಳಿಂಬಿಟ್ಟಿರಲ್ಲಾ! ಅಯ್ಯಾ ಎನ್ನ ಕರಸ್ಥಲದಲ್ಲಿ ಥಳಥಳಿಸಿ ಬೆಳಗಿ ಹೊಳೆವುತ್ತಿಪ್ಪ ಅಖಂಡತೇಜವನೆ ಇಷ್ಟಲಿಂಗವೆಂಬ ದೃಷ್ಟವ ತೋಱಿ, ನಿಶ್ಚಯವ ಶ್ರೋತ್ರದಲ್ಲಿ ಸೃಜಿಸಿದಿರಲ್ಲಾ ! ಅಯ್ಯಾ ಎನ್ನ ಶ್ರೋತ್ರದಲ್ಲಿ ಸೃಜಿಸಿದ ಸುಮಂತ್ರದೊಳಗೆ ನೀವು ನಿಮ್ಮ ಮಹತ್ವವ ಹುದುಗಿದಿರಲ್ಲಾ ! ಅಯ್ಯಾ ಎನ್ನ ಆರಾಧ್ಯ ಕೂಡಲಸಂಗಮದೇವಾ, ಎನ್ನೊಳಗೆ ನಿಮ್ಮಿರವ ಈ ಪರಿಯಲ್ಲಿ ಕಾಣಿಸುತ್ತಿರ್ದಿರಲ್ಲಾ !

**ಟೀ.** ಈ ವಚನ ಕಾಣಬಂದರ್ಥ. ೫೮

**ವ. ಶ್ಲೋ:** ಪ್ರಥಮಂ ಗೂಢ ನಿರ್ನಾಮ ದ್ವಿತೀಯಂ ಚಿತ್‌ಸ್ವರೂಪಕಂ
ತೃತೀಯಂ ಚಿದ್ವಿಲಾಸಂ ಚ ಚತುರ್ಥಂ ಭಸ್ಮಧಾರಣಂ
ಅನಾದಿ ಶಾಶ್ವತಂ ನಿತ್ಯಂ ಚೈತನ್ಯಂ ಚಿತ್ಸ್ವರೂಪಕಂ
ಚಿದಂಗ ವೃಷಭಾಕಾರಂ ಚಿದ್‌ಭಸ್ಮ ಲಿಂಗಧಾರಣಂ

ಇಂತೆಂದುದಾಗಿ ಬಸವಾ ಬಸವಾ ಎನುತ್ತಿರ್ಪವರೆಲ್ಲರೂ ಬಸವನ ಘನವನಾರೂ ಅಱಿಯರಲ್ಲಾ ! ಅನಾದಿ ಪರಶಿವನಲ್ಲಿ ಅಂತರ್ಗತವಾಗಿರ್ದ ಮಹಾಪ್ರಕಾಶವೆ ಬಹಿರ್ಗತವಾಗಿ ಚಿತ್ತೆನಿಸಿ ಆ ಚಿತ್ತೇ ಚಿದಂಗಬಸವ. ಆ ಚಿದಂಗದಲ್ಲಿ ತೋಱಿದ ಚಿದ್ವಿಭೂತಿಯ ನೊಲಿದು ಧರಿಸಿದ ಶರಣ ಜ್ಯೋತಿರ್ಲಿಂಗವಪ್ಪುದು ತಪ್ಪದು ಕಾಣಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ !

**ಟೀ.** ಈ ಗ್ರಂಥದರ್ಥವೆ ವಚನದಲ್ಲಿ ಕಾಣಬಂದರ್ಥ. ೫೯

[1] ಮಾಡಿದಿರಲಾ (ಹು.)

ವ. ಅಯ್ಯಾ ಎನಗೆ ವಿಭೂತಿಯೇ ಕುಲದೈವ. ಅಯ್ಯಾ ಎನಗೆ ವಿಭೂತಿಯೇ ಮನೆದೈವ. ಅಯ್ಯಾ ಎನಗೆ ವಿಭೂತಿಯೇ ಸರ್ವಕಾರಣ. ಅಯ್ಯಾ ಎನಗೆ ವಿಭೂತಿಯೇ ಸರ್ವಸಿದ್ಧಿಯಯ್ಯ. ಕೂಡಲ ಚೆನ್ನ ಸಂಗಮದೇವ, ಶ್ರೀ ಮಹಾವಿಭೂತಿಯೆಂಬ ಪರಂಜ್ಯೋತಿ ನೀವಾದಿರಾಗಿ ಅಯ್ಯಾ ಎನಗೆ ವಿಭೂತಿಯೇ ಸರ್ವಸಾಧನವಯ್ಯಾ!

ಟೀ. ಈ ವಚನ ಕಾಣಬಂದರ್ಥ. ೬೦

ವ. ಅಯ್ಯಾ ಎನಗೆ ರುದ್ರಾಕ್ಷಿಯೇ ಸರ್ವಪಾವನ. ಅಯ್ಯಾ ಎನಗೆ ರುದ್ರಾಕ್ಷಿಯೇ ಸರ್ವಸಿದ್ಧಿ. ಅಯ್ಯಾ ನಿಮ್ಮ ಪಂಚವಕ್ತ್ರಂಗಳೇ ಪಂಚಮುಖ ರುದ್ರಾಕ್ಷಿಗಳಾದವಾಗಿ ಅಯ್ಯಾ ಕೂಡಲ ಸಂಗಮದೇವ, ಎನ್ನ ಮುಕ್ತಿಪಥಕ್ಕೆ ರುದ್ರಾಕ್ಷಿಯೇ ಮುಖ್ಯ ಸಾಧನವಯ್ಯಾ !

ಟೀ. ಈ ವಚನ ಕಾಣಬಂದರ್ಥ. ೬೧

ವ. ಶ್ರೀರುದ್ರಾಕ್ಷಿಯ ಧರಿಸಿದಾತನನೆ ಲಿಂಗವೆಂಬೆ. ಶ್ರೀರುದ್ರಾಕ್ಷಿಯ ಧರಿಸದ ಅಧಮನನೇ ಭವಿಯೆಂಬೆ. ಕೂಡಲ ಸಂಗಮದೇವಯ್ಯ, ಶ್ರೀರುದ್ರಾಕ್ಷಿಯೇ ದೈವವೆಂದು ನೆಱೆ ನಂಬಿ ಧರಿಸುವ ಭಕ್ತರ ನೀನೆಂಬೆ !

ಟೀ. ಈ ವಚನ ಕಾಣಬಂದರ್ಥ. ೬೨

ವ. ಶ್ರೀಪಂಚಾಕ್ಷರಿಯೆ ಸರ್ವಮಂತ್ರವೆಲ್ಲಕ್ಕೆ ಉತ್ಪತ್ತಿ ಸ್ಥಿತಿ ಲಯಸ್ಥಾನ. ಸರ್ವಕಾರಣವೆಲ್ಲವಕ್ಕೆಯೂ ಮೂಲ.

[೧]ಶ್ರುತಿ[೧]: ಸಪ್ತಕೋಟಿ ಮಹಾಮಂತ್ರಾ ಉಪಮಂತ್ರಾಸ್ತ್ವನೇಕಶಃ
ಪಂಚಾಕ್ಷರೇ ಪ್ರಲೀಯಂತೇ ಪುನಸ್ತತ್ರೈವ ನಿರ್ಗತಾಃ
ತಸ್ಮಿನ್ ವೇದಾಶ್ಚ ಶಾಸ್ತ್ರಾಣಿ ಮಂತ್ರೇ ಪಂಚಾಕ್ಷರೇ ಸ್ಥಿತಾಃ

೧ ಶ್ಲೋಕ (ಹು.)

ಎಂದುದಾಗಿ, ಇದುಕಾರಣ ಶ್ರೀಪಂಚಾಕ್ಷರಿಯುಳ್ಳ ೧ಭಕ್ತನೇ೧ ವೇದ ವಿತ್ತ. ಆತನೇ ಶಾಸ್ತ್ರವಾನ್. ಆ ಮಹಾಮಹಿಮನೇ ಪುರಾಣಿಕನುಂ, ಆತನೇ ಆಗಮಿಕನು. ಆತನೇ ಸರ್ವಜ್ಞಾನಿಯು ಉರಿಲಿಂಗಪೆದ್ದಿ ಪ್ರಿಯವಿಶ್ವೇಶ್ವರಾ.

ಟೀ. ಈ ವಚನ ಕಾಣಬಂದರ್ಥ. ೬೩

ವ. ವಿಪುಳ ವೇದ ವೇದಾಂತಸಾರ. ಸಕಲಲೋಕಜನಹಿತಾಧಾರ. ಸಪ್ತ ಕೋಟಿ ಮಹಾಮಂತ್ರಂಗಳ ತವರುಮನೆ. ಭಕ್ತಜನಜೀವಾನಂದ. ಅಖಿಳಾಗಮಸಂತಾನದ ಹರಣ. ಮುಕ್ತಿಗೆ ೨ಆಕಾರದ೨ ಸೋಪಾನ. ಪ್ರಣವಾಂಕುರ ಪಲ್ಲವ ಫಲರೂಪು. ತ್ರಿಣಯನನೊಲಿಸುವ ಕರ್ಣಾಭರಣ. ಹರನ ನಾಮದ ಸಾಕಾರದ ನಿಲವು. ಪರಮಪಂಚಬ್ರಹ್ಮಾನಂದ. ಪರತತ್ತ್ವದ ನಿತ್ಯದ ನೆಲೆ. ಹಂಪೆಯ ವಿರೂಪನ ತೋಱುವ ಗುರು ಪಂಚಾಕ್ಷರಿ!

ಟೀ. ಈ ವಚನ ಕಾಣಬಂದರ್ಥ. ೬೪

ವ. ಅಂತ್ಯಜನಾಗಲಿ ಅಗ್ರಜನಾಗಲಿ ಮೂರ್ಖನಾಗಲಿ ಪಂಡಿತನಾಗಲಿ ಜಪಿಸುವುದು ಪಂಚಾಕ್ಷರಿಯ. ಜಪದಿಂದ ರುದ್ರನಪ್ಪುದು ತಪ್ಪದು.

ಶ್ಲೋ. ಅಂತ್ಯಜೋಪ್ಯಗ್ರಜೋ ವಾಪಿ ಮೂರ್ಖೋ ವಾ ಪಂಡಿತೋಪಿ ವಾ
ಜಪೇತ್ ಪಂಚಾಕ್ಷರೀಂ ನಿತ್ಯಂ ಸ ರುದ್ರೋ ನಾತ್ರ ಸಂಶಯಃ

ಇದಕ್ಕೆ ೩ಸಪಥವ೩ ಮಾಡಿದೆನು ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ!

ಟೀ. ಈ ವಚನ ಕಾಣಬಂದರ್ಥ. ೬೫

ವ. ಹಿತವಿದೆ ಸಕಲ ಲೋಕದ ಜನಕ್ಕೆ. ಮತವಿದೆ ಶ್ರುತಿಪುರಾಣದ ಗತಿಯಿದೆ. ಭಕುತಿಯ ಬೆಳಗಿನುನ್ನತಿಯಿದೆ. ಶ್ರೀವಿಭೂತಿಯ ಧರಿಸಿದೊಡೆ ಭವವ ಹಱಿಸುವುದು. ದುರಿತ ಸಂಕುಳವ ನೊರಸುವುದು. ಹರನ ಸಾಲೋಕ್ಯ ಸಾಮೀಪ್ಯದಲ್ಲಿರಿಸುವುದು.

೧ ಶಿವಭಕ್ತನೆ (ಹು.) ೨ ಆಕಾರ (ಹು.) ೩ ಸತ್ಪಥವ (ಎ.)

ನಿರುತವಿದು ನಂಬು ಮನುಜಾ! ಜನನ ಭೀತಿಯ ಈ ವಿಭೂತಿಯ ಮರಣಭಯದಿಂದ ಅಗಸ್ತ್ಯ ಕಶ್ಯಪ ಜಮದಗ್ನಿಗಳಂದು ಧರಿಸಿದರು ನೋಡಾ! ಶ್ರೀಶೈಲಚೆನ್ನಮಲ್ಲಿಕಾರ್ಜುನನನೊಲಿಸುವ ವಿಭೂತಿ.

ಟೀ. ಈ ವಚನ ಕಾಣಬಂದರ್ಥ. ೬೬

ವ. ಹೆಸರಿಡಲಿಕಳವಲ್ಲ, ಹೆಸರುಗೆಟ್ಟಾ ಸೀಮೆ ಪಸರಿಸುತ್ತಿಕ್ಕು. ಮತ್ತಾ ನಂದದಾ ಹೆಸರಿಡುವ ಸೀಮೆಯನು ಗುರುವಾಗಿ ಪಸರಿಸಲು ವಸುಧೆ ಕಂಡಿತು ಒಂದು ಲಿಂಗರೂಪಾ! ಆನಂದರೂಪ ಕಪಿಲಸಿದ್ಧಮಲ್ಲಿ-ಕಾರ್ಜುನನ ಸೀಮೆಯೊಳಗಡಗಿಪ್ಪುದು ಅನಂತ ಬ್ರಹ್ಮಾಂಡವು.

ಟೀ. ವಾಙ್ಮನಕ್ಕೆ ಬಾರದ ಅಖಂಡಾನಂದಸ್ವರೂಪಾಗಿಪ್ಪ ಪರಬ್ರಹ್ಮವು ನಾಮರೂಪುಗಳಿಲ್ಲದೆ ಇರ್ದು ತನ್ನ ಸ್ವಲೀಲೆಯಿಂದ ತಾನೆ ಗುರುಸ್ವರೂಪವಾಗಿ ತನ್ನ ನಿಜಚೈತನ್ಯವ ತಾನೆ ನಾಮ ರೂಪಿಗೆ ತಂದು ಲಿಂಗವೆಂದೆನಿಸಿ ತೋಱಿದನಾಗಿ ಆ ಲಿಂಗದ ದರ್ಶನ ಸ್ಪರ್ಶನದಿಂದ ಜಗತ್ತು ಪುಣ್ಯರಾದರು. ಆ ಗುರು ಕರುಣೆ ಸಿದ ಇಷ್ಟಲಿಂಗವು ಅನಂತ ಬ್ರಹ್ಮಾಂಡಗಳನೊಳಕೊಂಡಿಪ್ಪ ಪರಬ್ರಹ್ಮವೆಂದಱಿದ ಶರಣನು ಪರಬ್ರಹ್ಮವೆಯಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೬೭

ವ. ಸೇವ್ಯವಾಗಿ ಸ್ವಯವಾದೆ. ಸಂಗಿಯಾಗಿ ನಿಸ್ಸಂಗಿಯಾದೆ. ಆನಂದ ನಾಗಿ ಅನಾಮಯನಾದೆ. ಸರ್ವದೊಳಗೂ ಆದಿ ಸಾದಾಖ್ಯತತ್ತ್ವವ ಮೀಱಿದೆ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ ನಿಜಸ್ವರೂಪನಱುಹಿ ಎನಗೆ ಚುಳುಕಾದೆ!

ಟೀ. ಪರಶಿವನು ತನ್ನ ಚಿದಂಶಿಕರಾದ ಆತ್ಮರುಗಳನೆ ಜಡದೇಹಸಂಬಂಧಿ ಗಳ ಮಾಡಿ ಸೇವಕರೆನಿಸಿ ತಾನು ಸೇವ್ಯನಾಗಿ ತನ್ನ ನಿಜಕ್ಕೆ ಭಂಗವಿಲ್ಲದೆ ಇರ್ದ ಶಿವನೆಂಬುದೀಗ 'ಸೇವ್ಯನಾಗಿ ಸ್ವಯವಾದೆ' ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮರುಗಳ ಅಂತರಂಗದಲ್ಲಿ ಪರಮ ಚಿತ್ಕಲಾಸ್ವರೂಪನಾಗಿ ಕೂಡಿರ್ದು ದೇಹ ಕರ್ಮಂಗಳಿಗೆ ಹೊಱಗಾಗಿಯಿರ್ದನು ಶಿವನೆಂಬುದೀಗ 'ಸಂಗಿಯಾಗಿ ನಿಸ್ಸಂಗಿ ಯಾದೆನೆ'ಂಬ ಶಬ್ದಕ್ಕರ್ಥ. ಅಂತು ಆತ್ಮರುಗಳ ನಾಮ ರೂಪಿಗೆ ತಂದು ಭವ ದುಃಖಿಗಳ ಮಾಡಿ ತಾನು ತನ್ನ ನಿಜಾನಂದವ ಹಿಂಗದೆ ವಿಶ್ವಾನಂದನಾಗಿರ್ದು ನಾಮರೂಪಿಗೆ ಬಾರದೆ ಭವರೋಗವಿರಹಿತನಾಗಿರ್ದ ಶಿವನೆಂಬುದೀಗ 'ಆನಂದ ನಾಗಿ ಅನಾಮಯನಾದೆ' ಎಂಬ ಶಬ್ದಕ್ಕರ್ಥ. ಪಂಚಸಾದಾಖ್ಯದಿಂದಾದ ಪಂಚ

ವಿಂಶತಿತತ್ತ್ವದೇಹದೊಳಗೆ ಪರಮ ಚೈತನ್ಯನಾಗಿರ್ದು ಆ ಪಂಚತತ್ತ್ವದೇಹ ಸಂಬಂಧಿಯಲ್ಲದಿರ್ದ ಶಿವನೆಂಬುದೀಗ ‘ ಸರ್ವದೊಳಗೂ ಆದಿ ಸಾದಾಖ್ಯತತ್ತ್ವವ ಮೀಱಿದೆ ’ ಎಂಬ ಶಬ್ದಕ್ಕರ್ಥ. ಅಂತು ಎನ್ನಲ್ಲಿರ್ದು ಎನಗೆ ಗೋಚರಿಸದೆ ಯಿರ್ದ ಮಹಾ ಘನವಸ್ತು ಎನ್ನ ಅಱಿವಿಗೆ ಗೋಚರವಾಗಿ ಕರಸ್ಥಲಕ್ಕೆ ಬಂದು ಸೂಕ್ಷ್ಮವಾಗಿ ತೋಱಿದೆಯೆಂಬುದೀಗ ‘ ನಿಜಸ್ವರೂಪನಱುಹಿ ಎನಗೆ ಚುಳುಕಾದೆ’ ಎಂಬ ಶಬ್ದಕ್ಕರ್ಥ. ೬೮

ವ. ಕಂಗಳ ಮುಂದಣ ಶ್ರೀಗುರುಲಿಂಗವು ಹಿಂಗಿದಡೆ ವ್ರತಕ್ಕೆ ಭಂಗವಾದುದೆಂದು ತಂದುಕೊಟ್ಟ ಶ್ರೀಗುರು ಕರಸ್ಥಲದಲ್ಲಿ ಪ್ರಾಣಲಿಂಗವ. ಅದ ಮುಟ್ಟಲೊಡನೆ ತನುಪ್ರಸಾದ ಮನಪ್ರಸಾದ ಧನಪ್ರಸಾದವಾಯಿತ್ತು. ಇಂತು ಸರ್ವಾಂಗಪ್ರಸಾದವಾಯಿತ್ತು ಕೂಡಲಸಂಗಮದೇವಾ!

ಟೀ. ಪರಬ್ರಹ್ಮವೆ ಗುರುಮೂರ್ತಿಯಾಗಿ ಬಂದು ಶಿಷ್ಯಂಗೆ ಪ್ರತ್ಯಕ್ಷವಾಗಿ ಕಾಣಿಸಿ ತನ್ನ ನಿಜಸ್ವರೂಪವ ಕಾಣದೆ ಮಱೆದಡೆ ಭವಿಯಾಗಿ ಭವಬಂಧನದಲ್ಲಿ ತೊಳಲುವನೆಂದು ಆ ಶಿಷ್ಯನ ನಿಜದ ನೀವಪ್ಪ ಪ್ರಾಣಕಳಾಲಿಂಗವ ಕರಸ್ಥಲಕ್ಕೆ ತಂದುಕೊಡಲು ಆ ಲಿಂಗಕಳೆಯನು ಅನನ್ಯಭಾವದಿಂದ ಮುಟ್ಟಿ ಭಾವಿಸಲೊಡನೆ ತನು ಮನ ಇಂದ್ರಿಯವಿಷಯ ಪದಾರ್ಥಂಗಳೆಲ್ಲಾ ಲಿಂಗಸ್ವರೂಪವಾಯಿತ್ತು ಶಿಷ್ಯಂಗೆಂಬುದೀ ವಚನದ ತಾತ್ಪರ್ಯಾರ್ಥ. ೬೯

ವ. ಗುರು ಕೊಟ್ಟ ಲಿಂಗ ತನ್ನ ನಚ್ಚಿನ ಲಿಂಗ ಆಯತವಾಯಿತ್ತಯ್ಯ. ಪ್ರಾಣ ನಚ್ಚಿನಿಂದ ಸ್ವಾಯತವಾಯಿತ್ತಯ್ಯಾ. ಈ ಉಭಯ ನಚ್ಚಿನಿಂದ ಸಂಗವಾಯಿತ್ತು ಕೂಡಲಚೆನ್ನಸಂಗಾ ನಿಮ್ಮಲ್ಲಿ.

ಟೀ. ಶಿಷ್ಯನ ಅಂತರಂಗದ ನಿಜ ಚಿತ್ಕಳೆಯನೆ ಇಷ್ಟಲಿಂಗವ ಮಾಡಿ ಗುರು ಕರಸ್ಥಲಕ್ಕೆ ತಂದುಕೊಟ್ಟಲ್ಲಿ ಗುರುಕೊಟ್ಟುದೇ ಲಿಂಗವೆಂಬ ವಿಶ್ವಾಸವೊಂದು, ತನ್ನ ಪ್ರಾಣಕಳೆಯೆಲ್ಲಾ ಇಷ್ಟಲಿಂಗವಾಯಿತ್ತೆಂಬ ವಿಶ್ವಾಸವೊಂದು, ಇಂತೀ ಉಭಯ ವಿಶ್ವಾಸ ಘಟಿಸಿ ನಚ್ಚಿದ ನಿಶ್ಚಯಭಾವದಿಂದ ಆತ್ಮನೆಂಬ ಅಂಗಕ್ಕೆ ಲಿಂಗದಲ್ಲಿ ಹಿಂಗದ ಕೂಟವಾಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೭೦

ವ. ಆತ್ಮಶುದ್ಧಿ ಗುರುಹಸ್ತವ ಮಸ್ತಕದಲ್ಲಿ ನ್ಯಸ್ತವಾದಂತೆ. ಸ್ಥಾನಶುದ್ಧಿ ಶಿವಲಿಂಗವಿದ್ದುದೆ ಅವಿಮುಕ್ತಕ್ಷೇತ್ರವಾಗಿ. ದ್ರವ್ಯಶುದ್ಧಿ ಶಿವಲಿಂಗ

ಸನ್ನಿಧಿ ಮಾತ್ರ ಪವಿತ್ರೀಕೃತವಾಗಿ. ಮಂತ್ರಶುದ್ಧಿ ಹರಮಂತ್ರಮಯವಾಗಿ. ಲಿಂಗಶುದ್ಧಿ ಲಿಂಗವು ನಿರ್ಮಳ ನಿರುಪಮ ನಿತ್ಯಸತ್ಯನಾಗಿ. ಇಂತು ಪಂಚಶುದ್ಧಿಯೆಂದಱಿದು ಪ್ರಾಣಲಿಂಗಸಂಬಂಧಿಯಾಗಿಪ್ಪುದೇ ಆಗಮ, ಬೇಱೆ ಆಗಮವಿಲ್ಲ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

**ಟೀ.** ಶ್ರೀಗುರು ಹಸ್ತವ ಮಸ್ತಕದಲ್ಲಿರಿಸಿದಾಗವೆ ಆತ್ಮಶುದ್ಧಿ. ಲಿಂಗವಿದ್ದುದೇ ಮುಕ್ತಿ ಕ್ಷೇತ್ರ. ಲಿಂಗನಿರೀಕ್ಷಣೆಯಿಂದವೆ ದ್ರವ್ಯಶುದ್ಧಿ. ಗುರು ಹೇಳಿದ ಕರ್ಣಮಂತ್ರದಿಂದವೆ ಮಂತ್ರಕಾಯವಾಯಿತ್ತು. ಗುರುಮುಟ್ಟಿ ಶಿಲಾಭಾವವಳಿದು ಶಿವಕಳೆಯ ಭಾವಿಸಿ ಕರಸ್ಥಲದಲ್ಲಿ ಕೊಟ್ಟುದೆ ಪ್ರಾಣಲಿಂಗ. ಇಂತಪ್ಪ ಗುರುಮುಖ ಕ್ರೀಯಿಂದಾದಡೆ ಪ್ರಾಣಲಿಂಗಸಂಬಂಧವಪ್ಪ ವೀರಶೈವನ ಪಂಚಶುದ್ಧಿ. ಇದಲ್ಲದೆ ಬೇಱೆ ಆಗಮ ಶ್ರುತಿ ಮತವಿಡಿದು ಬೇಱೆ ಪಂಚಶುದ್ಧಿಯ ಮಾಡಲಿಲ್ಲ ವೀರಶೈವಂಗೆಂಬುದೀ ವಚನದ ತಾತ್ಪರ್ಯಾರ್ಥ. ೭೧

**ವ.** ಎಂಬತ್ತುನಾಲ್ಕು ಲಕ್ಷ ಜೀವರಾಶಿಗಳೊಳು ಜನಿಸುವುದೇ ಜನಿತವೆಲ್ಲರಿಗೆ. ಆ ಜನ್ಮಾಂತರದ ಯೋನಿಗಳೊಳು [1]ಜನಿಸದಾತನೆ[1] ಯೋಗಿ. ಆ ಯೋಗಿಯು ಜನ್ಮಾಂತರವ ಕಳೆದ ಪರಿಯೆಂತೆಂದಡೆ : ಶ್ರೀಗುರು ಕಾರುಣ್ಯಕರಪಲ್ಲವಕ್ಕೆ ಬೆಸಲಾಯಿತ್ತಾಗಿ. ಅಂಥಾ ಯೋನಿಮುಖ ಜನ್ಮಾಂತರವ ಕಳೆದ ಶರಣಂಗೆ ಭವಮಾಲೆಯುಂಟೇ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ?

**ಟೀ.** ಗುರುವಿನ ಕರದಲ್ಲಿ ಜನಿಸಿದ ಶರಣನು ಲಿಂಗಸಂಬಂಧಿಯಾದನಾಗಿ ಶರಣಂಗೆ ಜನನ ಮರಣವಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೭೨

**ವ.** ಅಮೃತಸಾಗರದೊಳಗಿರ್ದು ಆಕಳ ಚಿಂತೆಯೇಕೆ ? ಮೇರುಮಂದಿರದೊಳಗಿರ್ದು [2]ಜರಗ[2] ತೊಳೆವ ಚಿಂತೆಯೇಕೆ ? ಶ್ರೀಗುರುವಿನೊಳಗಿರ್ದು ತತ್ತ್ವವಿದ್ಯದ ಚಿಂತೆಯೇಕೆ ? ಪ್ರಸಾದದೊಳಗಿರ್ದು ಮುಕ್ತಿಯ ಚಿಂತೆಯೇಕೆ ? ಕರಸ್ಥಲದಲ್ಲಿ ಲಿಂಗವಿರ್ದು ಮತ್ತಾವ ಚಿಂತೆಯೇಕೆ ಹೇಳಾ ಗುಹೇಶ್ವರಾ ?

**ಟೀ.** ಹಾಲಸಮುದ್ರದೊಳಗಿರ್ದಾತಂಗೆ ಆಕಳ ಚಿಂತೆಯಿಲ್ಲದಿರ್ದಂತೆ, ಹೇಮಗಿರಿಯಲ್ಲಿರ್ದಾತಂಗೆ ಸುವರ್ಣದ ಚಿಂತೆಯಿಲ್ಲದಿರ್ದಂತೆ, ಪರಮ ಜ್ಞಾನ

---

೧ ಜನಿಸಿದಾತನೆ (ಹು.)   ೨ ಜಲವ (ಹು.)

ಸ್ವರೂಪಿ ಗುರುಮೂರ್ತಿಯೋಗಿ ಕರುಣಿಸಿ ಬೋಧಿಸುತ್ತಿರ್ದ ಶಿಷ್ಯಂಗೆ ಬೇಱೆ ಆಗಮ ಶಾಸ್ತ್ರಂಗಳಿಂದ ತತ್ತ್ವಜ್ಞಾನವ ಸಾಧಿಸಬೇಕೆಂಬ ಚಿಂತೆಯ ಮಾಡಲಿಲ್ಲ. ಗುರುಮುಖದಿಂದೊದಗಿದ ಪ್ರಸಾದ ಭೋಗವೆ ಪರಮ ಪದವೆಂದಱೆದಾತಂಗೆ ಬೇಱೆ ಮುಕ್ತಿಯ ಚಿಂತಿಸಲಿಲ್ಲ. ಸರ್ವಫಲಪದಂಗಳ ಕೊಡುವ ಮಹಾ ಘನ ಲಿಂಗವೇ ಕರಸ್ಥಲಕ್ಕೆ ಬಂದಿರ್ದಾತಂಗೆ ಭವಬಂಧನವುಂಟೆಂಬ, ಮೋಕ್ಷವಾಗಬೇಕೆಂಬ ಚಿಂತೆಯ ಮಾಡಬಾರದು ಎಂಬುದೀ ವಚನದ ತಾತ್ಪರ್ಯಾರ್ಥ. ೭೩

ವ. ಆದಿಯ ಮುಟ್ಟಿ ಬಂದ ಶರಣಂಗೆ ಬಂಧವಿಲ್ಲಯ್ಯಾ ಜನ್ಮಕೋಟಿ ಕ್ರೂರಕರ್ಮವ ಮಾಡಿದವಂಗೆ. ಸೋಂಕಿನ ಸೊಬಗ ಹೇಳಲಿಲ್ಲ ಕೇಳಲಿಲ್ಲ ಕೇಳಾ. ಅಂಗದಲ್ಲಿ ಲಿಂಗ ಸೋಂಕಿದ ಶರಣಂಗೆ ಕಾಯದಲ್ಲಿ ಉಳ್ಳ ಕರಣಂಗಳು ಕಳಾಕುಳ ಕಳಾಭೇದವಯ್ಯ. ಸುಖದ ಸೋಂಕಿನ ಸೊಬಗ ಇನ್ನಾರಿಗೆಯೂ ಹೇಳಲಿಲ್ಲಾ ಗೊಹೇಶ್ವರಾ !

ಟೀ. ದೇಹಸಂಬಂಧದ ಮಱೆವೆಯಿಂದ ಪುಣ್ಯಪಾಪಂಗಳ ಮಾಡಿ, ಜನನ ಮರಣಕ್ಕೆ ಬರುತಿರ್ದ ಜೀವಂಗೆ ಶಿವಜ್ಞಾನೋದಯವಾಗಿ ತಾನು ಶಿವಾಂಶಿಕನೆಂದು ತನ್ನ ಆದಿಯ ತಿಳಿದ ಸಮ್ಯಗ್ಜ್ಞಾನವಿಡಿದು, ಗುರು ಕರಕಮಲದಿಂದುದಯಿಸಿ ಬಂದಾತಂಗೆ ಭವಬಂಧನವಿಲ್ಲವೆಂಬುದೀಗ 'ಆದಿಯ ಮುಟ್ಟಿಬಂದ ಶರಣಂಗೆ ಬಂಧನವಿಲ್ಲಯ್ಯ. ಜನ್ಮಕೋಟಿ ಕ್ರೂರಕರ್ಮವ ಮಾಡಿದವಂಗೆ' ಎಂಬ ಶಬ್ದಕ್ಕರ್ಥ. ಅಂತು ಜ್ಞಾನೋದಯದಿಂದ ಗುರುಕರುಣವಡೆದು ಲಿಂಗಾಂಗಸಂಬಂಧವಾದುದ ಉಪಮಿಸಬಾರದೆಂಬುದೀಗ 'ಸೋಂಕಿನ ಸೊಬಗ ಹೇಳಲಿಲ್ಲ' ವೆಂಬ ಶಬ್ದಕ್ಕರ್ಥ. ಅಂತು ಗುರುಕರುಣವಡೆದು ತನ್ನ ನಿಜವಪ್ಪ ಪರಬ್ರಹ್ಮವ ಪ್ರತ್ಯಕ್ಷವ ಮಾಡಿ ಕರಸ್ಥಲಕ್ಕೆ ತಂದು ಕೊಟ್ಟ ಇಷ್ಟಲಿಂಗದ ಕಳೆ ಅಂಗ ಪ್ರಾಣ ಭಾವಂಗಳಲ್ಲಿ ನೆಲೆಗೊಂಡು ಅಂಗ ಕರಣೇಂದ್ರಿಯಂಗಳೆಲ್ಲಾ ಮಹಾಘನಲಿಂಗವಾದುವು ಶರಣಂಗೆಂಬುದೀಗ 'ಅಂಗದಲ್ಲಿ ಲಿಂಗ ಸೋಂಕಿದ ಶರಣಂಗೆ ಕಾಯದಲ್ಲಿ ಉಳ್ಳ ಕರಣಂಗಳ ಕಳಾಕುಳ ಕಳಾಭೇದವಯ್ಯ' ಎಂಬ ಶಬ್ದಕ್ಕರ್ಥ. ಅಂತು ಅಂಗಲಿಂಗ ಸಂಬಂಧವಾಗಿ ಅಂಗ ಪ್ರಾಣೇಂದ್ರಿಯಂಗಳೆಲ್ಲಾ ಮಹಾಘನಲಿಂಗವಾಗಿರ್ದ ಶರಣನ ನಿಜಸುಖವನುಪಮೆಗೆ ತಂದು ಭಿನ್ನವಿಟ್ಟು ನುಡಿದು ಹೇಳಬಾರದೆಂಬುದೀಗ 'ಸುಖದ ಸೋಂಕಿನ ಸೊಬಗ ಇನ್ನಾರಿಗೂ ಹೇಳಲಿಲ್ಲ'ವೆಂಬ ಶಬ್ದಕ್ಕರ್ಥ. ೭೪

ವ. ಶ್ರುತಿತತಿಗಳ ಶಿರದ ಮೇಲೆ ಒಪ್ಪುತಿಪ್ಪ ಅತ್ಯತಿಷ್ಠದ್ದಶಾಂಗುಲನ ಕಂಡೆನಯ್ಯ ! ಅಣುವಿಂಗೆ ಅಣು ಮಹತ್ತಿಂಗೆ ಮಹತ್ತಾದ ತ್ರಿಣಯನ

ಮೂರ್ತಿಯ ಕಂಡೆನಯ್ಯಾ ! ವಾಙ್ಮನಕ್ಕಗೋಚರವಾದ ನಿರವಯ ಬ್ರಹ್ಮವ ಕಂಡೆನಯ್ಯಾ ! ನಿತ್ಯನೇಕೋರುದ್ರನದ್ವಿತೀಯನ ಕಂಡೆನಯ್ಯಾ ! ಎನ್ನ ಕರಸ್ಥಲದೊಳಗೆ ಮಹಾದಾನಿ ಸೊಡ್ಡಳನ ಕಂಡೆನಯ್ಯಾ !

ಟೀ. ಈ ವಚನ ಕಾಣಬಂದರ್ಥ. ೭೫

ವ. ಮಹಾಜ್ಯೋತಿಯ ಸೋಂಕಿದ ಉತ್ತಮಾಧಮ ತೃಣ ಮೊದಲಾದವೆಲ್ಲವೂ ಮಹಾಜ್ಯೋತಿಯಪ್ಪವು ತಪ್ಪದು ನೋಡಿರೇ ದೃಷ್ಟವ ! ಮತ್ತಂತಿಂತೆಂದುಪಮಿಸಲುಂಟೇ ? ಪರಂಜ್ಯೋತಿ ಸದ್ಗುರು ಲಿಂಗವು ಸೋಂಕಿದ ಸದ್ಭಕ್ತನ ಅಂತರಂಗ ಬಹಿರಂಗ ಸರ್ವಾಂಗ ಪರಂಜ್ಯೋತಿ ಲಿಂಗವು. ಮತ್ತೆ ದೇಹವೆಂದು ಪ್ರಾಣವೆಂದು ಆಧಾರ ಸ್ವಾಧಿಷ್ಟ ಮಣಿಪೂರಕ ಅನಾಹತ ವಿಶುದ್ಧಿ [೧]ಆಜ್ಞೆ[೧] ಬ್ರಹ್ಮರಂಧ್ರವೆಂದು ವರ್ಣ ದಳ ಛಾಯೆ ಅಧಿದೇವತೆಯೆಂದು ವಿವರಿಸಿ ನುಡಿಯಲುಂಟೇ ? ಪಂಚಭೌತಿಕದ ತನುವಿನಂತೆ ಪಂಚವಿಂಶತಿ ತತ್ತ್ವವನು ಸಂಬಂಧಿಸಿ ನುಡಿಯಲುಂಟೇ ಕೇವಲ ಜ್ಯೋತಿರ್ಮಯ ಲಿಂಗತನುವಿಂಗೆ ? ಸದ್ಭಕ್ತನ ಅಂಗ ಲಿಂಗ, ಮನ ಲಿಂಗ, ಪ್ರಾಣ ಲಿಂಗ, ಭಾವ ಲಿಂಗ. ಪಂಚವಿಂಶತಿ ತತ್ತ್ವಂಗಳೆಲ್ಲವೂ ಲಿಂಗತತ್ತ್ವ. ಇದುಕಾರಣ ಲಿಂಗವಂತನ ತನು ಸರ್ವಾಂಗಲಿಂಗವೆಂಬುದಯ್ಯ ಉರಿಲಿಂಗಪೆದ್ದಿಪ್ರಿಯವಿಶ್ವೇಶ್ವರಾ!

ಟೀ. ಈ ವಚನ ಕಾಣಬಂದರ್ಥ. ೭೬

ವ. ಆನು ಕಾಮಿಸುತಿಪ್ಪ ಸಾಲೋಕ್ಯವಿದೆ, ಸಾಮೀಪ್ಯವಿದೆ, ಸಾರೂಪ್ಯವಿದೆ, ಸಾಯುಜ್ಯವಿದೆ, ಧರ್ಮವಿದೆ, ಅರ್ಥವಿದೆ, ಕಾಮವಿದೆ, ಮೋಕ್ಷವಿದೆ. ಎನ್ನ ಧ್ಯಾನ ಜಪದಿಂದವೆ ಸಿದ್ಧಿಯಪ್ಪ ಮಹಾಸಿದ್ಧಿಯಿದೆ. ಆನೇನನಿಚ್ಛೈಯಿಸುವ ಇಚ್ಛೆಯೆಲ್ಲಾ ಇದೇ ಇದೇ ನೋಡಾ ! ಶ್ರೀಗುರುಕಾರುಣ್ಯದಿಂದ ಮಹಾವಸ್ತು ಕರಸ್ಥಲಕ್ಕೆ ಬಂದ ಬಳಿಕ ಸರ್ವಸುಖ ಇದೇ ಇದೇ ನೋಡಾ! ಇನ್ನು ಬಯಲ ಭ್ರಮೆಯೊಳಗೆ

೧ ಆಗ್ನೇಯ (ಹು. ರಾ.)

ಹೊಗಿಸದೆ ಇರಯ್ಯ ನಿಮ್ಮ ಬೇಡಿಕೊಂಬೆನು ನಿನಗೆ ಎನ್ನಾಣೆ ಉರಿ ಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ!

ಟೀ. ಈ ವಚನ ಕಾಣಬಂದರ್ಥ. ೭೭

ವ. 'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ' ಎಂದೆನಿಸುವ ಲಿಂಗವು, 'ಅತ್ಯತಿಷ್ಠದ್ದಶಾಂಗುಲಂ' ಎಂದೆನಿಸುವ ಲಿಂಗವು, 'ಚಕಿತಮಭಿದತ್ತೇ' ಎಂದೆನಿಸುವ ಲಿಂಗವು. 'ಅಣೋರಣೀಯಾನ್ ಮಹತೋ ಮಹೀಯಾನ್' ಎಂದೆನಿಸುವ ಲಿಂಗವು, 'ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಂ' ಎಂದೆನಿಸುವ ಲಿಂಗವು, 'ಏಕಮೂರ್ತಿಃ ತ್ರಿಧಾಭೇದಂ' ಎಂದೆನಿಸಿ ಶ್ರೀಗುರು ಲಿಂಗ ಜಂಗಮ ರೂಪಾಗಿ 'ಇಷ್ಟಃ ಪ್ರಾಣಸ್ತಥಾ ಭಾವಂ ತ್ರಿಧಾಪ್ಯೈಕ್ಯಮ್'ಎಂದು ತ್ರಿವಿಧವೇಕೀಭವಿಸಿ ಲಿಂಗರೂಪಾಗಿ ಎನ್ನ ಕರಸ್ಥಲಕ್ಕೆ ಬಂದು ಕರತಳಾಮಳಕದಂತೆ ತೋಱುತ್ತಿದ್ದಾನೆ! ಆಹಾ ಎನ್ನ ಪುಣ್ಯವೇ! ಆಹಾ ಎನ್ನ ಭಾಗ್ಯವೇ! ಆಹಾ ಎನ್ನ ಸತ್ಯವೇ! ಆಹಾ ಎನ್ನ ನಿತ್ಯವೇ! ಶಿವ ಶಿವ ಮಹಾದೇವ ನೀವೇ ಬಲ್ಲಿರಿ ಉರಿ ಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ!

ಟೀ. ಈ ವಚನ ಕಾಣಬಂದರ್ಥ. ೭೮

ವ. ಸತ್ತುರೂಪು ಲಿಂಗ. ಚಿತ್ತುರೂಪು ಜಂಗಮ. ಆನಂದರೂಪು ಪ್ರಸಾದ. ಇಂತೀ ತ್ರಿವಿಧವಾದ ಅಱಿವನು ಶ್ರೀಗುರು ಇಷ್ಟಲಿಂಗದಲ್ಲಿ ತೋಱಿ ಬಿಜಯಂಗೈಸಿ ಕೊಟ್ಟ ಬಳಿಕ ಸತ್ತು ಚಿತ್ತಾನಂದವೆಂಬ ೧ಬಟ್ಟಬಯಲಲಿಕ್ಕಯ್ಯ೧ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ?

ಟೀ. ಈ ವಚನ ಕಾಣಬಂದರ್ಥ. ೭೯

ವ. ತತ್‌ಪದ ಲಿಂಗವೆಂದಱುಹಿ, ತ್ವಂ ಪದ ಅಂಗವೆಂದಱುಹಿ, ಅಸಿಪದ ಪ್ರಾಣವೆಂದಱುಹಿ, ಅಂಗವೆ ಲಿಂಗ, ಲಿಂಗವೆ ಪ್ರಾಣವೆಂದು ಶ್ರೀಗುರು

೧ ಬಟ್ಟಬಯಲ ಮಾತೇಕಯ್ಯ (ಎ. ರಾ.)

ಇಷ್ಟಲಿಂಗವ ಕೊಟ್ಟು ದೃಷ್ಟಲಿಂಗವ ಮಾಡಿದ ಬಳಿಕ ತತ್ತ್ವಮಸಿ ಪದ ನಿಮ್ಮ ಶರಣರು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ !

ಟೀ. ಈ ವಚನ ಕಾಣಬಂದರ್ಥ. ೮೦

ವ. ಅಂತರಂಗದೊಳಗಿರ್ದ ನಿರವಯಲಿಂಗವನು ಸಾವಯಲಿಂಗವ ಮಾಡಿ ಶ್ರೀಗುರುಸ್ವಾಮಿ ಕರಸ್ಥಲಕ್ಕೆ ತಂದುಕೊಟ್ಟ ಲಿಂಗವು ಅಂತರಂಗವ ನಾವರಿಸಿ, ಅಂತರಂಗದ ಕರಣಂಗಳೆ ಕಿರಣಂಗಳಾಗಿ, ಆ ಬೆಳಗುವ ಚಿದಂಶವೆ ಪ್ರಾಣಲಿಂಗವು.. ಆ ಮೂಲಚೈತನ್ಯವೆ ಭಾವಲಿಂಗವು. ಇದನಱಿದು ನೋಡುವ ನೋಟ ಭಾವಪೂರ್ಣವಾಗಿ ತಾನು ತಾನಹ ನಲ್ಲದೆ ಇದಿರಿಟ್ಟು ತೋಱುವದಿಲ್ಲವಾಗಿ ಅಖಂಡ ಪರಿಪೂರ್ಣಮಪ್ಪ ನಿಲವು ತಾನೆ ಕೂಡಲಸಂಗಮದೇವಾ!

ಟೀ. ಈ ವಚನ ಕಾಣಬಂದರ್ಥ. ೮೧

ವ. ಅಂಗೈಯ ಲಿಂಗವ ಕಂಗಳು ನೋಡಿ ಮನ ಹಾರೈಸಿದಲ್ಲಿ ಅಂಗೇಂದ್ರಿಯಂಗಳೆಲ್ಲಾ ಲಿಂಗೇಂದ್ರಿಯಂಗಳಾದವು. ಅಂಜದಿರು ಮನವೆ ಲಿಂಗವು ನಿನಗೆ ದೂರವೆಂದು. ಮನೋಮಧ್ಯದಲ್ಲಿಪ್ಪ, ಅಂಗದ ಕಂಗಳಲ್ಲಿಪ್ಪ, ಪ್ರಾಣದ ಭಾವದಲ್ಲಿಪ್ಪ. ಅಂಗ ಪ್ರಾಣ ಭಾವ ಭರಿತ ಸರ್ವಾಂಗಲಿಂಗವಾದ ಬಳಿಕ ಲಿಂಗಮಧ್ಯಪ್ರಾಣ, ಪ್ರಾಣಮಧ್ಯಲಿಂಗ. ಇದು ಕಾರಣ ಉತ್ಪತ್ತ್ಯಸ್ಥಿತಿಲಯ ಉಂಟೆಂದು ಅಂಜದಿರು. ಅಂಜಿಕೆಯಿಲ್ಲ ಅಳುಕಿಲ್ಲ ಬಂದುದೆ ಲಿಂಗದ ಲೀಲೆ. ಇದ್ದ ಇರವೆ ಲಿಂಗಾನಂದ. ಭಾವ ಲೀಯ್ಯವಾದುದೆ ಲಿಂಗದ ನಿರವಯವು. ಇದು ಸತ್ಯ ಶಿವಬಲ್ಲ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ!

ಟೀ. ಈ ವಚನ ಕಾಣಬಂದರ್ಥ. ೮೨

ವ. ಲಿಂಗವನಱಿಯದೆ ಏನನಱಿದಡೆಯೂ ಫಲವಿಲ್ಲ. ಲಿಂಗವನಱಿದ ಬಳಿಕ ಮತ್ತೇನನಱಿದಡೆಯೂ ಫಲವಿಲ್ಲ. ಸರ್ವಕಾರಣ ಲಿಂಗವೆಂದುದಾಗಿ ಲಿಂಗವನೆ ಅಱಿದೆ. ಅಱಿದಱಿದು ಲಿಂಗಸಂಗವನೆ ಮಾಡುವೆ. ಸಂಗಸುಖದೊಳಗೋಲಾಡುವೆ ಗೊಹೇಶ್ವರಾ.

ಟೀ. ಲಿಂಗದ ಬೆಳಗ ಕಾಬ ಸಮ್ಯಗ್‌ಜ್ಞಾನವಿಲ್ಲದೆ ವೇದಾಗಮಂಗಳಿಂದ ಏನನಱಿದಡೆಯೂ ಶಿವಪದ ಸಾಧ್ಯವಾಗಲಱಿಯದು ಎಂಬುದೀಗ ‘ ಲಿಂಗವನಱಿಯದೆ ಮತ್ತೇನನು ಅಱಿದಡೆಯೂ ಫಲವಿಲ್ಲ ’ ಎಂಬ ಶಬ್ದಕ್ಕರ್ಥ. ಅಂತಪ್ಪ ಸಮ್ಯಗ್‌ಜ್ಞಾನೋದಯವಾಗಿ ಲಿಂಗದ ಬೆಳಗ ಕಂಡು ನಿಶ್ಚೈಸಿದ ಅಱುವಿಂಗೆ ಬಳಿಕ ವೇದಾಗಮಂಗಳಿಂದ ವಿಚಾರಿಸಿದೆನೆಂದಡೆ ಸಮ್ಯಗ್‌ಜ್ಞಾನ ಹುಟ್ಟಿ ನಿಶ್ಚೈಸಿ ನಿಜದಱಿವು ಕೆಡುವುದೆಂಬುದೀಗ ‘ ಲಿಂಗವನಱಿದ ಬಳಿಕ ಮತ್ತೇನನಱಿದಡೆಯೂ ಫಲವಿಲ್ಲ ’ ವೆಂಬ ಶಬ್ದಕ್ಕರ್ಥ. ಅಂತು ಪ್ರಭುದೇವರು ತಮ್ಮ ಸಮ್ಯಗ್‌ಜ್ಞಾನದಿಂದ ಸರ್ವ ತತ್ತ್ವಂಗಳಿಗೆ ಕಾರಣವಾದುದು ಲಿಂಗತತ್ತ್ವವೆಂದಱಿದು ಲಿಂಗಾಂಗಸಂಗವ ಹಿಂಗದೆ ಕೂಡಿ ಲಿಂಗಸುಖಾನಂದವ ಪಡೆದನೆಂಬುದೀಗ ‘ ಸರ್ವಕಾರಣ ಲಿಂಗವೆಂದುದಾಗಿ ಲಿಂಗವನೆ ಅಱಿದ. ಅಱಿದಱಿದು ಲಿಂಗಸಂಗವನೆ ಮಾಡುವೆ ಲಿಂಗಸುಖದೊಳೋಲಾಡುವೆ’ನೆಂಬ ಶಬ್ದಕ್ಕರ್ಥ. ೮೩

ವ. ಇನ್ನು ಮುಕ್ತನೆಂದಡೆ ಮುನ್ನವೇನು ಬದ್ಧನೇ ? ಮುನ್ನ ಮುನ್ನವೆ ಮುಕ್ತನು. ಒಂದು ಕಾರಣದಿಂದ ಬದ್ಧನಾದಡೇನು ಗುರುಕಾರುಣ್ಯದಿಂದ ಮುಕ್ತನು. ಗುರುಕರುಣದಿಂದ ಗುರುವಾದ ಒಳಿಕ ಬದ್ಧಮುಕ್ತನೆನಲುಂಟೇ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ?

ಟೀ. ಶಿವಾಂಶಿಕವಾದ ಆತ್ಮನು ತಾನು ಶಿವನೆಂಬುದ ಶಿವಾಜ್ಞೆಯಿಂದ ಮಱೆದು ದೇಹಸಂಬಂಧಿಯಾಗಿರ್ದಲ್ಲಿ ಶಿವನೆ ಗುರುಮೂರ್ತಿಯಾಗಿ ಕರುಣಿಸಿ ಲಿಂಗಾಂಗಸಂಬಂಧವ ಮಾಡಿದ ಬಳಿಕ ಮುನ್ನಿನಂತೆ ಶಿವನಾದುದು ಸತ್ಯ, ಮರಳಿ ದೇಹಿಯಾಗಿ ಭವಕ್ಕೆ ಬಾರನೆಂಬುದೀ ವಚನದ ತಾತ್ಪರ್ಯಾರ್ಥ. ೮೪

ವ. ಎಸವಿನ ಗುರುಹೋಗಿ ಶಿಶುವಧೆಯ ಮಾಡಿದ. ಶಿಶು ಹೋಗಿ ಮರಳಿ ಗುರುವ ಕೊಂಡಡೆಯು ಹೆಸರುಗೊಂಬ ಅಣ್ಣಗಳು ನೀವು ಕೇಳಿರೋ! ಇವರಿಬ್ಬರು ಸತ್ತ ಠಾವನೊಬ್ಬರು ಅಱಿಯರು, ನಿರ್ವಾಯಲೆಂದಾತ[1]ನಂಬಿಗ[1] ಚೌಡಯ್ಯ.

ಟೀ. ದಿಗ್ದೆಸೆಗಳನೊಳಕೊಂಡಿಪ್ಪ ಅಖಂಡ ಚಿತ್ಪ್ರಕಾಶವೆ ಗುರುಮೂರ್ತಿಯಾಗಿ ಬಂದ ಶಿಷ್ಯಕಾರಣವೆಂಬುದೀಗ ‘ ಎಸವಿನ ಗುರುಹೋಗಿ ’ ಎಂಬ ಶಬ್ದಕ್ಕರ್ಥ. ಅಂತು ಗುರು ಕರುಣಿಸಿ ಶಿಷ್ಯನ ಜೀವತತ್ತ್ವವನಳಿದು ಶಿವತತ್ತ್ವವ

೧ ನಂಬಿಗರ (ಹು.)

ಮಾಡಿದನೆಂಬುದೀಗ ' ಎಸವಿನ ಗುರು ಹೋಗಿ ಶಿಶುವಧೆಯ ಮಾಡಿದ ' ನೆಂಬ ಶಬ್ದಕ್ಕರ್ಥ. ಅಂತು ಜೀವನ ಧರ್ಮವಳಿದು ಶಿವ ತಾನೆಂದಱಿದ ಶಿಷ್ಯನು ಗುರುವೆಂಬ ಲಕ್ಷ್ಯದ ಭಿನ್ನವಳಿದು ಅಭಿನ್ನಜ್ಞಾನಿಯಾಗಿರ್ದನೆಂಬುದೀಗ ' ಶಿಶು ಹೋಗಿ ಮರಳಿ ಗುರುವ ಕೊಂದಡೆಯು ' ಎಂಬ ಶಬ್ದಕ್ಕರ್ಥ. ಇಂತಪ್ಪ ಗುರು ಶಿಷ್ಯರಿಬ್ಬರು ಸತ್ತುವಪ್ಪ ಪರಬ್ರಹ್ಮವೆಯಾಗಿಪ್ಪರು. ಅಂತಪ್ಪ ಪರಬ್ರಹ್ಮದ ನಿಲವ ಗುರುಶಿಷ್ಯರೆಂಬ ನಾಮರೂಪುವಿಡಿದಱಿಸುವ ಭಿನ್ನಜ್ಞಾನಿಗಳಱಿಯರೆಂಬುದೀಗ ' ಹೆಸರುಗೊಂಬ ಅಣ್ಣಗಳು ನೀವು ಕೇಳಿರೇ! ಇವರಿಬ್ಬರು ಸತ್ತ ಠಾವ ಒಬ್ಬರೂ ಅಱಿಯರ್‍ರು ನಿರ್ವಯಲೆಂದಾತ'ನೆಂಬ ಶಬ್ದಕ್ಕರ್ಥ. ೮೫

**ವ.** ಸತ್ತು ಗುರುವಿನ ಕಾರುಣ್ಯವ ಸತ್ತು ಕೊಂಬ ಶಿಷ್ಯಂಗೆ ಭಕ್ತಿ ವಿಸ್ತರಿಸುವುದು, ಕರ್ತಾರ ನೆಲೆಗೊಂಬ. ಕೊಟ್ಟುದನು ಮಱೆದು ಬಳಸುವ ಮಿಟ್ಟೆಯ ಭಂಡರನೇನೆಂಬೆ ಹೇಳಾ ಕಲಿದೇವರ ದೇವಯ್ಯಾ ?

**ಟೀ.** ಸತ್ತುವೆಂದರೆ ಪರಬ್ರಹ್ಮ ಆ ಪರಬ್ರಹ್ಮವೇ ಗುರುಮೂರ್ತಿಯಾದನೆಂಬುದೀಗ ' ಸತ್ತು ಗುರು ' ವೆಂಬ ಶಬ್ದಕ್ಕರ್ಥ. ಅಂತಪ್ಪ ಗುರುಕರುಣವ ಪಡೆದ ಶಿಷ್ಯನು ತಾನು ಬ್ರಹ್ಮಾಂಶಿಕನೆಂದಱಿದು ಗುರೂಪಾವಸ್ಥೆಯಂ ಮಾಡಿ ಉಪದೇಶವ ಪಡೆದನೆಂಬುದೀಗ ' ಸತ್ತುಕೊಂಬ ಶಿಷ್ಯಂಗೆ ' ಎಂಬ ಶಬ್ದಕ್ಕರ್ಥ. ಅಂತು ಸಮ್ಯಗ್‌ಜ್ಞಾನದಿಂದ ತನ್ನ ನಿಜವನಱಿದು ಕೂಡುವ ಅವಸ್ಥೆಯಿಂದ ಉಪದೇಶವಡೆದ ಶಿಷ್ಯಂಗೆ ಸಹಜಭಕ್ತಿ ನೆಲೆಗೊಂಬುದು, ಆತನ ಕರಸ್ಥಲದಲ್ಲಿ ಲಿಂಗವು ನೆಲೆಗೊಂಡಿಹುದು ಎಂಬುದೀಗ ' ಭಕ್ತಿವಿಸ್ತರಿಸುವುದು ಕರ್ತಾರ ನೆಲೆಗೊಂಬ ' ನೆಂಬ ಶಬ್ದಕ್ಕರ್ಥ. ಅಂತಲ್ಲದೆ ಗುರು ಕರುಣಿಸಿ ಕೊಟ್ಟ ಲಿಂಗವು ತನ್ನ ನಿಜವಪ್ಪ ಪರಬ್ರಹ್ಮವೆಂದಱಿಯದೆ ಬೇಱೆ ಪರಬ್ರಹ್ಮವನಱಿದು ಸಾಧಿಸಿಹೆನೆಂಬವರೆಲ್ಲಾ ಜಗದಱಿಕೆಯ ಭ್ರಷ್ಟರೆಂಬುದೀಗ ' ಕೊಟ್ಟುದ ಮಱೆದು ಬಳಸುವ ಮಿಟ್ಟೆಯ ಭಂಡರನೇನೆಂಬೆ ಹೇಳಾ ' ಎಂಬ ಶಬ್ದಕ್ಕರ್ಥ. ೮೬

**ವ.** ಗುರು ಶಿಷ್ಯಸಂಬಂಧವನಱಿಸಲೆಂದು ಹೋದರೆ ತಾನೆ ಗುರುವಾದ, ತಾನೆ ಶಿಷ್ಯನಾದ, ತಾನೆ ಲಿಂಗವಾದ, ತಾನೆ ಜಂಗಮವಾದ. ಗೊಹೇಶ್ವರಾ ನಿಮ್ಮ ಶರಣನ ಕಾಯದ ಕೈಯಲ್ಲಿ ಲಿಂಗವ ಕೊಟ್ಟರೆ ಭಾವ ಬತ್ತಲೆಯಾಯಿತ್ತು!

**ಟೀ.** ಜ್ಞಾನೋದಯದಿಂದ ಮೋಕ್ಷಾಪೇಕ್ಷನಾಗಿ ಗುರೂಪಾವಸ್ಥೆಯ ಮಾಡೆ ಗುರು ಕರುಣಿಸಿ ಶಿಷ್ಯನ ಅಂತರಂಗದಲ್ಲಿ ಸ್ವರೂಪಾಗಿರ್ದ ಪರಬ್ರಹ್ಮವ

ಕರಸ್ಥಲಕ್ಕೆ ತಂದುಕೊಟ್ಟು ಲಿಂಗಾಂಗಸಂಬಂಧವ ಮಾಡಿದ ಬಳಿಕ ಅಂಗಪ್ರಾಣಂಗಳೆಲ್ಲಾ ಲಿಂಗವೆಯಾಗಿ ಶಿಷ್ಯನೇ ಲಿಂಗವಾದ ಕಾರಣ ಗುರು ಲಿಂಗ ಜಂಗಮವೆ ಶಿಷ್ಯನೆಂಬ ದ್ವೈತವಾಗಿ ತೋಱುವ ಭಿನ್ನ ಲಕ್ಷವಿಲ್ಲದೆ ಹೋಯಿತ್ತು ಶರಣನ ಭಾವಕೆಂಬುದೀ ವಚನದ ತಾತ್ಪರ್ಯಾರ್ಥ. ೮೭

ವ. ಗಂಡಂಗಿಂದ ಮುನ್ನ [೧]ಹೆಂಡಿತಿ[೧] ಹುಟ್ಟಿ ಗಂಡಂಗಿಂದ ಕಿಱಿಯಳಾದಳು. ಆ [೧]ಹೆಂಡಿತಿ[೧] ಒಡಹುಟ್ಟಿದಳಾದಳೆಂಬುದ ಕೇಳಿ ಆ ಗಂಡ ಸಂಗವ ಮಾಡಿದರೆ ಇಬ್ಬರಿಗೊಂದು ಮಗು ಹುಟ್ಟಿತ್ತಲ್ಲಾ ! ಹುಟ್ಟಿದ ಮಗುವ ತಾಯಿ ಮುದ್ದಾಡಿಸಿದರೆ ತಾಯ ತರ್ಕೈಸಿತ್ತು ಇದೇನು ಹೇಳಾ ? ತಾಯಿಯೆದ್ದು ಪತಿಭಕ್ತಿಯ ಮಾಡಿತ್ತ ಕಂಡು ಗುಹೇಶ್ವರಲಿಂಗಕ್ಕೆ ಭಕ್ತಿಪರಿಣಾಮವಾಯಿತ್ತು.

ಟೀ. ಗುರುವೆ ಪತಿಯಾಗಿ ಶಿಷ್ಯನೇ ಸತಿಯಾದ ಕಾರಣ 'ಗಂಡ ಹೆಂಡಿತಿ' ಎಂಬ ಶಬ್ದಕ್ಕರ್ಥ. ಆ ಗುರುವಿನಿಂದ ಮುನ್ನ ಶಿಷ್ಯಂಗೆ ಜ್ಞಾನೋದಯವಾಗಿ ಸಂಸಾರಪಾಶಛೇದನವ ಮಾಡಿದ ಬಳಿಕ ಬಂದು ಗುರುವನಾಶ್ರಯಿಸಿದ ಕಾರಣ 'ಗಂಡಂಗಿಂದ ಮುನ್ನ ಹೆಂಡಿತಿ ಹುಟ್ಟಿದಳೆ'ಂಬ ಶಬ್ದಕ್ಕರ್ಥ. ಆ ಗುರುವಿನಿಂದ ಮುನ್ನ ಶಿಷ್ಯನಾಪಡೆಯೂ 'ನ ಗುರೋರಧಿಕಂ ನ ಗುರೋರಧಿಕಂ'ಎಂಬುದನಱಿದು ಗುರುಪುತ್ರನಾಗಿ ಶುಶ್ರೂಷೆಯ ಮಾಳ್ಪ ಗುಣದಿಂದ 'ಗಂಡಂಗಿಂದ ಹೆಂಡಿತಿ ಕಿಱಿಯಳಾದಳೆ'ಂಬ ಶಬ್ದಕ್ಕರ್ಥ. ಆ ಶಿಷ್ಯ ಗುರುತತ್ತ್ವದಿಂದ ಭಿನ್ನವಿಲ್ಲದೆ ಆ ಗುರುತತ್ತ್ವಸಹಿತವೆ ಉದಯವಾದನೆಂಬುದೀಗ 'ಆ ಹೆಂಡಿತಿ ಒಡಹುಟ್ಟಿದಳಾದಳೆ'ಂಬ ಶಬ್ದಕ್ಕರ್ಥ. ಶಿಷ್ಯನಲ್ಲಿ ಆ ಶ್ರೀಗುರು ಅವಿರಳ ಸಂಗವ ಮಾಡಲಾಗಿ ಲಿಂಗವೆಂಬ ಶಿಶು ಹುಟ್ಟಿತ್ತೆಂಬುದೀಗ 'ಇಬ್ಬರಿಗೊಂದು ಮಗು ಹುಟ್ಟಿದನೆ' ಎಂಬ ಶಬ್ದಕ್ಕರ್ಥ. ಅಂತು ಉದಯಿಸಿದ ಇಷ್ಟಲಿಂಗಕ್ಕೆ ಶಿಷ್ಯನೇ ಮಾತೃಸ್ಥಾನವಾದ ಭಕ್ತ್ಯಂಗನೆಯೆನಿಸಿಕೊಂಡು ಲಿಂಗಭಕ್ತಿಯ ಮಾಡುತ್ತಿರ್ದನೆಂಬುದೀಗ 'ಹುಟ್ಟಿದ್ದ ಮಗುವ ತಾಯಿ ಮುದ್ದಾಡಿಸಿದಡೆ' ಎಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗದಲ್ಲಿ ಭಕ್ತಿ ನೆಲೆಗೊಂಡ ಸದ್ಭಕ್ತನ ಅಂಗ ಪ್ರಾಣ ಸರ್ವೇಂದ್ರಿಯಂಗಳಲ್ಲಿ ಲಿಂಗಪ್ರವೇಶಿಸಿತ್ತೆಂಬುದೀಗ 'ತಾಯ ತರ್ಕೈಸಿತ್ತು ಇದೇನು ಹೇಳಾ' ಎಂಬ ಶಬ್ದಕ್ಕರ್ಥ. ಅಂತು ಲಿಂಗವೆ ಪ್ರವೇಶಿಸಿ ಸರ್ವಾಂಗಲಿಂಗವಾದ ಶರಣ ಈ ಲಿಂಗಪದವು ಗುರೂಪದೇಶದಿಂದಾಯಿತ್ತೆಂದು ಗುರುಭಕ್ತಿಯ ಬಿಡದೆ ಮಾಡುತ್ತಿರ್ದನೆಂಬುದೀಗ

೧ ಹೆಂಡತಿ (ಎ. ಹು.)

ಪತಿಭಕ್ತಿಯ ಮಾಡಿತ್ತ ಕಂಡು ಗೊಹೇಶ್ವರಲಿಂಗಕ್ಕೆ ಭಕ್ತಿಪರಿಣಾಮವಾಯಿತ್ತು ಎಂಬ ಶಬ್ದಕ್ಕರ್ಥ. ೮೮

**ವ.** ದರ್ಪಣದೊಳಗಣ ರೂಹಿಂಗೆ ಆ ದರ್ಪಣವೆ ಉತ್ಪತ್ತಿ ಸ್ಥಿತಿ ಲಯ ವಲ್ಲದೆ ಮರ್ತ್ಯಲೋಕದೊಳಗಣ ಪ್ರಕೃತಿ ಅಲ್ಲಿಲ್ಲವೇಕಯ್ಯ ? ಆ ಲೋಕದೊಳಗೆ ಉತ್ಪತ್ತಿ ಸ್ಥಿತಿ ಲಯ. ಇಂಥಾ ದೇಹ ಕರ್ಮಬದ್ಧರು ಒಂದರ ಪರಿ ಒಂದಕ್ಕಿಲ್ಲ ಕಂಡಿರೇ ದೃಷ್ಟವ. ಗುರುಹಸ್ತದೊಳಗಣ ಸದ್ಭಕ್ತಂಗೆ ಅಲ್ಲಿಯೇ ಉತ್ಪತ್ತಿ ಸ್ಥಿತಿ ಲಯ. ಇದೆಂತಹ ಪರಿಯೋ ! ಮತ್ತಾವಪರಿಯೂ ಅಲ್ಲ, ಲಿಂಗದ ಪರಿಯ ಮಾಡಿದ ಗೊಹೇಶ್ವರಾ

**ಟೀ.** ಕನ್ನಡಿಯೊಳಗಣ ಪ್ರತಿಬಿಂಬ ಅಲ್ಲಿಯೇ ತೋರಿ ಅಲ್ಲಿಯೇ ಅಳಿ ವಂತೆ ಶ್ರೀಗುರುವಿನೊಳಗೆ ಉದಯಿಸಿದ ಶರಣನು ಆ ಶ್ರೀಗುರುವಿನೊಳಗೆ ಅಳಿದ ನಲ್ಲದೆ ಲೋಕದ ಸಂಸಾರಿಗಳ ಹಾಂಗೆ ಸಾವನಲ್ಲವೆಂಬುದೀ ವಚನದ ತಾತ್ಪ ರ್ಯಾರ್ಥ. ೮೯

**ವ.** ಇಷ್ಟಲಿಂಗ ಪ್ರಾಣಲಿಂಗವೆಂಬುದನಾರು ಬಲ್ಲರು ? ಇಷ್ಟಲಿಂಗವೀಗ ದರ್ಪಣ, ಪ್ರಾಣಲಿಂಗ ಪ್ರತಿಬಿಂಬ. ದರ್ಪಣ ಮುಸುಳಿಸಿದರೆ ಪ್ರಾಣಲಿಂಗವ ಕಾಣಬಹುದೇ ? ಇಷ್ಟ ಪ್ರಾಣ ತೃಪ್ತಿಯೆಂಬರ ನೋಡಾ ! ಇಷ್ಟಲಿಂಗದಲ್ಲಿ ಅಷ್ಟವಿಧಾರ್ಚನೆ ಷೋಡಶೋಪಚಾರ ಮುಸುಳಿಸಿದರೆ ಪ್ರಾಣಲಿಂಗವ ಕಾಣಬಹುದೇ ?

**ಸಾಕ್ಷಿ :** ಇಷ್ಟಲಿಂಗಮವಿಶ್ವಸ್ಯ ಪ್ರಾಣಲಿಂಗಂ ನ ಪಶ್ಯತಿ
ದರ್ಪಣಪ್ರತಿಬಿಂಬಾನಾಂ ಯಥಾ ರೂಪಂ ತಥಾ ಭವೇತ್
ಎಂದುದಾಗಿ

ಇದುಕಾರಣ ಕೂಡಲಚೆನ್ನಸಂಗಮದೇವ ಇಷ್ಟದಲ್ಲಿ ಪ್ರಾಣತೃಪ್ತಿ ಯಾದವರ ತೋರಿ ಬದುಕಿಸಯ್ಯಾ!

**ಟೀ.** ಈ ವಚನ ಕಾಣಬಂದರ್ಥ. ೯೦

ಗುರುಕರುಣಸ್ಥಲ ಸಂಪೂರ್ಣ

ಅಂತು ಸ್ಥಲ ೯ಕ್ಕಂ ಶ್ಲೋಕ ೯೦ಕ್ಕಂ ವಚನ ೨೧೦ಕ್ಕಂ

ಮಂಗಳಂ

ಶ್ರೀ

# ೧೦. ಭಕ್ತಿಸ್ಥಲ

*

**ಸೂತ್ರ.** ಇಂತು ಗುರುಕರುಣವಮಂ ಪಡೆದ ತಚ್ಛಿಷ್ಯನು ತನ್ನ ನಿಜಸ್ವರೂಪ ಮಪ್ಪ ಅಖಂಡ ಪರಂಜ್ಯೋತಿರ್ಲಿಂಗವು ಕರಸ್ಥಲಕ್ಕೆ ಬಂದುದನಱಿದು, ಆ ಲಿಂಗದ ಪರಮ ಚೈತನ್ಯವೆಲ್ಲಾ ಜಂಗಮವೆಂದಱಿದು, ಆ ಗುರು ಲಿಂಗ ಜಂಗಮವೆಂಬ ತ್ರಿವಿಧವಾದುದು ಒಂದೆ ವಸ್ತುವೆಂದಱಿದು, ತಾ ಮೊದಲಾದ ಸಕಲ ತತ್ತ್ವ ಪದಾರ್ಥಂಗಳೆಲ್ಲಾ ಗುರು ಲಿಂಗ ಜಂಗಮದ ಸೊಮ್ಮೆಂದಱಿದು, ತನುಮನಧನಂಗಳಲ್ಲಿ ನಿರ್ವಂಚಕನಾಗಿ ಶ್ರದ್ಧಾಭಕ್ತಿಯಿಂದರ್ಪಿಸುತ್ತ, ಆ ಅರ್ಪಿಸುವಲ್ಲಿ ಆ ಲಿಂಗದ ಮುಖ ಜಂಗಮವೆಂದಱಿದು, ಆ ಜಂಗಮದ ಮುಖದಲ್ಲಿ ಲಿಂಗತೃಪ್ತನೆಂದಱಿದು ಸಕಲ ಪದಾರ್ಥಭೋಗಂಗಳೆಲ್ಲಾ ಜಂಗಮಕ್ಕೆ ಕೊಡುತ್ತ, ಆ ಕೊಡುವಲ್ಲಿ ಜಂಗಮವೆ ಪ್ರಾಣವೆಂದು, ಭಕ್ತನೆ ಅಂಗವೆಂದು, ಆ ಅಂಗ ಪ್ರಾಣಂಗಳಿಗೆ ಭೇದವಿಲ್ಲೆಂದಱಿದು, ಮಾಡಿ ಮಾಡಿಸಿಕೊಂಬವೆರಡೂ ಒಂದೇ ವಸ್ತುವೆಂದಱಿದು, ಜಂಗಮದಲ್ಲಿ ಗುಣ ಅವಗುಣವ ಸಂಪಾದಿಸದೆ, ಜಾತಿ ವರ್ಣಾಶ್ರಮಂಗಳ ವಿವರಿಸದೆ, ಫಲ ಪದಂಗಳ ಬಯಸದೆ, ಗುರು ಲಿಂಗ ಜಂಗಮದ ಭಕ್ತಿಯೆ ಪರಮಪದವೆಂದು ಸದಾ ಸನ್ನಿಹಿತನಾಗಿ ದಾಸೋಹವ ಮಾಡುತ್ತಿಪ್ಪುದೀಗ ಭಕ್ತಿಸ್ಥಲವೆಂದು ಹೇಳಲಾದುದು.

**ಅಂಗಸ್ಥಲಕ್ಕೆ ಶ್ಲೋಕ :**

ಏಕಮೂರ್ತಿಸ್ತ್ರಯೋ ಭಾಗಾ ಗುರುರ್ಲಿಂಗಂ ಚ ಜಂಗಮಃ
ಜಂಗಮಶ್ಚ ಗುರುರ್ಲಿಂಗಂ ತ್ರಿವಿಧಂ ಲಿಂಗಮುಚ್ಯತೇ

ಟೀ. ಒಂದೇ ಶಿವಮೂರ್ತಿ ಗುರುಲಿಂಗ ಜಂಗಮವೆಂದು ಮೂಱು ಭಾಗವಾಯಿತ್ತು. ಆ ಜಂಗಮವೂ ಗುರುವೂ ಲಿಂಗವೂ ಇಂತೀ ತ್ರಿವಿಧವೂ ಲಿಂಗವೆಂದು ಹೇಳಲ್ಪಟ್ಟಿದು ೧

ಗುರುದೇವೋ ಮಹಾದೇವೋ ಏಕಭಾವಂಚ ಭಾವಯೇತ್
ಭಾವದ್ವಯಸ್ಯ ಭಾವೇನ ನರಕೇ ಕಾಲಮಕ್ಷಯಂ

ಟೀ. ಗುರುವನೂ ಪರಮೇಶ್ವರನನೂ ಒಂದೇ ಎಂಬ ಭಾವದಲ್ಲಿ ಭಾವಿಸುವುದು. ಎರಡೆಂದು ಭಾವಿಸಿದುದಱಿಂದ ನರಕದಲ್ಲಿ ಅನಂತಕಾಲವಿಹನು ೨

ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ
ಜಂಗಮಸ್ಯಾವಮಾನೇನ ಸ್ಥಾವರಂ ನಿಷ್ಫಲಂ ಭವೇತ್

ಟೀ. ಸ್ಥಾವರ ಜಂಗಮ ಈ ಎರಡೂ ಒಂದೇ ಲಿಂಗವೆಂದು ಹೇಳಲ್ಪಟ್ಟಿತ್ತು. ಆ ಜಂಗಮವನುದಾಸೀನವ ಮಾಡಿದರೆ ಸ್ಥಾವರಲಿಂಗದಲ್ಲಿ ಮಾಡಿದ ಪೂಜೆ ನಿಷ್ಫಲವಹುದು. ೩

ಸೋಹಂ ದಾಸೋಹಮಾಖ್ಯಾತಂ ದ್ವಯೋರ್ನಾಮ ಪ್ರವರ್ತತೇ
ಏತದ್ಭಾವದ್ವಯೋ ನಾಸ್ತಿ ಪ್ರತಿಬಿಂಬಸಮುದ್ಭವಂ

ಟೀ. ಸೋಹಂದಾಸೋಹವೆಂಬೆರಡು ನಾಮವಾಯಿತ್ತು. ಈ ಎರಡಕ್ಕೂ ಭೇದವಿಲ್ಲ. ಪ್ರತಿಬಿಂಬದೋಪಾದಿಯೆಂದಱಿವುದು. ಪ್ರತಿಬಿಂಬವೆಂದಡೆ ನೆಳಲು. ಆ ದೇಹಕ್ಕೂ ನೆಳಲಿಗೂ ಭೇದವಿಲ್ಲ, ಆ ಪ್ರಕಾರವೆಂದು ಭಾವಿಸುವುದು. ೪

ಭಕ್ತೋ ದಾಸೋಹಭಾವಶ್ಚ ಸೋಹಂ ಭಾವಶ್ಚ ಜಂಗಮಃ
ಭಾವಭೇದದ್ವಯಂ ನಾಸ್ತಿ ಪ್ರಕೃತಿಃ ಪ್ರತಿಬಿಂಬವತ್

ಟೀ. ಭಕ್ತನು ದಾಸೋಹಂಭಾವ, ಜಂಗಮವು ಸೋಹಂಭಾವ. ಈ ಎರಡಕ್ಕೂ ಭೇದವಿಲ್ಲ. ಅದು ಹೇಂಗೆಂದಡೆ ಪ್ರತಿಬಿಂಬದೋಪಾದಿ. ೫

ಸದಾಚಾರೀ ಶಿವೇ ಭಕ್ತಿರ್ಲಿಂಗೇ ಜಂಗಮ ಏಕಧೀಃ
ಲಾಂಛನೇನ ಶರಣ್ಯಂ ಚ ಭಕ್ತಿಸ್ಥಲಸುಬುದ್ಧಿಮಾನ್

ಟೀ. ಸದಾಚಾರದಲ್ಲಿ ನಡೆವ, ಶಿವನಲ್ಲಿ ಭಕ್ತಿಯಾಗಿರುಹ, ಲಿಂಗ ಜಂಗವು ಒಂದೇಯೆಂಬ ಬುದ್ಧಿಯಾಗಿರುಹ, ಶಿವಲಾಂಛನವ ಕಂಡಡೆ ಶರಣೆನ್ನುವ ಇದು ಭಕ್ತಿಸ್ಥಲ. ೬

ಭೃತ್ಯಾಚಾರೇ ಸದಾಚಾರಂ ಜಂಗಮಂ ಲಿಂಗರೂಪಿಣಂ
ದ್ವಯಮೇಕ ಸಮಾಯುಕ್ತಂ ಭಕ್ತಸ್ಥಲಸುಬುದ್ಧಿಮಾನ್

ಟೀ. ಜಂಗಮವು ಲಿಂಗವು ಒಂದೇಯೆಂದು ಕಂಡು ಭೃತ್ಯಾಚಾರದಲ್ಲಿ ಸೇವೆಯ ಮಾಡುವುದು ಭಕ್ತಸ್ಥಲವೆಂದು ಹೇಳಲ್ಪಟ್ಟುದು. ೭

ಕಿಂಕುರ್ವಾಣಸಮಾಯುಕ್ತೋ ಲಿಂಗರೂಪೇಣ ಜಂಗಮಂ
ಮನಸಾ ಸಹ ಇತ್ಯೇವ ಭಕ್ತಸ್ಥಲಸುಬುದ್ಧಿಮಾನ್

ಟೀ. ಮನಸ್ಸಿನಲ್ಲಿ ಕಿಂಕುರ್ವಾಣಸಹಿತವಾಗಿ ಲಿಂಗವನು ಜಂಗಮವನು ಅರ್ಚನೆಯ ಮಾಡುವುದು ಇದು ಭಕ್ತಸ್ಥಲ. ೮

ಅರ್ಥಪ್ರಾಣಾಭಿಮಾನಾನಿ ಗುರೌ ಲಿಂಗೇ ಚ ಜಂಗಮೇ
ತಲ್ಲಿಂಗಜಂಗಮಪ್ರಾಣೋ ಭಕ್ತಸ್ಥಲಸುಬುದ್ಧಿಮಾನ್

ಟೀ. ಅರ್ಥ ಪ್ರಾಣಾಭಿಮಾನವ ಗುರು ಲಿಂಗ ಜಂಗಮದಲ್ಲಿ ಸಮರ್ಪಿಸುವುದು, ಆ ಲಿಂಗ ಜಂಗಮವೆ ಪ್ರಾಣವಾಗಿಹುದು ಭಕ್ತಿಸ್ಥಲವೆಂದು ಹೇಳಲ್ಪಟ್ಟುದು. ೯

ಮಜ್ಜನಂ ಚ ತ್ರಿಕಾಲೇಷು ಶುಚಿಪಾಕಸಮರ್ಪಣಂ
ಭವಿಸಂಗ ಪರಿತ್ಯಾಜ್ಯಂಇತ್ಯೇತೇ ಭಕ್ತಿಕಾರಣಂ

ಟೀ. ತ್ರಿಕಾಲಂಗಳಲ್ಲಿ ಮಜ್ಜನವು, ಶುದ್ಧವಹ ಪಾಕಮಂ ಸಮರ್ಪಣವ ಮಾಡುವುದು, ಭವಿಗಳ ಸಂಪರ್ಕವಂ ಬಿಡುವುದು ಇದು ಭಕ್ತಿಸ್ಥಲವು. ಭವಿಯೆಂದಡೆ ಶಿವಮಂತ್ರ ದೀಕ್ಷೆಯಿಲ್ಲದಾತನು. ಆತನು ಭವಕ್ಕೆ ಬಪ್ಪುದು ಕಾರಣವಾಗಿ ಭವಿಯೆನಿಸಿಕೊಂಬನು. ಅವನ ಸಂಪರ್ಕವ ಮಾಡಲಾಗದು. ೧೦

ಭಕ್ತಿಸ್ಥಲಕ್ಕೆ ವಚನ :

ವ. ನರಜನ್ಮವ ತೊಡೆದು ಹರಜನ್ಮವ ಮಾಡಿದ ಗುರುವೆ, ಭವಬಂಧನವ ಬಿಡಿಸಿ ಪರಮಸುಖವ ತೋರಿದ ಗುರುವೆ, ಭವಿಯೆಂಬುದ ತೊಡೆದು ಭಕ್ತನೆಂದೆನಿಸಿದ ಗುರುವೆ, ಚೆನ್ನಮಲ್ಲಿಕಾರ್ಜುನನ ತಂದು ಎನ್ನ ಕೈವಶಕ್ಕೆ ಕೊಟ್ಟ ಗುರುವೇ ನಮೋ ನಮೋ.

ಟೀ. ಈ ವಚನ ಕಾಣಬಂದರ್ಥ. ೧

ವ. ನಂಬರು ನಚ್ಚರು ಬರಿದೆ ಕರೆವರು. ನಂಬಿ ಕರೆದಡೆ 'ಓ' ಎನ್ನನೇ ಶಿವನು ? ನಂಬದೆ ನಚ್ಚದೆ ಬರಿದೆ ಕರೆವರ ಕೊಂಬ ಮೆಟ್ಟಿ ಕೂಗೆಂದ ಕೂಡಲಸಂಗಮದೇವನು.

ಟೀ. ಗುರು ಲಿಂಗ ಜಂಗಮವೆ ಪರಶಿವನೆಂದು ನಂಬಿದ ಸದ್ಭಕ್ತಂಗೆ ಶಿವನು ಪ್ರತ್ಯಕ್ಷವಾಗಿಹನು. ನಂಬುಗೆ ವಿಶ್ವಾಸವಿಲ್ಲದೆ ಪೂಜಿಸುವರ ಮನ ತಲೆಯ ಮೆಟ್ಟಿ ಮಾಯೆ ಉಲಿದಾಡುತ್ತಿಹಳೆಂದು ಮುನ್ನಿನ ಶಿವ ಕೊಟ್ಟ ಅಪ್ಪಣೆ ಯೆಂಬುದೀ ವಚನದ ತಾತ್ಪರ್ಯಾರ್ಥ. ೨

ವ. ಕಾಮವೇಕೋ ಲಿಂಗಪ್ರೇಮಿಯೆನಿಸುವಂಗೆ ? ಕ್ರೋಧವೇಕೋ ಶರಣವೇದ್ಯನೆನಿಸುವಂಗೆ ? ಲೋಭವೇಕೋ ಭಕ್ತಿಯ ಲಾಭವನರಿಸುವಂಗೆ ? ಮದಮತ್ಸರ ಉಳ್ಳವಂಗೆ ಹೃದಯಶುದ್ಧವೆಲ್ಲಿಯದೋ ? ಹದುಳಿಗರಾದವರಲ್ಲಿಪ್ಪ ಕೂಡಲ ಸಂಗಮದೇವ.

ಟೀ. ಈ ವಚನ ಕಾಣಬಂದರ್ಥ. ೩

ವ. ಆಸೆಗೆ ಹುಟ್ಟಿದ ಪ್ರಾಣಿ ಆಸೆಯನೆ ಕಲಿತು ಪುಣ್ಯಪದವಿಯ ಬಯಸಿದರೆ ಭವಮಾಲೆಯ ಭರವು ತಪ್ಪದು. ಬೇಡಲು ಹುಟ್ಟಿದ ಪ್ರಾಣಿಗಳಿಗೆ ಬೇಡಲು ವಿಧಿಯೇ. ಸೂಳೆಗೆ ಹುಟ್ಟಿದ ಪ್ರಾಣಿಗೆ ನಿಜಗುಣ ಸಜ್ಜನವಪ್ಪುದೇ ? ಲಿಂಗದುದಯ ಶರಣವಿಸ್ತಾರವು ಬಯಸಿದರಳವೇ ಕೂಡಲಸಂಗಮದೇವಾ ನಿಮ್ಮಲ್ಲಿ ?

ಟೀ. ಈ ವಚನ ಕಾಣಬಂದರ್ಥ. ೪

ವ. ಭಕ್ತರಾದೆನೆಂದು ಯುಕ್ತಿಗೆಟ್ಟು ನುಡಿವರು. ಭಕ್ತಿಸ್ಥಲವೆಲ್ಲರಿಗೆಲ್ಲಿಯದೋ ? ಗುರುವಿನಲ್ಲಿ ತನುವಂಚನೆ, ಲಿಂಗದಲ್ಲಿ ಮನವಂಚನೆ, ಜಂಗಮದಲ್ಲಿ ಧನವಂಚನೆಯುಳ್ಳನ್ನಕ್ಕ ಭಕ್ತನೇ ? ಗುರುವಿನಲ್ಲಿ ಚಾರಿತ್ರವ, ಲಿಂಗದಲ್ಲಿ ಲಕ್ಷಣವ, ಜಂಗಮದಲ್ಲಿ ಜಾತಿಯನರಿಸುವನ್ನಕ್ಕ ಭಕ್ತನೇ ? ಅಲ್ಲಲ್ಲ. ಅವನು ದೋಷಾರ್ತಿ.

ಶ್ಲೋಕ :

ಭಕ್ತಸ್ಯ ಪ್ರತಿಪಕ್ಷೀಣಾಂ ಸದಾಚಾರೇಣ ವರ್ಜಿತಃ
ಗುರುಲಿಂಗಜಂಗಮದ್ವೇಷೀ ತೇ ನರಾಣಾಂ ದುರಾತ್ಮನಾಂ

ಇದುಕಾರಣ ಕೂಡಲ ಚೆನ್ನಸಂಗಯ್ಯಾ ಭಕ್ತಿಸ್ಥಲವೆಲ್ಲರಿಗೆಲ್ಲಿಯದೋ?

ಟೀ. ಈ ವಚನ ಕಾಣಬಂದರ್ಥ. ೫

ವ. ದೇವಲೋಕ ಮರ್ತ್ಯಲೋಕವೆಂಬುದು ಬೇರಿಲ್ಲ ಕಾಣಿರೋ ! ಈ ಲೋಕದೊಳಗೆ ಮತ್ತನಂತ ಲೋಕ. ಶಿವಲೋಕವೆ ಶಿವಾಚಾರವಯ್ಯಾ. ಶಿವಭಕ್ತರಿದ್ದ ಠಾವೇ ದೇವಲೋಕ. ಭಕ್ತನ ಅಂಗಳವೇ ವಾರಣಾಸಿ. ಕಾಯುವೇ ಕೈಲಾಸ. ಇದು ಸತ್ಯ ಕೂಡಲಸಂಗಮದೇವಾ!

ಟೀ. ಈ ವಚನ ಕಾಣಬಂದರ್ಥ. ೬

ವ. ಕಟ್ಟಿದಿರಿನಲ್ಲಿಶಿವಭಕ್ತರ ಕಂಡು ದೃಷ್ಟಿಯಾರಿ ಶರಣೆಂದಡೆ ಹುಟ್ಟಿದೇಳು ಜನ್ಮದ ಪಾಪ ಬಿಟ್ಟು ಹೋಹುದು ನೋಡಾ ! ಮುಟ್ಟಿ ಚರಣಕ್ಕೆರಗಿದರೆ ತನುವಪ್ಪಿದಂತಹುದು. ಕರ್ತೃ ಕೂಡಲಸಂಗನ ಶರಣರ [೧]ಸಂಗವೆ[೧] ಮತ್ತೆ ಭವಮಾಲೆಯ ಹೊದ್ದಲೀಯದು ನೋಡಾ!

ಟೀ. ಈ ವಚನ ಕಾಣಬಂದರ್ಥ. ೭

೧ ಸಂಗ (೨)

ವ. ಪಾಪಿಗೆ ಕೋಪಿಗೆ ೧ಭಕ್ತಿಯಾಗೆಂದರಪ್ಪುದೇ?೧ ನಾರಿವಾಣವಕ್ಕುದೆ ನಾಯಿಗೆ ? ಕೂಡಲಸಂಗಮದೇವ ನಿಮ್ಮ ನಂಬಿಯೂ ನಂಬದ ಡಂಭಕಂಗೆ ಭಕ್ತಿಯಪ್ಪುದೇ ?

ಟೀ. ಈ ವಚನ ಕಾಣಬಂದರ್ಥ. ೮

ವ. ಸದಾಚಾರ ಸದ್ಭಕ್ತಿಯಿಲ್ಲದವರನೊಲ್ಲನಯ್ಯಾ. ಅವರ ಆರಾಧನೆ ದಂಡ. ನಿಚ್ಚ ನಿಚ್ಚ ೨ಪ್ರಾಯಶ್ಚಿತ್ತ ಕೂಡಲಸಂಗಯ್ಯನೊಲ್ಲ೨ ಭೂಭಾರಕರಾ!

ಟೀ. ಈ ವಚನ ಕಾಣಬಂದರ್ಥ. ೯

ವ. ಭವಿಯ ಬೆರಸಿದ ಭಕ್ತಿ, ಹವಿಯ ಬೆರಸಿದ ಬೀಜ, ಉದಕವ ಮುಟ್ಟಿದ ಎಣ್ಣೆ, ಜ್ಯೋತಿ ಪ್ರಜ್ವಲಿಸುವುದೇ ? ಭವಿಯಲ್ಲ ಭಕ್ತನಲ್ಲ. ಹವಿಯಲ್ಲ ಬೀಜವಲ್ಲ. ಉದಕವಲ್ಲ ಎಣ್ಣೆಯಲ್ಲ. ಒಡಲಿಚ್ಚೆಗೆ ಹೋಗಿ ಭವಿಯ ಮನೆಯ ತುತ್ತಿಡುವ ನರಕಿಗಳಿಗೇಕೊಲಿವ ನಮ್ಮ ಶಂಭುಜಕ್ಕೇಶ್ವರನು ?

ಟೀ. ಈ ವಚನ ಕಾಣಬಂದರ್ಥ. ೧೦

ವ. ಭವಿಯ ಸಂಗವನೊಲ್ಲೆನೊಲ್ಲೆ, ಆ ಸಂಗ ಮುಂದೆ ಅನಂತ ಭವಂಗಳಲ್ಲಿ ಬರಿಸುವುದಾಗಿ. ಅನ್ಯದೈವಭಜನೆಯನೊಲ್ಲೆನೊಲ್ಲೆ, ಆ ಭಜನೆ ಮುಂದೆ ಅನಂತ ಘೋರ ನರಕವನುಣಿಸುವುದಾಗಿ. ಉಭಯ ಜಡತೆಯ ಹೊದ್ದದೆ ಹಿಂಗಿ ನಿಂದ ಕೂಡಲಸಂಗಮದೇವಾ.

ಟೀ. ಈ ವಚನ ಕಾಣಬಂದರ್ಥ. ೧೧

ವ. ಕೊಂಡಲ ಮುಡಿದುಕೊಂಡು, ತಮ್ಮ ತಮ್ಮ ಗಂಡರ ಹಿಂದುಗೊಂಡು, ನಾಡ ಮಿಂಡರ ನೋಡುತ್ತಲಿ, ಇಂದು ನಮ್ಮ ಹುಲಿ ಹೋಯಿತ್ತು ಬನ್ನಿರೇ. ಗಂಡರ ಗಂಡನವ್ವಾ ಕೂಡಲಸಂಗ ಕಂಡರೆ ಮೂಗ ಕೊಯ್ವ್ವಾ !

೧ ಭಕ್ತಿಯಾಗದೆಂದರಪ್ಪುದೆ (ಹು.)
೨ ಪ್ರಾಯಶ್ಚಿರನು ಒಲ್ಲ ಕೂಡಲಸಂಗಮದೇವ (ಎ. ರಾ.)

ಟೀ. ಭಕ್ತನೆಂಬ ಮುತ್ತೈದೆಗೆ ಅಂಗದ ಮೇಲಣ ಲಿಂಗವೆ ಗಂಡ. ವಿಭೂತಿ ರುದ್ರಾಕ್ಷಿಯ ಅಲಂಕಾರವೇ ತೊಂಡಲು ಎಂಬುದೀಗ 'ತೊಂಡಲು ಮುಡಿದುಕೊಂಡು ತಮ್ಮ ತಮ್ಮ ಗಂಡರ ಹಿಂದುಗೊಂಡು' ಎಂಬ ಶಬ್ದಕ್ಕರ್ಥ. ಅಂತು ವಿಭೂತಿ ರುದ್ರಾಕ್ಷಿಯ ಧರಿಸಿಕೊಂಡು ಅಂಗದ ಮೇಲೆ ಲಿಂಗವಿದ್ದು ಅನ್ಯ ದೈವಭಜನೆಗೆ ಮನವೆಳಸುತ್ತಿಹರು ಎಂಬುದೀಗ 'ನಾಡ ಮಿಂಡರ ನೋಡುತ್ತಲಿ' ಎಂಬ ಶಬ್ದಕ್ಕರ್ಥ. ಅಂತು ಅಂಗದ ಮೇಲೆ ಲಿಂಗವಿದ್ದು ಅನ್ಯದೈವವ ಭಜಿಸುತ್ತ ನಾವು ಭಕ್ತರೆಂದು ತಮಗೆ ಕಾಲವ್ಯಾಘ್ರಭಯ ಹೋಯಿತ್ತೆಂದು ನುಡಿವುತ್ತಿಹರೆಂಬುದೀಗ 'ಇಂದು ನಮ್ಮ ಹುಲಿ ಹೋಯಿತ್ತು ಬನ್ನಿರೇ' ಎಂಬ ಶಬ್ದಕ್ಕರ್ಥ. ಅಂತು ಲಿಂಗವಿರ್ದು ಅನ್ಯದೈವವ ಭಜಿಸುವರ ಮಾನಹಾನಿಯ ಮಾಡಿ ಕಾಲನ ಕೈಯ ಬಡಿಸುವ ಶಿವನೆಂಬುದೀಗ 'ಗಂಡರ ಗಂಡನವ್ವಾ ಕೂಡಲಸಂಗ ಕಂಡರೆ ಮೂಗ ಕೊಯ್ವ' ಎಂಬ ಶಬ್ದಕ್ಕರ್ಥ. ೧೨

ವ. ಅಂಗಭವಿಗೆ ಆಚಾರನಾಸ್ತಿ. ಲಿಂಗಭವಿಗೆ ಜಂಗಮನಾಸ್ತಿ. ಪ್ರಾಣ
ಭವಿಗೆ ಪ್ರಸಾದನಾಸ್ತಿ. ಈ ತ್ರಿವಿಧನಾಸ್ತಿಗೆ ಇಹಪರವಿಲ್ಲವಯ್ಯಾ
ಕೂಡಲಚೆನ್ನಸಂಗಮದೇವಾ!

ಟೀ. ಅಂಗದ ಮೇಲೆ ಶಿವಲಿಂಗವಿಲ್ಲದಾತನೇ ಭವಿ. ಆ ಭವಿಗೆ ಶಿವಾಚಾರವಿಲ್ಲವೆಂಬುದೀಗ 'ಅಂಗಭವಿಗೆ ಆಚಾರನಾಸ್ತಿ' ಎಂಬ ಶಬ್ದಕ್ಕರ್ಥ. ವೀರಶೈವಾಚಾರ್ಯರು ಶಿವಕಲಾಚೈತನ್ಯವ ತಂದು ನೆಲೆಗೊಳಿಸಿ ಉಪದೇಶವ ಮಾಡದೆ ಇರ್ದ ಲಿಂಗವೇ ಭವಿ. ಆ ಲಿಂಗಕ್ಕೆ ಶಿವಕಳೆಯಿಲ್ಲವೆಂಬುದೀಗ 'ಲಿಂಗಭವಿಗೆ ಜಂಗಮನಾಸ್ತಿ' ಎಂಬ ಶಬ್ದಕ್ಕರ್ಥ. ಅಂಗದ ಮೇಲಿರ್ದ ಇಷ್ಟಲಿಂಗದ ಕಳೆಯ ಪ್ರಾಣಕ್ಕೆ ಸಾಹಿತ್ಯವ ಮಾಡಿಕೊಳಲರಿಯದೆ ಇದ್ದಡೆ ಆ ಪ್ರಾಣನೆ ಭವಿ. ಆ ಭವಿಗೆ ಪರವಸ್ತು ಸಾಧ್ಯವಾಗದೆಂಬುದೀಗ 'ಪ್ರಾಣಭವಿಗೆ ಪ್ರಸಾದನಾಸ್ತಿ' ಎಂಬ ಶಬ್ದಕ್ಕರ್ಥ. ಇಂತೀ ಮೂರರೊಳಗೊಂದೂ ಇಲ್ಲದಿರ್ದಡೆ ಬದ್ಧಭವಿಗೆ ಇಹಲೋಕದ ಸುಖ ಪರಲೋಕದ ಭೋಗಪದ ಏನೂ ಇಲ್ಲವೆಂಬುದೀಗ 'ತ್ರಿವಿಧನಾಸ್ತಿಗೆ ಇಹಪರವಿಲ್ಲ'ವೆಂಬ ಶಬ್ದಕ್ಕರ್ಥ. ೧೩

ವ. ಕ್ರಿಯಾಮಥನವಿಲ್ಲದೆ ಕಾಣಬಂದಿತೇ ಇಕ್ಷುವಿನೊಳಗಣ ಮಧುರ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ತಿಲದೊಳಗಣ ತೈಲ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕ್ಷೀರದೊಳಗಣ ಘೃತ?
ಕ್ರಿಯಾಮಥನವಿಲ್ಲದೆ ಕಾಣಬಂದುದೇ ಕಾಷ್ಠದೊಳಗಣ ಅಗ್ನಿ?

ಇದು ಕಾರಣ ನಮ್ಮ ಗೊಹೇಶ್ವರಲಿಂಗವ ತನ್ನೊಳಱಿದೆನೆಂಬ ಮಹಂತಗಲ್ಲದೆ ಸತ್ಕ್ರಿಯಾಚರಣೆಯೇ ಸಾಧನ ಕಾಣಿಭೋ !

ಟೀ. ಈ ವಚನ ಕಾಣಬಂದರ್ಥ. ೧೪

ವ. ಅಂತರಂಗದಲ್ಲಿ ಅಱಿವಾದಡೇನಯ್ಯಾ, ಬಹಿರಂಗದಲ್ಲಿ ಕ್ರೀಯಿಲ್ಲದನ್ನಕ್ಕ ? ದೇಹವಿಲ್ಲದಿರ್ದಡೆ ಪ್ರಾಣಕ್ಕಾಶ್ರಯವುಂಟೇ ? ಕನ್ನಡಿಯಿಲ್ಲದಿರ್ದಡೆ ತನ್ನ ಮುಖವ ಕಾಣಬಹುದೇ ? ಸಾಕಾರ ನಿರಾಕಾರ ಏಕೋದೇವ ನಮ್ಮ ಕೂಡಲಚೆನ್ನಸಂಗಯ್ಯನು.

ಟೀ. ಆವಾವ ಪದಾರ್ಥಂಗಳ ಪ್ರತ್ಯಕ್ಷವಾಗಿ ಕಂಡು ಮನವಱಿವುತ್ತಿರಲು ತೃಪ್ತಿಯಹುದೆ ? ಆಗದು. ಕ್ರೀಯಿಂದ ಅನುಭವಿಸಿದಲ್ಲದೆ ಇಲ್ಲವೆಂತಂತೆ ಪರಬ್ರಹ್ಮವ ಜ್ಞಾನದಿಂದ ಕಂಡು ಅಱಿದ ಮಾತ್ರದಲ್ಲಿ ದೇಹವಾಸನೆ ಹಿಂಗಿ ತನಗೆ ಬ್ರಹ್ಮಪದ ದೊರೆಕೊಂಬುದೇ ? ದೊರೆಕೊಳ್ಳದಾಗಿ ನಿರಾಕಾರಬ್ರಹ್ಮವೆ ಸಾಕಾರವಾಗಿ ಗುರು ಲಿಂಗ ಜಂಗಮವಾಯಿತ್ತೆಂದಱಿದು ಇಷ್ಟಲಿಂಗಸಂಬಂಧಿಯಾದ ಕ್ರೀಯಿಂದಲ್ಲದೆ ಬ್ರಹ್ಮವಾಗಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೧೫

ವ. ಜ್ಞಾನದಲಱಿದಡೇನಯ್ಯ ಕ್ರೀಯನಾಚರಿಸದನ್ನಕ್ಕ ? ನೆನೆದ ಮಾತ್ರದಲ್ಲಿ ಅಹುದೆ, ಕಾರ್ಯದಲಲ್ಲದೆ ? ಕುರುಡ ಕಾಣ ಪಥವ. ಹೆಳವ ನಡೆಯಲಱಿಯ. ಒಂದಿಲ್ಲದಿರ್ದಡೊಂದಾಗದು. ಜ್ಞಾನವಿಲ್ಲದಿರ್ದ ಕ್ರೀ ಜಡನು. ಕ್ರೀಯಿಲ್ಲದ ಜ್ಞಾನ ವಾಗ್ಜಾಲ, ಭ್ರಾಂತು. ಇದು ಕಾರಣ ಸಿದ್ಧಸೋಮನಾಥಲಿಂಗವ ಕೂಡುವ ಶರಣಂಗೆ ಎರಡೂ ಬೇಕು.

ಟೀ. ಈ ವಚನ ಕಾಣಬಂದರ್ಥ. ೧೬

ವ. ಲಿಂಗ ಜಂಗಮ ಸನುಮತವಾದ ಕ್ರೀಯನು ಅಹುದಾಗದೆಂಬ [1]ಸಂದೇಹವಾಗಲಱಿಯದು.[1] ಕ್ರೀವಿಡಿದು ತನುವ ಗಮಿಸುವುದು. ಅಱಿವುವಿಡಿದು ಮನವ ಗಮಿಸುವುದು. ಅನುಭಾವವಿಡಿದು ಸಕಲೇಂದ್ರಿಯಗಳ ಕೂಡಲಚೆನ್ನಸಂಗಯ್ಯನಲ್ಲಿ ಏಕವ ಮಾಳ್ಪುದು.

೧ ಸಂದೇಹವ ಬೇಡ (ಹು.)

ಟೀ. ಲಿಂಗ ಜಂಗಮವು ಒಂದೆಂಬ ಅನುವನಱಿದು ನಿಶ್ಚೈಸಿ ಮಾಡುವ ಭಕ್ತಿ ಶಿವನನೊಡಗೂಡುವ ಸತ್ಕ್ರೀಯೆಂಬುದು ಸಂದೇಹವಿಲ್ಲ. ಅಂತು ಲಿಂಗವು ಜಂಗಮವು ಒಂದೆ ವಸ್ತುವೆಂಬ ಜ್ಞಾನವಿಡಿದು ಮನವ ಗಮಿಸಬೇಕು. ಅಂಗದಲ್ಲಿ ಲಿಂಗವ ಹಿಂಗದೆ ಕ್ರೀಯನಾಚರಿಸಬೇಕು. ಅಂತು ಅಂತರಂಗದ ಅಱಿವಿಂದ ಬಹಿರಂಗದ ಕ್ರೀಯಿಂದ ತನು ಮನ ಪ್ರಾಣಂಗಳೆಲ್ಲಾ ಲಿಂಗವಾದವೆಂಬ ನಿಶ್ಚಯ ವಿರಬೇಕು ಎಂಬುದೀ ವಚನದ ತಾತ್ಪರ್ಯಾರ್ಥ. ೧೭

ವ. ಅಂತರಂಗದಲ್ಲಿ ಅಱಿವು, ಬಹಿರಂಗದಲ್ಲಿ ಕ್ರೀ. ಈ ಉಭಯ ಸಂಪುಟವೊಂದಾದ ಶರಣಂಗೆ ಹಿಂಗಿತ್ತು ತನುಸೂತಕ, ಹಿಂಗಿತ್ತು ಮನಸೂತಕ. ಕೂಡಲಚೆನ್ನಸಂಗಯ್ಯನಲ್ಲಿ ಸಂಗವಾದುವು ಸರ್ವೇಂದ್ರಿಯ.

ಟೀ. ಈ ವಚನ ಕಾಣಬಂದರ್ಥ. ೧೮

ವ. ಶ್ರೀ ಗುರು ಲಿಂಗ ಜಂಗಮಕ್ಕೆ ತನು ಮನ ಧನವನು ವಂಚನೆ ಯಿಲ್ಲದೆ ಸದ್ಭಕ್ತಿಯಿಂದ ಅರ್ಪಿಸಿ ದಾಸೋಹಿಯಾದಡೆ ಸದ್ಭಕ್ತನು. ಆ ಸದ್ಭಕ್ತನ ಭಕ್ತಿಕಾಯ ಮಮಕಾಯವೆಂಬ ಶಿವನ ವಾಕ್ಯದಿಂದ ಅದು ಶಿವನ ತನು. 'ಯತೋ ವಾಚೋ ನಿವರ್ತಂತೇ' ಎಂಬ ಲಿಂಗವನು ಶ್ರೀಗುರು ಕಣ್ಗೆ ಗೋಚರವ ಮಾಡಿ, ಪ್ರಾಣಲಿಂಗವ ಮಾಡಿ, ಕರಸ್ಥಲದಲ್ಲಿ ಬಿಜಯಂಗೈಸಿಕೊಟ್ಟ ಬಳಿಕ ಲಿಂಗಪ್ರಾಣ ವಾಯಿತ್ತು. ಶಿವತನುವಾಯಿತ್ತು. ಶಿವಜ್ಞಾನ ಸದ್ಭಕ್ತಿ ಸಂಪೂರ್ಣ ವಾದಡೆ ಸರ್ವಾಂಗಲಿಂಗ. ಅಂಗಗುಣವೆಲ್ಲಾ ಲಿಂಗಗುಣ. ಪಂಚೇಂದ್ರಿಯಂಗಳು ಲಿಂಗೇಂದ್ರಿಯಂಗಳು. ಆ ಮಹಾಸದ್ಭಕ್ತನ ಕ್ರೀ ಲಿಂಗಕ್ರೀ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ!

ಟೀ. ಈ ವಚನ ಕಾಣಬಂದರ್ಥ. ೧೯

ವ. ವೇದಾದಿ ಅಷ್ಟಾದಶ ವಿದ್ಯಂಗಳ ಸರ್ವಮಂತ್ರಂಗಳ ಮೂಲವು ಶ್ರೀ ಪಂಚಾಕ್ಷರಿ. ಶಿವಾದಿ ಸರ್ವತತ್ತ್ವಮೂಲವು ಶ್ರೀಗುರು. ಆ ಶ್ರೀ ಗುರು ಲಿಂಗ ಜಂಗಮ ಪ್ರಣವ ಸರ್ವಮೂಲವು. ಶ್ರೀ ಗುರು ಕರುಣಿಸಿದ ಮಹಾ ಇಷ್ಟಲಿಂಗವೆ ದೀಕ್ಷೆ ಶಿಕ್ಷೆ ಸರ್ವಭೋಗಾದಿ ಭೋಗಂಗಳೆಲ್ಲವಕ್ಕು. ಶಿವನ ಸಾಕಾರಮೂರ್ತಿ ಜಂಗಮಮೂರ್ತಿ.

ಕೇವಲಮುಕ್ತಿಮೂಲ ದಾಸೋಹ. ಇದು ತಪ್ಪದಯ್ಯಾ ! ಇದೇ ಜ್ಞಾನಮೂಲ, ಇದು ಸತ್ಯ ಶಿವನಾಣೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ!

ಟೀ. ಈ ವಚನ ಕಾಣಬಂದರ್ಥ. ೨೦

ವ. ಎಣ್ಣೆ ಬೇಱೆ ಬತ್ತಿ ಬೇಱೆ. ಎರಡೂ ಕೂಡಿ ಸೊಡರಾಯಿತ್ತು. ಪುಣ್ಯ ಬೇಱೆ ಪಾಪ ಬೇಱೆ. ಎರಡೂ ಕೂಡಿ ಒಡಲಾಯಿತ್ತು. ಮಿಗಬಾರದು ಮಿಗದಿರಬಾರದು. ಒಡಲಿಚ್ಛೆಯ ಸಲಿಸದೆ ನಿಮಿಷ ವಿರಬಾರದು. ಕಾಯಗುಣವಳಿದು ಮಾಯಾಜ್ಯೋತಿ ವಾಯುವ ಕೂಡದ ಮುನ್ನ ಭಕ್ತಿಯ ಮಾಡಬಲ್ಲರೆ ಆತನೇ ದೇವ ಗುಹೇಶ್ವರಾ!

ಟೀ. ಮನುಷ್ಯರು ಎಣ್ಣೆಯ ತೆಗೆದು ಬತ್ತಿಯ ಹೊಸೆದು ಅಗ್ನಿಯ ಕಚ್ಚಿಸಲು, ಆ ಎಣ್ಣೆ ಬತ್ತಿ ಅಗ್ನಿಯ ಕಚ್ಚಿ ಬಿಡದೆ ಜ್ಯೋತಿರೂಪವ ಮಾಡಿದಂತೆ, ಪರಶಿವನು ಪುಣ್ಯ ಪಾಪಂಗಳೆಂಬ ಕರ್ಮಯುಕ್ತವಾದ ದೇಹವ ಕಲ್ಪಿಸಿ, ಆತ್ಮಂಗೆ ಸಂಘಟಿತ ಮಾಡಿದಡೆ, ಆ ಕರ್ಮದೇಹವಾಸನೆ ಬಿಡದೆ ಆತ್ಮನ ಕಚ್ಚಿ ಭವದಲ್ಲಿ ತೊಳಲಿಸುತ್ತಿಹುದು. ಅಂತಪ್ಪ ಕರ್ಮದೇಹಧರ್ಮವ ಮೀಱಬಾರದಾರಿಗೆಯೂ ಎಂದಱಿದು, ಮನುಜದೇಹವಾದುದು ಅಳಿದು ಹೋಗದ ಮೊದಲೇ ಬೇಗ ಶಿವಭಕ್ತಿಯ ಮಾಡಿದರೆ ಶಿವನಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೨೧

ವ. ಗಾಳಿ ಹಡದಲ್ಲಿ ತೂಱಿಕೊಳ್ಳಿರೇ! ಗಾಳಿ ನಿನ್ನಾಧೀನವಲ್ಲ ಕಂಡಯ್ಯ! ನಾಳೆ ತೂಱಿಹೆನೆಂದಡೆ ಇಲ್ಲ ನೋಡಯ್ಯಾ! ಶಿವಶರಣೆಂಬುದೊಂದು ಗಾಳಿ ಹಡದಲ್ಲಿ ಬೇಗ ತೂಱೆಂದನಂಬಿಗರ ಚೌಡಯ್ಯ.

ಟೀ. ಗಾಳಿ ಬಂದಾಗವೇ ಭತ್ತದ ಹೊಟ್ಟ ತೂಱಿ ಘಟ್ಟಿಯನುಳುಹಿಕೊಂಬಂತೆ ಹಲವು ದೇಹಂಗಳೊಳಗೆ ಅಪೂರ್ವದ ಮನುಜದೇಹವ ಪಡೆದಲ್ಲಿ ಶಿವನಿಗೆ ಶರಣುಪೊಕ್ಕು ಶಿವಭಕ್ತಿಯ ಮಾಡಿ, ಭವಕರ್ಮದ ಹೊಟ್ಟ ಕಳೆದು ಘಟ್ಟಿಯೆಂಬ ಮುಕ್ತಿಯ ಪಡೆಯೆಂಬುದೀ ವಚನದ ತಾತ್ಪರ್ಯಾರ್ಥ. ೨೨

ವ. ಶರಣಸಂಬಂಧವನಱಿದ ಬಳಿಕ ಕೂಡೆ ಭವಿಗಳ ಬೆರಸಲಾಗದು. ಬ್ರಹ್ಮೇತಿ ಭ್ರೂಣಹತ್ಯ ವೈತರಣಿ ದುರ್ಗತಿ ಪಂಚಮಹಾಪಾತಕದಿಂದಧಿಕ ನೋಡಾ! ಅಳುಪಿ ಭವಿಯೊಡನುಂಡರೆ ಭಕ್ತನಲ್ಲ ಕೂಡಲಸಂಗಮದೇವಾ.

ಟೀ. ಈ ವಚನ ಕಾಣಬಂದರ್ಥ. ೨೩

ವ. ಶ್ವಪಚನಾದಡೇನು ಲಿಂಗಭಕ್ತನೆ ಕುಲಜ. ನಂಬಿ ನಂಬದಿರ್ದಡೆ ಸಂದೇಹಿ ನೋಡಾ. ಕಟ್ಟಿದರೇನು, ಮುಟ್ಟಿದರೇನು, ಪೂಜಿಸಿದಡೇನು ಮನ ಮುಟ್ಟದನ್ನಕ್ಕ? ಭಾವಶುದ್ಧವಿಲ್ಲದವಂಗೆ ಭಕ್ತಿ ನೆಲೆಗೊಳ್ಳದು ಕೂಡಲಸಂಗಯ್ಯ ನೀನೊಲಿದಂಗಲ್ಲದೆ.

ಟೀ. ಈ ವಚನ ಕಾಣಬಂದರ್ಥ. ೨೪

ವ. ಕಂಡ ಕನಸಿನಲ್ಲಿ ನಿಧಾನವ ಕಂಡೆನಯ್ಯಾ ! ಅಗಲಬಾರದ ನಿಧಾನವ ಕಂಡೆನಯ್ಯಾ ! ಕೂಡಲಸಂಗಮದೇವನೆಂಬ ನಿಧಾನವನೆನ್ನ ಕರಸ್ಥಲ ದಲ್ಲಿ ಕಂಡು ಬಿಡಲಾರದೆ ಬೆಱಗಾಗುತ್ತಿರ್ದೆನಯ್ಯಾ !

ಟೀ. ಕರಸ್ಥಲದ ಲಿಂಗದ ಕಳೆಯು ಭಾವಿಸಿ ನೋಡಲು, ಒಳಹೊಱಗೆಲ್ಲಾ ಅಖಂಡ ಪರಿಪೂರ್ಣವಾಗಿ ಪರವಶನಾಗಿರ್ದೆನೆಂದು ಬಸವಣ್ಣ ನಿರೂಪಿಸಿದ ವಚನದ ತಾತ್ಪರ್ಯಾರ್ಥ. ೨೫

ವ. ನೆನಹಿನ ನಲ್ಲನು ಮನೆಗೆ ಬಂದಡೆ ನೆನೆವುದಿನ್ನಾರನು ಹೇಳವ್ವಾ? ನೆರೆವ ಕ್ರೀಯಲ್ಲಿ ನೆರೆದು ಸುಖಿಯಹುದಲ್ಲದೆ ನೆನೆವುದಿನ್ನಾರನೆಲಗವ್ವಾ ? ನೆನಹಿನ ನಲ್ಲನು ಉರಿಲಿಂಗದೇವನ ಕರಸ್ಥಲದಲ್ಲಿ ಕಂಡ ಬಳಿಕ ನೆನವುದಿನ್ನಾರನೆಲಗವ್ವಾ ?

ಟೀ. ಅಱಿದು ನೆನೆದು ಭಾವಿಸಿಕೊಂಬ ಪರಬ್ರಹ್ಮವೇ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬಂದು ಕಣ್ಮನಂಗಳಿಗೆ ಪ್ರತ್ಯಕ್ಷವಾಗಿರಲು ಮನೋರತಿಯಿಂದ ಲಿಂಗಾ ರ್ಚನೆಯ ಮಾಡಿ ಆ ಇಷ್ಟಲಿಂಗದಲ್ಲಿ ಅಭಿನ್ನಭಾವವ ಘಟಿಸಿ ಶಿವಸುಖವ ಪಡೆಯ ಲಱಿಯದೆ ದೂರಸ್ಥನ ಮಾಡಿ ಭಿನ್ನವಿಟ್ಟು ನೆನೆಯಲಾಗದೆಂಬುದೀ ವಚನದ ತಾತ್ಪರ್ಯಾರ್ಥ. ೨೬

ವ. ಅಚ್ಚುಗವೇಕಯ್ಯಾ ಸಂಸಾರದೊಳಗೆ ? ನಿಚ್ಚ ನಿಚ್ಚ ಶಿವರಾತ್ರೆಯ ಮಾಡುವುದು! ಅರ್ಚನೆ ಪೂಜನೆಯ ಮಾಡುವುದು! ಬೇಗ ಬೇಗ ನಮ್ಮ ಕೂಡಲಸಂಗನ ಕೂಡುವುದು!

ಟೀ. ಈ ವಚನ ಕಾಣಬಂದರ್ಥ. ೨೭

ವ. ಕೈಮುಱಿದು ಕಾದುವಂಕವಿದೇಕೋ ? ಭಾವವ ಮುಱಿದು ನೋಡುವ ನೋಟವಿದೇಕೋ ? ಭಯವ ಮುಱಿದು ಮಾಡುವ ಭಕ್ತಿಯಿದೇಕೋ ? ಏಕಾಂತದ ಸುಖವು ಲೋಕಾಂತವದೇಕೋ ? ರೇಕಣ್ಣಪ್ರಿಯನಾಗಿನಾಥನಲ್ಲಿ ಗುರುವ ಮುಱಿದು ಲಿಂಗವನೊಲಿಸಿಹೆನೆಂಬುದದೇಕೋ ?

ಟೀ. ಕರಸ್ಥಲದ ಇಷ್ಟಲಿಂಗವ ಮನಸ್ಸು ದೃಢವಿಡಿದು ಪೂಜಿಸುವ ಜ್ಞಾನ ಕ್ರೀಯಿಂದ ವೈರಿಗಳಪ್ಪ ಕಾಲ ಕಾಮರ ಭೇದಿಸಿ ಮುಕ್ತಿಯ ಪಡೆದಲ್ಲದೆ ಇಷ್ಟಲಿಂಗದಲ್ಲಿ ದೃಢಭಾವದ ಕ್ರೀಯಿಂದಲ್ಲದೆ ಬಱಿಯ ವಾಗದ್ವೈತದಿಂದ ಕಾಲಭಯವ ಜಯಿಸಲಱಿಯನೆಂಬುದೀಗ ' ಕೈಮುಱಿದು ಕಾದುವ ಅಂಕವಿದೇಕೋ ' ಎಂಬ ಶಬ್ದಕ್ಕರ್ಥ. ಆ ಇಷ್ಟಲಿಂಗದ ಕಲಾಸ್ವರೂಪ ಮನೋರತಿಯಿಂದ ಭಾವಿಸಿ ಬೆರೆದಾತಂಗೆ ಶಿವಸುಖ ದೊರೆಕೊಂಬುದಲ್ಲದೆ ಬಱಿದೆ ಬಾಹ್ಯದ ದೃಷ್ಟಿಯಿಂದ ಲಿಂಗವ ನೋಡಿದಲ್ಲಿ ಶಿವಸುಖ ದೊರಕದೆಂಬುದೀಗ ' ಭಾವವ ಮುಱಿದು ನೋಡುವ ನೋಟವಿದೇಕೋ ' ಎಂಬ ಶಬ್ದಕ್ಕರ್ಥ. ಗುರು ಲಿಂಗ ಜಂಗಮಕ್ಕೆ [೧]ಕಿಂಕಿಲನಾಗಿ[೧] ಭಯಭಕ್ತಿಯಿಂದ ಭಕ್ತಿಯ ಮಾಡಿದರೆ ಮುಕ್ತಿಯಹುದಲ್ಲದೆ ಅಹಂಕಾರದಿಂದ ಮಾಡಿದ ಭಕ್ತಿ ವ್ಯರ್ಥವಹುದೆಂಬುದೀಗ ' ಭಯವ ಮುಱಿದು ಮಾಡುವ ಭಕ್ತಿಯಿದೇಕೋ ' ಎಂಬ ಶಬ್ದಕ್ಕರ್ಥ. ಗುರುಭಕ್ತಿಯ ಬಿಟ್ಟು ಬಱಿಯ ಲಿಂಗಭಕ್ತಿಯ ಮಾಡಿದರೆ ಶಿವನೊಲಿಯನೆಂಬುದೀಗ ' ಗುರುವ ಮುಱಿದು ಲಿಂಗವ ನೊಲಿಸಿಹೆನೆಂಬುದದೇಕೋ ' ಎಂಬ ಶಬ್ದಕ್ಕರ್ಥ. ೨೮

ವ. ಅಷ್ಟವಿಧಾರ್ಚನೆ ಷೋಡಶೋಪಚಾರ ಹುಸಿ ಕಾಣಿರೇ. ಗಾಣದೆತ್ತಿನಂತೆ ಮೆಟ್ಟಿದ ಹಜ್ಜೆಯ ಮೆಟ್ಟುವ ಭಕ್ತನ ಪರಿಯ ನೋಡಾ ! ಕೊಂಬಲ್ಲಿ ಅಯಿದುವನು, ಕೊಡುವಲ್ಲಿ ನಾಲ್ಕುವನು ಒಂಭತ್ತಱಿಂದಲ್ಲಿ ಭಕ್ತಿಭಾಗಕ್ಕಿನ್ನೆಂತೋ ? ಮೂರ್ತಿವಿಡಿದು ಮೂರ್ತಿಯನಱಿಯರು. ಮಾಱುವರು ಗುರು ಲಿಂಗವನು ತ್ರಿವಿಧಕ್ಕೆ ಚಿಕ್ಕಯ್ಯಪ್ರಿಯಸಿದ್ಧಲಿಂಗ ಇಲ್ಲ ಇಲ್ಲ.

ಟೀ. ಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರಗಳ ಮಾಡಿ ಫಲ ಪದಂಗಳ ಪಡೆದು, ಆ ಭೋಗ ತೀರಿದ ಬಳಿಕ ಮುನ್ನಿನಂತೆ ಜನನ ಮರಣಕ್ಕೆ

೧ ಕಿಂಕಲ (ಎ.)

ಬರುತ್ತಿಹನು. ಲಿಂಗಭಕ್ತನ ಪರಿಯಿಂತುಟೆಂಬುದೀಗ ' ಅಷ್ಟವಿಧಾರ್ಚನೆ ಷೋಡಶೋಪಚಾರ ಹುಸಿ ಕಾಣಿರೋ, ಗಾಣದೆತ್ತಿನಂತೆ ಮೆಟ್ಟಿದ ಹಜ್ಜೆಯ ಮೆಟ್ಟುವ ಭಕ್ತನ ಪರಿಯ ನೋಡಾ ' ಎಂಬ ಶಬ್ದಕ್ಕರ್ಥ. ಶಿವನ ಐದು ಮುಖಂಗಳಿಂದ ಹುಟ್ಟಿದ ಐದು ತತ್ತ್ವಂಗಳೆ ದೇಹವಾಯಿತ್ತು. ಆ ಅಯಿದು ತತ್ತ್ವಂಗಳೊಳಗೆ ಆಕಾಶಸ್ವರೂಪನೀಗ ಜೀವನು. ಅಂತು ಶಿವನ ಅಯಿದು ಮುಖಂಗಳಿಂದೊಗೆದ ಅಯಿದು ತತ್ತ್ವಂಗಳನೂ ಆ ಶಿವನ ಅಯಿದು ಮುಖಕ್ಕೆ ಪೂಜೆಯ ಮಾಡಿ ಸಮರ್ಪಿಸಲಱಿಯದೆ, ನಾಲ್ಕು ತತ್ತ್ವಂಗಳನರ್ಪಿಸಿ, ಜೀವಾತ್ಮನನರ್ಪಿಸಲಱಿಯುದಾದರೆಂಬುದೀಗ ' ಕೊಂಬಲ್ಲಿ ಅಯಿದುವನು, ಕೊಡುವಲ್ಲಿ ನಾಲ್ಕುವನು ' ಎಂಬ ಶಬ್ದಕ್ಕರ್ಥ. ಅಂತು ಲಿಂಗದೈದು ಮುಖಕ್ಕೆ ನಾಲ್ಕು ತತ್ತ್ವವನರ್ಪಿಸಿ ಒಂದು ಜೀವಾತ್ಮನುಳಿಯಿತ್ತಾಗಿ ಉಳಿದ ಜೀವಾತ್ಮಂಗೆ ಶಿವನಲ್ಲಿ ಕೂಟವಿಲ್ಲದೆ ಹೋಯಿತ್ತೆಂಬುದೀಗ ' ಒಂಭತ್ತಱಿಂದಲ್ಲಿ ಭಕ್ತಿಭಾಗಕ್ಕೆನ್ನೆಂತೋ ' ಎಂಬ ಶಬ್ದಕ್ಕರ್ಥ. ಅಂತು ಜೀವನ ಸಾಕಾರವ ಶಿವನ ಸಾಕಾರಕರ್ಪಿಸಿ ಮುಕ್ತರಾಗಲಱಿಯದೆ ಲಿಂಗವ ಪೂಜಿಸಿ ಹೊನ್ನು ಹೆಣ್ಣು ಮಣ್ಣ ಪಡೆವರೆಲ್ಲರೂ ಲಿಂಗವ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಿಂದ ಅಲಂಕರಿಸಿ ಲಿಂಗವ ಬೆಲೆಮಾಡಿ ಮಾಱಿ ಹೊನ್ನು ಹೆಣ್ಣು ಮಣ್ಣ ಕೊಂಡು ಭವಕ್ಕೀಡಾದರು ಲಿಂಗಪೂಜಕರು. ಅವರಂಗದಲ್ಲಿ ಶಿವನಿಲ್ಲವೆಂಬುದೀಗ ಮೂರ್ತಿವಿಡಿದು ಮೂರ್ತಿಯನಱಿಯರು. ' ಮಾಱುವರು ಗುರುಲಿಂಗವನು ತ್ರಿವಿಧಕ್ಕೆ ಚಿಕ್ಕಯ್ಯಪ್ರಿಯ ಸಿದ್ಧಲಿಂಗಯಿಲ್ಲಯಿಲ್ಲ ' ವೆಂಬ ಶಬ್ದಕ್ಕರ್ಥ. ೨೯

**ವ.** ಜಂಗಮ ಬರಬೇಕೆಂದು ಲಿಂಗಾರ್ಚನೆಯ ಮಾಡುವುದು. ಆ ಜಂಗಮ ಬಂದರೆ ತನ್ನ ಲಿಂಗಾರ್ಚನೆಯ ಮಾಣ್ದು ಜಂಗಮಾರ್ಚನೆಯ ಮಾಡುವುದು. ಆ ಲಿಂಗದಲೇನುಂಟು ? ಆ ಜಂಗಮದಲೇನುಂಟು ? ಲಿಂಗದಲ್ಲಿ ಕುಲವುಂಟು, ಛಲವುಂಟು, ಫಲವುಂಟು, ಪದವುಂಟು, ಭವವುಂಟು. ಜಂಗಮದಲ್ಲಿ ಕುಲಂ ನಾಸ್ತಿ ಛಲಂ ನಾಸ್ತಿ ಫಲಂ ನಾಸ್ತಿ ಪದಂ ನಾಸ್ತಿ ಭವಂ ನಾಸ್ತಿ. ಇದು ಕಾರಣ ಕೂಡಲಚೆನ್ನಸಂಗಮದೇವರಲ್ಲಿ ಜಂಗಮವೆ ಲಿಂಗವೆಂದು ನಂಬಿದನಾಗಿ ಬಸವಣ್ಣ ಸ್ವಯಲಿಂಗವಾದ.

**ಟೀ.** ಈ ವಚನ ಕಾಣಬಂದರ್ಥ. ೩೦

**ವ.** ಕಲ್ಲನಾಗರ ಕಂಡರೆ ಹಾಲನೆಱೆಯೆಂಬರು. ದಿಟದ ನಾಗರ ಕಂಡರೆ ಕೊಲ್ಲೆಂಬರಯ್ಯ. ಉಂಬ ಜಂಗಮ ಬಂದಡೆ ನಡೆಯೆಂಬರು.

ಉಣ್ಣದ ಲಿಂಗಕ್ಕೆ ಬೋನವ ಹಿಡಿಯೆಂಬರಯ್ಯ. ನಮ್ಮ ಕೂಡಲ ಸಂಗನ ಶರಣರ ಕಂಡು ಉದಾಸೀನವ ಮಾಡಿದರೆ ಕಲ್ಲ ತಾಗಿದ [1]ಮಿಟ್ಟೆ[1]ಯಂತಪ್ಪರಯ್ಯಾ.

ಟೀ. ಈ ವಚನ ಕಾಣಬಂದರ್ಥ. ೩೧

ವ. ಎಱೆದಡೆ ನೆನೆಯದು. ಮಱೆದಡೆ ಬಾಡದು. ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆ. ಕೂಡಲಸಂಗಮದೇವ ಜಂಗಮಕ್ಕೆಱೆದಡೆ ಸ್ಥಾವರ ನೆನೆಯಿತ್ತು.

ಟೀ. ಲಿಂಗಪೂಜೆಯಲ್ಲಿ ಶಿವನು ತೃಪ್ತನಲ್ಲ, ಜಂಗಮಪೂಜೆಯಲ್ಲಿ ಶಿವನು ತೃಪ್ತನೆಂಬುದೀ ವಚನದ ತಾತ್ಪರ್ಯಾರ್ಥ. ೩೨

ವ. ತನುವ ಕೊಟ್ಟು ಗುರುವನೊಲಿಸಬೇಕು. ಮನವ ಕೊಟ್ಟು ಲಿಂಗವ ನೊಲಿಸಬೇಕು. ಧನವ ಕೊಟ್ಟು ಜಂಗಮವನೊಲಿಸಬೇಕು. ಈ ತ್ರಿವಿಧವ ಮಱೆಸಿಕೊಂಡು ಹಱೆಯ ಹೊಯಿಸಿ ಕುಱುಹ ಪೂಜಿಸುವ [2]ಢಂಭಕರ[2] [3]ಮೆಚ್ಚ[3] ಕೂಡಲಸಂಗಮದೇವ.

ಟೀ. ಈ ವಚನ ಕಾಣಬಂದರ್ಥ. ೩೩

ವ. ಆಡೂದಳವಟ್ಟಿತ್ತು. ಹಾಡೂದಳವಟ್ಟಿತ್ತು. ಅರ್ಚನೆಯಳವಟ್ಟಿತ್ತು. ಪೂಜನೆಯಳವಟ್ಟಿತ್ತು. ನಿತ್ಯಲಿಂಗಾರ್ಚನೆ ಮುನ್ನವೆ ಅಳವಟ್ಟಿತ್ತು. ಕೂಡಲ ಸಂಗನ ಶರಣರು ಬಂದರೆ [4]ಏನು[4]ಬೆಸನೆಂಬುದು ಒಪ್ಪಚ್ಚಿ ಯಳವಡದು.

ಟೀ. ಈ ವಚನ ಕಾಣಬಂದರ್ಥ. ೩೪

ವ. ಮರಕ್ಕೆ ಬೇರು ಬಾಯೆಂದು ತಳಕ್ಕೆ [5]ನೀರೆಱೆದರೆ[5] ಮೇಲೆ ಪಲ್ಲವಿಸಿತ್ತು. ಲಿಂಗಕ್ಕೆ ಜಂಗಮವೆ ಬಾಯೆಂದು ಪಡಿಪದಾರ್ಥವ ನೀಡಿದರೆ ಕೂಡಲಸಂಗಯ್ಯಂಗೆ ಸಂತುಷ್ಟವಾಯಿತ್ತು.

೧ ಮಿಂಟೆ (ಹು.)   ೨ ಬಱೆಯ ಡಂಭಕರ (ಹು.)   ೩ ಮಚ್ಚ (ಎ.)
೪ ಏನಿ (ಹು. ರಾ.)   ೫ ನೀರನೆಱೆದರೆ (ಹು. ಎ.)

ಟೀ. ಈ ವಚನ ಕಾಣಬಂದರ್ಥ. ೩೫

ವ. ಜಂಗಮವಿಲ್ಲದ ಮಾಟ, ಕಂಗಳಿಲ್ಲದ ನೋಟ ಹಿಂಗಿತ್ತು. ಶಿವ ಲೋಕವಿನ್ನೆಲ್ಲಿಯದಯ್ಯ ? ಲಿಂಗಕ್ಕೆ ಮಾಡಿದ ಬೋನವ ಸಿಂಬಕ ತಿಂಬಂತೆ ಸಮಯೋಚಿತವನಱಿಯದೆ ಉದರವ ಹೊರೆವರನು ನರಕದಲಿ ಕೆಡಹದೆ ಮಾಣ್ಬನೇ ಕೂಡಲ ಸಂಗಮದೇವಾ ?

ಟೀ. ಈ ವಚನ ಕಾಣಬಂದರ್ಥ. ೩೬

ವ. ಗೀತವ ಬಲ್ಲಾತ ಜಾಣನಲ್ಲ. ಮಾತ ಬಲ್ಲಾತ ಜಾಣನಲ್ಲ. ಜಾಣನು ಜಾಣನು ಆತ ಜಾಣನು. ಲಿಂಗವ ನೆಱೆನಂಬಿದಾತ ಜಾಣನು. ಜಂಗಮಕ್ಕೆ ಸವೆಸುವಾತ ಜಾಣನು. ಜವನ ಬಾಯಲ್ಲಿ ಬಾಲವ ಕೊಯಿದು ಹೋದಾತ ಆತ ಜಾಣನು. ನಮ್ಮ ಕೂಡಲಸಂಗನ ಶರಣರೆ ಜಾಣರು.

ಟೀ. ಹಾಡಬಲ್ಲ ಓದಬಲ್ಲ ನುಡಿಯಬಲ್ಲವರು ಜಾಣರಲ್ಲ. ಗುರುಲಿಂಗ ಜಂಗಮಕ್ಕೆ ತನುಮನ ಧನವ ಸಮರ್ಪಿಸಿ ದೇಹವಾಸನೆಯನಳಿದು ಜವನ ಬಾಯಿಗೆ ತುತ್ತು ಮಾಡುವ ಮಲಪಾಶಂಗಳ ಹಱಿದು, ಜನನ ಮರಣವ ಜಯಿಸಿ, ಲಿಂಗವಾದ ಶರಣನೆ ಜಾಣನೆಂಬುದೀ ವಚನದ ತಾತ್ಪರ್ಯಾರ್ಥ. ೩೭

ವ. ಭಿತ್ತಿಯಿಲ್ಲದೆ ಬರೆಯಬಹುದೇ ಚಿತ್ತಾರವ ? ಬಿತ್ತಿ ಬೆಳೆಯಬಹುದೇ ಧರೆಯಿಲ್ಲದೆ ಬೆಳಸ ? ಜಂಗಮವಿಲ್ಲದ ಮಾಟವ ಮಾಡಿ ರೂಢೀಶ್ವರನ ಭೇದಿಸಬಹುದೇ ? ಒಡಲಿಲ್ಲದ ನಿರಾಳ ಕರ್ಪುರ ಕೂಡಲ ಸಂಗಮದೇವ ಜಂಗಮಮುಖವಾದನಾಗಿ ಮತ್ತೊಂದನಱಿಯೆ ನಯ್ಯಾ !

ಟೀ. ಈ ವಚನ ಕಾಣಬಂದರ್ಥ. ೩೮

ವ. ಊಡಿದಡುಣ್ಣದು ನೀಡಿದಡಱಿಯದು. ಕಾಡದು ಬೇಡದು ಒಲಿಯದು ನೋಡಾ ! ಊಡಿದರುಂಡು ನೀಡಿದಡೊಲಿದು ಬೇಡಿದ ವರವ ಕೊಡುವ ಜಂಗಮಲಿಂಗದ ಪಾದವ ಹಿಡಿದು ಬದುಕಿದೆ ಕಾಣಾ ಚೆನ್ನಮಲ್ಲಿಕಾರ್ಜುನಾ !

ಟೀ. ಈ ವಚನ ಕಾಣಬಂದರ್ಥ. ೪೯

ವ. ಸಮನಿಸದಯ್ಯಾ ಭವಿಯ ಸಂಗ ಭಕ್ತಂಗೆ. ಸಮನಿಸದಯ್ಯಾ ಲಿಂಗ ಪ್ರಾಣಿಗೆ ಅನರ್ಪಿತ. ಸಮನಿಸದಯ್ಯಾ ಪ್ರಾಣಲಿಂಗಸಂಬಂಧಿಗೆ ಬಹುಲಿಂಗ ಪ್ರಸಾದ. ಇಂತೀ ಮೂಱಕ್ಕೆಳಕದಿರ್ದೆನಾದೊಡೆ ನಾಯಕನರಕದಲಿಕ್ಕುವ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಟೀ. ಈ ವಚನ ಕಾಣಬಂದರ್ಥ. ೫೦

ವ. ಗೀತವ [1]ಹಾಡಿದರೇನು ?[1] ಶಾಸ್ತ್ರಪುರಾಣವ [2]ಕೇಳಿದರೇನು ?[2] ವೇದವೇದಾಂತವನೋದಿದೊಡೇನು ? ಮನವೊಲಿದು ಲಿಂಗ ಜಂಗಮವ ಪೂಜಿಸಲಱಿಯದವರು ಇವೆಲ್ಲಱಲ್ಲಿಯೂ ಅನುಭಾವಿಯಾದೊಡೇನು ? ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವಾ.

ಟೀ. ಈ ವಚನ ಕಾಣಬಂದರ್ಥ. ೫೧

ವ. ಶಾಸ್ತ್ರ ಘನವೆಂಬೆನೇ ಕರ್ಮವ ಭಜಿಸುತ್ತದೆ. ವೇದ ಘನವೆಂಬೆನೇ ಪ್ರಾಣವಧೆಯ ಹೇಳುತ್ತದೆ. ಶ್ರುತಿ ಸ್ಮೃತಿ ಘನವೆಂಬೆನೇ ಮುಂದಿಟ್ಟು ಅಱಸುತ್ತದೆ. ಅಲ್ಲೆಲ್ಲಿಯೂ ಸೀವಿಲ್ಲದ ಕಾರಣ ತ್ರಿವಿಧದಾಸೋಹದಲ್ಲಲ್ಲದೆ ಕಾಣಬಾರದು ಕೂಡಲಸಂಗಮದೇವರಾ.

ಟೀ. ಈ ವಚನ ಕಾಣಬಂದರ್ಥ. ೫೨

ವ. ಪಾಪಿಯ ಧನವು ಪ್ರಾಯಶ್ಚಿತ್ತಕ್ಕಲ್ಲದೆ ಸತ್ಪಾತ್ರಕ್ಕೆ ಸಲ್ಲದಯ್ಯಾ. ನಾಯ ಹಾಲು ನಾಯಿಗಲ್ಲದೆ ಪಂಚಾಮೃತಕ್ಕೆ ಸಲ್ಲದಯ್ಯಾ. ನಮ್ಮ ಕೂಡಲಸಂಗನ ಶರಣರಿಗಲ್ಲದೆ ಮಾಡುವ ಅರ್ಥ ವ್ಯರ್ಥ ಕಂಡಯ್ಯಾ.

ಟೀ. ಈ ವಚನ ಕಾಣಬಂದರ್ಥ. ೫೩

ವ. ಆಡಿನ ಕೊರಳಲ್ಲಿ ಮೊಲೆಯಿದ್ದರೇನು, ಅಮೃತವದಕ್ಕೆ ಉಂಟೇ ? ಭಕ್ತನಾದಲ್ಲಿ ಫಲವೇನು ಶಿವಪಥವನಱಿಯದನ್ನಕ್ಕ ? ದಕ್ಷಾಲಿ

---

೧ ಹಾಡಿದೊಡೇನು (ರಾ.) ೨ ಕೇಳಿದೊಡೇನು (ರಾ)

ಬಿದ್ದ ಕಣ್ಣಿನಂತೆ ಜಂಗಮದ ಮೇಲೆ ಹರುಷವಿಲ್ಲದ ನೋಟ. ಕೂಡಲಚೆನ್ನಸಂಗನ ಶರಣರ ಬೆರಸದ ಹರುಷದ ಅರಸಿಯ ನೋಟದಂತೆ.

ಟೀ. ಜಂಗಮವೆ ಶಿವನೆಂದಱಿದು ವಿಶ್ವಾಸ ಘಟಿಸಿ ನಂಬಿ ನಚ್ಚಿ ಮಚ್ಚಿ ತ್ರಿಪದಾರ್ಥದಲ್ಲಿ ವಂಚನೆಯಿಲ್ಲದೆ ಭಕ್ತಿಯ ಮಾಡಿ ಮುಕ್ತಿಯ ಪಡೆವುದೇ ಶಿವಪಥವು. ಅಂತಲ್ಲದೆ ಡಂಭಕಸಟಿಗನ ಭಕ್ತಿಯೆಂತೆಂದೊಡೆ ಆಡಿನ ಕೊರಳಲ್ಲಿಪ್ಪ ಹಾಲಿಲ್ಲದೆ ಜೋಲುವ ಮೊಲೆಯಂತೆ, ದೃಷ್ಟಿಹೋಗಿ ನಿಲುಗಣ್ಣು ಬಿದ್ದ ಕಣ್ಣಿನ ನೋಟದಂತೆ, ಪುರುಷನ ಮೇಲೆ ಒಲುಮೆಯಿಲ್ಲದ ಜಾರಸ್ತ್ರೀಯ ಸಟೆಯ ಬೇಟದ ನೋಟದಂತೆ ಡಂಭಕ [1]ಸಟೆಗನ[1] ಭಕ್ತಿಯೆಂಬುದೀ ವಚನದ ತಾತ್ಪರ್ಯಾರ್ಥ. ೪೪

ವ. ಹಸಿದು ಬಂದ ಗಂಡಂಗೆ ಉಣಲಿಕ್ಕದೆ ಬಡವಾದನೆಂದು ಮಱುಗುವ ಸತಿಯ ಸ್ನೇಹದಂತೆ ಬಂದುದನಱಿಯಳು, ಇದ್ದುದ ಸವೆಸಳು. ದುಃಖವಿಲ್ಲದಕ್ಕೆ ಹಗರಣಿಗನ ತೆಱನಂತೆ. ಕೂಡಲಸಂಗನ ಶರಣರಿಗೆ ತ್ರಿವಿಧವ ವಂಚಿಸಿ ಬಣ್ಣಿಸುವನ ಭಕ್ತಿಯ ಕಂಡು ನಾನು ನಾಚಿದೆನು.

ಟೀ. ಈ ವಚನ ಕಾಣಬಂದರ್ಥ. ೪೫

ವ. ಭಕ್ತಿಯೆಂಥಾದಯ್ಯಾ ? ದಾಸಯ್ಯ ಮಾಡಿದಂಥಾದಯ್ಯಾ. ಭಕ್ತಿಯೆಂಥಾದಯ್ಯಾ ? ಸಿರಿಯಾಳ ಮಾಡಿದಂಥಾದಯ್ಯಾ. ಭಕ್ತಿಯೆಂಥಾದಯ್ಯಾ ? ಬಲ್ಲಾಳ ಮಾಡಿದಂಥಾದಯ್ಯಾ. ಭಕ್ತಿಯೆಂಥಾದಯ್ಯಾ ? ಕೂಡಲಸಂಗಮದೇವ ನೀ ಬಾಣನ ಬಾಗಿಲ ಕಾಯ್ದಂಥಾದಯ್ಯಾ.

ಟೀ. ಈ ವಚನ ಕಾಣಬಂದರ್ಥ. ೪೬

ವ. ಮುನ್ನಿನವರು ಹೋದ ದಾರಿ ಭಯ ಕಾಣಿರಣ್ಣಾ ! ಬಲ್ಲಾಳನ ವಧುವಿನೊಡನೆ ಸರಸವಾಡಿದುದಿಂದ ಭಯ ಕಾಣಿರಣ್ಣಾ ! ಸಿರಿಯಾಳನ ಮಗನ ಬೇಡಿದುದಿಂದ ಭಯ ಕಾಣಿರಣ್ಣಾ ! ದಾಸನ ವಸ್ತ್ರವ ಸೀಳಿದುದಿಂದ ಭಯ ಕಾಣಿರಣ್ಣಾ ! ಅಘಟಿತ ಘಟಿತರು, ವಿಪರೀತ

[1] ಶಠೆಯ (ಹು.), ಶಠೆಗನ (ರಾ.)

ಚರಿತರು ಕೂಡಲಸಂಗನ ಶರಣರು ನಡೆದ ದಾರಿ ಭಯ ಕಾಣಿ ರಣ್ಣಾ !

ಟೀ. ಈ ವಚನ ಕಾಣಬಂದರ್ಥ. ೪೭

ವ. ದೇವನೊಳ್ಳಿದನೆಂದು ಮುಯ್ಯಾನಲು ಬೇಡ. ಅಳಿಸುವ ನಗಿಸುವ ನೊಳ್ಳಿದನೇ ? ತಱಕಟ ಕಾಡುವನೊಳ್ಳಿದನೇ ? ಬೆಚ್ಚದೆ ಬೆದಱದೆ ತೊತ್ತುತನವ ಮಾಡಲು ತನ್ನಂತೆ ಮಾಡುವ ಕೂಡಲಸಂಗಮದೇವ.

ಟೀ. ಈ ವಚನ ಕಾಣಬಂದರ್ಥ. ೪೮

ವ. ಇಱಿಸಿಕೊಂಡು ಭಕ್ತರಾದರೆಮ್ಮವರು. ತಱಿಸಿಕೊಂಡು ಭಕ್ತರಾದ ರೆಮ್ಮವರು. ಕೊಱಸಿಕೊಂಡು ಭಕ್ತರಾದರೆಮ್ಮವರು. ಜಱಸಿಕೊಂಡು ಭಕ್ತರಾದರೆಮ್ಮವರು. ಕೂಡಲಸಂಗನ ಶರಣರಿಗೆ ಮುನಿಸ ತಾಳಿ ಎನ್ನ ಭಕ್ತಿ ಅರೆಯಾಯಿತ್ತು.

ಟೀ. ಈ ವಚನ ಕಾಣಬಂದರ್ಥ. ೪೯

ವ. ಕಾಣಿಯ ಲೋಭ ಕೋಟಿಯ ಲಾಭವ ಕೆಡಿಸಿದುದ ನಾನಱಿಯೆ ನಯ್ಯಾ. ಭಕ್ತಿಯ ಕುಳವನಱಿಯದೆ ಮತಿಗೆಟ್ಟ ಪರಿಯ ನಾನಱಿಯೆ ನಯ್ಯಾ. ಕೂಡಲಸಂಗನ ಶರಣರ ಸನ್ನಿಧಿಯಿಂದ ಅಱಿದರೆ ಆನು ಬದುಕುವೆನಯ್ಯಾ.

ಟೀ. [೧]ಶಿವಾಂಶಕನಾದ[೧] ಆತ್ಮನು ಶಿವಾಜ್ಞೆಯಿಂದ ದೇಹಸಂಬಂಧಿಯಾದಲ್ಲಿ ಅಲ್ಪ ದೇಹೇಂದ್ರಿಯ ವಿಷಯಸುಖಕ್ಕೆ ಆಸೆಮಾಡಿ, ತನ್ನ ನಿಜವಪ್ಪ ಘನತರದ ಶಿವನಲ್ಲಿ ಬೆರಸಿ ಶಿವಸುಖವ ಪಡೆದಿಪ್ಪ ಭಕ್ತಿಜ್ಞಾನವ ಮಱೆದು ಕೆಟ್ಟಿರ್ದ ಜೀವಾತ್ಮಂಗೆ ಶಿವಶರಣರ ಸಂಗವ ಬಿಡದೆ ಮಾಡಿದರೆ ಭಕ್ತಿ ನೆಲೆಗೊಂಡು ಮುಕ್ತಿಯಹುದೆಂಬುದೀ ವಚನದ ತಾತ್ಪರ್ಯಾರ್ಥ. ೫೦

ವ. ಕಾಣುತ್ತ ಕಾಣುತ್ತ ಕಡೆಗಣಿಸಿ ಕೆಡಿಸಿ ಅಱಸುವ ಮತಿಭ್ರಷ್ಟ ನಾನು ಲಿಂಗಯ್ಯಾ ! ತನುಲೋಭ ಮನಲೋಭ ಧನಲೋಭ ಮುಂದು

೧ ಶಿವಾಂಶಿಕವಾದ (ರಾ. ಎ.)

ಗೆಡಿಸಿ ಕಾಡಿತ್ತೆನ್ನ. ತನುಮನಧನವ ಶಿವಂಗೆ ನಿವೇದಿಸಿದ ಭಕ್ತರ ಮನೆಯ ಮಗ ನಾನಯ್ಯಾ ಕೂಡಲಸಂಗಮದೇವಾ !

ಟೀ. ಶಿವನ [೧]ಚಿದಂಶಿಕವೆ[೧] ಆತ್ಮನಾಗಿ ತನ್ನ ನಿಜವ ಮಱೆದು ದೇಹೋಽಹಂ ಎಂದು ದೇಹಸಂಬಂಧಿಯಾಗಿ ಅಜ್ಞಾನವೆಡೆಗೊಂಡು ಜೀವನೆನಿಸಿ ಕೆಟ್ಟಲ್ಲಿ ಮರಳಿ ತನ್ನ ನಿಜವನಱಿದು ಕೂಡಿಹೆನೆಂದೊಡೆ ತನುಮನಧನಂಗಳ ಮೇಲಣಾಸೆ ಹಿಡಿದು ಬಿಡದೆ ಕಾಡುತ್ತಿರ್ಪುದಾಗಿ ನಿಜವ ಕೂಡಬಾರದಾರಿಗೆಯೂ. ಅಂತಪ್ಪ ತನುಮನಧನಂಗಳ ಗುರುಲಿಂಗಜಂಗಮಕ್ಕೆ ಸಮರ್ಪಿಸಿದ ಸದ್ಭಕ್ತಂಗಲ್ಲದೆ ಮುಕ್ತಿಯಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೫೮

ವ. ಸೋಲಬಲ್ಲರು ಅವರು ಗೆಲಲಱಿಯರಯ್ಯಾ. ತನುಮನಧನದಲ್ಲಿ ವಂಚನೆಯನಱಿಯರಯ್ಯಾ ದಾಸ ಸಿರಿಯಾಳನವರು. ಕೂಡಲಸಂಗನ ಶರಣರು ಬಱಿಯ ಉಪಚಾರವನಱಿಯರಯ್ಯಾ.

ಟೀ. ಈ ವಚನ ಕಾಣಬಂದರ್ಥ. ೫೯

ವ. ಅರ್ಥ ಪ್ರಾಣ ಅಭಿಮಾನದಲ್ಲಿ ವಂಚನೆಯಿಲ್ಲದಿಹುದೇ ಭಕ್ತಿ. ಹೆಚ್ಚುಕುಂದಿಲ್ಲದಿಹುದೇ ಸಮಯಾಚಾರ. ತನುವಂಚನೆ ಮನವಿಕಾರ ಬಿಡದು ನಾನಿನ್ನೇವೆನಯ್ಯಾ ? ತನುವನಲ್ಲಾಡಿ ನೋಡುವಲ್ಲಿ ಮನವನಲ್ಲಾಡಿ ನೋಡುವಲ್ಲಿ ಧನವನಲ್ಲಾಡಿ ನೋಡುವಲ್ಲಿ ದೃಢವಿಲ್ಲದಿದ್ದಡೆ ಒಡೆಯನ ಕಂಡು ನಾಯಿ ಬಾಲವ ಬಡಿದುಕೊಂಬಂತೆ ಅದಕೇನು ಬೆಚ್ಚ ಹತ್ತಿದುದುಂಟೇ [೨]ಕೂಡಲಸಂಗಮದೇವಾ ?[೨]

ಟೀ. ಈ ವಚನ ಕಾಣಬಂದರ್ಥ. ೬೦

ವ. ಗಿರಿಗಳ ಮೇಲೆ ಹಲವು ತರುಮರಾದಿಗಳಿರ್ದು ಶ್ರೀಗಂಧದ ಸನ್ನಿಧಿಯಿಂದಲು ಪರಿಮಳವಾಗವೇ ? ಲಿಂಗವಂತನ ಸನ್ನಿಧಿಯಿಂದ ಜೀವರ ಹಿಂದಣ ದುಸ್ಸಂಗವು ಕೆಡುವವು. ಕೂಡಲಸಂಗಮದೇವಯ್ಯಾ ಸಿರಿಯಾಳನ ಸಾರಿರ್ದ ನರರೆಲ್ಲಾ ಸುರರಾಗರೇ ?

೧ ಚಿದಂಗವೆ (ಹು.) ೨ ಕೂಡಲಚೆನ್ನಸಂಗಮದೇವ (ಹು.)

**ಟೀ.** ಈ ವಚನ ಕಾಣಬಂದರ್ಥ. ೫೪

**ವ.** ಪರುಷದ ಹೊರೆಯಲ್ಲಿ ಕಬ್ಬುನವಿದ್ದು ಹೊನ್ನಾಯಿತ್ತು ನೋಡಿರೇ ? ಅವ್ವಾ ಚಂಗಳೆ ನೀನಿರ್ದೀಳು ಕೇರಿಯವರು ಲಿಂಗದ ನೋಂಪಿಯ ನೋಂತರೆ ಹೇಳಾ ? ಕೂಡಲ ಸಂಗಮದೇವಂಗೆ ಚಿಲಾಳನೆಂಬ ಮಗನ ಬಾಯಿನವನಿಕ್ಕಿದರೆ ಹೇಳಾ ?

**ಟೀ.** ಪರುಷದ ಸೋಂಕಿನಿಂದ ಕಬ್ಬುನ ಹೊನ್ನಾದ ಹಾಂಗೆ ಅರ್ಥ ಪ್ರಾಣಾಭಿಮಾನಂಗಳ ಗುರುಲಿಂಗಜಂಗಮಕ್ಕೆ ವಂಚನೆಯಿಲ್ಲದೆ ಸಮರ್ಪಿಸುವ ಭಕ್ತನ ದರುಶನ ಸ್ಪರುಶನದಿಂದಲು ಆತನ ನೆರೆಹೊರೆಯಲಿದ್ದವರೆಲ್ಲರೂ ಮುಕ್ತರೆಂಬುದೀ ವಚನದ ತಾತ್ಪರ್ಯಾರ್ಥ. ೫೫

**ವ.** ಮಾತಿನ ಮಾತಿನಲಪ್ಪುದೆ ಭಕ್ತಿ ? ಮಾಡಿ ತನು ಸವೆಯದನ್ನಕ್ಕ ಮನ ಸವೆಯದನ್ನಕ್ಕ ಧನ ಸವೆಯದನ್ನಕ್ಕ ಅಪ್ಪುದೇ ಭಕ್ತಿ? ಕೂಡಲ ಸಂಗಮದೇವನು ಎಲುದೋಱಿ ಸರಸವಾಡುವನು ಸೈರಿಸದನ್ನಕ್ಕ ಅಪ್ಪುದೇ ಭಕ್ತಿ ?

**ಟೀ.** ಈ ವಚನ ಕಾಣಬಂದರ್ಥ. ೫೬

**ವ.** ನಚ್ಚಿದೆನೆಂದರೆ ಮಚ್ಚಿದೆನೆಂದರೆ ಸಲೆವಾಱುವೋದೆನೆಂದರೆ ತನುವ ನಲ್ಲಾಡಿಸಿ ನೋಡುವೆ ನೀನು. ಮನವನಲ್ಲಾಡಿಸಿ ನೋಡುವೆ ನೀನು. ಧನವನಲ್ಲಾಡಿಸಿ ನೋಡುವೆ ನೀನು. ಇವೆಲ್ಲಕ್ಕಂಜದಿರ್ದಡೆ ಭಕ್ತಿ ಕಂಪಿತ ನಮ್ಮ ಕೂಡಲಸಂಗಮದೇವನು.

**ಟೀ.** ಈ ವಚನ ಕಾಣಬಂದರ್ಥ. ೫೭

**ವ.** ಸತ್ಯವುಳ್ಳ ಭಂಡವ ತುಂಬುವದಯ್ಯ. ಸುಯಿಧಾನವಯ್ಯ, ಸುಯಿಧಾನವಯ್ಯ! ಮನ ಧಾರೆವಟ್ಟಲು. ಕೂಡಲಸಂಗನ ಶರಣರು ಹಿಡಿಯದ ಭಂಡವ ಆರಾದರಾಗಲಿ ಹೋಗಲೀಯರಯ್ಯ.

**ಟೀ.** ಕಸವನೆ ಹಿಡಿದು ರಸವನೆ ಕಳೆದು [೧]ಬಿಡುತ್ತಿಹಂಥಾ[೧] ಧಾರೆವಟ್ಟಲ ಹಾಂಗೆ ಮನಸ್ಸು ಸತ್ಯವಾದ ಲಿಂಗದ ಭಕ್ತಿಯನೆ ಬಿಟ್ಟು, ಅಸತ್ಯವಾದ ಅನ್ಯದೈವದ

೧ ಬಿಸುಡುತ್ತಿಹಂಥಾ (ಹು.)

ಭಕ್ತಿ ಮೊದಲಾದ ದುರ್ಗುಣಂಗಳ ಹಿಡಿದು ಬಿಡದಿಹುದೆಂಬುದೀಗ 'ಮನಧಾರೆ ವಟ್ಟಲೆಂ'ಬ ಶಬ್ದಕ್ಕರ್ಥ. ಅದುಕಾರಣ ಸತ್ತುಚಿತ್ತಾನಂದವುಳ್ಳ ಲಿಂಗವ ಅಂಗ ಪ್ರಾಣಂಗಳಲ್ಲಿ ಪರಿಪೂರ್ಣವಾಗಿ ಧರಿಸಿಕೊಂಡು ಹಿಂಗದೆ ಶ್ರದ್ಧಾಭಕ್ತಿಯಿಂದ ಸಾವಧಾನಿಯಾಗಿ ಮನದಲ್ಲಿ ಅವಿಶ್ವಾಸ ಹುಟ್ಟದಿರಬೇಕೆಂಬುದೀಗ 'ಸತ್ಯವುಳ್ಳ ಭಂಡವ ತುಂಬುವುದಯ್ಯಾ ಸುಯಿಧಾನವಯ್ಯ ಸುಯಿಧಾನವಯ್ಯ' ಎಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಬಂಧವಾಗಿಪ್ಪ ಬಕ್ತಿ ಕ್ರಿಯೆಗಳನುಳ್ಳ ಶರಣರು ತಮ್ಮಂತೆ ಅಲ್ಲದೆಯಿರ್ದ ಭವಿಗಳು ನೊಸಲಕಣ್ಣ ಚತುರ್ಭುಜರಾದಡೆಯೂ ಕೂಡಿ ಕೊಳ್ಳರು ಎಂಬುದೀಗ 'ಶರಣರು ಹಿಡಿಯದ ಭಂಡವ ಆರಾದರೂ ಆಗಲಿ ಹೋಗ ಲೀಯರಯ್ಯಾ' ಎಂಬ ಶಬ್ದಕ್ಕರ್ಥ. ೫೮

ವ. ಮಾಡುವ ಭಕ್ತಂಗೆಯೂ ಕೊಡುವ ದೇವಂಗೆಯೂ ಎಂದೆಂದಿಗೆಯೂ ಕೇಡಿಲ್ಲ, ಮಾಡಿಭೋ ಮಾಡಿಭೋ ! ಎಲ್ಲವೂ ಸವೆಯಿತ್ತು ಹೋಯಿತ್ತೆಂಬ ಚಿಂತೆ ಸಂತೋಷವಿಲ್ಲದೆ ಮಾಡಿಭೋ ನಮ್ಮ ಸಕಳೇಶ್ವರ ದೇವನರಿದು ಸಲಹುವನಾಗಿ.

ಟೀ. ನಿತ್ಯವಾದ ಶಿವನ ಭಕ್ತಿಯ ಮಾಡಿದರೆ ನಿತ್ಯಪದವಪ್ಪುದು ತಪ್ಪದು. ಅದುಕಾರಣ ಶಿವನ ಭಕ್ತಿಯ ಬಿಡದೆ ಮಾಡಬೇಕು. ಆ ಶಿವನ ಸದ್ಭಕ್ತಿಯ ಬಿಡದೆ ಮಾಡುವ ಭಕ್ತಂಗೆ ದ್ರವ್ಯಪದಾರ್ಥ ಹೋಗಿ, ದಾರಿದ್ರವಾಯಿತ್ತೆಂದು ಭಕ್ತಿಯ ಬಿಡದೆ ಮಾಡಿದರೆ ಶಿವನರಿದು ನಿತ್ಯೈಶ್ವರ್ಯವ ಕೊಡುವನೆಂಬುದೀ ವಚನದ ತಾತ್ಪರ್ಯಾರ್ಥ. ೫೯

ವ. ಅಂಕವೋಡಿದರೆ ತೆತ್ತಿಗಂಗೆ ಭಂಗವಯ್ಯಾ ! ಕಾದಿ ಗೆಲಿಸಯ್ಯಾ ಎನ್ನನು ! ಕಾದಿ ಗೆಲಿಸಯ್ಯ ಕೂಡಲಸಂಗಮದೇವ ಎನ್ನ ತನುಮನ ಧನದಲ್ಲಿ ವಂಚನೆಯಿಲ್ಲದಂತೆ !

ಟೀ. ತನುಮನಧನದಲ್ಲಿ ೧ವಂಚನೆಯಿಲ್ಲದಂತೆ೧ ಗುರುಲಿಂಗ ಜಂಗಮಕ್ಕೆ ಕೊಟ್ಟು ಭಕ್ತನಾದೆನೆಂದರೆ ಆರಿಗೂ ಶಕ್ಯವಲ್ಲ. ಅಂತಪ್ಪ ಶಿವಭಕ್ತಿಗೆ ಶಿವನು ಸಹಾಯವಾದಲ್ಲದೆ ಆಗದೆಂಬುದೀ ವಚನದ ತಾತ್ಪರ್ಯಾರ್ಥ. ೬೦

೧ ವಂಚನೆಯಿಲ್ಲದೆ (ಎ. ರಾ.)

ವ. ಅಂದಂದಿಂಗೆ ನೂಱು ತುಂಬಿತ್ತೆಂಬ ದಿಟವಿರಬೇಕು. ಸಂದ ಪುರಾತರ ನೆನೆವುತ್ತಿರಬೇಕು. ಜಂಗಮ ಮನೆಗೆ ಬಂದರೆ ವಂಚನೆಯಿಲ್ಲದೆ ಮಾಡಬೇಕು. ಎನಗಿದೇ ವರವನೀವುದು ಬಸವಪ್ರಿಯ ಕೂಡಲ ಚೆನ್ನಸಂಗಮದೇವಾ.

ಟೀ. ಈ ವಚನ ಕಾಣಬಂದರ್ಥ. ೬೧

ವ. ತನುವ ಬೇಡಿದಡೀವೆ, ಮನವ ಬೇಡಿದಡೀವೆ, ಧನವ ಬೇಡಿದಡೀವೆ ನಿಮ್ಮ ಶರಣರಿಗೆ. ಎನಗೆ ಬೇಕೆಂಬ ಭಾವ ಮನದಲ್ಲಿ ಹೊಳೆದರೆ ಘನಮಹಿಮ ನಿಮ್ಮ ಶರಣರ ಪಾದದಾಣೆ. ಮನ ವಚನ ಕಾಯದಲ್ಲಿ ನೀವಲ್ಲದೆ ಮತ್ತೊಂದನಱಿದೊಡೆ ಕೂಡಲಸಂಗಮದೇವಾ ಮತ್ತೆ ಮರಳಿ ಭವವೆಂಬ ಘೋರದಲಿಕ್ಕಯ್ಯಾ

ಟೀ. ಈ ವಚನ ಕಾಣಬಂದರ್ಥ. ೬೨

ವ. ಹೊನ್ನಿನೊಳಗೊಂದೊರೆಯು, ಸೀರೆಯೊಳಗೊಂದೆಳೆಯು, ಇಂದಿಂಗೆ ಬೇಕು ನಾಳಿಂಗೆ ಬೇಕೆಂದೆನಾದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ! ನಿಮ್ಮ ಶರಣರಿಗಲ್ಲದೆ ಮತ್ತೊಂದನಱಿಯೆನು ಕೂಡಲಸಂಗಮದೇವ ನಿಮ್ಮಾಣೆ.

ಟೀ. ಈ ವಚನ ಕಾಣಬಂದರ್ಥ. ೬೩

ವ. ಫಲಪದಾದಿಗಳ ಭಕ್ತರಿಗೆ [೧]ಕೊಟ್ಟಿಹೆನೆಂಬೆ[೧]. ಅವರವನೊಲ್ಲರು. ಅವರು ನಿನಗೆ ನಿನ್ನ ರೂಪಿಂಗೆ ತನು ಮನ ಧನಂಗಳ ಕೊಡುವರು. ಎಲೆ ವಂಚಕನಾದ ಶಿವನೇ, ನಿರ್ವಂಚಕರೆಮ್ಮವರು ನಿನ್ನನೇನ ಬೇಡುವರು ? ನೀನವರಿಗೇನ ಕೊಡುವೆ ? ನಿನ್ನ ಕೋಡನೆಮ್ಮವರೊಲ್ಲರು ಕಾಣಾ ! ಕೊ(ಕೋ?)ಡು ಕೊಡದೆಹೋಗು ಕಪಿಲಸಿದ್ಧ ಮಲ್ಲಿಕಾರ್ಜುನಾ.

ಟೀ. ಶಿವನು ಭಿನ್ನವಿಟ್ಟು ಕೊಡುವ ಫಲಪದಂಗಳೆಲ್ಲಾ ಅನಿತ್ಯವೆಂದಱಿದ ವನೊಲ್ಲದೆ ಸದ್ಭಕ್ತರು ತಮ್ಮ ತನುಮನಧನವ ಶಿವಂಗೆ ಕೊಟ್ಟು, ಶಿವನ ಭಿನ್ನವಿಟ್ಟು

೧ ಕೊಟ್ಟೆನೆಂದೆಂಬೆ (ಹು.)

ಬೇಡುವ ಬಯಕೆಯಿಲ್ಲದೆ, ಶಿವನಲ್ಲಿ ಅಭಿನ್ನಭಕ್ತಿಯ ಮಾಡುವ ಭಕ್ತರಲ್ಲಿ ಭಿನ್ನವಿಲ್ಲದೆ ಹೋದ ಶಿವನೆಂಬುದೀ ವಚನದ ತಾತ್ಪರ್ಯಾರ್ಥ. ೬೪

ವ. ಮಾಟಕೂಟ ಫಲಪ್ರಾಪ್ತಿಯೆಂಬ ಮಾತ ಕೇಳಲಾಗದು. ಶಿವ ಶಿವಾ ನಿಮ್ಮ ಭಕ್ತರಿಗೆ ಮಾಡಿದೆನೆಂದೆನ್ನದಿರೆಂದು ಶ್ರೀಗುರುಲಿಂಗವು ಕೃಪೆಯ ಮಾಡಿದ ಕಾರಣ ಅಲ್ಲಿ ಮಾಡಿ ಮಾಡಿಸಿಕೊಂಬುವನು ನೀನೆ ಕೂಡಲಸಂಗಮದೇವಾ.

ಟೀ. ಪರಶಿವನು ತನ್ನ ಸ್ವಲೀಲೆಯಿಂದ ಲಿಂಗಾಂಗವೆಂಬೆರಡಾಗಿ, ಭಕ್ತ ದೇವನೆಂದೆನಿಸಿ, ಮಾಡುವ ಮಾಡಿಸಿಕೊಳ್ಳುತ್ತಿಪ್ಪವ ಶಿವನೊಬ್ಬನೆಯೆಂದು ಗುರು ಕರುಣದಿಂದಱಿದು ಭಿನ್ನಭಾವವಳಿದ ಸದ್ಭಕ್ತರೇ ಮುಕ್ತರು. ಅಂತಲ್ಲದೆ ಅಜ್ಞಾನ ದಿಂದ ತನುಮನಧನಂಗಳು ತನ್ನದೆಂದು, ತಾನು ಗುರುಲಿಂಗಜಂಗಮಕ್ಕೆ ಕೊಟ್ಟು ಫಲಪದವ ಪಡೆದೆನೆಂಬವರೆಲ್ಲರೂ ಪರಿಭವಕ್ಕೆ ಬರುತಿಹರೆಂಬುದೀ ವಚನದ ತಾತ್ಪರ್ಯಾರ್ಥ. ೬೫

ವ. ಇಂದು ಹುಟ್ಟಿದ ಕೂಸಿಂಗೆ ಇಂದೆ ಜವ್ವನವಾಯಿತ್ತಯ್ಯಾ! ಆ ಕೂಸು ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯಾ! ಅದಱ ಸಂಗ ಸುಖದನುಭಾವವನು ಕೂಡಲಸಂಗಮದೇವ ತಾನೆ ಬಲ್ಲ!

ಟೀ. ಜ್ಞಾನಚಂದ್ರನೆಂಬುದೀಗ 'ಇಂದು' ವೆಂಬ ಶಬ್ದಕ್ಕರ್ಥ. ಅಂತು ಜ್ಞಾನೋದಯವಾಗಿ ಗುರುವಿಂಗೆ ಶಿಷ್ಯನಾದನೆಂಬುದೀಗ 'ಇಂದು ಹುಟ್ಟಿದ ಕೂಸಿಂಗೆ' ಎಂಬ ಶಬ್ದಕ್ಕರ್ಥ. ಅಂತಾದ ಶಿಷ್ಯನ ಜ್ಞಾನಕ್ಕೆ ಭಕ್ತಿ ಪಕ್ವವಾಯಿತ್ತೆಂಬುದೀಗ 'ಇಂದೆ ಜವ್ವನವಾಯಿತ್ತೆ'ಂಬ ಶಬ್ದಕ್ಕರ್ಥ. ಅಂತಾದ ಸದ್ಭಕ್ತಿಯಿಂದ ಶಿಷ್ಯನು ಶಿವಭಕ್ತಿಮಾರ್ಗದಲ್ಲಿ ನಿಂದು ಶಿವಾನಂದಸುಖವನೆ ಒಚ್ಚತಗೊಂಬ ಶಿವ ಭಾವದಲ್ಲಿ ಇದ್ದಿತ್ತೆಂಬುದೀಗ 'ಆ ಕೂಸು ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಭಕ್ತ್ಯಂಗನೆಯ ಸರ್ವಾಂಗದಲ್ಲಿ ಲಿಂಗವೆ ನೆಲೆಗೊಂಡು ಆ ಭಕ್ತನ ಅಂಗಸುಖಭೋಗವನೆಲ್ಲವ ಲಿಂಗವೆಯಱಿದು ಭೋಗಿಸುತ್ತಿಪನೆಂಬುದೀಗ 'ಅದಱ ಸಂಗಸುಖದನುಭಾವವನು ಕೂಡಲಸಂಗಮದೇವ ತಾನೆ ಬಲ್ಲನೆ'ಂಬ ಶಬ್ದಕ್ಕರ್ಥ. ೬೬

ವ. ಜಾಗ್ರ ಸ್ವಪ್ನ ಸುಷುಪ್ತಿಯಲ್ಲಿ ಲಿಂಗ ಜಂಗಮವಲ್ಲದಱಿಯೆ(ಯ?)ನು. ತಿಂಥಿಣಿಯ ಭಕ್ತಿಸಾಗರದೊಳೋಲಾಡುವ ಕೂಡಲ ಚೆನ್ನಸಂಗಯ್ಯನಲ್ಲಿ ಬಸವಣ್ಣನು.

ಟೀ. ಗುರುಲಿಂಗಜಂಗಮದಲ್ಲಿ ಸದಾ ಸನ್ನಿಹಿತನಾಗಿ ಎಡೆಬಿಡುವಿಲ್ಲದೆ ಮಾಡುತ್ತಿಪ್ಪ ಪರಿಪೂರ್ಣ ಭಕ್ತಿಯನುಳ್ಳಾತ ಬಸವಣ್ಣನೆಂಬುದೀ ವಚನದ ತಾತ್ಪರ್ಯಾರ್ಥ. ೬೭

ವ. ದೇಹ ನಿರ್ದೇಹವೆನುತ್ತಿಪ್ಪರಯ್ಯಾ. ದೇಹ ನಿರ್ದೇಹವಪ್ಪ ಪರ್ಯಾಯ ನಱಿಯರು. ಅಹಂ ಎಂಬುದೇ ದೇಹ. ದಾಸೋಹಂ ಎಂಬುದೇ ನಿರ್ದೇಹ ನೋಡಾ! 'ಅಕಾಯೋ ಭಕ್ತಕಾಯಂ ವಾ' ಎಂದುದಾಗಿ ಅಹಂ ಭಾವವಳಿದವರ ಕೂಡಲಚೆನ್ನಸಂಗಯ್ಯನಲ್ಲಿ ನಿರ್ದೇಹಿಗ ಳೆಂಬೆನು.

ಟೀ. ವಾಗದ್ವೈತದಿಂದ ತಾವೆ ಬ್ರಹ್ಮವೆಂದು ನುಡಿವರಿಗೆ ಎಂದೆಂದೂ ದೇಹವಾಸನೆ ಬಿಡದೆ ದೇಹಿಗಳಾಗಿಪ್ಪರು. ತಾನೆಂಬ ಅಹಂಭಾವವಳಿದು ದಾಸೋಹಂ ಭಾವದಿಂದ ಶಿವಂಗೆ ಭಕ್ತಿಯ ಮಾಡಿದವರೆಲ್ಲರೂ ಮುಕ್ತರೆಂಬುದೀ ವಚನದ ತಾತ್ಪರ್ಯಾರ್ಥ. ೬೮

ವ. ಭಕ್ತರಲ್ಲದವರನಾಸೆಗೈದರೆ ಕಕ್ಕುಲಿತೆಯಲ್ಲದೆ ಕಾರ್ಯವಿಲ್ಲ. ಆಸೆ ಗೈದರೆ ಆಸೆಗೈವುದು ಭಕ್ತರನು. ಆಸೆಗೈದು ಬಂದ ಶಿವಂಗೆ ಸತಿಯ ಕೊಟ್ಟರು, ಸುತನ ಕೊಟ್ಟರು, ಧನವ ಕೊಟ್ಟರು, ಮನವ ಕೊಟ್ಟರು ಅಸುವ ಕೊಟ್ಟರು. ಶರಣರ ಪರಿ ಆವ ಲೋಕದೊಳಗೆಯೂ ಇಲ್ಲ. ಶರಣಭರಿತ ಲಿಂಗವಾಗಿ ಬೇಡಿತ್ತ ಕೊಡುವರಯ್ಯಾ ಉರಿಲಿಂಗಪೆದ್ದಿ ಪ್ರಿಯ ವಿಶ್ವೇಶ್ವರಾ !

ಟೀ. ನಿರಾಕಾರವಾಗಿರ್ದ ಪರಬ್ರಹ್ಮವು ಭಕ್ತಿಯ ಕುಱಿತು ಸಾಕಾರವಾಗಿ ಬಂದು ಭಕ್ತರ ಅರ್ಥಪ್ರಾಣಾಭಿಮಾನಂಗಳು ಮೊದಲಾದ ಪದಾರ್ಥಂಗಳಿಗೆ ಇಚ್ಛೈಸಿ ಏನ ಬೇಡಿದಡಿತ್ತು ಮಹಾಘನಲಿಂಗವ ತನ್ನೊಳಗಿಂಬಿಟ್ಟುಕೊಂಡಿಪ್ಪರು ಭಕ್ತರು. ಅಂತಪ್ಪ ಸದ್ಭಕ್ತರನಾಶ್ರಯಿಸಿದವರಿಗೆ ಬಯಸಿದ ಬಯಕೆಯಹು ದೆಂಬುದೀ ವಚನದ ತಾತ್ಪರ್ಯಾರ್ಥ. ೬೯

ವ. ಜಗವ ಸುತ್ತಿಪ್ಪುದು ನಿನ್ನ ಮಾಯೆಯಯ್ಯಾ ! ನಿನ್ನ ಸುತ್ತಿಪ್ಪುದು ಎನ್ನ ಮನ ನೋಡಯ್ಯಾ ! ಜಗಕ್ಕೆ ಬಲ್ಲಿದ ನೀನು, ನಿನಗೆ ಬಲ್ಲಿದ ನಾನು ಕಂಡಯ್ಯ ! ಜಗವು ನಿನ್ನೊಳಗೆ, ನೀನು

[1]ಎನ್ನೊಳಗೆ![1] ಕರಿಯು ಕನ್ನಡಿಯೊಳಡಗಿದಂತಯ್ಯ ನೀನೆನ್ನೊಳಡಗಿದೆ ಕೂಡಲಸಂಗಮದೇವಾ !

ಟೀ. ಅನಂತ ಬ್ರಹ್ಮಾಂಡಗಳನೊಳಕೊಂಡಿಪ್ಪ ಲಿಂಗವು ಸೂಕ್ಷ್ಮವಾಗಿ ಭಕ್ತನ ಕಾಯ ಮನ ಭಾವಂಗಳಲ್ಲಿ ಸದಾ ಸನ್ನಿಹಿತನಾಗಿ ನೆಲಸಿರ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೭೦

ವ. ಎನ್ನ ತನುಮನವೆರಡನೂ ಗುರು ಕರುಣದಿಂದ ಲಿಂಗದಲ್ಲಿ ಏಕವ ಮಾಡಿದನಾಗಿ ಎನ್ನಂತರಂಗ ಬಹಿರಂಗವೆರಡೂ ನಿಮ್ಮವು ನೋಡಾ ! ನಿಮ್ಮಂತರಂಗದೊಳಗೆ ನಿಮ್ಮನೆ ಇಂಬಿಟ್ಟುಕೊಂಬೆ. ನಿಮ್ಮ ಬಹಿರಂಗದೊಳಗೆ ನಿಮ್ಮನೆ ನಿಜವಾಗಿ ಪೂಜಿಸುವೆ ! ನಿಮ್ಮ ಅಱಿವಿಂದ ನಿಮ್ಮನೆ ಅಱಿವೆ ಕಾಣಾ ಕೂಡಲಸಂಗಮದೇವಾ !

ಟೀ. ಶ್ರೀಗುರು ಶಿಷ್ಯನ ಅಂತರಂಗದಲ್ಲಿ ಅಡಗಿರ್ದ ಚಿತ್ಕಲಾಲಿಂಗವ ತಂದು ಕಾಯಮನಭಾವಂಗಳಿಗೆ ಸಾಹಿತ್ಯವ ಮಾಡಿ ಲಿಂಗಾಂಗಸಂಬಂಧವಾದ ಬಳಿಕ ಭಿನ್ನಭಾವವಿಲ್ಲದೆ ಇಪ್ಪ ಭಕ್ತನ ಅಂಗವೇ ಲಿಂಗದಂಗ. ಭಕ್ತನ ಪ್ರಾಣವೇ ಲಿಂಗ ಪ್ರಾಣವಾಗಿ ಅಱಿವ ಅಱುಹಿಸಿಕೊಂಬ, ಪೂಜಿಸುವ ಪೂಜಿಸಿಕೊಂಬವೆಲ್ಲಾ ಲಿಂಗವೆಯಾಗಿರ್ದ ಸದ್ಭಕ್ತನೆಂಬುದೀ ವಚನದ ತಾತ್ಪರ್ಯಾರ್ಥ. ೭೧

ವ. ಎನ್ನ ತ್ರಿವಿಧಾತ್ಮರು ನಿಮ್ಮ ಹೆಂಡಿರು. ಸತ್ತ್ವರಜತಮಂಗಳು ನಿಮ್ಮ ಭೃತ್ಯರಯ್ಯಾ ! ಅಂತಃಕರಣ ಚತುಷ್ಟಯಂಗಳು ನಿಮ್ಮ ಮಂತ್ರಿಗಳಯ್ಯಾ ! ಪಂಚೇಂದ್ರಿಯಂಗಳು ನಿಮ್ಮ ಪಡಿಹಾರರಯ್ಯಾ ! ಅರಿಷಡ್ವರ್ಗಂಗಳು ನಿಮ್ಮ ತೊತ್ತಿರು. ಸಪ್ತಧಾತುಗಳು ನಿಮ್ಮ ಬಾಣಸಿಗರಯ್ಯಾ ! ಅಷ್ಟಮದಂಗಳು ನಿಮ್ಮ ದಳವಾಯಿಗಳು. ನವರಸಂಗಳು ನಿಮ್ಮ ಭಂಡಾರಿಗಳಯ್ಯಾ ! ದಶವಾಯುಗಳು ನಿಮ್ಮ ಛತ್ರಚಾಮರ[2]ಸೀಗುರಿಗರು[2]. ಷೋಡಶಕಳೆಗಳು ನಿಮ್ಮ ರಾಣಿವಾಸ.* ಶಂಭುಸೋಮನಾಥಲಿಂಗ ನಿಮಗೆನ್ನ ಕಾಯ ಮುಂತಾಗಿ ಬಾಹತ್ತರ ಡಿಂಗರಿಗರಯ್ಯಾ !

೧ ನನ್ನೊಳಗೆ (ಎ.) ೨ ಸೀಗುರಿಗಳು (ಹು.)
* ಈ ವಾಕ್ಯ ಎ. ಮತ್ತು ರಾ. ಪ್ರತಿಯಲ್ಲಿಲ್ಲ.

ಟೀ. ಲಿಂಗಾಂಗಸಂಗಿಯಾಗಿಪ್ಪ ಸದ್ಭಕ್ತನ ಅಂಗ ಪ್ರಾಣ ಮನ ಇಂದ್ರಿಯಗಳೆಲ್ಲಾ ಲಿಂಗದ ಸೇವ್ಯೋಪಚಾರಕರೆಂಬುದೀ ವಚನದ ತಾತ್ಪರ್ಯಾರ್ಥ. ೭೨

ವ. ಭಕ್ತಕಾಯ ಮಮಕಾಯವೆಂಬ ವಾಕ್ಯದಲ್ಲಿ ಕಾಯ ಲಿಂಗವೆಂದಿಪ್ಪೆ. ಗುರು ಲಿಂಗಪ್ರಾಣವ ಮಾಡಿದನಾಗಿ ಲಿಂಗಪ್ರಾಣವೆಂದಿಪ್ಪೆ. ಸರ್ವ ಕ್ರೀಯೆಲ್ಲಾ ಲಿಂಗದ ಕ್ರೀಯೆಂದಿಪ್ಪೆ. ಒಂದೆಂದು ನುಡಿಯೆ, ಎರಡೆಂದು ಭಾವಿಸೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ.

ಟೀ. ಗುರುಕರುಣದಿಂದ ಲಿಂಗಾಂಗಸಂಬಂಧಿಯಾದ ಸದ್ಭಕ್ತನ ಅಂಗ ಪ್ರಾಣ ಮೊದಲಾದ ಸರ್ವಾಂಗವೆಲ್ಲವೂ ಲಿಂಗವಾಗಿ, ಲಿಂಗಕಾಯವೆನಿಸಿದ ಭಕ್ತನ ನಿಲವ ಹೇಳುವಡೆ ತಾನೆ ಬ್ರಹ್ಮವೆಂಬ ವಾಗದ್ವೈತಿಯಲ್ಲ. ಭಿನ್ನವಿಟ್ಟಱಸುವ ದ್ವೈತಿಯಲ್ಲ. ಲಿಂಗದಂಗವಾಗಿಪ್ಪ ಸದ್ಭಕ್ತನ ನಿಲವನುಪಮಿಸಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೭೩

ವ. ಅಂಗವು ಲಿಂಗದಲ್ಲಿ ಸಂಬಂಧವಾದವರ ಲಿಂಗವೆಂದೇ ಕಾಬುದು. 'ಕೀಟೋಪಿ ಭ್ರಮರಾಯತೇ' ಎಂಬ ನ್ಯಾಯದಂತೆ ಅಂಗ ಲಿಂಗ ಸೋಂಕಿ ಲಿಂಗವಾಯಿತ್ತಾಗಿ ಲಿಂಗವೆಂದೇ ಕಾಬುದು. ಲಿಂಗ ಮುಂತಾಗಿಯೇ ನಡೆವರು. ಲಿಂಗ ಮುಂತಾಗಿಯೇ ನುಡಿವರು. ಲಿಂಗ ಮುಂತಾಗಿಯೇ ನೋಡುವರಾಗಿ ಅಂಗೇಂದ್ರಿಯಂಗಳೆಂಬುವಿಲ್ಲ. ಅವೆಲ್ಲವೂ ಲಿಂಗೇಂದ್ರಿಯಂಗಳಾದ ಕಾರಣ ಲಿಂಗವೆಂದೇ ಕಾಬುದು.

ಸಾಕ್ಷಿ : ಸರ್ಪದಷ್ಟಸ್ಯ ಯದ್ದೇಹಂ ತದ್ದೇಹಂ ವಿಷದೇಹವತ್
ಲಿಂಗದಷ್ಟಸ್ಯ ಯದ್ದೇಹಂ ತದ್ದೇಹಂ ಲಿಂಗದೇಹವತ್

ಎಂದುದಾಗಿ ಸರ್ವಾಂಗಲಿಂಗಿ ಕೂಡಲಚೆನ್ನಸಂಗಾ ನಿಮ್ಮ ಶರಣ.

ಟೀ. ಈ ವಚನ ಕಾಣಬಂದರ್ಥ. ೭೪

ವ. ಭೂಮಿ ನಷ್ಟವಾದರೆ ಜಲಕ್ಕಿಂಬಿಲ್ಲ. ಜಲ ನಷ್ಟವಾದರೆ ಇಂದ್ರಿಯಕ್ಕಿಂಬಿಲ್ಲ. ಇಂದ್ರಿಯ ನಷ್ಟವಾದರೆ ಜಂಗಮಕ್ಕಿಂಬಿಲ್ಲ. ಜಂಗಮ ನಷ್ಟವಾದರೆ ಲಿಂಗಕ್ಕಿಂಬಿಲ್ಲ. ಇದುಕಾರಣ ಸರ್ವಕರಣಾದಿಗಳ ಬಿಡದೆ ಆನು ವ್ರತಿಯೆಂಬವರ ತೋಱಯ್ಯಾ ಕೂಡಲಚೆನ್ನಸಂಗಯ್ಯಾ.

**ಟೀ.** ಶರೀರವೆಂಬುದೀಗ 'ಭೂಮಿ'ಯೆಂಬ ಶಬ್ದಕ್ಕರ್ಥ. ಮನವೆಂಬುದೀಗ 'ಜಲ'ವೆಂಬ ಶಬ್ದಕ್ಕರ್ಥ. ಪಂಚೇಂದ್ರಿಯಂಗಳೆಂಬುದೀಗ 'ಇಂದ್ರಿಯಂಗಳೆ'ಂಬ ಶಬ್ದಕ್ಕರ್ಥ. ಜ್ಞಾನನೆಂಬುದೀಗ 'ಜಂಗಮ'ವೆಂಬ ಶಬ್ದಕ್ಕರ್ಥ. ಪ್ರಾಣಕಳೆಯೆಂಬುದೀಗ 'ಲಿಂಗ'ವೆಂಬ ಶಬ್ದಕ್ಕರ್ಥ. ಅಂತು ದೇಹ ನಷ್ಟವಾದರೆ ಮನವೂ ನಷ್ಟವಹುದು. ಮನ ನಷ್ಟವಾದರೆ ಇಂದ್ರಿಯ ನಷ್ಟವಹುದು. ಇಂದ್ರಿಯ ನಷ್ಟವಾದರೆ ಜ್ಞಾನ ನಷ್ಟವಹುದು. ಜ್ಞಾನ ನಷ್ಟವಾದರೆ ಪ್ರಾಣಕಳೆ ನಷ್ಟವಹುದು. ಎಂಬುದೀಗ 'ಭೂಮಿ ನಷ್ಟವಾದರೆ ಜಲಕ್ಕಿಂಬಿಲ್ಲ. ಜಲ ನಷ್ಟವಾದರೆ ಇಂದ್ರಿಯಕ್ಕಿಂಬಿಲ್ಲ. ಇಂದ್ರಿಯ ನಷ್ಟವಾದರೆ ಜಂಗಮಕ್ಕಿಂಬಿಲ್ಲ. ಜಂಗಮ ನಷ್ಟವಾದರೆ ಲಿಂಗಕ್ಕಿಂಬಿಲ್ಲ' ವೆಂಬ ಶಬ್ದಕ್ಕರ್ಥ. ಅಂತಪ್ಪ ಅಂಗಪ್ರಾಣೇಂದ್ರಿಯಂಗಳೆಲ್ಲಾ ನಷ್ಟವಾಗಿ ಶೂನ್ಯವಾದರೆ ಪೂಜ್ಯ ಪೂಜಕರಿಲ್ಲ. ಲಿಂಗಾಂಗ ಸಂಭಾಷಣೆಯನುಭಾವದ ಸುಖವಿಲ್ಲದೆ ಹೋಹುದು. ಅಂತು ಶರಣನಂಗ ನಿರಾಕಾರವಾದಡೆ ಶಿವಂಗೆ ಸಗುಣಾನಂದವಿಲ್ಲದೆ ಹೋಹುದಾಗಿ ಶರಣನು ಅಂಗೇಂದ್ರಿಯಂಗಳ ನಳಿಯದೆ ಲಿಂಗೇಂದ್ರಿಯಂಗಳ ಮಾಡಿ ಲಿಂಗಭೋಗೋಪಭೋಗಿಯಾಗಿ ನಿತ್ಯನಾಗಿಪ್ಪನು. ಆತ ಸದ್ಭಕ್ತನೆಂಬುದೀ ವಚನದ ತಾತ್ಪರ್ಯಾರ್ಥ. ೭೫

**ವ.** ಅಷ್ಟವಿಧಾರ್ಚನೆ ಷೋಡಶೋಪಚಾರ ಬಾಹ್ಯಕ್ರಿಯೆಂಬ ಭಾವಭ್ರಮಿತರ ಮಾತ ಕೇಳಲಾಗದು. ಧನವುಳ್ಳಾತನು ಅಷ್ಟಸಂಪದದೈಶ್ವರ್ಯವ ಭೋಗಿಸುವನಲ್ಲದೆ ಧನಹೀನ ದಾರಿದ್ರನೇನ ಭೋಗಿಸುವನೋ ? ಲಿಂಗವೂ ಪ್ರಾಣವೂ ಅವಿರಳಾತ್ಮಕನಾಗಿ ಉತ್ಕೃಷ್ಟವಾಗಿದ್ದಲ್ಲಿ ಆ ಅಮಳ ಸೋಂಕು ತುಳುಂಕಿ, ಬಾಹ್ಯಕ್ರಿಯಾಗಿ ಕರಸ್ಥಲಕ್ಕೆ ಬಂದುದೈಸಲ್ಲದೆ ಅದು ಅಂತರಂಗವಲ್ಲ ಬಹಿರಂಗವಲ್ಲ ನಮ್ಮ ಉರಿಲಿಂಗದೇವರು.

**ಟೀ.** ಶರಣನ ಪ್ರಾಣಾಂಗದಲ್ಲಿ ಭಿನ್ನವಿಲ್ಲದೆಯಿರ್ದ ಅಖಂಡ ಚಿತ್ಕಲಾಲಿಂಗವು ತನ್ನ ಚಿತ್ತುವಿನ ತೋಱಿಕೆಯ ಹೆಚ್ಚುಗೆಯಿಂದ ವಿಲಾಸದೋಱಿ, ಸಾಕಾರವ ನಟಿಸಿ, ಶರಣನ ಕರಸ್ಥಲದಲ್ಲಿ ನೆಲೆಗೊಂಡು, ಸರ್ವ ಕ್ರಿಯೋಪಚಾರಂಗಳಲ್ಲಿ ವಿಗಡನಾಗಿರ್ದಂತಿರ್ದು, ಕ್ರಿಯಾಫಲಂಗಳ ನಷ್ಟವ ಮಾಡಿ ಶರಣನ ಒಳಹೊಱಗೆನ್ನದೆ ಸರ್ವಾಂಗವನೊಳಕೊಂಡಿಪ್ಪುದು ಆ ಮಹಾಲಿಂಗವು ಎಂಬುದೀಗ 'ಲಿಂಗವೂ ಪ್ರಾಣವೂ ಅವಿರಳಾತ್ಮಕನಾಗಿ ಉತ್ಕೃಷ್ಟವಾಗಿರ್ದ ಅಮಳ ಸೋಂಕು ತುಳುಂಕಿ ಬಾಹ್ಯಕ್ರಿಯಾಗಿ ಕರಸ್ಥಲಕ್ಕೆ ಬಂದುದೈಸಲ್ಲದೆ ಇದು ಅಂತರಂಗವಲ್ಲ, ಬಹಿರಂಗವಲ್ಲ ನಮ್ಮ ಉರಿಲಿಂಗದೇವರು' ಎಂಬ ಶಬ್ದಕ್ಕರ್ಥ. ಅದು

ಕಾರಣ ಸತ್ತುವೇ ಲಿಂಗ, ಚಿತ್ತುವೇ ಶರಣ. ಆ ಸತ್ತು ಚಿತ್ತುವಿಂಗೆ ಎಂದೂ ವಿಯೋಗವಿಲ್ಲವಾಗಿ ಆ ಚಿತ್ಸ್ವರೂಪನಾದ ಶರಣನಂಗದಲ್ಲಿರ್ದ ಸತ್ಸ್ವರೂಪ ಲಿಂಗವೇ ಶರಣನ ಕರಸ್ಥಲಕ್ಕೆ ಬಂದು, ಅಂತರಂಗಬಹಿರಂಗವೆಲ್ಲಾ ಲಿಂಗವೆಯಾಗಿ ಲಿಂಗಭೋಗೋಪಭೋಗಿಯಾದ ಶರಣನೆಂಬುದೀಗ 'ಧನವುಳ್ಳಾತ ಅಷ್ಟಸಂಪದ ದೈಶ್ವರ್ಯವ ಭೋಗಿಸುವನಲ್ಲದೆ' ಎಂಬ ಶಬ್ದಕ್ಕರ್ಥ. ಅಂತು ಅಂತರಂಗದಲ್ಲಿ ಲಿಂಗಕಳೆ ಪ್ರಭಾವಿಸಿ ನೆಲೆಗೊಳ್ಳದವರಿಗೆ ಬಹಿರಂಗದಲ್ಲಿ ಇಷ್ಟಲಿಂಗವಿಲ್ಲದೆ ಭವಿಯಾಗಿಪ್ಪುದೇ ದೃಷ್ಟವೆಂಬುದೀಗ 'ಧನಹೀನ ದಾರಿದ್ರನೇನ ಭೋಗಿಸುವನೋ' ಎಂಬ ಶಬ್ದಕ್ಕರ್ಥ. ಅಂತಲ್ಲದೆ ಇಷ್ಟಲಿಂಗಸಂಬಂಧದ ಕ್ರಿಯಾದೂಷಣೆಯ ಮಾಡಿ, ಬದ್ಧ ಭವಿಯಾಗಿ, ಅಂತರಂಗದಲ್ಲಿ ಲಿಂಗವುಂಟೆಂದು ಭಾವಿಸುವರೆಲ್ಲರೂ ಭ್ರಷ್ಟರೆಂಬುದೀಗ 'ಅಷ್ಟವಿಧಾರ್ಚನೆ ಷೋಡಶೋಪಚಾರ ಬಾಹ್ಯಕ್ರೀಯೆಂಬ ಭಾವಭ್ರಮಿತರ ಮಾತ ಕೇಳಲಾಗದು' ಎಂಬ ಶಬ್ದಕ್ಕರ್ಥ. ೭೬

ವ. ಅಂಗದಾಪ್ಯಾಯನವ ಆತ್ಮನರಿವಂತೆ, ಆತ್ಮನ ಸುಖದುಃಖವ ಅಂಗ ತಾಳುವಂತೆ, ಅಂಗಕ್ಕೂ ಆತ್ಮಂಗೂ ಅನ್ಯಭಿನ್ನವಿಲ್ಲ. ಪೂಜಿಸುವ ಭಕ್ತನೂ ಪೂಜಿಸಿಕೊಂಬ ವಸ್ತುವೂ ಈ ಉಭಯವೂ ಸದಾಶಿವ ಮೂರ್ತಿಲಿಂಗವು ತಾನು ತಾನೆ.

ಟೀ. ಶರೀರದಲ್ಲಿ ಆತ್ಮನು ಹೇಂಗೆ ಭೇದವಿಲ್ಲದಿಪ್ಪುದು ಹಾಂಗೆ ಆತ್ಮನೆಂಬಂಗದಲ್ಲಿ ಲಿಂಗವು ಭಿನ್ನವಿಲ್ಲದಿಪ್ಪುದು. ಅಂತಪ್ಪ ಲಿಂಗಾಂಗವೆರಡಾಗಿ ಪೂಜ್ಯ ಪೂಜಕನೆನಿಸಿ ಭಕ್ತ ದೇವನಾದುದು ಒಂದೇ ಪರಬ್ರಹ್ಮವೆಂಬುದೀ ವಚನದ ತಾತ್ಪರ್ಯಾರ್ಥ. ೭೭

ವ. ಅರಿತುದಯ್ಯಾ ಅಂಗಗುಣ. ಒಲಿತುದಯ್ಯಾ ಭಕ್ತಿರಸ. ಆವರಿಸಿತ್ತಯ್ಯಾ ಲಿಂಗವಂಗವನು. ಏನೆಂದರಿಯೆನಯ್ಯಾ ಲೋಕಲೌಕಿಕವ. ಲಿಂಗಭ್ರಾಂತನಾದೆನಯ್ಯಾ ಕೂಡಲಸಂಗಮದೇವ ನಿಮ್ಮ ಕರುಣವೆನ್ನ ನೆಡೆಗೊಂಡಿತ್ತಾಗಿ.

ಟೀ. ಸಮ್ಯಗ್‌ಜ್ಞಾನೋದಯದಿಂದ ದೇಹದ ಅಜ್ಞಾನವಳಿದು ಶಿವನಲ್ಲಿ ಅತಿರತಿಯಾದ ಭಕ್ತಿಯೊದಗಲು, ಆ ಭಕ್ತಕಾಯ ಮಮಕಾಯವೆಂದು ಲಿಂಗವು ಆ ಭಕ್ತನ ಸರ್ವಾಂಗವನವಗ್ರಹಿಸಿ, ಜೀವಭಾವವಳಿದು, ಲೌಕಿಕಾಚಾರಧರ್ಮವ ಮರೆದು, ತಾನೆಲ್ಲಾ ಲಿಂಗವಾಗಿ, ತನ್ನ ಕಾಣುತ್ತಿರ್ಪ ಲಿಂಗಭ್ರಾಂತಿ ನೆಲೆಗೊಂಡು

ಲಿಂಗವಾಗಿಪ್ಪನು ಸದ್ಭಕ್ತನು. ಇಂತಪ್ಪ ಸದ್ಭಕ್ತಿ ಶಿವನು ಕೃಪೆಮಾಡಲು ಆಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೭೮

**ವ.** ಧರೆಯಗಲದ ಜಲಕ್ಕೆ ಕರಿಯ ನೂಲಿನ ಜಾಲ. ಕರಿಯ ಕಬ್ಬಿಲ ಹೊಕ್ಕು ಸೇದುತ್ತಿರಲು ಕರದ ಕೈಯಲ್ಲಿ ಗಾಣ. ಸೂಕ್ಷ್ಮವಿಚಾರದಲ್ಲಿ ಅಱಿದುಕೊಂಡಡೆ ಗಾಣಕ್ಕೆ ಹೊಱಗಾಯಿತ್ತು. ಹರಿವ ಜಲಗಳು ಬತ್ತಿ, ಬೇಸಗೆ ಉಷ್ಣದೋಱಿ, ಬಿಳಿಯ ಮಳಲಲ್ಲಿಗೆ ಕಾಣಬರುತ್ತಿರಲು, ಕರಿಯ ಕಬ್ಬಿಲ ಬಂದು, ಏರಿಯ ಮೆಟ್ಟಿ ನೋಡಿ ಕಾಣದೆ ಜಾಲವ ಹೊತ್ತುಕೊಂಡು ಹೋಗೆ, ಹೊಂಗಱಿಯ ಬಿಲ್ಲು ಕೋಲನೊಂದು ಕೈಯಲ್ಲಿ ಪಿಡಿದು, ಒಂದು ಕೈಯಲ್ಲಿ ಬಿದಿರಕ್ಕಿಯ ಹಿಡಿದು, ದಂಗಟನ [೧]ಪುಣಿಜೆಯರು[೧] ಮುಂದೆ ಬಂದಾಡಲು, ಕಂಗಳ ಮುತ್ತು ಸಡಿಲಿ ಪಾದದ ಮೇಲೆ ಬೀಳಲಿ. ಅಂಗೈಯವೊಳಗೊಂದು ಅರಿದ ತಲೆ ಮೂಡಿ ದಂಗಟನ ಹೊತ್ತು ಕೊಂಡಾಡುತ್ತಿರಲು ಶೃಂಗಾರವಾಯಿತ್ತು ಕೂಡಲಚೆನ್ನಸಂಗಯ್ಯನಲ್ಲಿ ಭಕ್ತ್ಯಂಗನೆಯ ನಾವಿಂದು ಕಂಡೆವಯ್ಯಾ !

**ಟೀ.** ದೇಹವೆಂಬುದೀಗ 'ಧರೆ'ಯೆಂಬ ಶಬ್ದಕ್ಕರ್ಥ. ಅಂತಪ್ಪ ದೇಹವೆಲ್ಲಾ ಸಂಸಾರವಿಷಯ ರಸವೆಯಾಗಿಪ್ಪುದೆಂಬುದೀಗ 'ಧರೆಯಗಲದ ಜಲ'ವೆಂಬ ಶಬ್ದಕ್ಕರ್ಥ. ಅಂತಪ್ಪ ದೇಹೇಂದ್ರಿಯ ವಿಷಯರಸದಲ್ಲಿ ಅಜ್ಞಾನ ಮಾಯಾಸೂತ್ರದ ಬಲೆಯ ಬೀಸಿಹುದೆಂಬುದೀಗ 'ಕರಿಯ ನೂಲಿನ ಜಾಲ'ವೆಂಬ ಶಬ್ದಕ್ಕರ್ಥ. ಕಾಮನೆಂಬವನೀಗ 'ಕರಿಯ ಕಬ್ಬಿಲ'ನೆಂಬ ಶಬ್ದಕ್ಕರ್ಥ. ಆ ದೇಹೇಂದ್ರಿಯ ವಿಷಯರಸದಲ್ಲಿ ಕಾಮ ನೆಲೆಗೊಂಡು ವಿಷಯಾತುರದ ಬಯಕೆಯ ಹೆಚ್ಚಿಸಿ, ಅಜ್ಞಾನಸೂತ್ರದ ಮಾಯಾಬಲೆಯ ಬೀಸಿ, ಜೀವರ ಕೆಡಹುತ್ತಿಹ ಭವದತ್ತಲೆಂಬುದೀಗ ' ಕರಿಯ ಕಬ್ಬಿಲ ಹೊಕ್ಕು ಸೇದುತ್ತಿರಲು ' ಎಂಬ ಶಬ್ದಕ್ಕರ್ಥ. ಕರಣಂಗಳೆಂಬುವೀಗ 'ಕರದ ಕೈ' ಎಂಬ ಶಬ್ದಕ್ಕರ್ಥ. ಮಚ್ಚಿನ ಮೋಹವೆಂಬುದೀಗ 'ಗಾಣ'ವೆಂಬ ಶಬ್ದಕ್ಕರ್ಥ. ಅಂತಪ್ಪ ಕರಣಂಗಳೆಲ್ಲಾ ಕಾಮನ ಕೈಗಳಾಗಿ ಆ ಕೈಗಳಿಂದ ಮಚ್ಚಿನ ಮೋಹದ ಗಾಣದಲ್ಲಿ ಜೀವರ ಸಿಕ್ಕಿಸಿ, ಜನನ ಮರಣಕ್ಕೆ ತರುತ್ತಿಹ ಕಾಮನೆಂಬುದೀಗ ' ಕರದ ಕೈಯಲ್ಲಿ ಗಾಣ ' ವೆಂಬ ಶಬ್ದಕ್ಕರ್ಥ. ಅಂತು ಕಾಮವಿಕಾರದಿಂದ ಭವಕ್ಕೆ ಬರುತ್ತಿಹ ಜೀವನು ಸಮ್ಯಗ್ಜ್ಞಾನದಿಂದ ತನ್ನ ನಿಜವ

೧ ಪುಣಾಜೆ (ಎ.)

ಪರಬ್ರಹ್ಮವು ಎಂದು ಅಱಿದಡೆ, ಆ ದೇಹಮೋಹವಳಿದು ಜನನ ಮರಣಕೆ ಬಾರ ನೆಂಬುದೀಗ ' ಸೂಕ್ಷ್ಮವಿಚಾರದಲ್ಲಿ ಅಱಿದುಕೊಂಡಡೆ ಗಾಣಕ್ಕೆ ಹೊಱಗಾಯಿತ್ತು ' ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಪ್ರಕಾಶದ ಹೆಚ್ಚುಗೆಯ ಬಲದಿಂದ ದೇಹೇಂದ್ರಿಯ ವಿಷಯರಸಂಗಳೆಲ್ಲಾ ನಿರಸವಾಗಿ ಹೋಗಿ, ಆ ಶರಣನಂಗದೊಳಿರ್ದ ಚಿತ್‌ಪರಮಪ್ರಕಾಶಲಿಂಗವು ಪ್ರತ್ಯಕ್ಷವಾಗಿ ತೋಱುತ್ತಿದ್ದಿತೆಂಬುದೀಗ ' ಹರಿವ ಜಲಂಗಳು ಬತ್ತಿ, ಬೇಸಗೆಯ ಉಷ್ಣದೋಱಿ, ಬಿಳಿಯ ಮಳಲಲ್ಲಿಗೆ ಕಾಣಬರು ತ್ತಿರಲು ' ಎಂಬ ಶಬ್ದಕ್ಕರ್ಥ. ಅಂತು ಲಿಂಗಭಾವ ಘಟಿಸಿದ ಶರಣನ ಅಂತರಂಗ ವನಱಿದು ಕಾಮ ತನ್ನ ಅಜ್ಞಾನಮಾಯಾಬಲೆ ಸಹವಾಗಿ ಹೋದನೆಂಬುದೀಗ ' ಕರಿಯ ಕಬ್ಬಿಲ ಬಂದು ಏಱಿಯ ಮೆಟ್ಟಿ ನೋಡಿ ಕಾಣದೆ ಜಾಲವ ಹೊತ್ತು ಕೊಂಡು ಹೋಗೆ ' ಎಂಬ ಶಬ್ದಕ್ಕರ್ಥ. ತನ್ನ ಶರೀರವೆಂಬುದೀಗ ' ದಂಗಟ ' ನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಸ್ವದೇಹದಲ್ಲಿರ್ದ ಷಡ್ವಿಧ ಶಕ್ತಿಯರೆಂಬವರು ಪುಣ್ಯಾಂಗನೆಯರೆಂಬುದೀಗ ' ದಂಗಟನ [1]ಪುಣಿಜೆಯರೆ ' ಎಂಬ[1] ಶಬ್ದಕ್ಕರ್ಥ. ಅಂತಪ್ಪ ಷಡ್ವಿಧ ಶಕ್ತಿಯರೆಲ್ಲರೂ ಏಕಾಗ್ರಚಿತ್ತವೆಂಬುದೊಂದು ಹಸ್ತದಲ್ಲಿ ಸದ್ಭಾವ ವೆಂಬ ಬಿಲ್ಲಿಗೆ ಸುಜ್ಞಾನವೆಂಬ ಅಂಬ ತೊಡಚಿ ಹಿಡಿದುಕೊಂಡಿರ್ದರೆಂಬುದೀಗ ' ಹೊಂಗರಿಯ ಬಿಲ್ಲುಕೋಲನೊಂದು ಕೈಯಲ್ಲಿ ಹಿಡಿದು ' ಎಂಬ ಶಬ್ದಕ್ಕರ್ಥ. ತನ್ನ ಭಕ್ತರಿಗೆ ತನ್ನನೆ ಸೂಱೆಯ ಕೊಡುವ ನಿಜದ ನಿಧಿಯಪ್ಪ ನಿರ್ಮಲ ಶಿವತತ್ತ್ವ ವೆಂಬ ತಂಡುಲವ ಮಹದಱಿವಿನ ಹಸ್ತದಲ್ಲಿ ಹಿಡಿದಿರ್ದರೆಂಬುದೀಗ ' ಒಂದು ಕೈಯಲ್ಲಿ ಬಿದಿರಕ್ಕಿಯ ಹಿಡಿದು ' ಎಂಬ ಶಬ್ದಕ್ಕರ್ಥ. ಅಂತು ಷಡ್ವಿಧಶಕ್ತಿಯ ರೆಲ್ಲರು ಶಿವಜ್ಞಾನಾನಂದಲೀಲೆವಿಡಿದು ನಲಿದಾಡುತ್ತ ಶರಣನ ಸರ್ವಾಂಗದಲ್ಲಿ ಚಿತ್‌ಪ್ರಕಾಶಮಯವಾಗಿ ಕಾಣಿಸುತ್ತ ಶರಣಂಗೆ ಜ್ಞಾನಬಲವಾಗಿರ್ದರೆಂಬುದೀಗ ' ದಂಗಟನ ಪುಣುಜೆಯರು ಮುಂದೆ ಬಂದಾಡಲು ' ಎಂಬ ಶಬ್ದಕ್ಕರ್ಥ. 'ಕಂಗಳೆ'ಂದರೆ ಜ್ಞಾನದೃಕ್ಕು. 'ಮುತ್ತೆ'ಂದರೆ ಮುಕ್ತಿಸ್ವರೂಪನಪ್ಪ ಲಿಂಗ. 'ಪಾದ'ವೆಂದರೆ ಕ್ರಿಯಾಚಾರ. ಅಂತು ಶರಣನ ಜ್ಞಾನದೃಕ್ಕಿನಲ್ಲಿ ಭಿನ್ನವಿಲ್ಲದಿರ್ದ ಮುಕ್ತಿಸ್ವರೂಪನಪ್ಪ ಚಿತ್ಕಲಾಲಿಂಗವು ಬಹಿಷ್ಕರಿಸಿ ಇಷ್ಟಲಿಂಗವಾಗಿ ಬಂದು ಕ್ರಿಯಾಚಾರದಲ್ಲಿ ನೆಲೆಗೊಂಡಿತ್ತೆಂಬುದೀಗ ' ಕಂಗಳ ಮುತ್ತು ಸಡಿಲಿ ಪಾದದ ಮೇಲೆ ಬೀಳಲಿ ' ಎಂಬ ಶಬ್ದಕ್ಕರ್ಥ. ಅಂತು ಭಕ್ತಿಗೊಲಿದು ಅಖಂಡ ಜ್ಞಾನ ಲಿಂಗವು ಖಂಡಿತವನೈದಿ ಸೂಕ್ಷ್ಮರೂಪಿಂದ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬಂದಿ ತ್ತೆಂಬುದೀಗ ' ಅಂಗೈಯ್ಯವೊಳಗೊಂದು ಅಱಿದ ತಲೆ ಮೂಡಲು ' ಎಂಬ ಶಬ್ದ

೧ ಪುಣುಜೆಯರೆಂಬ (ಎ.)

ಕ್ಕರ್ಥ. ಅಂತು ತನ್ನ ದೇಹವಪ್ಪ ತನ್ನ ಆತ್ಮಸ್ವರೂಪೇ ಇಷ್ಟಲಿಂಗವಾಗಿ ಕರಸ್ಥಲದಲ್ಲಿ ಧರಿಸಿಕೊಂಡು ಕ್ರಿಯಾನುಭಾವದಿಂದ ಚರಿಸುತ್ತಿರ್ದ ಶರಣಂಗೆ ಒಳಹೊಱಗೆನ್ನದೆ ಸರ್ವಾಂಗಲಿಂಗವಾಯಿತ್ತೆಂಬುದೀಗ 'ದಂಗಟನ ಹೊತ್ತುಕೊಂಡು ಆಡುತ್ತಿರಲು ಶೃಂಗಾರವಾಯಿತ್ತೆ'ಂಬ ಶಬ್ದಕ್ಕರ್ಥ. ಇಂತು ಜ್ಞಾನಕ್ರೀಯಿಂದ ಸರ್ವಾಂಗಲಿಂಗವಾಗಿ ಭಿನ್ನವಿಲ್ಲದೆ ಕೂಡಿಪ್ಪುದೇ ಭಕ್ತಿ. ಅಂತಪ್ಪ ಭಕ್ತಿಯೆಂಬುದು ಎಂದೆಂದೂ ಶಿವನಲ್ಲಿ ಸಮೇತವಾಗಿಪ್ಪ ಶಕ್ತಿ. ಅಂತು ಶಕ್ತಿಯೇ ಭಕ್ತಿಯಾಯಿತ್ತೆಂಬುದಾ ಶಿವಕೃಪೆಯಿಂದ ಶರಣನಱಿದನೆಂಬುದೀಗ 'ಕೂಡಲಚೆನ್ನಸಂಗಯ್ಯನಲ್ಲಿ ಭಕ್ತ್ಯಂಗನೆಯ ನಾವಿಂದು ಕಂಡೆವಯ್ಯಾ' ಎಂಬ ಶಬ್ದಕ್ಕರ್ಥ. ೭೯

ವ. ಅತಿಬಲ ಪ್ರಬಲಿತ ಜಂಗಮರೂಪು ಸಂಸಾರಿಯಾದ ಕಾರಣ ಭಕ್ತ ನಿಸ್ಸಂಸಾರಿಯಾದ ವೈರಾಗ್ಯವು. ಆ ಸಂಸಾರಿಯ ನಿಷ್ಠೆವೊಂದಾದಡೆ ತೆಱಹಿಲ್ಲ ಕೂಡಲಚೆನ್ನಸಂಗಾ ನಿಮ್ಮಲ್ಲಿ.

ಟೀ. ಅಖಂಡ ಚಿತ್‌ಪ್ರಕಾಶವನುಳ್ಳ ಪರಿಪೂರ್ಣಜ್ಞಾನ ಚೈತನ್ಯವಸ್ತುವೆ ಜಂಗಮವೆಂಬುದೀಗ 'ಅತಿಬಲ ಪ್ರಬಲಿತ ಜಂಗಮರೂಪು' ಎಂಬ ಶಬ್ದಕ್ಕರ್ಥ. ಅಂತಪ್ಪ ಪರವಸ್ತುವೇ ಭಕ್ತಿಕಾರಣ ಸಾಕಾರವಾಗಿ ಭಕ್ತನ ತನು ಮನ ಧನಂಗಳು ಮೊದಲಾದ ಸಂಸಾರಸುಖಂಗಳನೆಲ್ಲವ ಭಕ್ತಿಮುಖದಿಂದಿತ್ತಡೆ ಲಿಂಗವು ಕೈಕೊಂಡು ಆ ಭಕ್ತನ ಸಂಸಾರಸುಖಂಗಳನೆಲ್ಲವ ತನ್ನವೆಂದು ಅಭಿಮಾನಿಸಿಕೊಂಡು ಲಿಂಗವು ಭೋಗಿಸುತ್ತಿರ್ಪನಾಗಿ ಭಕ್ತನ ಸಂಸಾರ ಲಿಂಗದದಾಯಿತ್ತೆಂಬುದೀಗ 'ಅತಿಬಲ ಪ್ರಬಲಿತ ಜಂಗಮರೂಪು ಸಂಸಾರಿಯಾದನೆ'ಂಬ ಶಬ್ದಕ್ಕರ್ಥ. ಅಂತು ಭಕ್ತಿಮುಖದಲ್ಲಿ ಲಿಂಗವು ಸಂಸಾರವ ಕೈಕೊಂಡ ಕಾರಣ ಭಕ್ತಂಗೆ ಸಂಸಾರಬಂಧ ಬಿಡುಗಡೆಯಾಗಿಹೋಯಿತ್ತೆಂಬುದೀಗ 'ಭಕ್ತ ನಿಸ್ಸಂಸಾರಿಯಾದ ವೈರಾಗ್ಯ'ವೆಂಬ ಶಬ್ದಕ್ಕರ್ಥ. ಅಂತು ತನು ಮನ ಧನಕ್ಕೆ ಕರ್ತುವಾದ ಸಂಸಾರಿಯೇ ಲಿಂಗವೆಂಬ ಲಿಂಗಭಾವದ ದೃಢ ಘಟಿಸಿ ತಾನೆಂಬ ಭಾವವಳಿದು ಲಿಂಗದಲ್ಲಿ ಭಿನ್ನವಿಲ್ಲದಿರ್ದಡೆ ಆ ಭಕ್ತನೇ ಲಿಂಗವೆಂಬುದೀಗ 'ಆ ಸಂಸಾರಿಯ ನಿಷ್ಠೆವೊಂದಾದಡೆ ತೆಱಹಿಲ್ಲ ಕೂಡಲ ಚೆನ್ನಸಂಗಾ ನಿಮ್ಮಲ್ಲಿ' ಎಂಬ ಶಬ್ದಕ್ಕರ್ಥ. ೮೦

ವ. ನಿಚ್ಚಕ್ಕೆ ನಿಚ್ಚಕ್ಕೆ ಒತ್ತೆಯ ಬೇಡಿದಡೆ ಅಚ್ಚುಗವಾಯಿತ್ತವ್ವಾ ನಮ್ಮ ನಲ್ಲಂಗೆ! ಕಿಚ್ಚನೆ ಹೊತ್ತುಕೊಂಡು [1]ಅಚ್ಚನೆಯಾಡಲು[1] ಅಚ್ಚು

[1] ಅರ್ಚನೆಯಾಡಲು (ಎ.)

ಗವಳಿಯಿತ್ತವ್ವಾ ನಮ್ಮ ನಲ್ಲಂಗೆ ! ಅರ್ಚನೆಯ ಗಳಿಹವನಿಳುಹಿದರೆ ಬಳಿಕ ನಿಶ್ಚಿಂತವಾಯಿತ್ತು ಗೊಹೇಶ್ವರಾ !

ಟೀ. ಅಂಗದ ಮೇಲೆ ಲಿಂಗವ ಧರಿಸಿ ನಿಜವನಱಿದು ಪೂಜಿಸಲಱಿಯದೆ ಉಪಾಧಿಯಿಂದ ಮುಕ್ತಿಯ ಕಾಮಿಸಿ ಪೂಜಿಸುತ್ತಿರಲು ‘ ಅದು ನಿಚ್ಚಕ್ಕೆ ನಿಚ್ಚಕ್ಕೆ ಒತ್ತೆಯ ಬೇಡಿದಡೆ ’ ಎಂಬ ಶಬ್ದಕ್ಕರ್ಥ. ಆ ಮುಕ್ತಿಯ ಬಯಸುವ ಬಯಕೆ ಲಿಂಗಕ್ಕೆ ಭಿನ್ನವಾದುದಾಗಿ ಅದು ‘ಅಚ್ಚುಗವಾಯಿತ್ತೆ’ಂಬ ಶಬ್ದಕ್ಕರ್ಥ. ಆ ಉಪಾಧಿಯ ಬಿಟ್ಟು ಜ್ಞಾನಾಗ್ನಿಯನು ಸರ್ವಾಂಗದ ಮೇಲೆ ಧರಿಸಿ, ಪರಮಾನಂದ ಲೀಲೆಯೊಳಿರುತ್ತ, ನಿರುಪಾಧಿಕನಾಗಿ ಮಾಡುವ ಭಕ್ತಿ ಅದು ಲಿಂಗಕ್ಕೆ ಸುಖವಾಯಿತ್ತೆಂಬುದೀಗ ‘ ಕಿಚ್ಚನೆ ಹೊತ್ತುಕೊಂಡು ಅಚ್ಚನೆಯಾಡಲು ಅಚ್ಚುಗವಳಿಯಿತ್ತವ್ವಾ ನಮ್ಮ ನಲ್ಲಂಗೆ ’ ಎಂಬ ಶಬ್ದಕ್ಕರ್ಥ. ಅಂತು ಧರಿಸಿಕೊಂಡಿಪ್ಪ ವೃತ್ತಿ ಜ್ಞಾನ ಕ್ರಿಯಾಭೇದವನು ನಿವೃತ್ತಿ ಮಾಡಿ, ಮಾಡುವ ಮಾಡಿಸಿಕೊಂಬವೆರಡೂ ಒಂದೇ ವಸ್ತುವೆಂಬ ಅಭಿನ್ನಭಾವ ಘಟಿಸಿ ಮಾಡುವ ಸಹಜ ಭಕ್ತಿಯಲ್ಲಿ ಲಿಂಗವು ಭಿನ್ನವಿಲ್ಲದೆ ನಿಶ್ಚಿಂತದಲ್ಲಿಪ್ಪನೆಂಬುದೀಗ ‘ ಅರ್ಚನೆಯ ಗಳಿಹವನಿಳುಹಿದರೆ ಬಳಿಕ ನಿಶ್ಚಿಂತವಾಯಿತ್ತು ಗೊಹೇಶ್ವರಾ ’ ಎಂಬ ಶಬ್ದಕ್ಕರ್ಥ. ೮೧

ವ. ಲಿಂಗವೆ ಜಂಗಮ, ಜಂಗಮವೆ ಲಿಂಗವೆಂಬುದನಾರು ಬಲ್ಲರಯ್ಯಾ ? ಬಸವಣ್ಣನಲ್ಲದೆ ಲಿಂಗಕ್ಕೆ ಆಧಾರವಿಲ್ಲವೆಂದು ಮರ್ತ್ಯಲೋಕದೊಳಯಿಂಕೆ ಬಂದು ಅವತರಿಸಿದನಯ್ಯಾ ಬಸವಣ್ಣನು. ಲಿಂಗಮುಖ ಜಂಗಮವೆಂದಱಿದು ತನ್ನನರ್ಪಿಸಿ ಇದಿರ ತಪ್ಪಿಸಿ ಇರಬಲ್ಲನಯ್ಯಾ ಬಸವಣ್ಣನು ಅಂಗಮುಖವೆಲ್ಲಾ ನಷ್ಟವಾಗಿ ಭೃತ್ಯಾಚಾರವೇ ತನುವಾಗಿ ಇರಬಲ್ಲನಯ್ಯಾ ಬಸವಣ್ಣನು. ಪ್ರಾಣದ ಕಳೆಯಱಿತು ಜಂಗಮವೆ ಪ್ರಾಣವಾಗಿರಬಲ್ಲನಯ್ಯಾ ಬಸವಣ್ಣನು. ಬಸವಪ್ರಿಯ ಕೂಡಲಚೆನ್ನಸಂಗಯ್ಯನಲ್ಲಿ ಆಚಾರದಲ್ಲಿ ಪ್ರಾಣಸ್ವಾಯತವ ಮಾಡಿಕೊಂಡ ಸಂಗನಬಸವಣ್ಣನೆ ಭಕ್ತನಯ್ಯಾ !

ಟೀ. ಈ ವಚನ ಕಾಣಬಂದರ್ಥ. ೮೨

ವ. ಅಂಗದಲ್ಲಿ ಆಚಾರವ ಸ್ವಾಯತವ ಮಾಡಿಕೊಂಡನು. ಆಚಾರದಲ್ಲಿ ಪ್ರಾಣಸ್ವಾಯತವ ಮಾಡಿಕೊಂಡನು. ಪ್ರಾಣದಲ್ಲಿ ಲಿಂಗಸ್ವಾಯತವ ಮಾಡಿಕೊಂಡನು. ಲಿಂಗದಲ್ಲಿ ಜಂಗಮವ ಸ್ವಾಯತವ ಮಾಡಿಕೊಂಡನು. ಜಂಗಮದಲ್ಲಿ ಪ್ರಸಾದವ ಸ್ವಾಯತವ ಮಾಡಿ

ಕೊಂಡನು. ಪ್ರಸಾದದಲ್ಲಿ ನಿತ್ಯವ ಸ್ವಾಯತವ ಮಾಡಿಕೊಂಡನು. ನಿತ್ಯದಲ್ಲಿ ದಾಸೋಹವ ಸ್ವಾಯತವ ಮಾಡಿಕೊಂಡನು. ದಾಸೋಹದಲ್ಲಿ ತನ್ನ ಮಱೆದು ನಿಶ್ಚಿಂತನಿವಾಸಿಯಾಗೈದಾನೆ. ನಮ್ಮ ಗೊಹೇಶ್ವರಲಿಂಗದಲ್ಲಿ ಸಂಗನಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಧನ್ಯನಾಗಬೇಕು ನಡೆಯಾ ಸಿದ್ಧರಾಮಯ್ಯಾ!

೬೯. ಪ್ರಥಮದಲ್ಲಿ ಅಂಗದ ಮೇಲೆ ಇಷ್ಟಲಿಂಗದ ಕ್ರೀಯನಳವಡಿಸಿಕೊಂಡ ಬಸವಣ್ಣನೆಂಬುದೀಗ 'ಅಂಗದ ಮೇಲೆ ಆಚಾರವ ಸ್ವಾಯತವ ಮಾಡಿಕೊಂಡನು ಬಸವಣ್ಣನು' ಎಂಬ ಶಬ್ದಕ್ಕರ್ಥ. ಅಂತಪ್ಪ ಇಷ್ಟಲಿಂಗವೆ ಪ್ರಾಣವಾಗಿರ್ದು, ಇಷ್ಟಲಿಂಗದಲ್ಲಿ ಪ್ರಾಣವ ನೆಲೆಗೊಳಿಸಿದ ಬಸವಣ್ಣನೆಂಬುದೀಗ 'ಆಚಾರದಲ್ಲಿ ಪ್ರಾಣ ಸ್ವಾಯತವ ಮಾಡಿಕೊಂಡನು ಬಸವಣ್ಣನು' ಎಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗವೇ ಪ್ರಾಣವಾಗಿರ್ದ ಭಾವದಿಂದ ಪ್ರಾಣದಲ್ಲಿ ಲಿಂಗ ನೆಲೆಗೊಂಡಿತ್ತು ಬಸವಣ್ಣಂಗೆಂಬುದೀಗ 'ಪ್ರಾಣದಲ್ಲಿ ಲಿಂಗವ ಸ್ವಾಯತವ ಮಾಡಿಕೊಂಡನು ಬಸವಣ್ಣನು' ಎಂಬ ಶಬ್ದಕ್ಕರ್ಥ. ಅಂತಪ್ಪ ಪ್ರಾಣಲಿಂಗವೇ ಸತ್ತುವೆಂದಱಿದು, ಆ ಸತ್ತುವಪ್ಪ ಲಿಂಗದ ಪರಮಚೈತನ್ಯವಪ್ಪ ಚಿತ್ತುವೇ ಜಂಗಮವೆಂದಱಿದು, ಆ ಲಿಂಗಜಂಗಮದಲ್ಲಿ ಭಿನ್ನಭಾವವಳಿದಿರ್ದ ಬಸವಣ್ಣನೆಂಬುದೀಗ 'ಲಿಂಗದಲ್ಲಿ ಜಂಗಮವ ಸ್ವಾಯತವ ಮಾಡಿಕೊಂಡನು ಬಸವಣ್ಣನು' ಎಂಬ ಶಬ್ದಕ್ಕರ್ಥ. ಅಂತು ಪ್ರಾಣವೆಲ್ಲಾ ಸತ್ತುವಪ್ಪ ಲಿಂಗವಾದ ಭಾವಜ್ಞಾನವೆಲ್ಲಾ ಅಖಂಡಚಿತ್ತುವಪ್ಪ ಜಂಗಮರೂಪಾದಲ್ಲಿ ಆ ಚಿತ್ತುವಿನಲ್ಲಿ ಆನಂದಮಪ್ಪ ಪರಮಪ್ರಸಾದ ದೊರೆಕೊಂಡಿತ್ತು ಬಸವಣ್ಣಂಗೆಂಬುದೀಗ 'ಆ ಜಂಗಮದಲ್ಲಿ ಪ್ರಸಾದವ ಸ್ವಾಯತವ ಮಾಡಿಕೊಂಡನು ಬಸವಣ್ಣನು' ಎಂಬ ಶಬ್ದಕ್ಕರ್ಥ. ಅಂತು ಸತ್ತುಚಿತ್ತಾನಂದವಪ್ಪ ಪರಬ್ರಹ್ಮವು ತಾನಾದ ಸದ್ಭಕ್ತನು ಶಿವೋಹಂಭಾವದಿಂದ ತನಗೆ ನಿತ್ಯವ ನಿಶ್ಚಯಿಸಿದ ಬಸವಣ್ಣನೆಂಬುದೀಗ 'ಪ್ರಸಾದದಲ್ಲಿ ನಿತ್ಯವ ಸ್ವಾಯತವ ಮಾಡಿಕೊಂಡನು ಬಸವಣ್ಣನು' ಎಂಬ ಶಬ್ದಕ್ಕರ್ಥ. ಅಂತು ಲಿಂಗ ಜಂಗಮ ಪ್ರಸಾದ ತನ್ನಲ್ಲಿ ಭಿನ್ನವಿಲ್ಲದೆ ನೆಲೆಗೊಂಡು ತಾನೆಲ್ಲಾ ಪರಶಿವಸ್ವರೂಪಾಗಿರ್ದುದ ನಱಿದ ಶರಣ ತನ್ನ ಶಿವತತ್ತ್ವವ ಬಿಡದಿಹ ಬಂಧವೀಗ ಭಕ್ತಿಯೆಂದಱಿದು, ಶಿವನಲ್ಲಿ ಭಿನ್ನಭಾವವಳಿದು, ಶಿವಂಗೆ ದಾಸೋಹವ ಮಾಡುತ್ತಿರ್ದ ಬಸವಣ್ಣನೆಂಬುದೀಗ 'ನಿತ್ಯದಲ್ಲಿ ದಾಸೋಹವ ಸ್ವಾಯತವ ಮಾಡಿಕೊಂಡನು ಬಸವಣ್ಣನು' ಎಂಬ ಶಬ್ದಕ್ಕರ್ಥ. ಅಂತು ಅಂಗ ಪ್ರಾಣ ಭಾವಂಗಳೆಲ್ಲಾ ಶಿವನೆಂಬ ಭಾವ ಘಟಿಸಿ, ತಾನೆಂಬ ಭಾವ ತಲೆದೋಱದೆ ಮಾಡುವ ಮಾಡಿಸಿಕೊಂಬವೆರಡೂ

ಶಿವನೇ ಎಂಬ ನಿಜದ ನಿಶ್ಚಯ ಘಟಿಸಿ, ಭಿನ್ನಭಾವದ ಚಿಂತನೆಯಿಲ್ಲದೆ ನಿಶ್ಚಿಂತವಾದ ಶಿವಪದದಲ್ಲಿರ್ದ ಬಸವಣ್ಣನೆಂಬುದೀಗ 'ದಾಸೋಹದಲ್ಲಿ ತನ್ನ ಮಱೆದು ನಿಶ್ಚಿಂತನಿವಾಸಿಯಾಗ್ಯೆದಾನೆ ಬಸವಣ್ಣ' ನೆಂಬ ಶಬ್ದಕ್ಕರ್ಥ. ಅಂತಪ್ಪ ಸದ್ಭಕ್ತ ಬಸವಣ್ಣಂಗೆ ನಮಸ್ಕಾರ ಮೊದಲಾದ ಭಕ್ತಿಯ ಮಾಡಿದವರೆಲ್ಲಾ ಮುಕ್ತರೆಂಬುದೀ ವಚನದ ಮುದ್ರಿಕೆಯರ್ಥ. ೮೩

**ವ.** ಭಕ್ತನ ಕಾಯುವ ಜಂಗಮ ಧರಿಸಿಪ್ಪ ನೋಡಾ! ಜಂಗಮದ ಪ್ರಾಣವ ಭಕ್ತ ಧರಿಸಿಪ್ಪ ನೋಡಾ! ಭಕ್ತನಲ್ಲಿಯೂ ಭಕ್ತಜಂಗಮವೆರಡೂ ೧ಸನ್ನಿಹಿತ೧. ಜಂಗಮದಲ್ಲಿಯೂ ಭಕ್ತಜಂಗಮವೆರಡೂ ೧ಸನ್ನಿಹಿತ೧. ಜಂಗಮಕ್ಕಾದರೆಯೂ ಭಕ್ತಿಯೇ ಬೇಕು. ಭಕ್ತಂಗೆಂತೂ ಭಕ್ತಿಸ್ಥಲ ಬೇಕು. ಆ ಭಕ್ತನ ಅರ್ಥ ಪ್ರಾಣಾಭಿಮಾನಕ್ಕೆ ತಾನೇ ಕರ್ತನೆಂದು ಬಂದ ಜಂಗಮ ಆ ಭಕ್ತನ ಮನೆಗೆ ಕರ್ತನಾಗಿ ಹೊಕ್ಕು ತನು ಮನ ಧನಂಗಳನೆಲ್ಲವನೊಳಕೊಂಡು, ಆ ಭಕ್ತನ ಪಾವನವ ಮಾಡಬಲ್ಲರೆ ಆತ ಜಂಗಮವೆಂಬೆ. ಆ ಜಂಗಮದ ಗಳ ಘರ್ಜನೆಯ ಸೈರಿಸಿ, ಮುಡುಹಿಂಗೆ ಮುನ್ನೂಱು ಪಟ್ಟವ ಕಟ್ಟುತ್ತಿರ್ದರೆ ಆತ ಭಕ್ತನೆಂಬೆ. ತನ್ನ ಮಠಕ್ಕೆ ತಾ ಬಹಡೆ ಮುನಿಸುಂಟೇ? ಕೂಡಲಸಂಗನ ಶರಣರ ಮನೆಯ ಬಾಗಿಲಗಾಹಿ ನಾನಾಗಿ ಗೃಹದ ಕರ್ತರು ಗೃಹಕ್ಕೆ ಬಹಡೆ ಬೇಕೆನ್ನೆ ಬೇಡೆನ್ನೆ.

ಟೀ. ಚಿತ್‌ಪರಮ ಚೈತನ್ಯಮಪ್ಪ ಪ್ರಾಣಸ್ವರೂಪೇ ಜಂಗಮವೆಂಬ ಭಾವ ಘಟಿಸಿ, ತ್ರಿಪದಾರ್ಥಂಗಳಲ್ಲಿ ವಂಚನೆಯಿಲ್ಲದೆ ಜಂಗಮಕ್ಕರ್ಪಿಸಿ, ತನ್ನದೆಂಬ ಕರ್ತೃತ್ವಭಾವವಿಲ್ಲದಿರ್ದಡೆ ಭಕ್ತ. ಅಂತಲ್ಲದೆ ಪದಾರ್ಥದಲ್ಲಿ ವಂಚನೆಯುಳ್ಳವನೇ ಜೀವಿ. ಅಂತು ನಿರ್ವಂಚಕನಾಗಿ ಮಾಡುವ ಭಕ್ತನ ಪದಾರ್ಥಂಗಳು ತನ್ನವೆಂದು ಶಿವಾಚಾರದಲ್ಲಿ ಕೈಕೊಂಡು ಭಕ್ತಿಯ ತೋಱಿ ಮುಕ್ತನ ಮಾಡಬಲ್ಲರೆ ಜಂಗಮ. ಅಂತಲ್ಲದೆ ಪದಾರ್ಥಂಗಳ ಹಿಡಿಯಬಾರದೆಂದು ವೈರಾಗ್ಯ ಮೊದಲಾದ ವ್ರತ ನೇಮಂಗಳಲ್ಲಿ ಆಚರಿಸುವರೆಲ್ಲಾ ಜಡರೆಂಬುದೀ ವಚನದ ತಾತ್ಪರ್ಯಾರ್ಥ. ೮೪

**ವ.** ವಿಶ್ವಾಸವೇ ಭಕ್ತಿ. ಗುರು ಲಿಂಗ ಜಂಗಮವೊಂದೆಂದಱಿವುದೇ ಜ್ಞಾನ. ತ್ರಿವಿಧದಲ್ಲಿ ನಿರ್ವಂಚನೆಯೇ ವೈರಾಗ್ಯ. ಪ್ರಸಾದವೇ ಮುಕ್ತಿ. ಇದು ಸತ್ಯ, ಶಿವ ಬಲ್ಲ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ!

೧ ಸನ್ನಹಿತ (ಎ.ರಾ.ಹು.)

**ಟೀ..** ಈ ವಚನ ಕಾಣಬಂದರ್ಥ. ೮೫

**ವ.** ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣನೆಂಬರು. ನಾನದ ಮನದಲ್ಲಿ ಹಿಡಿದು ಮಾತಾಡುವೆನಲ್ಲದೆ ಕ್ರೀಯಿಂದ ಕಾಣೆ. ಸತ್ತೇ ಗುರು, ಚಿತ್ತೇ ಲಿಂಗ, ಆನಂದವೇ ಜಂಗಮ, ನಿತ್ಯವೇ ಪ್ರಸಾದ, ಪರಿಪೂರ್ಣವೇ ಪಾದೋದಕವೆಂಬುದ ನಾನು ಗ್ರಹಿಸಿ, ನಿಮ್ಮ ಜಂಗಮಕ್ಕೆ ಭಕ್ತನಾದೆನಯ್ಯಾ. ನಿತ್ಯನಾಗಿ ನಿಮ್ಮ ಜಂಗಮಕ್ಕೆ ವಂದಿಸುವೆ. ಆನಂದದಿಂದ ನಿಮ್ಮ ಪಾದೋದಕವ ಕೊಂಬೆ. ಪರಿಪೂರ್ಣನಾಗಿ ನಿಮ್ಮನರ್ಚಿಸಿ ಪೂಜಿಸಿ ಪರವಶನಪ್ಪೆ ನಾನು. ಭಕ್ತಿಪ್ರಸಾದ ಮುಕ್ತಿಪ್ರಸಾದ ನಿತ್ಯಪ್ರಸಾದವ ನಿಮ್ಮ ಜಂಗಮದಲ್ಲಿ ವರವ ಪಡೆವೆನು. ಕಲಿದೇವರ ದೇವ ನಿಮ್ಮ ಶರಣ ಪ್ರಭುದೇವರ ಶ್ರೀಪಾದದಲ್ಲಿ ಮಗ್ನನಾಗಿರ್ದೆನಯ್ಯಾ !

**ಟೀ.** ಸತ್ತು ಚಿತ್ತಾನಂದ ನಿತ್ಯ ಪರಿಪೂರ್ಣ ಪರಬ್ರಹ್ಮವೇ ಗುರು ಲಿಂಗ ಜಂಗಮ ಪಾದೋದಕ ಪ್ರಸಾದವೆಂದಱಿದು ವಿಶ್ವಾಸಭಾವ ಘಟಿಸಿ, ಕ್ರೀಯಿಂದಲಾಚರಿಸಿ ಶಿವನಲ್ಲಿ ಕೂಡಬಲ್ಲ ಭಕ್ತನೇ ಮುಕ್ತ. ಅಂತು ಪರಬ್ರಹ್ಮವು ಸಾಕಾರವಾಗಿರ್ದುದನಱಿದು ಕ್ರೀಯಿಂದ ಕೂಡುವ ಭಕ್ತಿಯಿಲ್ಲದೆ ನಿರವಯ ಪರಬ್ರಹ್ಮವ ಜ್ಞಾನದಿಂದಱಿದು ಬ್ರಹ್ಮವಾದೆನೆಂಬ ಅದ್ವೈತಿಗಳು ಅನುಭಾವಸಿದ್ಧರಾದ ಮುಕ್ತರಲ್ಲ. ಅವರ ಮಾತೆಲ್ಲಾ ಸಟೆ ಎಂಬುದೀ ವಚನದ ತಾತ್ಪರ್ಯಾರ್ಥ. ೮೬

**ವ.** ಮನ ಸೂಸದ ಮಚ್ಚು ಅಚ್ಚೊತ್ತಿದಂತೆ ಲಿಂಗವೆಂಬೆ ಜಂಗಮವೆಂಬೆ ಪ್ರಸಾದವೆಂಬೆ. ಸ್ವಯಂಕೃತ ಭಾವ ಕೂಡಲ ಚೆನ್ನಸಂಗಯ್ಯನಲ್ಲಿ.

**ಟೀ.** ಸಮ್ಯಗ್ ಜ್ಞಾನದಿಂದ ತನ್ನ ನಿಜವೇ ಪರಬ್ರಹ್ಮವೆಂದಱಿದು, ಆ ಪರಬ್ರಹ್ಮವೇ ಲಿಂಗ ಜಂಗಮ ಪ್ರಸಾದವಾಯಿತ್ತೆಂದು ತಿಳಿದ ಶರಣನು ಆ ಲಿಂಗ ಜಂಗಮ ಪ್ರಸಾದವೆಲ್ಲಾ ತನ್ನ ಪ್ರಾಣಸ್ವರೂಪವೆಂದೇ ಕಂಡು, ಭಿನ್ನಭಾವವಿಲ್ಲದೆ ವಿಶ್ವಾಸ ಪ್ರೀತಿ ಮೋಹದಿಂದ ನಚ್ಚಿ ಮಚ್ಚಿ ಭಕ್ತಿಯ ಮಾಡುತ್ತಿಹ ಭಕ್ತನೇ ಶಿವಸ್ವರೂಪಾದ ಕಾರಣ ಅಂತಪ್ಪ ಸದ್ಭಕ್ತನು ತನ್ನ ಮನದಲ್ಲಿ ಕಾಮ್ಯಾರ್ಥಂಗಳ ಬಯಸಿ ಪೂಜಿಸಿ ಭಕ್ತಿ ಬೀಸರವಾಗಿ ಭವಕ್ಕೆ ಬಾರನೆಂಬುದೀ ವಚನದ ತಾತ್ಪರ್ಯಾರ್ಥ. ೮೭

ವ. ಹರಿವ ನದಿಯು ತೆಱಿನ ಹೋಲಬಲ್ಲರೆ ಭಕ್ತಿ. ಕೂಡೆ [೧]ಸಯಧಾನವ[೧] ನೀಡಬಲ್ಲರೆ ಭಕ್ತಿ. ನೀಡಿ ಮಿಕ್ಕ ಸಯಿದಾನವ ಕಾಯ್ದುಕೊಂಡಿರ ಬಲ್ಲಡೆ ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ.

ಟೀ. ಮನವೆಂಬುದೀಗ ‘ ಹರಿವ ನದಿ ’ ಎಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸು ಶಿವಭಕ್ತಿಯ ಮಾಡುವವರಿಗೆ ಫಲ ಪದ ಭೋಗಂಗಳ ಬಯಕೆಯ ಹುಟ್ಟಿಸಿ ಭವದತ್ತ ಕೆಡಹುತ್ತಿಪ್ಪುದು. ಅಂತಪ್ಪ ಮನಸ್ಸೇ ಮಾಯೆಯೆಂದಱಿದು, ಆ ಮನಸ್ಸಿನ ಬಯಕೆಯನುಳಿದು, ತನ್ನ ನಿಜವೇ ಪರಮಲಿಂಗವೆಂದಱಿದು ಭಿನ್ನ ಬುದ್ಧಿ ತೋಱದಿಪ್ಪುದೇ ಭಕ್ತಿ ಎಂಬುದೀಗ ‘ ಹರಿವ ನದಿಯು ತೆಱಿನ ಹೋಲ ಬಲ್ಲರೆ ಭಕ್ತಿ ’ ಎಂಬ ಶಬ್ದಕ್ಕರ್ಥ. ಅಂತು ಪೂಜಿಸುವ ಪೂಜಿಸಿಕೊಂಬವೆರಡೂ ಒಂದೇ ಎಂಬ ಏಕಭಾವದಿಂದ ಲಿಂಗವು ತಾನೆಂಬ ಅದ್ವೈತಜ್ಞಾನವ ಕ್ರೀಯಿಂದ ಶಿವಾರ್ಪಿತವ ಮಾಡಿ, ತಾನೆಂಬಱಿವಡಗಿರಬಲ್ಲಡೆ ಭಕ್ತಿಯೆಂಬುದೀಗ ‘ ಕೂಡೆ ಸಯಧಾನವ ನೀಡಬಲ್ಲರೆ ಭಕ್ತಿ ’ ಎಂಬ ಶಬ್ದಕ್ಕರ್ಥ. ಅಂತು ತನು ಕರಣ ಜ್ಞಾನ ಭಾವಂಗಳು ಮೊದಲಾದ ತನ್ನವೆಲ್ಲವ ಲಿಂಗಕ್ಕರ್ಪಿಸಿ, ಲಿಂಗವೆ ಉಳಿದಿರ್ದ ಲಿಂಗದ ಉಳುಮೆಯೊಳಗೆ ಅನ್ಯಭಾವದ ಅಜ್ಞಾನಂಗಳ ಬೇರ್ಪಡಿಸಿಕೊಂಡು ತನ್ನತ್ತ ಪ್ರಗಲೀಯದೆ, ಲಿಂಗಸಾವಧಾನ ಹಿಂಗದೆ ಇರಬಲ್ಲರೆ ಶರಣಂಗೆ ಲಿಂಗವು ಭಿನ್ನವಿಲ್ಲವೆಂಬುದೀಗ ‘ ನೀಡಿ ಮಿಕ್ಕ ಸಯಿಧಾನವ ಕಾಯ್ದುಕೊಂಡಿರಬಲ್ಲರೆ ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ ’ ನೆಂಬ ಶಬ್ದಕ್ಕರ್ಥ. ೮೮

ವ. ಮಾಡುವಂತಿರಬೇಕು. ಮಾಡದಂತಿರಬೇಕು. ಮಾಡುವ ಮಾಟ ದೊಳಗೆ ತಾನಿಲ್ಲದಿರಬೇಕು. ಕೂಡಲಸಂಗಮದೇವರ ನೋಡುತ್ತ ನೋಡುತ್ತ ನೋಡದಂತಿರಬೇಕು.

ಟೀ. ಗುರುಲಿಂಗ ಜಂಗಮಕ್ಕೆ ತ್ರಿವಿಧ ಪದಾರ್ಥಂಗಳ ಕ್ರೀಯಿಂದ ಸಮ ರ್ಪಿಸುವಲ್ಲಿ ಕರ್ತೃಭೃತ್ಯನಾಗಿ ಮಾಡುತ್ತಿರಬೇಕು ಭಕ್ತ. ಅಂತು ಮಾಡುವ ಭಕ್ತನು ತಾನೆಂಬ ಭಾವವಿಲ್ಲದೆ ಮಾಡುವ ಮಾಡಿಸಿಕೊಂಬವೆರಡೂ ಒಂದೇ ಲಿಂಗ ವೆಂದು ಕಾಣುತ್ತಿರ್ಪ ಜ್ಞಾನದೃಕ್ಕುಳ್ಳಾತನೇ ಭಕ್ತನೆಂಬುದೀ ವಚನದ ತಾತ್ಪ ರ್ಯಾರ್ಥ. ೮೯

೧ ಸ್ವೈದಾನವ (ಹು.)

ವ. ಮಾಟವಿಲ್ಲದ ಕೂಟವದೇಕೋ ? ಕೂಟವಿಲ್ಲದ ಮಾಟವಿದೇಕೋ ? ಮಾಟಕೂಟವೆರಡಱ ಅನುವನಱಿಯಬೇಕು. ಸಟೆಯಿಲ್ಲದೆ ದಿಟ ಘಟಿಸಿ ಸ್ವಯವಾಗಬೇಕು ಮಾಟಕೂಟವೆರಡಱ ಅನುಮತದಿಂದವೆ. ಭಕ್ತಿಗಿದೇ ಕೂಟ ಕೂಡಲ ಚೆನ್ನಸಂಗ ನಿಮ್ಮಲ್ಲಿ

ಟೀ. ಕ್ರೀಯಿಲ್ಲದೆ ನಾನೇ ಬ್ರಹ್ಮವೆಂಬ ಬಱಿಯ ಜ್ಞಾನದಿಂದಲು ಪ್ರಯೋಜನವಿಲ್ಲ. ಜ್ಞಾನವಿಲ್ಲದ ಬಱಿಯ ಕ್ರೀಯಿಂದಲೂ ಪ್ರಯೋಜನವಿಲ್ಲ. ಜ್ಞಾನ ಕ್ರೀಯುಕ್ತವಾದ ಸದ್ಭಕ್ತಿಯೇ ಶಿವನಲ್ಲಿ ಕೂಡಿದ ಮುಕ್ತಿಯೆಂಬುದೀ ವಚನದ ತಾತ್ಪರ್ಯಾರ್ಥ. ೯೦

ವ. ತಾ ನಡೆದಡೆ ನಡೆಗೆಟ್ಟ ನಡೆಯ ನಡೆಯಬೇಕು. ತಾ ನುಡಿದಡೆ ನುಡಿಗೆಟ್ಟ ನುಡಿಯ ನುಡಿಯಬೇಕು. ರೂಹಿಲ್ಲದ ಸಂಗವ ಮಾಡಬೇಕು. ಭವವಿಲ್ಲದ ಭಕ್ತಿಯ ಮಾಡಬೇಕು. ತಾನಾವನೆಂದಱಿಯದಂತಿಹುದು ಗೊಹೇಶ್ವರಾ.

ಟೀ. ತಾನು ಶಿವತ್ವವನೆಯ್ದಿಹೆನೆಂಬ ಶರಣಂಗೆ ಶಿವಲಿಂಗವ ಭಿನ್ನವಿಟ್ಟು ಅಱಿದು ಮಾಡುವ ಭಿನ್ನಜ್ಞಾನಕ್ರೀಗಳೆಲ್ಲವ ಬಿಡಬೇಕು, ಅಭಿನ್ನಜ್ಞಾನಕ್ರೀಯ ನಾಚರಿಸಬೇಕೆಂಬುದೀಗ ‘ ತಾ ನಡೆದಡೆ ನಡೆಗೆಟ್ಟ ನಡೆಯ ನಡೆಯಬೇಕು. ತಾ ನುಡಿದಡೆ ನುಡಿಗೆಟ್ಟ ನುಡಿಯ ನುಡಿಯಬೇಕು ’ ಎಂಬ ಶಬ್ದಕ್ಕರ್ಥ. ಅಂತು ಕ್ರಿಯಾಜ್ಞಾನದಿಂದ ನಿಃಕಲವಾಗಿರ್ದ ಮಹಾಲಿಂಗದಲ್ಲಿ ತಾನೆಂಬಂಗವ ಕೂಡಿ ಲಿಂಗಾಂಗಸಂಬಂಧವ ಮಾಡಬೇಕು ಶರಣನೆಂಬುದೀಗ ‘ ರೂಹಿಲ್ಲದ ಸಂಗವ ಮಾಡಬೇಕು ’ ಎಂಬ ಶಬ್ದಕ್ಕರ್ಥ. ಅಂತು ಅಭಿನ್ನಜ್ಞಾನಕ್ರೀಯಿಂದ ಲಿಂಗಾಂಗ ಸಂಬಂಧಿಯಾದ ಶರಣನು ಫಲಪದಂಗಳ ಬಯಸದೆ ಮಾಡುವ ಮಾಡಿಸಿಕೊಂಬ ವೆರಡಾದುದು ಒಂದೇ ಲಿಂಗವೆಂಬ ಅಭಿನ್ನಭಾವ ಘಟಿಸಿ ಮಾಡುವ ಭಕ್ತಂಗೆ ಭವ ವಿಲ್ಲ. ಅಂತಪ್ಪ ಭಕ್ತಿಯ ಮಾಡಬೇಕೆಂಬುದೀಗ ‘ ಭವವಿಲ್ಲದ ಭಕ್ತಿಯ ಮಾಡ ಬೇಕು ’ ಎಂಬ ಶಬ್ದಕ್ಕರ್ಥ. ಅಂತು ಲಿಂಗದೊಳಗೆ ಅಂಗಭಾವವಳಿದು ಲಿಂಗವೆ ಯಾಗಿರ್ದ ಶರಣಂಗೆ ತಾನೆಂಬ ಅಂಗಭಾವವ ಮಱೆದು ಲಿಂಗವೆಯಾಗಿರಬೇ ಕೆಂಬುದೀಗ ‘ ತಾನಾವನೆಂದಱಿಯದಂತಿಹುದು ’ ಎಂಬ ಶಬ್ದಕ್ಕರ್ಥ. ೯೧

ವ. ಪೂರ್ವಿಕ ಪೂಜಕ, ಅಪೂರ್ವಿಕ ಭಕ್ತ. ಕರ್ಮಿ ಪೂಜಕ, ನಿಃಕರ್ಮಿ ಭಕ್ತ. ಲಿಂಗ ಪೂಜಕ, ಜಂಗಮ ಭಕ್ತ. ತನುಗುಣಪೂರ್ವಸೂತಕ ವಿರಹಿತ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಆತನೇ ಅಚ್ಚಶರಣಾ !

**ಟೀ.** ಲಿಂಗವ ಪೂಜಿಸುವರೆಲ್ಲರೂ ಲಿಂಗಪೂಜಕರೆಂಬ ಶಬ್ದಕರ್ಥ. ಜಂಗಮಭಕ್ತಿಯ ಮಾಡುವರೆಲ್ಲರೂ ಜಂಗಮಭಕ್ತರೆಂಬ ಶಬ್ದಕ್ಕರ್ಥ. ಅಂತು ಲಿಂಗವ ಪೂಜಿಸಿದಂಗೆ ತನುವಿನ ಪೂರ್ವವಾಸನೆಯುಳಿಯದೆ ಆ ಲಿಂಗಪೂಜಾಫಲ ಕರ್ಮವನನುಭವಿಸಿ ಭವಕ್ಕೆ ಬರುತ್ತಿಹರು. ಜಂಗಮಕ್ಕೆ ತನು ಮನ ಧನವ ಸಮರ್ಪಿಸಿದ ಭಕ್ತಂಗೆ ತನುವಿನ ಪೂರ್ವವಾಸನೆಯುಳಿದು ಭವಕರ್ಮವಿರಹಿತನಾಗಿ ಮುಕ್ತಿಯಪ್ಪುದೆಂಬುದೀಗ 'ಪೂರ್ವಿಕ ಪೂಜಕ, ಅಪೂರ್ವಿಕ ಭಕ್ತ, ಕರ್ಮಿ ಪೂಜಕ, ನಿಃಕರ್ಮಿ ಭಕ್ತ' ನೆಂಬ ಶಬ್ದಕ್ಕರ್ಥ. ಅಂತು ಜಂಗಮಭಕ್ತನಾದಾತನೇ ತನುವಿನ ಪೂರ್ವವಾಸನೆಯುಳಿದು ಶಿವಶರಣನೆನಿಸಿಕೊಂಡು ಮುಕ್ತನಾದನೆಂಬುದೀಗ 'ತನುಗುಣ ಪೂರ್ವಸೂತಕವಿರಹಿತ ಆತನೇ ಅಚ್ಚ ಶರಣ' ನೆಂಬ ಶಬ್ದಕ್ಕರ್ಥ. ೯೨

**ವ.** ಮಾಡುವ ಮಾಡಿಸಿಕೊಂಬುವೆರಡಳಿ ಉಭಯವೊಂದೇ. ಗುರುವೊಂದೇ. ಲಿಂಗವೊಂದೇ. ಜಂಗಮವೊಂದೇ. ಪ್ರಸಾದವೊಂದೇ. ಒಂದಾದಲ್ಲಿ ಎರಡಾಗಿ ಮಾಡುವ ಭಕ್ತ ನೀನೇ ಕೂಡಲಚೆನ್ನಸಂಗಮದೇವಾ.

**ಟೀ.** ಈ ವಚನ ಕಾಣಬಂದರ್ಥ. ೯೩

**ವ.** ಆದಿ ಅನಾದಿ ಆತ್ಮವಿವೇಕ ಅನುಭಾವಸಂಬಂಧವೆಂತಿಪ್ಪುದೆಂದೊಡೆ : ಆದಿಯೇ ದೇಹ. ಅನಾದಿಯೇ ಆತ್ಮನು. ಇಂತೀ ಆದಿ ಅನಾದಿಯ ಮೇಲಿಪ್ಪುದೇ ಪರಮ ಪ್ರಣಮ. ಆ ಪರಮ ಪ್ರಣಮದ ಪರಮ ಪ್ರಕಾಶವೇ ಚಿಚ್ಛಕ್ತಿ. ಆ ಚಿಚ್ಛಕ್ತಿಯ ಸುವರ್ಣಪ್ರಭೆಯ ಮೇಲಣ ಪರಮನಾದವೇ ಸುನಾದಬ್ರಹ್ಮ. ಆ ಸುನಾದಬ್ರಹ್ಮದ ಮೇಲಣ ಸೂಕ್ಷ್ಮಲಿಂಗವೇ ನಾದಬಿಂದುಕಳಾತೀತವಾದ ಜ್ಯೋತಿರ್ಮಯ ಲಿಂಗ. ಆ ಲಿಂಗದಿಂದೊಗೆದ ದೇಹೇಂದ್ರಿಯ ಮನಃಪ್ರಾಣಾದಿಗಳೆಲ್ಲಾ ಆ ಲಿಂಗದ ಉಪಕರಣಂಗಳಾದ ಕಾರಣ ದೇಹೇಂದ್ರಿಯ ಮನಃಪ್ರಾಣಾದಿಗಳೆಲ್ಲಾ ಆ ಪರವಸ್ತುವಿಂಗೆ ಭಿನ್ನವೆಂಬ ಅಜ್ಞಾನಿಯ ಮೆಚ್ಚ ಕೂಡಲಚೆನ್ನಸಂಗಯ್ಯ.

**ಟೀ.** ವಾಙ್ಮನಕ್ಕಗೋಚರವಾಗಿರ್ದ ನಿಃಕಲಪರಬ್ರಹ್ಮವೇ ಸೂಕ್ಷ್ಮಲಿಂಗ. ಆ ಸೂಕ್ಷ್ಮಲಿಂಗವು ತನ್ನ ಸ್ವಲೀಲೆಯಿಂದ ತನ್ನ ಸ್ವಚೈತನ್ಯವ ಪ್ರಭಾವಿಸಲು, ಆ ಪ್ರಭಾವದ ಘೋಷನಾದವ ಬಿಡದೆ ಕೂಡಿ ಮೂರ್ತಿಗೊಂಡ ಚೈತನ್ಯವೇ ನಾದ

ಬ್ರಹ್ಮವೆನಿಸಿತ್ತು. ಅಂತಪ್ಪ ಚೈತನ್ಯಾಂಗದ ಸ್ವಯಂಪ್ರಕಾಶವೇ ಬಿಂದುವೆನಿಸಿದ ಚಿಚ್ಛಕ್ತಿ. ಅಂತಾದ ಸ್ವಚೈತನ್ಯವೇ ಕಳೆ. ಅಂತಾದ ನಾದಬಿಂದುಕಳಾಸ್ವರೂಪವೇ ಪ್ರಣವಾಕ್ಷರಸ್ವರೂಪಾಗಿಪ್ಪುದು. ಆ ಪ್ರಣವಮನಾದ ಚೈತನ್ಯವೇ ಆತ್ಮ ಮೊದಲಾದ ದೇಹಕರಣೇಂದ್ರಿಯಂಗಳಾದವಾಗಿ ಅಂತಾದ ದೇಹ ಪ್ರಾಣ ಕರಣೇಂದ್ರಿಯಂಗಳ ಆ ಮಹಾಲಿಂಗಕ್ಕೆ ಭಿನ್ನವಿಡದೆ ಉಪಕರಣಂಗಳ ಮಾಡಿ, ಅದಱ ಸುಖಭೋಗಂಗಳನೆಲ್ಲವನೂ ಲಿಂಗಕ್ಕೆ ಭಿನ್ನವಿಡದೆ ಅರ್ಪಿಸುವ ಸದ್ಭಕ್ತನೇ ಮುಕ್ತ. ಅಂತಿಲ್ಲದೆ ಅನಾದಿ ಮಲ ಮಾಯಾಯುಕ್ತವಾದ ಪಶುಗಳೆಂದೆಂದೂ ಭಿನ್ನಾತ್ಮರೆಂದು ನುಡಿವ ದ್ವೈತಭಾವಿಗಳ ಪೂಜೆಗೆ ಫಲಪದವುಂಟಲ್ಲದೆ ಶಿವನೊಪ್ಪಿ ಮುಕ್ತಿಯ ಕೊಡನೆಂಬುದೀ ವಚನದ ತಾತ್ಪರ್ಯಾರ್ಥ. ೯೪

ವ. ಅಂಗಕ್ರೀಯನಱಿದಲ್ಲಿ ಸ್ಥಾಣುವಿನ ಬಾಯ ತಿಲದಂತೆ. ಆತ್ಮನ ಕಳೆಯ ತಿಳಿದಲ್ಲಿ ಶಿಲೆಯೊಳಗಿರ್ದ ಬಿಂದು ಒಲವರದಿಂದ ಜಾಱುವಂತೆ. ಆ ಅಱಿವು ಮಹದಲ್ಲಿ ಬೆರಸುವಾಗ ವಾರಿಶಿಲೆ ನೋಡ ನೋಡಲಿಕೆ ನೀರಾದಂತೆ ಇರಬೇಕು. ಕಾಯವಶದಿಂದ ಕರ್ಮವ ಮೀಱಿ, ಕರ್ಮವಶದಿಂದ [೧]ವರ್ಮವಶಗತನಾದಲ್ಲಿ[೧] ಅದೇ ಕಾಯ ವೆರಸಿಯ್ದಿದ ಕೈಲಾಸ. ಆ ಭಾವವ ನಿಮ್ಮಲ್ಲಿ ನೀವೇ ತಿಳಿದುಕೊಳ್ಳಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನಾ.

ಟೀ. ಎಳ್ಳನು ಗಾಣದಲ್ಲಿಕ್ಕಿ ಕ್ರೀಯಿಂದ ಬಾಧಿಸಿದಡೆ ತಿಲದಲ್ಲಿರ್ದ ತೈಲವು ಪ್ರತ್ಯಕ್ಷವಾಗಿ ಕೈಸಾರುವಂತೆ, ಆತ್ಮಾಂಗವ ಶಿವಕ್ರೀಯಿಂದ ಬಾಧಿಸಿದಡೆ, ಆತ್ಮಾಂತರ್ಗತವಾಗಿರ್ದ ಚಿಲ್ಲಿಂಗವು ಪ್ರತ್ಯಕ್ಷವಾಗಿ ಕರಸ್ಥಲದಲ್ಲಿ ಕಾಣಬಹುದೆಂಬುದೀಗ 'ಅಂಗಕ್ರೀಯನಱಿದಲ್ಲಿ ಸ್ಥಾಣುವಿನ ಬಾಯ ತಿಲದಂತೆ' ಎಂಬ ಶಬ್ದಕ್ಕರ್ಥ. ಚಂದ್ರಕಾಂತದ ಶಿಲೆಯಲ್ಲಿರ್ದ ಶ್ರೀ ಅಮೃತಬಿಂದು ಚಂದ್ರೋದಯಕ್ಕೆ ಒಸರುವಂತೆ ಆ ಇಷ್ಟಲಿಂಗದ ಕಳೆಯನು ತನ್ನ ಆತ್ಮಕಳೆಯೆಂದು ತಿಳಿವ ಶಿವಜ್ಞಾನೋದಯವಾಗಿ, ಆ ಇಷ್ಟಲಿಂಗದ ಕಳೆವೊಲಿದು, ಸರ್ವಾಂಗವ ತುಂಬಿ, ಲಿಂಗಾನಂದ ಜಲ ಉಕ್ಕುತ್ತಿಹುದೆಂಬುದೀಗ 'ಆತ್ಮನ ಕಳೆಯ ತಿಳಿದಲ್ಲಿ ಶಿಲೆಯೊಳಗಿರ್ದ ಬಿಂದು ಒಲವರದಿಂದ ಜಾಱುವಂತೆ' ಎಂಬ ಶಬ್ದಕ್ಕರ್ಥ. ಅಂತು ಕ್ರಿಯಾಜ್ಞಾನದಿಂದ ಲಿಂಗಾಂಗಸಂಬಂಧಿಯಾಗಿ ಜೀವತ್ವವಳಿದು ಶಿವೋಹಂ ಎಂಬ ಅಹಂಭಾವದಱಿವ ತನ್ನ ಶಿವತ್ವದಲ್ಲಿ ಭಕ್ತಿರತಿಕ್ರೀಯಿಂದಲಿ ಏಕರಸವ ಮಾಡಬೇಕೆಂಬುದೀಗ

೧ ಧರ್ಮವಶಗತನಾದಲ್ಲಿ (ಎ.)

'ಆ ಅಱುವು ಮಹದಲ್ಲಿ ಬೆರಸುವಾಗ ವಾರಿಶಿಲೆ ನೋಡ ನೋಡಲಿಕೆ ನೀರಾದಂತಿರಬೇಕು' ಎಂಬ ಶಬ್ದಕ್ಕರ್ಥ. ಅಂತು ಶಿವಕ್ರೀಯಿಂದ ದೇಹವಾಸನೆಯನಳಿದು ಲಿಂಗದೇಹವಾಯಿತ್ತಾಗಿ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮಕ್ಕೆ ಹೊಱಗಾದನೆಂಬುದೀಗ 'ಕಾಯುವಶದಿಂದ ಕರ್ಮವ ಮೀಱಿ' ಎಂಬ ಶಬ್ದಕ್ಕರ್ಥ. ಅಂತು ಭಕ್ತಿಕ್ರೀಯಿಂದ ಲಿಂಗದಲ್ಲಿ ಏಕರಸವಾಗಿ ಲಿಂಗವೆಯಾಗಿರ್ದ ಶರಣನೆಂಬುದೀಗ 'ಕರ್ಮವಶದಿಂದ ವರ್ಮವಶಗತನಾದಲ್ಲಿ' ಎಂಬ ಶಬ್ದಕ್ಕರ್ಥ. ಅಂತು ಜೀವತ್ವವಳಿದು ಲಿಂಗವಾದ ಶರಣನ ಕಾಯವು ಲಿಂಗಕಾಯವಾಯಿತ್ತಾಗಿ, ಶರಣನ ಕಾಯವೇ ಕೈಲಾಸವೆಂದಿರಬೇಕು. ಬೇಱೆ ಕೈಲಾಸಕ್ಕೆ ಹೋಗಬೇಕೆಂಬ ಸಂದೇಹವ ಬಿಟ್ಟಿರಬೇಕೆಂಬುದೀಗ 'ವರ್ಮವಶಗತನಾದಲ್ಲಿ ಅದೇ ಕಾಯವೆರಸಿಯ್ದೈದಿದ ಕೈಲಾಸ. ಆ ಭಾವವ ನಿಮ್ಮಲ್ಲಿ ನೀವೇ ತಿಳಿದುಕೊಳ್ಳಿ' ಎಂಬ ಶಬ್ದಕ್ಕರ್ಥ. ೯೫

**೯.** ಒಡಲಿಲ್ಲದಾತ ಜಂಗಮ, ಪ್ರಾಣವಿಲ್ಲದಾತ ಭಕ್ತನಯ್ಯಾ. ಆಚಾರವೇ ಜಂಗಮ, ವಿಚಾರವೇ ಭಕ್ತನಯ್ಯಾ. ಆಚಾರವಿಚಾರವೆಂಬುದು ಸ್ವಾನುಭಾವ ಸಂಭಾಷಣೆ ಕೂಡಲಚೆನ್ನಸಂಗಮದೇವಾ.

**ಟೀ.** ಜಂಗಮವೆಂದರೆ ಗಮನಸ್ವರೂಪು. ಅಂತು ತನು ಮನ ಧರ್ಮವಳಿದು ತನುಮನಧನವ ಗುರುಲಿಂಗಜಂಗಮಕ್ಕೆ ವಂಚನೆಯಿಲ್ಲದೆ ಸಮರ್ಪಿಸುವ ಸತ್ಕ್ರಿಯಾಚಾರದಿಂದಾಚರಿಸುವಾತನೇ ಜಂಗಮವೆಂಬುದೀಗ 'ಒಡಲಿಲ್ಲದಾತ ಜಂಗಮ'ವೆಂಬ ಶಬ್ದಕ್ಕರ್ಥ. ಅಂತಪ್ಪ ಸತ್ಕ್ರಿಯೆಯಿಂದ ತನುಧರ್ಮವಳಿದು, ಲಿಂಗದಲ್ಲಿ ಪ್ರಾಣವ ಸಮರಸೈಕ್ಯವ ಮಾಡಿ ಕೂಡಿ ಎರಡಿಲ್ಲದೆ ಲಿಂಗವಾಗಿಪ್ಪುದೇ ಭಕ್ತಿಯೆಂಬುದೀಗ 'ಪ್ರಾಣವಿಲ್ಲದಾತ ಭಕ್ತನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಶಿವಕ್ರಿಯಾಚಾರವನಾಚರಿಸುವ ಚಾರಿತ್ರವೀಗ ಗಮನ ಸ್ವರೂಪಾದ ಕಾರಣ 'ಆಚಾರವೇ ಜಂಗಮ'ವೆಂಬ ಶಬ್ದಕ್ಕರ್ಥ. ಅಂತು ಸತ್ಕ್ರೀಯಿಂದ ಪೂಜಿಸುವ ಶರಣನು ಪೂಜಿಸಿಕೊಂಬ ಲಿಂಗವು ಒಂದೇ ವಸ್ತುವೆಂದಱಿದು ಭಿನ್ನ ಭಾವವಳಿದಿಪ್ಪುದೇ ಭಕ್ತಿಯೆಂಬುದೀಗ 'ವಿಚಾರವೇ ಭಕ್ತನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಎರಡಳಿದು ಆಚರಿಸುವ ಕ್ರಿಯಾಜ್ಞಾನವೇ ಸದ್ಭಕ್ತಿ. ಆ ಸದ್ಭಕ್ತಿಯೇ ಸಮ್ಯಗ್‌ಜ್ಞಾನ. ಆ ಸಮ್ಯಗ್‌ಜ್ಞಾನವೇ ಶಿವನ ನಿಜಾನುಭಾವದ [೧]ಸಮವೇತ[೧] ಶಕ್ತಿಯೆಂಬುದೀಗ 'ಆಚಾರ ವಿಚಾರವೆಂಬುದು ಸ್ವಾನುಭಾವ ಸಂಭಾಷಣೆ' ಎಂಬ ಶಬ್ದಕ್ಕರ್ಥ. ೯೬

೧ ಸಮೋೇತ (ಎ.)

ವ. ಅಂಗದ ಲಿಂಗ ಆತ್ಮನಲ್ಲಿ ವೇಧಿಸಬೇಕೆಂಬುದಕ್ಕೆ ವಿವರ : ತಿಲದ ರಾಶಿಯಲ್ಲಿ ಸುಗಂಧದ ಕುಸುಮವ ದ್ವಂದ್ವವ ಮಾಡಿ ಕೂಡಿ ಇರಿಸಲ್ಲಾಗಿ, ಆ ಗಂಧ ತಿಲದಂಗವ ವೇಧಿಸಿ, ಆ ತಿಲರಸವ ಭೇದಿಸಿದಂತೆ ಆಗಬಲ್ಲಡೆ ಆ ಲಿಂಗವಾತ್ಮನಲ್ಲಿ ವೇಧಿಸಿಹುದು. ಕುಸುಮಗಂಧ ತಿಲದ ಹಿಪ್ಪೆ ಹೊಱಗಾದುದನಱಿದು ನಿಶ್ಚಯವ ಕಂಡಲ್ಲಿ, ಹೊಱಗಣ ಪೂಜೆ ಒಳಗಣ ದಿವ್ಯ ಪ್ರಕಾಶವಸ್ತು ಭಾವದ ಕೂಟ ಇಷ್ಟಲ್ಲದಿಲ್ಲ. ಮೀಱಿ ಕಾಬ ನಿಜಲಿಂಗೈಕ್ಯರು ನೀವೆ ಬಲ್ಲಿರಿ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಮುಳುಗಿದುದೆ ಸಮುದ್ರ.

ಟೀ. ಎಳ್ಳು ಪುಷ್ಪಂಗಳು ಸಂಯೋಗವಾಗಿ ಎಱಡಱ ಹಿಪ್ಪೆಯು ಕಳೆದಡೆಯೂ ಪುಷ್ಪಗಂಧ ಎಳ್ಳಿನ ತೈಲವ ಕೂಡಿ ವೇಧಿಸಿ ಬಿಡದಿಪ್ಪಂತೆ ಇಷ್ಟಲಿಂಗದಲ್ಲಿ ಶಿವಭಾವ ಘಟಿಸಿ, ಲಿಂಗಪೂಜಾಕ್ರೀಯ ಬಿಡದೆಯಿದ್ದಡೆ ಅಂತರಂಗವೆಲ್ಲಾ ಲಿಂಗಪ್ರಕಾಶವೇ ತುಂಬಿ ಆತ್ಮನಲ್ಲಿ ಲಿಂಗಕಳೆ ಹಿಂಗದೆ ಬೆಳಗುತ್ತಿಹುದು. ಅಂತಪ್ಪ ಶರಣನ ಅಂಗಲಿಂಗದ ತೋಱಿಕೆಯಳಿದು ಹೋದಡೆಯೂ ಲಿಂಗಕಳೆ ಆತ್ಮನಲ್ಲಿ ಯೋಗವಾಗಿಪ್ಪ ಕಾರಣ ಲಿಂಗದಲ್ಲಿ ಶರಣ ಮುಕ್ತನು. ಅಂತಪ್ಪ ಇಷ್ಟಲಿಂಗದಲ್ಲಿ ಶಿವಭಾವ ಘಟಿಸಲಿಲ್ಲದಾತಂಗೆ ಮುಕ್ತಿಯಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೯೭

ವ. ಭವವಿಲ್ಲದ ಭಕ್ತನ ಪರಿಯ ನೋಡಾ ! ಮನಃ ಪ್ರಾಣ ಮುಕ್ತ, ಭವವಿರಹಿತ, ಒಡಲಿಲ್ಲದ ಜಂಗಮದ ಪರಿಯ ನೋಡಾ ! ಸಿಡಿಲು ಮಿಂಚಿನ ಬೆಳಗನೊಂದೆಡೆಯಲ್ಲಿ ಹಿಡಿಯಲುಂಟೇ ? ಉಭಯವೊಂದಾದವರ ಕಂಡಡೆ ನೀನೆಂಬೆ ಕೂಡಲಸಂಗಮದೇವಾ !

ಟೀ. ಫಲ ಪದ ಮುಕ್ತಿಗಳೇನನೂ ಬಯಸದೆ ಗುರು ಲಿಂಗ ಜಂಗಮದಲ್ಲಿ ನಿರ್ವಂಚಕನಾಗಿ ಸತ್ಕ್ರಿಯೆಯನುಳ್ಳ ಭಕ್ತಂಗೆ ಭವವಿಲ್ಲ. ಬಯಲೊಳಗೆ ತೋಱಿ ಅಡಗುವ ಮಿಂಚಿನ ಬೆಳಗ ರೂಹಿಸಿ ಕುಱುಹಿಡಬಾರದಂತೆ ತನುವಾಸನೆಯನಳಿದು ಸಮ್ಯಗ್‌ಜ್ಞಾನಸ್ವರೂಪನಾಗಿ ಲಿಂಗವಿಡಿದಾಚರಿಸುತಿರ್ದು ಲಿಂಗದಲ್ಲಿ ಅಡಗುವಾತನೇ ಜಂಗಮ. ಆ ಜಂಗಮವ ರೂಹಿಸಿ ಕುಱುಹಿಡಬಾರದು. ಅಂತಪ್ಪ ಭಕ್ತಿಜ್ಞಾನಯುಕ್ತವಾಗಿ ಆಚರಿಸುವ ಶರಣನೇ ಲಿಂಗವೆಂಬುದೀ ವಚನದ ತಾತ್ಪರ್ಯಾರ್ಥ. ೯೮

ವ. ಮೂಱಱಿಂದಂ ಮುನ್ನ ತೋಱಿಪ್ಪ ಸದ್ಭಕ್ತಿ, ಮೀಱಿಪ್ಪ ಕ್ರೀಯುದಕೆ ಶಾಖೆ ಮೂಱು. ಫಲವು ಹಲವಾಗಿ, ಅಂತಪ್ಪ ಫಲವಾಱು. ಸಲ್ಲದದು ಕರ್ಮಿಗಳ ಯೋಗಕ್ಕದು. ಸ್ವಾತಂತ್ರ್ಯ ಸೀಮೆಯನು ತೋಱಿಪ್ಪ ತತ್ತ್ವದಾ ಸೀಮೆ ತಾನೂ ಅನಾಹತನು ಸ್ವತಂತ್ರ ನಿಸ್ಸೀಮ ಕಪಿಲಸಿದ್ಧ ಮಲ್ಲಿಕಾರ್ಜುನನು ಸ್ವಾತಂತ್ರ್ಯ ಸದ್ಭಕ್ತಿಗೊಲವು ತಾನು.

ಟೀ. ಶಿವ ಸದಾಶಿವ ಮಹೇಶ್ವರರೆಂಬ ಮೂಱು ತತ್ತ್ವಂಗಳ ತೋಱಿಕೆಗೆ ಮೊದಲೇ ತೋಱಿದುದೀಗ ಚಿತ್ತುವಿನ ತೋಱಿಕೆ. ಆ ತೋಱಿದ ಚಿತ್ತುವೆ ಪರ ಶಿವನ [1]ಸಮವೇತ[1] ಶಕ್ತಿ. ಅಂತಪ್ಪ ಶಕ್ತಿಯೇ ಭಕ್ತಿಯೆಂಬುದೀಗ 'ಮೂಱಱಿಂದಂ ಮುನ್ನ ತೋಱಿಪ್ಪ ಸದ್ಭಕ್ತಿ' ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ಭಕ್ತಿಯು ಕ್ರಿಯಾಫಲಂಗಳ ಹೇಳುವಡೆ ಚತುರ್ವಿಧಪದಂಗಳಿಗೆ ಮೇಲಿಪ್ಪ ಶಿವಪದವ ಕೊಡುತ್ತಿಹುದೆಂಬುದೀಗ 'ಮಿಱಿಪ್ಪ ಕ್ರೀಯುದಕೆ' ಎಂಬ ಶಬ್ದಕ್ಕರ್ಥ. ಅಂತಪ್ಪ ಸದ್ಭಕ್ತಿಯೇ ಗುರುಭಕ್ತಿ, ಲಿಂಗಭಕ್ತಿ, ಜಂಗಮಭಕ್ತಿ ಎಂಬ ಮೂಱಾಯಿತ್ತೆಂಬುದೀಗ 'ಶಾಖೆ ಮೂಱು' ಎಂಬ ಶಬ್ದಕ್ಕರ್ಥ. ಅಂತಾದ ತ್ರಿವಿಧಲಿಂಗಭಕ್ತಿಗಳ ಕಾಮ್ಯಾರ್ಥಿಗಳು ಮಾಡಿದರೆ ಕಾಮಿತಫಲಂಗಳುಂಟೆಂಬುದೀಗ 'ಫಲವು ಹಲವಾಗಿ' ಎಂಬ ಶಬ್ದಕ್ಕರ್ಥ. ಅಂತಪ್ಪ ಫಲಂಗಳ ಬಯಕೆಯಿಲ್ಲದೆ ಲಿಂಗದಂಗವೆ ಭಕ್ತನೆಂದಱಿದು ಭಿನ್ನಭಾವವಿಲ್ಲದೆ ಮಾಡುವ ಸದ್ಭಕ್ತನ ಷಡಂಗ ಷಡಿಂದ್ರಿಯಂಗಳು ಷಡ್ವಿಧಲಿಂಗವಾಗಿಪ್ಪುವೆಂಬುದೀಗ 'ಅಲ್ಲಿಪ್ಪ ಫಲವಾಱು' ಎಂಬ ಎಂಬ ಶಬ್ದಕ್ಕರ್ಥ. ಅಂತು ಸದ್ಭಕ್ತಿಯಿಂದ ಸರ್ವಾಂಗಲಿಂಗವಾದ ಶರಣಂಗೆ ಶಿವಯೋಗವಲ್ಲದೆ ಅಷ್ಟಾಂಗಯೋಗಗಳೆಂದು ತನುದಂಡನೆಯ ಕರ್ಮಂಗಳಿಂದ ಸಾಧಿಸುವರಿಗೆ ಶಿವಯೋಗವಿಲ್ಲವೆಂಬುದೀಗ 'ಸಲ್ಲದದು ಕರ್ಮಿಗಳ ಯೋಗಕ್ಕದು' ಎಂಬ ಶಬ್ದಕ್ಕರ್ಥ. ಸ್ವತಂತ್ರತ್ವವನುಳ್ಳ ಮಹಾಲಿಂಗಸ್ಥಲವ ಭಿನ್ನವಿಡದೆ ಪ್ರಕಾಶಿಸಿ ತೋಱುತ್ತಿಹ ಚಿತ್‌ಪ್ರಕಾಶವಪ್ಪ ಜ್ಞಾನತ್ವವೇ ಭಕ್ತಿಸ್ಥಲವಾಯಿತ್ತೆಂಬುದೀಗ 'ಸ್ವಾತಂತ್ರ್ಯಸೀಮೆಯನು ತೋಱಿಪ್ಪ ತತ್ತ್ವದಾ ಸೀಮೆ ತಾನು' ಎಂಬ ಶಬ್ದಕ್ಕರ್ಥ. ಅಂತಪ್ಪ ಭಕ್ತಿಯು ನಿತ್ಯವನುಳ್ಳುದೆಂಬುದೀಗ 'ಅನಾಹತನು' ಎಂಬ ಶಬ್ದಕ್ಕರ್ಥ. ಅಂತು ಸ್ವತಂತ್ರನಪ್ಪ ಮಹಾಲಿಂಗದಲ್ಲಿ ಭೇದವಿಲ್ಲದಿರ್ಪ ಸ್ವತಂತ್ರ ಚಿಚ್ಛಕ್ತಿಯೇ ಭಕ್ತಿಯಾಯಿತ್ತಾಗಿ ಅಂತಪ್ಪ ಸದ್ಭಕ್ತಿಯಲ್ಲಿ ರತಿಸುಖವನೈದುತ್ತ ಲಿಂಗವು ವಿಯೋಗವಿಲ್ಲದೆ ಕೂಡಿಹನೆಂಬುದೀಗ 'ಸ್ವಾತಂತ್ರ್ಯ ನಿಸ್ಸೀಮ

೧ ಸಮೇತ (ಎ.)

ಕಪಿಲಸಿದ್ಧ ಮಲ್ಲಿಕಾರ್ಜುನನ ಸ್ವಾತಂತ್ರ್ಯ ಸದ್ಭಕ್ತಿಗೊಲವು ತಾನು ' ಎಂಬ ಶಬ್ದಕ್ಕರ್ಥ. ೯೯

ವ. ಮುಕ್ತಿ ಮೂಱಾಱಱಲಿ ಭಕ್ತಿಯೆರಡೊಂದಱಲಿ, ತತ್ತ್ವ ಮೂವತ್ತಾಱಱಿಂ ಮೇಲಣಾ, ತತ್ತ್ವಮಸಿ ಸಂಗಮದ ಮುಕ್ತಾಫಳದಹಾರ ಭಕ್ತದೇಹಿಕ ಶಿವನು ಯೋಗಿನಾಥಾ!

ಟೀ. ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗವೆಂದು ಮೂಱು, ಆಚಾರಾದಿ ಮಹಾಲಿಂಗಂಗಳಾಱು. ಅಂತು ಒಂಬತ್ತು ಲಿಂಗಂಗಳ ಸ್ಥಾನ ಪೂಜೆ ಅರ್ಪಣ ಸದ್ಭಾವಂಗಳನಱಿದು ಮಾಡುವ ಸತ್ಕ್ರಿಯೆಯಿಂದ ಮುಕ್ತಿಯಹುದೆಂಬುದೀಗ ' ಮುಕ್ತಿ ಮೂಱಾಱಱಲಿ ' ಎಂಬ ಶಬ್ದಕ್ಕರ್ಥ. ಅಂತು ಒಂಬತ್ತಾದ ಲಿಂಗವು, ಆ ಲಿಂಗವ ಪೂಜಿಸುವ ಭಕ್ತನು ಎಂಬ ಎರಡಾದರೂ ಒಂದೇ ಪರಬ್ರಹ್ಮವು ತಾನೆ ತನ್ನಲ್ಲಿಯೆಂಬುದೀಗ ' ಭಕ್ತಿಯೆರಡೊಂದಱಲಿ ' ಎಂಬ ಶಬ್ದಕ್ಕರ್ಥ. ತತ್ಪದವೆಂದಡೆ ಲಿಂಗ. ತ್ವಂಪದವೆಂದಡೆ ಅಂಗ. ಅಸಿಪದವೆಂದಡೆ ಸಂಬಂಧವಪ್ಪ ಜ್ಞಾನ. ಅಂತು ಲಿಂಗವಾದುದೂ ಭಕ್ತನೆಂಬ ಅಂಗವಾದುದೂ ಸಂಗವೆಂಬ ಜ್ಞಾನವಾದುದೂ ಒಂದೇ ಪರಶಿವತತ್ತ್ವವು. ಆ ಪರಶಿವತತ್ತ್ವವು ಮೂವತ್ತಾಱು ತತ್ತ್ವಂಗಳ ಮೇಲಣದೆಂಬುದೀಗ ' ತತ್ತ್ವ ಮೂವತ್ತಾಱಱಿಂ ಮೇಲಣ ತತ್ತ್ವಮಸಿ ಸಂಗಮದ ' ಎಂಬ ಶಬ್ದಕ್ಕರ್ಥ. ಲಿಂಗವೆಂಬುದೀಗ 'ಮುಕ್ತಿಫಳಸ್ವರೂಪ'ವೆಂಬ ಶಬ್ದಕ್ಕರ್ಥ. ಅಂತು ಭಕ್ತನ ಸರ್ವಾಂಗದಲ್ಲಿ ಲಿಂಗವು ಧಾರಣವಾಗಿಪ್ಪುದೆಂಬುದೀಗ ' ಮುಕ್ತಾಫಳದ ಹಾರ ' ವೆಂಬ ಶಬ್ದಕ್ಕರ್ಥ. ಅಂತು ಭಕ್ತನೇ ಅಂಗವಾಗಿ, ಆ ಅಂಗದ ಪ್ರಾಣವೇ ಲಿಂಗವಾಗಿಪ್ಪ ಕಾರಣ ' ಭಕ್ತದೇಹಿಕ ಶಿವನೆನಿಸಿದ ' ನೆಂಬ ಶಬ್ದಕ್ಕರ್ಥ. ೧೦೦

ವ. ತನುವ ಕೊಟ್ಟು ತನು ಬಯಲಾಯಿತ್ತು. ಮನವ ಕೊಟ್ಟು ಮನ ಬಯಲಾಯಿತ್ತು. ಧನವ ಕೊಟ್ಟು ಧನ ಬಯಲಾಯಿತ್ತು. ಈ ತ್ರಿವಿಧವನೂ ಕೊಟ್ಟ ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣಂಗೆ ಬಯಲಸಮಾಧಿಯಾಯಿತ್ತು.

ಟೀ. ತನು ಮನ ಧನವ ಗುರು ಲಿಂಗ ಜಂಗಮಕ್ಕೆ ಸಮರ್ಪಿಸಿದ ಕಾರಣ ತಾನು ಲಿಂಗವಾದ ಬಸವಣ್ಣನೆಂಬುದೀಗ ಈ ವಚನದ ತಾತ್ಪರ್ಯಾರ್ಥ. ೧೦೧

ವ. ಭಿತ್ತಿಯಿಲ್ಲದ ಚಿತ್ತಾರದಂತೆ ಭಕ್ತಿಯಿಲ್ಲದ ಪ್ರಮಥನಾಗಿದ್ದೆನಯ್ಯಾ ! ಸತ್ಯವಿಲ್ಲದ ಶರಣನಾಗಿದ್ದೆನಯ್ಯಾ ! ೧ಗರೆಯಿಲ್ಲದ೧ ಕೋಲಿನಲ್ಲಿ ಉದ್ದರೆಯನಿಕ್ಕಿದ ಭಂಡದ ಹರದನಂತಾದೆನಯ್ಯಾ ಕೂಡಲಸಂಗಮ ದೇವಾ !

ಟೀ. ಭಿತ್ತಿಯಲ್ಲಿ ಬರೆಯಲಿಲ್ಲದೆ ಚಿತ್ರಿಕನು ತನ್ನ ಮನದಲ್ಲಿ ರೂಪಿಸಿದ ರೂಹು ರೂಪಿಂಗೆ ಬಾರದಂತೆ, ತಾನೆಂಬ ಭಾವ ತಿಳಿದು ಮಾಡುವ ಮಾಡಿಸಿ ಕೊಂಬವೆರಡೂ ಶಿವನೆಂಬ ಶಿವಭಾವ ಘಟಿಸಿ ಮಾಡುವ ಸದ್ಭಕ್ತನ ಕ್ರೀಯಿಂದ ಫಲಭೋಗಶರೀರಿಯಾಗಿ ಭವಕ್ಕೆ ಬರಲಿಲ್ಲ. ಆ ಭಕ್ತನನಾದಿಶಿವನೆಯಾಗಿಪ್ಪ ನೆಂಬುದೀಗ 'ಭಿತ್ತಿಯಿಲ್ಲದ ಚಿತ್ತಾರದಂತೆ ಭಕ್ತಿಯಿಲ್ಲದ ಪ್ರಮಥನಾಗಿರ್ದೆನಯ್ಯಾ' ಎಂಬ ಶಬ್ದಕ್ಕರ್ಥ. ತೋರುವ ತೋರಿಕೆಯೆಲ್ಲವೂ ಸತ್ಯವಾಗಿ ಕಾಣಿಸುತ್ತಿಹುದು ಜೀವರಿಗೆ. ನಿರವಯವಾಗಿಪ್ಪ ಚಿತ್ಸ್ವರೂಪವಾರಿಂಗೆಯೂ ಕಾಣಿಸದೆ ಅಸತ್ಯವಾಗಿ ಹುದು. ಅಂತು ಆರಿಗೆಯೂ ಕಾಣಿಸದೆ ಇಪ್ಪ ಚಿತ್ಸ್ವರೂಪವೇ ಶರಣನೆಂಬುದೀಗ 'ಸತ್ಯವಿಲ್ಲದ ಶರಣನಾಗಿದ್ದೆನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಶರಣ ಮಾಡಿದ ಕ್ರೀಗಳೆಲ್ಲಾ ನಿಃಫಲವೆಂಬುದೀಗ 'ಗರೆಯಿಲ್ಲದ ಕೋಲಿನಲ್ಲಿ ಉದ್ದರೆಯನಿಕ್ಕಿದ ಭಂಡದ ಹರದನಂತಾದೆನಯ್ಯಾ' ಎಂಬ ಶಬ್ದಕ್ಕರ್ಥ. ೧೦೨

ವ. ಹತ್ತಿ ಕದಿರು ರಾಟೆಯಲ್ಲಿ ಮೊದಲಿಲ್ಲ ನೂಲುಂಟು. ಸೆಲದಿಯ ಹೃದಯದಲ್ಲಿಯೆ ನೂಲುಂಟು. ಭಕ್ತರ ಭಾವದಲ್ಲಿ ಲಿಂಗವುಂಟು. ರೇಕಣ್ಣಪ್ರಿಯನಾಗಿನಾಥನ ಶರಣರ ಮನದ ಕೊನೆಯನೆತ್ತಿದರೆ ಲಿಂಗದ ಗೊಂಚಲುಂಟು !

ಟೀ. ಹತ್ತಿ ಕದಿರು ರಾಟೆ ಮೂರನೂ ಕೂಡಿ ತಿರುಹುತ್ತಿರ್ದ ಕ್ರಿಯಾ ಕಾಲದಲ್ಲಿ ನೂಲು ಬರುತ್ತಿಹುದು. ಆ ತಿರುಹುತ್ತಿರ್ದ ಕ್ರೀಯ ಬಿಟ್ಟರೆ ಇಲ್ಲದೆ ಹೋಹಂತೆ ಶಿವನನಾಹ್ವಾನಿಸಿ ಮಾಡುವ ಶೈವಪೂಜಾಕ್ರಿಯಾಕಾಲಂಗಳಲ್ಲಿ ಶಿವನು ಬಂದಿಹ. ಆ ಕ್ರೀಯ ಬಿಟ್ಟು ವಿಸರ್ಜಿಸಿದಾಗವೇ ಶಿವ ಹೋಹನೆಂಬುದೀಗ 'ಹತ್ತಿ ಕದಿರು ರಾಟೆಯಲ್ಲಿ ಮೊದಲಿಲ್ಲ ನೂಲುಂಟು' ಎಂಬ ಶಬ್ದಕ್ಕರ್ಥ. ಸೆಲದಿಯ ಹೃದಯದಲ್ಲಿ ಸದಾ ಸನ್ನಿಹಿತವಾಗಿ ನೂಲಿಪ್ಪುದು ಎಂತಂತೆ ಲಿಂಗಾಂಗ ಸಂಬಂಧಿಯಾಗಿರ್ದ ವೀರಶೈವ ಭಕ್ತನಂಗ ಮನ ಭಾವಂಗಳಲ್ಲಿ ಶಿವನು ಸನ್ನಹಿತ

೧ ಗೆರೆಯಿಲ್ಲದ (ಹು.)

ನಾಗಿ ನೆಲಸಿಪ್ಪನೆಂಬುದೀಗ ‘ ಸೆಲದಿಯ ಹೃದಯದಲ್ಲಿಯೇ ನೂಲುಂಟು. ಭಕ್ತರ ಭಾವದಲ್ಲಿ ಲಿಂಗವುಂಟು ’ ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಶರಣರ ಮನದಱಿವ ಅನುಭಾವದಿಂದ ಮಥನಿಸಿದಡೆ ಶರಣನ ಸರ್ವೇಂದ್ರಿಯಂಗಳೆಲ್ಲಾ ಲಿಂಗಂಗಳಾಗಿ ಕಾಣಿಸುತ್ತಿಹವೆಂಬುದೀಗ ‘ ಶರಣನ ಮನದ ಕೊನೆಯನೆತ್ತಿದರೆ ಲಿಂಗದ ಗೊಂಚಲುಂಟು ’ ಎಂಬ ಶಬ್ದಕ್ಕರ್ಥ. ೧೦೩

**ವ.** ಭಕ್ತನ ಮುಖದರ್ಪಣದಲ್ಲಿ ಲಿಂಗವ ಕಾಣಬಹುದಲ್ಲದೆ ಮತ್ತೆಲ್ಲಿಯೂ ಕಾಣಬಾರದು. ಭಕ್ತದೇಹಿಕದೇವ ಅನುಮಿಷನಾಗಿ ಕೂಡಲಸಂಗಮದೇವ ಭಕ್ತನ ನುಡಿಯ ನಡುವೆ ರಾಸಿಯಾಗಿಪ್ಪನು.

**ಟೀ.** ತೆಱಹು ಮಱಹುಗಳಿಲ್ಲದೆ ಅಖಂಡ ಜ್ಞಾನದೃಕ್ಕುಳ್ಳ ಲಿಂಗವು ಭಕ್ತನ ಸರ್ವಾಂಗದಲ್ಲಿ ಪರಿಪೂರ್ಣನಾಗಿಪ್ಪನು. ಅಂತು ಭಕ್ತನು ಸರ್ವಾಂಗ ಲಿಂಗಮಯವಾಗಿಪ್ಪನಾಗಿ ಆ ಸದ್ಭಕ್ತನು ತಾನನುಭವಿಸುತ್ತಿರ್ದ ಲಿಂಗಾನುಭಾವ ವರ್ತನೆಯ ನುಡಿಯಲು ಆ ನುಡಿದ ವಚನಂಗಳೆಲ್ಲಾ ಲಿಂಗದ ಸಮ್ಯಗ್‍ಜ್ಞಾನ ಪ್ರಕಾಶ. ಅಂತಪ್ಪ ಸಮ್ಯಗ್‍ಜ್ಞಾನಪ್ರಕಾಶವೆಲ್ಲಾ ಲಿಂಗವೆಯಾಗಿಪ್ಪ ಕಾರಣ ಸದ್ಭಕ್ತರು ನುಡಿದ ವಚನಪ್ರಮಾಣಂಗಳಿಂದ ಅಱಿದಾತಂಗೆ ಲಿಂಗಪದವು ಸಾಧ್ಯವಹುದಲ್ಲದೆ ಮಿಕ್ಕಿನ ವೇದಾಗಮಂಗಳಿಂದ ಸಾಧಿಸಿದೆನೆಂಬವರಿಗೆ ಲಿಂಗವು ಸಾಧ್ಯವಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೧೦೪

**ವ.** ಹಾವಿನ ಡೊಂಕು ಹುತ್ತಕ್ಕೆ ಸಸಿನ. ನದಿಯ ಡೊಂಕು ಸಮುದ್ರಕ್ಕೆ ಸಸಿನ. ನಮ್ಮ ಕೂಡಲಸಂಗನ ಶರಣರ ಡೊಂಕು ಲಿಂಗಕ್ಕೆ ಸಸಿನ.

**ಟೀ.** ಫಲಪದಮುಕ್ತಿಗಳೆಂಬವನೇನನು ಬಯಸದೆ, ಶಿವಭಾವ ಘಟಿಸಿ ಮಾಡುವ ಸದ್ಭಕ್ತನ ಕ್ರಿಯಾಚಾರಿತ್ರಂಗಳೆಂತಾದರೆಯೂ ಲಿಂಗಕ್ಕೆ ಒಪ್ಪೆಂಬುದೀ ವಚನದ ತಾತ್ಪರ್ಯಾರ್ಥ. ೧೦೫

**ವ.** ಆದಿಯಲ್ಲಿ ದೇವ ನಿಮ್ಮನಾರು ಬಲ್ಲರು ? ವೇದಂಗಳು ಮುನ್ನಲ ತ್ರುತ್ತಲಱಿಯವು. ವೇದಿಗಳು ಪರಬ್ರಹ್ಮವೆಂಬರು, ನಾದ ಬಿಂದು ಕಳಾತೀತನೆಂಬರು ಸಾಧನ ಸದ್ಭಕ್ತರು. ಸಜ್ಜನರಿಚ್ಚೆಗೆ ಬಂದೆಯಾಗಿ ಈಗೀಗ ದೇವನಾದೆ ಶಂಭು ಜಕ್ಕೇಶ್ವರಾ !

೯೭. ವೇದಂಗಳನಱಿದ ವೇದಾಂತಿಗಳಱಿವಿಗೆ ಸಾಧ್ಯವಲ್ಲದ ಪರಬ್ರಹ್ಮವು ಭಕ್ತಂಗೆ ಸಾಧ್ಯವಾಗಿಹನೆಂಬುದೀ ವಚನದ ತಾತ್ಪರ್ಯಾರ್ಥ. ೧೨೬

ಭಕ್ತಿಸ್ಥಲ ಸಂಪೂರ್ಣ

**ಅಂತು ಸ್ಥಲ ೧೦ಕ್ಕಂ ಶ್ಲೋಕ ೧೦೧ಕ್ಕಂ ವಚನ ೩೧೬ಕ್ಕಂ**

**ಮಂಗಳಂ**

**ಶ್ರೀ**

# ೧೧ ಮಾಹೇಶ್ವರಸ್ಥಲ

✻

ಸೂತ್ರ. ಅಂತು ಗುರೂಪದೇಶದಿಂದ ಗುರು ಲಿಂಗ ಜಂಗಮವೆ ಪರಶಿವ ನೆಂದರಿದು ತನು ಮನ ಧನಂಗಳು ತಾ ಮೊದಲಾಗಿ ಸಕಲ ತತ್ತ್ವ ಪದಾರ್ಥಂಗ ಳೆಲ್ಲಾ ಶಿವನಸೊಮ್ಮೆಂದರಿದು ನಿರ್ವಂಚಕನಾಗಿ ಗುರುಲಿಂಗಜಂಗಮಕ್ಕೆ ಕಿಂಕಿಲ ಭಾವದಿಂದ ಅರ್ಪಿಸುತ್ತ, ಆ ಅರ್ಪಿಸುವ ಭಕ್ತನೇ ಅಂಗವೆಂದು, ಅರ್ಪಿಸಿಕೊಂಬ ಲಿಂಗವೇ ಪ್ರಾಣವೆಂದು, ಆ ಲಿಂಗಾಂಗವೆರಡಾದುದು ಒಂದೇ ವಸ್ತುವೆಂದರಿದು, ಅನನ್ಯಭಾವದಿಂದ ಭೇದವಳಿದ ಬುದ್ಧಿಯಿಂದ ಮಾಡುವ ಭಕ್ತಿಯೇ ಪರಮ ಪದ ವೆಂದು, ಪರಧನ ಪರಸ್ತ್ರೀ ಪರಲೋಕಂಗಳ ಬಯಕೆಗೆಟ್ಟು, ಲಿಂಗಾಂಗ ಸಂಗ ಸುಖದವಿರಳಜ್ಞಾನ ನಿರ್ಭರನಾಗಿ ನಿಂದ ನೈಷ್ಠಿಕಾಭಕ್ತಿಯಿಂದ ಜಾತಿವರ್ಣಾಶ್ರಮಾ ಭಿಮಾನಂಗಳಿಲ್ಲದೆ ಲಿಂಗಾಭಿಮಾನಿಯಾಗಿರ್ದುದೇ ಮಾಹೇಶ್ವರಸ್ಥಲವೆಂದು ಹೇಳ ಲಾದುದು.

**ಮಾಹೇಶ್ವರಸ್ಥಲಕ್ಕೆ ಶ್ಲೋಕ :**

ಪರಸ್ತ್ರಿಯಂ ಪರಾರ್ಥಂ ಚ ವರ್ಜಿತೋ ಭಾವಶುದ್ಧಿಮಾನ್
ಲಿಂಗನಿಷ್ಠೋ ನಿಯುಕ್ತಾತ್ಮಾ ಮಾಹೇಶ್ವರ ಉದಾಹೃತಃ

ಟೀ. ಪರಸ್ತ್ರೀಯನು ಪರದ್ರವ್ಯವನು ವರ್ಜಿಸಿ ಶುದ್ಧನಾಗಿ ಲಿಂಗನಿಷ್ಠೆ ಯುಳ್ಳಾತನು ಮಾಹೇಶ್ವರನು ಎಂದು ಈಶ್ವರನು ಹೇಳಿದನು. ೧

ಸಿದ್ಧಾಂತಶೇಖರೇ :

ಸದಾಕಾಲೇ ಶಿವೇ ಭಕ್ತಿರ್ಲಿಂಗಜಂಗಮಪೂಜನಂ
ಏಕಪತ್ನೀವ್ರತಂ ವೀರಮಾಹೇಶ್ವರಮಹಾವ್ರತಂ

ಟೀ. ಸದಾಕಾಲೇ - ಎಲ್ಲಾ ಕಾಲದಲ್ಲಿಯೂ, ಶಿವೇ - ಶಿವನಲ್ಲಿ, ಭಕ್ತಿ - ಭಕ್ತಿಯು, ಲಿಂಗ ಜಂಗಮ ಪೂಜನಂ - ಲಿಂಗಪೂಜೆಯು ಜಂಗಮಪೂಜೆಯು, ಏಕಪತ್ನೀವ್ರತಂ - ಒಬ್ಬಪುರುಷನಲ್ಲಿ ಸ್ವಸ್ತ್ರೀಯ ವ್ರತವು ಹೇಂಗೆ ಹಾಂಗೆ, ವೀರ ಮಾಹೇಶ್ವರವ್ರತಂ - ವೀರಮಾಹೇಶ್ವರರುಗಳ ಮಹಾವ್ರತವು. ೨

ಅಚಿಂತ್ಯ ವಿಶ್ವಸಾದಾಖ್ಯೇ :

ಶಬ್ದಂ ಗೃಹ್ಣನ್ನಗೃಹ್ಣೀಯಾದನ್ಯಾಖ್ಯಾಂ ಹರಾದೃತೇ
ಪದ್ಭ್ಯಾಂ ನ ಪದ್ಯತೇ ಚಾನ್ಯದೃತೇ ಭೂತೇಶ್ವರಾಲಯಾತ್

ಟೀ. ಆ ವೀರಮಾಹೇಶ್ವರನ ವರ್ತನೆ ಶಬ್ದವನು ಗೃಹ್ಣನ್-ಗ್ರಹಿಸುತ್ತಲೂ, ಹರಾದೃತೇ-ಪರಮೇಶ್ವರನಿಂದ ಬೇಱಾದ, ಅನ್ಯಾಖ್ಯಾಂ-ಇತರ ದೇವತಾನಾಮವನು, ನ ಗೃಹ್ಣೀಯಾತ್-ಅಂಗೀಕರಿಸನು, ಭೂತೇಶ್ವರಾಲಯಾತ್-ಶಿವಾಲಯಕ್ಕಿಂದವೂ, ಋತೇ-ಹೊಱಗಾದ, ಅನ್ಯತ್-ಮತ್ತೊಂದು ದೇವಾಲಯವನು, ಪದ್ಭ್ಯಾಂ-ಪದಂಗಳಿಂದ, ನ ಪದ್ಯತೇ-ಎಯ್ದುತ್ತಿರನು. ೩

ಶೈವರತ್ನಾಕರದಲ್ಲಿ :

ತದೇವ ಲಿಂಗಂ ತತ್ಪ್ರೋಕ್ತಂ ಲಿಂಗಾಚಾರಸ್ತು ಯಸ್ಯ ವೈ
ತೇನೈವಾಚಾರಲಿಂಗೇನ ಲಿಂಗೀ ಮಾಹೇಶ್ವರೋ ಜನಃ

ಟೀ. ಯಸ್ಯ ವೈ - ಆವಾತಂಗೆ, ಲಿಂಗಾಚಾರಸ್ತು - ಲಿಂಗಾಚಾರವುಂಟು, ತತ್ಪ್ರೋಕ್ತಂ, ತತ್ - ಆ ಪ್ರಕಾರ, ಪ್ರೋಕ್ತಂ-ಹೇಳಲ್ಪಟ್ಟಂಥಾ, ತದೇವ-ಅದೇ, ಲಿಂಗಂ-ಲಿಂಗವು, ತೇನ ಆಚಾರಲಿಂಗೇನೈವ - ಆ ಆಚಾರಲಿಂಗದಿಂದವೆ, ಮಾಹೇಶ್ವರಃ-ಮಾಹೇಶ್ವರಸಂಬಂಧಿಯಾಗಿ, ಜನಃ-ಜನವು, ಲಿಂಗೀ-ಲಿಂಗವಂತನಹನು. ೪

ಸ್ತೋತ್ರಾರ್ಣವದಲ್ಲಿ :

ಮತ್ತೋಽನ್ಯದನಪೇಕ್ಷಾಣಾಂ ಮದ್ಗತಾನಾಂ ಮಹಾತ್ಮನಾಂ
ಬ್ರಹ್ಮ ವಿಷ್ಣು ಮಹೇಶಾನಾಮಪಿ ತೂಲಾಯತೇ ಪದಂ

ಟೀ. ಮತ್ತಃ-ನನಗಿಂದವೂ, ಅನ್ಯತ್-ಮತ್ತೊಂದು, ಅನಪೇಕ್ಷಾಣಾಂ-ಅಪೇಕ್ಷೆಯಿಲ್ಲದವರುಗಳಾಗಿ, ಮದ್ಗತಾನಾಂ-ನನ್ನನು ಆಶ್ರಯಿಸಿದವರುಗಳಾದ,

ಮಹಾತ್ಮಾನಾಂ-ಮಹಾತ್ಮರುಗಳಿಗೆ, ಬ್ರಹ್ಮ ವಿಷ್ಣು ಮಹೇಶಾನಾಂ - ಬ್ರಹ್ಮ ವಿಷ್ಣು ಮಹೇಶ್ವರರುಗಳ, ಪದಮಪಿ-ಸ್ಥಾನವು, ತೂಲಾಯತೇ-ಅರಳೆಯೋಪಾದಿಯಲ್ಲಿ ನಿಸ್ಸಾರವಾಗುತ್ತಿಹುದು. ೫

## ಮಾಹೇಶ್ವರಸ್ಥಲಕ್ಕೆ ವಚನ :

ಏನೂ ಏನೂ ಇಲ್ಲದ ವಾಚ್ಯಾತೀತ ನಿರ್ನಾಮವಸ್ತು ತಾನೆ ತನ್ನ ಲೀಲಾವಿಲಾಸದಿಂದ ಪ್ರಭಾವಿಸಿದ ಪ್ರಭಾವದ ಸ್ಫುರಣವೇ ಮಹಾಪ್ರಕಾಶ. ಆ ಪ್ರಕಾಶದ ಆವರಣವೇ ನಿಜಾತ್ಮನು. ಆ ನಿಜಾತ್ಮನೇ ತನ್ನಿಂದಾದ ಸಮಸ್ತ ವಸ್ತುಗಳೆನಿಪ ತತ್ತ್ವಂಗಳಿಗೆ ತಾನೆ ಕಾರಣವಾದ. ಇದನಱಿಯದೆ ಆತ್ಮಂಗೆ ಅನಾದಿ ಮಲ ಪಶುತ್ವ ಪಾಶಬದ್ಧನೆಂಬರು ಅದು ಹುಸಿ. ಆ ಆತ್ಮನು ತನ್ನಿಂದ ಪ್ರವರ್ತಿಸುವ ಮಹದಾದಿ ತತ್ತ್ವಂಗಳಿಗೆ ತಾನೆ ಮೂಲಾಧ್ಯಾಯವಾದ ಕಾರಣ ಮೂಲ ಪ್ರಕೃತಿ ಸ್ವರೂಪವೆನಿಸಿಕೊಂಡನು. ಈ ನಿಜಾತ್ಮನಲ್ಲಿ ಅನಾದಿ ಮಲ ಪಾಶಂಗಳು ತಥ್ಯವಲ್ಲ. ಅದು ಕಾರಣ ಈ ಆತ್ಮನು ಮೇಲಣ ಮಹಾಲಿಂಗ. ಅದು ತಾನೆ ಲಯಿಸುವುದಕ್ಕೂ ಗಮಿಸುವುದಕ್ಕೂ ತಾನೆ ಕಾರಣವಾದುದಾಗಿ ಪಡಿಪದಾರ್ಥವಿಲ್ಲ. ಅದೆಂತೆಂದೊಡೆ : ಪರಾತ್ಪರತರವಸ್ತು ಬ್ರಹ್ಮಕ್ಕೆ ಬಿಚ್ಚಿ ಬೇಱಾಗದ ಕಾರಣ ಅದು ದೀಪ ದೀಪದ ಪ್ರಭೆಯಂತೆ. ರತ್ನ ರತ್ನದ ಕಾಂತಿಯಂತೆ. ಇಂತೀ ಸಹಜಸೃಷ್ಟಿಯನಱಿಯದೆ ಅನಾದಿ ಆತ್ಮಂಗೆ ಪಾಶಂಗಳುಂಟು. ಆತ್ಮನೆಂಬ ಪಶುವಿಂಗೆ ಪಾಶವೆಂಬ ಮಾಯೆಗೆ ಪತಿ ಶಿವನೆಂಬರು. ಇಂತೀ ತೆಱದಲ್ಲಿ ತ್ರಿಪದಾರ್ಥಂಗಳ ಹೇಳುವರು. ಸೃಷ್ಟಿ ಮೊದಲು ಐಕ್ಯ ಕಡೆಯಾಗಿ ಅಭೇದವಲ್ಲದೆ ಭೇದವಿಲ್ಲ. ಇನ್ನು ಅದ್ವೈತಿಯ ಮತದಲ್ಲಿ ವೇದಾಂತಿಯೆಂಬಾತ ನಿಜಸೃಷ್ಟಿಯನಱಿಯನು. ಅದೆಂತೆಂದೊಡೆ : ' ಶಕ್ತ್ಯಾಧೀನ ಪ್ರಪಂಚಸ್ಯ ' ಎಂದುದು ಶ್ರುತಿಯೆಂಬುದನಱಿದು, ಆ ಶಕ್ತಿಯ ಆಧೇಯದಲ್ಲಿ ತೋಱುವ ತತ್ತ್ವಂಗಳ ಪ್ರವರ್ತನೆ ವಿಶ್ವವೆನಿಸುವುದು. ಇದನಱಿಯದೆ ವೇದಾಂತಿ ದೃಗ್ದೃಶ್ಯವೆಂಬ, ದೃಕ್ಕೇ ವಸ್ತುವೆನಿಪ ಆತ್ಮನೆಂಬ, ದೃಶ್ಯವೇ ಮಾಯೆಯೆಂಬ, ಇದು ಹುಸಿ. ಆ ಶಕ್ತಿಯ ಆಧಾರದಲ್ಲಿ ತೋರುವ ವಿಶ್ವಪ್ರಪಂಚು, ಆ ಪ್ರಪಂಚಿನ ಮಧ್ಯದಲ್ಲಿ ತೋಱುವ ಶಕ್ತಿಯ ಕ್ರಮವೆಂತೆಂದಡೆ : ಜಲಮಧ್ಯದಲ್ಲಿ ತೋಱುವ ಇನಬಿಂಬದಂತೆ ಬಿಂಬಿಸುವದಾಗಿ ಆ ಬಿಂಬವೇ ಜೀವ. ಆ ಜೀವನೇ ದೃಕ್ಕು. ಆ ಜೀವನ ಕಯ್ಯ ಕಾಣಿಸಿಕೊಂಬ ವಿಷಯವೇ ಮಾಯೆ. ಈ ಎರಡಱ ವ್ಯವಹಾರ ಆ ಶಕ್ತಿಗೆ ಇಲ್ಲವಾಗಿ ದೃಗ್ದೃಶ್ಯವೆಂಬ ವೇದಾಂತಿಯ ಮತ ವಂಕಿರಲಿ. ಇಂತೀ ದ್ವೈತಾದ್ವೈತದಲ್ಲಿ ಪ್ರವರ್ತಿಸರು ನಮ್ಮ ಶರಣರು. ಆ ದ್ವೈತಾದ್ವೈತದಲ್ಲಿ ಪ್ರವರ್ತಿಸುವ ಪ್ರವರ್ತನಕ್ಕೆ ತಾವೆ ಕಾರಣವೆನಿಸಿಪ್ಪರು. ಇಂತೀ

ಕಾರಣವೆನಿಸಿಪ್ಪ ಶರಣನ ನಿಲವೆಂತುಟೆಂದರೆ, ಸಕಲ ವಿಶ್ವವೇ ಸತಿಯುರಾಗಿ, ತಾನು ತನ್ನ ನಿಜಕ್ಕೆ ಅಂಗವಾಗಿ, ಆ ನಿಜವೇ ಆತ್ಮಂಗೆ ಅಂಗವಾಗಿ ನಿಂದ ನಿಜವೇ ಪರ ವಸ್ತುವಿನ ಪ್ರಭಾವ. ಆ ಪ್ರಭಾವವಾದ ಶರಣನ ನಿಲವೇ ಉರಿಲಿಂಗದೇವನೆಂಬ ಗಂಡನಾಗಿ ಬಂದು ತೆಗೆದಪ್ಪಿದನಾಗಿ ನಾನೀನೆಂದು ನೆರೆದರೆ ತಾನೆಯಾಗಿ ಒಳ ಹೊಱಗೆ ತೆಱಹಿಲ್ಲದೆ ಕರತಳಾಮಳಕವಾಗಿ ಕರಸ್ಥಲದಲ್ಲಿ ಪ್ರಭಾವಿಸಿ ತೋಱಿದ ನಯ್ಯಾ!

ಟೀ. ಅಖಂಡ ಚಿತ್‌ಪ್ರಕಾಶವನುಳ್ಳ ಮಹಾಘನಲಿಂಗವು ತನ್ನ ಸ್ವಲೀಲೆ ಯಿಂದ ತನ್ನ ಚಿತ್ರಭಾಸಾಮರ್ಥ್ಯಶಕ್ತಿಯೊಳಂದಂಶಮಂ ಬೇರ್ಪಡಿಸಿ ಆತ್ಮನೆಂಬಂಗ ವಾಯಿತ್ತು. ಅಂತಪ್ಪ ಆತ್ಮಾಂಗಸ್ವರೂಪ ಶರಣನೆಂಬ ಸತಿಯಾಗಿ, ಆ ಶರಣನ ನಿಜವಪ್ಪ ಮಹಾಘನಲಿಂಗವೇ ಪತಿಯಾಗಿ, ಲಿಂಗಾಂಗಸಂಬಂಧದ ಜ್ಞಾನಕ್ರಿಯೆ ನಟಿಸಿ ಭೇದವಳಿದು ಶರಣನ ಒಳಹೊಱಗೆನ್ನದೆ ಕರಸ್ಥಲಕ್ಕೆ ಬಂದು ಇಷ್ಟಲಿಂಗ ವಾಗಿ ಬೆಳಗಿ ತೋಱಿ, ಅನಿಷ್ಟವ ನಷ್ಟವ ಮಾಡಿದರೆ ಶರಣಂಗೆ ಲಿಂಗನಿಜದ ದೃಢ ಘಟಿಸಿ ಮುನ್ನಿನಂತೆ ಲಿಂಗವೆಯಾಗಿಪ್ಪ ಶರಣ. ಅಂತಲ್ಲದೆ ಬಱಿಯ ವೇದಾಂತ ಸಿದ್ಧಾಂತದಿಂದ ಶಿವಪದ ಸಾಧ್ಯವಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೧

ವ. ಪೃಥ್ವಿಯುನತಿಗಳೆದು ಅಪ್ಪುವಿಲ್ಲ. ಅಪ್ಪುವನತಿಗಳೆದು ಅಗ್ನಿಯಿಲ್ಲ. ಅಗ್ನಿಯುನತಿಗಳೆದು ವಾಯುವಿಲ್ಲ. ವಾಯುವನತಿಗಳೆದು ಆಕಾಶ ವಿಲ್ಲ. ಆಕಾಶವನತಿಗಳೆದು ನಾದವಿಲ್ಲ. ನಾದವನತಿಗಳೆದು ಬಿಂದು ವಿಲ್ಲ. ಬಿಂದುವನತಿಗಳೆದು ಕಳೆಯಿಲ್ಲ. ಕಳೆಯನತಿಗಳೆದು ಆತ್ಮನಿಲ್ಲ. ಆತ್ಮವನತಿಗಳೆದು ಗೊಹೇಶ್ವರನೆಂಬ ಲಿಂಗವಿಲ್ಲ.

ಟೀ. ಆತ್ಮ ಮೊದಲಾಗಿ ಪೃಥ್ವಿಕಡೆಯಾದ ತತ್ತ್ವಂಗಳೆಲ್ಲವೂ ಕೂಡಿ ಅಂಗ ಸ್ವರೂಪು. ಆ ಅಂಗದ ಚೈತನ್ಯವೇ ಲಿಂಗಸ್ವರೂಪು. ಆ ಲಿಂಗವಿರಹಿತವಾಗಿ ಅಂಗತತ್ತ್ವಂಗಳ ತೋಱಿಕೆ ತೋಱಲಿಯಿಲ್ಲವಾಗಿ ಅಂತು ಆತ್ಮ ಮೊದಲಾದ ಅಂಗತತ್ತ್ವಂಗಳ ತೋಱಿಕೆಯೆಲ್ಲವೂ ಲಿಂಗದಲ್ಲಿಯೆ ತೋಱಿ, ಲಿಂಗದಲ್ಲಿಯೆ ಸ್ಥಿತಿಯಾಗಿ, ಲಿಂಗದಲ್ಲಿಯೆ ಅಡಗುತ್ತಿಹ ಭೇದವನಱಿದು, ಅಂಗದೊಳಗಿರ್ದ ಲಿಂಗವ ಕ್ರಿಯಿಂದ ಬಹಿರಂಗದಲ್ಲಿ ಮೂರ್ತಿಗೊಳಿಸಿ, ಆ ಮೂರ್ತಿಯಾದ ಇಷ್ಟ ಲಿಂಗವೆ ಪ್ರಾಣಸ್ವರೂಪಾಗಿ ಕಾಬ ನೈಷ್ಠಿಕಾಭಾವ ಘಟಿಸಿ ಭಕ್ತಿ ಮಾಡಬಲ್ಲಡೆ ಅಂಗವೆಲ್ಲಾ ಲಿಂಗಸ್ವರೂಪೆಯಾಗಿಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೨

**ವ.** ಸನಕ [೧]ಸಾನಂದ[೧] ಮನು ಮುನಿ ಜನಂಗಳು ಅಱಿಯರಯ್ಯಾ ನಿಮ್ಮ ಅಂತುವನು. ಒಂದಱಲ್ಲಿ ಹಲವಾಗಿ, ಹಲವಱಲ್ಲಿ ಒಂದಾಗಿ, ಸಾಕಾರ ನಿರಾಕಾರವಾಗಿಪ್ಪಲ್ಲಿ ಏಕವಾಗಿಪ್ಪೆ ಕಪಿಲಸಿದ್ಧ ಮಲ್ಲಿನಾಥ ನೀನೆಯಾಗಿ.

**ಟೀ.** ಪರಶಿವತತ್ತ್ವವು ತಾನೊಂದೆಯಾಗಿರ್ದು ತನ್ನ ಸ್ವಲೀಲೆಯಿಂದ ತನ್ನ ಚಿದಂಶಕಲೆಯೊಂದ ಬೇರ್ಪಡಿಸೆ ಹಲವಾತ್ಮರಾದರೆಂಬುದೀಗ ' ಒಂದಱಲಿ ಹಲವಾಗಿ ' ಎಂಬ ಶಬ್ದಕ್ಕರ್ಥ. ಅಂತಾದ ಹಲವಾತ್ಮರುಗಳಲ್ಲಿ ಪರಮಚೈತನ್ಯವಾಗಿ ಭೇದವಿಲ್ಲದಿಪ್ಪ ವಸ್ತುವೊಂದೇ ಎಂಬುದೀಗ ' ಹಲವಱಲ್ಲಿ ಒಂದಾಗಿ ' ಎಂಬ ಶಬ್ದಕ್ಕರ್ಥ. ಅಂತು ಆತ್ಮನೆಂಬ ಅಂಗಸ್ವರೂಪಾದ ಸಾಕಾರ, ಆ ಆತ್ಮನಲ್ಲಿಪ್ಪ ಚೈತನ್ಯಲಿಂಗವೆ ನಿರಾಕಾರ. ಅಂತು ತನ್ನಲ್ಲಿಪ್ಪ ನಿರಾಕಾರಲಿಂಗವ ಜ್ಞಾನಕ್ರೀಯಿಂದ ಕೂಡಿ ಜೀವಭಾವವಳಿದಡೆ ಶಿವನೆಯಾಗಿಪ್ಪನೆಂಬುದೀಗ ' ಸಾಕಾರ ನಿರಾಕಾರವಾಗಿಪ್ಪಲ್ಲಿ ಏಕವಾಗಿಪ್ಪೆ ಕಪಿಲಸಿದ್ಧಮಲ್ಲಿನಾಥ ನೀನೆಯಾಗಿ ' ಎಂಬ ಶಬ್ದಕ್ಕರ್ಥ. ಅಂತು ಲಿಂಗದ ಆದ್ಯಂತವ ಲಿಂಗಶರಣರೆ ಅಱಿದು ಲಿಂಗವಪ್ಪರಲ್ಲದೆ ಉಳಿದ ವೇದಾಗಮ ಶಾಸ್ತ್ರಂಗಳಿಂದ ಸಾಧಿಸುವ ಮುನಿಜನಂಗಳು ಮೊದಲಾದ ದೇವತಾದಿಗಳಱಿಯರೆಂಬುದೀಗ ' ಸನಕ [೨]ಸಾನಂದ[೨] ಮನುಮುನಿಜನಂಗಳಱಿಯರಯ್ಯ ನಿಮ್ಮ ಅಂತುವನು ' ಎಂಬ ಶಬ್ದಕ್ಕರ್ಥ. ೩

**ವ.** ಭಕ್ತಿಹೀನನ ದಾಸೋಹವ ಸದ್ಭಕ್ತರು ಸವಿಯರು. ಬೇವಿನ ಹಣ್ಣು ಕಾಗೆಗೆ ಇನಿದಲ್ಲದೆ ಕೋಗಿಲೆಗೆ ಮೆಲಬಾರದು. ಲಿಂಗಸಂಬಂಧವಿಲ್ಲದವರ ನುಡಿ ಕೂಡಲಸಂಗನ ಶರಣರಿಗೆ ಸಮನಿಸದು.

**ಟೀ.** ಭಕ್ತಿಯೆಂಬುದು ಎರಡಿಲ್ಲದ ಕೂಟ. ಆ ಎರಡಿಲ್ಲದ ಕೂಟವೆಂಬುದೆ ಲಿಂಗಾಂಗಸಂಬಂಧ. ಅಂತಪ್ಪ ಲಿಂಗಾಂಗಸಂಬಂಧವಿಲ್ಲದೆ ಭವಿಯಾಗಿ ಶೈವಪೂಜಾದಾಸೋಹಂಗಳನು, ಆತ ನುಡಿವ ಬ್ರಹ್ಮಜ್ಞಾನದ ಮಾತುಗಳನು ಸಲ್ಲವಿಟ್ಟಿಹರು ವೀರಶೈವ ಷಟ್‌ಸ್ಥಲಜ್ಞಾನಿಗಳೆಂಬುದೀ ವಚನದ ತಾತ್ಪರ್ಯಾರ್ಥ. ೪

**ವ.** ಕಾರ್ಯವಿಲ್ಲ, ಕಾರಣವಿಲ್ಲ, ಏತಕ್ಕೆ ಭಕ್ತರಾದೆವೆಂಬಿರಿ? [೩]ಅಯಿವರ[೩] ಬಾಯ ಎಂಜಲನುಂಬಿರಿ. [೪]ಅಯಿವರು[೪] ಸ್ತ್ರೀಯರ ಮುಖವ

೧ ಸನಾದಿ (ಹು.ಎ.) ೨ ಸನಾದಿ (ಹು.ಎ.) ೩ ಐವರ (ಎ.) ೪ ಐವರು (ಎ.)

ನಱಿಯಿರಿ. ಮೂಱು ಸಂಕಲೆಯ ಕಳೆಯಲಱಿಯಿರಿ. ಕಾಯ ವಿಡಿದು ಲಿಂಗವ ಮುಟ್ಟಿಹೆನೆಂಬ ಭ್ರಮೆಯ ನೋಡಾ ಗೊಹೇಶ್ವರಾ !

೬೯. ಕಾರ್ಯವೆಂದಡೆ ಜೀವನು. ಕಾರಣವೆಂದರೆ ಶಿವನು. ಅಂತಪ್ಪ ಶಿವಜೀವರ ನೆಲೆಯನಱಿದು ಕೂಡಿದ ಕೂಟವೆ ಭಕ್ತಿ. ಅಂತಪ್ಪ ಭಕ್ತಿಯನಱಿಯದೆ ಬಱಿದೆ ಭಕ್ತರಾದೆವೆಂಬವರಿಗೆ ನಾಚಿಕೆಯಿಲ್ಲವೆಂಬುದೀಗ 'ಕಾರ್ಯವಿಲ್ಲ, ಕಾರಣವಿಲ್ಲ, ಏತಕ್ಕೆ ಭಕ್ತರಾದೆನೆಂಬಿರಿ' ಎಂಬ ಶಬ್ದಕ್ಕರ್ಥ. ಅಂತು ಜೀವನೆ ಅಂಗ, ಶಿವನೆ ಲಿಂಗ, ಸಂಬಂಧವೆ ಭಕ್ತಿ. ಅಂತಪ್ಪ ಲಿಂಗಾಂಗಸಂಬಂಧದ ಕ್ರೀಯಿಂದ ಲಿಂಗಪ್ರಸಾದಿಗಳಾಗಲಱಿಯದೆ ಪಂಚೇಂದ್ರಿಯಂಗಳ ಉಚ್ಛಿಷ್ಟವನುಂಬವರಿಗೆ ಭಕ್ತಿಯಿಲ್ಲವೆಂಬುದೀಗ 'ಅಯಿವರ ಬಾಯ ಎಂಜಲವನುಂಬಿರಿ' ಎಂಬ ಶಬ್ದಕ್ಕರ್ಥ. ಕ್ರಿಯಾಶಕ್ತಿ ಜ್ಞಾನಶಕ್ತಿ ಆದಿಶಕ್ತಿ ಪರಾಶಕ್ತಿಯೆಂಬವರೀಗ 'ಅಯಿವರು ಸ್ತ್ರೀಯರೆಂ'ಬ ಶಬ್ದಕ್ಕರ್ಥ. ಅಂತಪ್ಪ ಅಯಿವರು ಸ್ತ್ರೀಯರು ಅಂಗವಾಗಿ ೧ಪೀಠಸ್ವರೂಪರು೧. ಆ ಅಂಗಸ್ವರೂಪರಾಗಿಪ್ಪ ಶಕ್ತಿಗಳ ಶಿರಸ್ಸಾಗಿಪ್ಪ ಮುಖವೇ ಲಿಂಗವೆಂಬುದೀಗ 'ಅಯಿವರು ಸ್ತ್ರೀಯರ ಮುಖ'ವೆಂಬ ಶಬ್ದಕ್ಕರ್ಥ. ಅಂತಪ್ಪ ಪಂಚಶಕ್ತಿಯರೇ ಪಂಚೇಂದ್ರಿಯಂಗಳೆಂದು, ಆ ಪಂಚೇಂದ್ರಿಯಂಗಳಲ್ಲಿ ಪಂಚಲಿಂಗಮುಖಪನಱಿದು ಅರ್ಪಿಸಿ ಪ್ರಸಾದಿಗಳಾಗಲಱಿಯದವರು ಭಕ್ತರಲ್ಲವೆಂಬುದೀಗ 'ಅಯಿವರು ಸ್ತ್ರೀಯರ ಮುಖವನಱಿಯಿರಿ' ಎಂಬ ಶಬ್ದಕ್ಕರ್ಥ. ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲಪಾಶಂಗಳ ಗುರು ಲಿಂಗ ಜಂಗಮ ಮುಖದಿಂದ ತ್ಯಜಿಸಲಱಿಯದವರು ಭಕ್ತರಲ್ಲದವರು ಎಂಬುದೀಗ 'ಮೂಱು ಸಂಕಲೆಯ ಕಳೆಯಲಱಿಯಿರಿ' ಎಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಬಂಧದ ಜ್ಞಾನಕ್ರೀಯಿಲ್ಲದೆ ದೇಹದ ಅಹಂಮಮತೆವಿಡಿದು ಲೋಕಾಚಾರದಲ್ಲಿ ನಡೆವುತಿಪ್ಪಂಗವ ಲಿಂಗದಲ್ಲಿ ಕೂಡಬೇಕೆಂಬವರೆಲ್ಲರೂ ಭ್ರಮಿತರೆಂಬುದೀಗ 'ಕಾಯವಿಡಿದು ಲಿಂಗವ ಮುಟ್ಟಿಹೆನೆಂಬ ಭ್ರಮೆಯ ನೋಡಾ' ಎಂಬ ಶಬ್ದಕ್ಕರ್ಥ. ೫

೭. ಆದ್ಯರಲ್ಲ, ವೇದ್ಯರಲ್ಲ, ಸಾಧ್ಯರಲ್ಲದ ಹಿರಿಯರ ನೋಡಾ ! ತನು ವಿಕಾರ ಮನವಿಕಾರ ಇಂದ್ರಿಯವಿಕಾರ ಹಿರಿಯರ ನೋಡಾ ! ಶಿವ

೧ ಪೀಠಸ್ವರೂಪು (ಎ.)

ಚಿಂತೆ ಶಿವಜ್ಞಾನಿಗಳ ಕಂಡಡೆ ಅಳವಾಡಿ ನುಡಿವರು ಗೊಹೇಶ್ವರನ ನಱಿಯದ ಕರ್ಮಿಗಳು.

**ಟೀ.** ಮುನ್ನ ರುದ್ರಲೋಕದಲ್ಲಿ ಮಾಹೇಶ್ವರರಾಗಿರ್ದು ಮರ್ತ್ಯಲೋಕಕ್ಕೆ ಬಂದು ಲಿಂಗಾಂಗಸಂಬಂಧದ ಕ್ರೀವಿಡಿದು ಆಚರಿಸುತ್ತಿಪ್ಪವರೀಗ ' ಆದ್ಯರೆ ' ಂಬ ಶಬ್ದಕ್ಕರ್ಥ. ಅಂತಲ್ಲದೆ ಜಗದಾತ್ಮರೊಳು ಒಬ್ಬ ಆತ್ಮಂಗೆ ಶಿವಕೃಪೆಯಾಗಲು ಶಿವಜ್ಞಾನ ವೇಧಿಸಿ ಲಿಂಗಾಂಗಸಂಬಂಧಿಯಾಗಿ ಆಚರಿಸುತ್ತಿಪ್ಪರು, ಅಂತಪ್ಪವರೀಗ 'ವೇದ್ಯರೆ'ಂಬ ಶಬ್ದಕ್ಕರ್ಥ. ಅಂತಪ್ಪ ಆದ್ಯರು ವೇದ್ಯರುಗಳೊಳಗೆ ಶಿವಪದಸಾಧ್ಯವಾಗಿ ಚರಿಸುತ್ತಿಪ್ಪರು 'ಸಾಧ್ಯರೆ'ಂಬ ಶಬ್ದಕ್ಕರ್ಥ. ಇಂತೀ ಮೂಱು ಪ್ರಕಾರದವರು ಲಿಂಗದಲ್ಲಿ ಮುಕ್ತರಪ್ಪರು. ಈ ಮೂಱಱೊಳಗೆ ಒಂದೂ ಇಲ್ಲದೆ ಬಱಿಯ ವೇಷ ಲಾಂಛನದಿಂದ ಹಿರಿಯರೆನಿಸಿಕೊಂಡು, ದೇಹೇಂದ್ರಿಯ ವಿಷಯ ವಿಕಾರಂಗಳಲ್ಲಿ ಆಶಾತೃಷ್ಣರಾಗಿರ್ದು ತಾವು ಹಿರಿಯರೆಂದು ಶಿವಜ್ಞಾನಿಗಳ ಕಂಡಡೆ ಜಱಿವುತ್ತಿಪ್ಪರು, ಅವರು ಶಿವನನಱಿಯದ ಪಾಪಕರ್ಮರೆಂಬುದೀ ವಚನದ ತಾತ್ಪರ್ಯಾರ್ಥ. ೬

**ವ.** ಅಂಗದ ಮೇಲೆ ಲಿಂಗವ ಧರಿಸಿ ಲಿಂಗಪ್ರಾಣಿಯಾದ ಬಳಿಕ ಮರಳಿ ಭವಿಯ ನಂಟರೆಂದು ಬೆರಸಿದರೆ ಕೊಂಡ ಮಾಱಿಂಗೆ ಹೋಹುದು ತಪ್ಪದು. ತ್ರಿವಿಧನಾಶಕನು ಹಸಿಯ ಮಣ್ಣಿನಲ್ಲಿ ಮಾಡಿದ ಮಡಕೆಯು ಅಗ್ನಿಮುಖದಲ್ಲಿ ಶುದ್ಧವಾದ ಬಳಿಕ ಅದು ತನ್ನ ಪೂರ್ವಗುಣವ ಬೆರಸುವುದೇ ?

**ಸಾಕ್ಷಿ :**

ಅಗ್ನಿದಗ್ಧೋಘಟಃ ಪ್ರಾಹುರ್ನಭೂಯೋ ವ್ಯಕ್ತಿಕಾಯತೇ
ತಚ್ಛಿವಾಚಾರಸಂಗೇನ ನಪುನರ್ಮಾನುಷೋ ಭವೇತ್

ಇದು ಕಾರಣ ಪೂರ್ವಾಶ್ರಯವ ಕಳೆದ ಭಕ್ತನಪೂರ್ವ ಕೂಡಲಸಂಗಮದೇವಾ.

**ಟೀ.** ಈ ವಚನ ಕಾಣಬಂದರ್ಥ. ೭

**ವ.** ಅಂಗದಾಶ್ರಯುವಳಿದು ಲಿಂಗದಾಶ್ರಯುವಾದ ಬಳಿಕ, ಲಿಂಗಕ್ಕೆ ಲಿಂಗಾಚಾರವಲ್ಲದೆ ಅಂಗಕ್ರೀಯೆಂಬುದನಂಗವಿಸರು ನೋಡಾ ! ಲಿಂಗದಲ್ಲಿ

ನಿಷ್ಠೆವಂತರಾದ ಬಳಿಕ ಅನ್ಯನಾಮವಿಡಿದು ಬಳಲುವ ಭ್ರಾಂತಿಯಿನ್ನೆಲ್ಲಿಯದು ? ಇದುಕಾರಣ ಕೂಡಲಚೆನ್ನಸಂಗನ ಶರಣರು ಅನ್ಯವನಾಚರಿಸುವರಲ್ಲಾ.

ಟೀ. ಶ್ರೀಗುರು ಅಂಗದ ಮೇಲೆ ಲಿಂಗಸಾಹಿತ್ಯವ ಮಾಡಿ ಪಂಚಭೂತ ಕಾಯವೆಂಬ ನಾಮವಳಿದು ಮಂತ್ರಕಾಯವೆನಿಸಿ, ವಾಯುಪ್ರಾಣಿಯೆಂಬ ನಾಮವಳಿದು ಲಿಂಗಪ್ರಾಣಿಯೆನಿಸಿದ ಬಳಿಕ ಆ ಸದ್ಭಕ್ತನು ತನ್ನ ತನು ಮನ ಪ್ರಾಣಂಗಳೆಲ್ಲಾ ಲಿಂಗಮಾದವೆಂಬ ವಿಶ್ವಾಸದೃಢ ಘಟಿಸಿ ಲಿಂಗಾಚಾರಕ್ರೀಯಲ್ಲಿ ಆಚರಿಸುತ್ತಿಪ್ಪ ಲಿಂಗಶರಣರು ತಾವು ಶಿವನಾದೆವೆಂಬ ನಿಶ್ಚಯಭಾವದಿಂದ ತಾವು ಶಿವನೆಂಬ ಭಾವವ ನಿರ್ಧರಿಸಿಹರಲ್ಲದೆ ಮಱೆದು ಮರಳಿ ಜೀವ ನಾನೆಂಬ ನಾಮವ ನುಡಿದು ಶಿವಂಗೆ ಭಿನ್ನಜೀವನಾಗಿ ಕೆಟ್ಟುಹೋಹವನಲ್ಲಾ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೮

ವ. ಶ್ರೀಗುರುಕಾರುಣ್ಯಕಟಾಕ್ಷದಲ್ಲಿ ಉತ್ಪತ್ಯವಾದ ಅಜಾತಂಗೆ ಜಾತಿಸೂತಕ, ಜನನಸೂತಕ, ಪ್ರೇತಸೂತಕ, ರಜಸ್ಸೂತಕ, ಎಂಜಲಸೂತಕ ಉಂಟೆಂಬ ವಂಗೆ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ, ಪ್ರಸಾದವಿಲ್ಲವಯ್ಯಾ ಕೂಡಲಚೆನ್ನಸಂಗಯ್ಯಾ!

ಟೀ. ಈ ವಚನ ಕಾಣಬಂದರ್ಥ. ೯

ವ. ನೊಸಲಲೊಂದು ಕಣ್ಣು ಮಕುಟವರ್ಧನರಾದರೆಯೂ ಅಂಗದಮೇಲೆ ಲಿಂಗವಿಲ್ಲದವರ ಮನೆಯಲ್ಲಿ ಮಾಡಿದ ಪಾಕ ಶ್ವಾನಮಾಂಸ, ನರಕ ತಪ್ಪದಾಗಿ ಬಲ್ಲವರೊಲ್ಲರು. ಶಿವಭಕ್ತರಲ್ಲದವರ ಮನೆಯಲ್ಲಿ ಉಂಡರೆ ಜನ್ಮಜನ್ಮಾಂತರ ಶ್ವಾನಯೋನಿಯಲ್ಲಿ ಬಪ್ಪುದು ತಪ್ಪದು. ಎಲೆ ಶಿವನೇ, ನೀನಿಲ್ಲದವರ ಮನೆಯಲ್ಲಿ ತಿಂಬವಂಗೆ ಎನ್ನ ಮನ ಸೊಗಸದಯ್ಯಾ ಕೂಡಲಚೆನ್ನಸಂಗಮದೇವಾ!

ಟೀ. ಈ ವಚನ ಕಾಣಬಂದರ್ಥ. ೧೦

ವ. ಭಕ್ತರೆಲ್ಲರೂ ಕೂಡಿ ಗುರುದೇವಸಹಿತ ಪ್ರಾಣಲಿಂಗವೆಂದು ಅರ್ಪ್ಪಿಸಿದ ಮಾತ ಮಱೆದಿರಲ್ಲಾ ! ಸ್ಥಾವರಕ್ಕೆ ಹೋಗಿ ದಂಡಪ್ರಣಾಮವ ಮಾಡುವರು, ಆವುದಾಚಾರವಯ್ಯಾ ? ತನ್ನ ಲಿಂಗವಿದ್ದಂತೆ ಅನ್ಯ

ಲಿಂಗವ ಮುಟ್ಟಿ ದರುಶನವ ಮಾಡುವ ಪಾತಕರನಚ್ಚಶರಣರೆಂತೆಂಬೆ ನಯ್ಯ ಕೂಡಲಚೆನ್ನಸಂಗಮದೇವಾ ?

ಟೀ. ಈ ವಚನ ಕಾಣಬಂದರ್ಥ. ೧೧

ವ. ಹುಟ್ಟುವಲ್ಲಿ ಭವಿ, ಮರಳಿ ಭಕ್ತನ ಮಾಡಿ, ಪೂರ್ವಾಶ್ರಯವ ಕಳೆದು, ಹೊಂದುವಲ್ಲಿ ಭವಿಯಾಗಿ ಹೋಹವರ ಮುಟ್ಟಲಾಗದು. ಅವನ ಮುಟ್ಟಿದವರು ಮುನ್ನವೆ ವ್ರತಗೇಡಿ. ಅವನ ಶ್ರಾದ್ಧಾಕಾಲವೇ ಶ್ವಾನಮಾಂಸ. ಕ್ರಿಯಾಕಾಲವೇ ಕ್ರಿಮಿಕುಳಗಳು. ತದ್ದಿನವೇ ಮದ್ಯಮಾಂಸ. ಇದುಕಾರಣ ಕೂಡಲಚೆನ್ನಸಂಗಮದೇವಾ ಅವನ ಮನೆಯ ವಿಚಾರಿಸದೆ ಹೊಕ್ಕವಂಗೆ ನಾಯಕನರಕ.

ಟೀ. ಈ ವಚನ ಕಾಣಬಂದರ್ಥ. ೧೨

ವ. ಛಲಬೇಕು ಶರಣಂಗೆ ಪರಧನವನೊಲ್ಲೆನೆಂಬ. ಛಲಬೇಕು ಶರಣಂಗೆ ಪರದೈವವನೊಲ್ಲೆನೆಂಬ. ಛಲಬೇಕು ಶರಣಂಗೆ ಗುರುಲಿಂಗಜಂಗಮವ ನೊಂದೆಂಬ. ಛಲಬೇಕು ಶರಣಂಗೆ ಪ್ರಸಾದದಿಂದ ಪರವಿಲ್ಲವೆಂಬ. ಛಲಬೇಕು ಶರಣಂಗೆ ಪರಸ್ತ್ರೀಯರ ಮುಟ್ಟೆನೆಂಬ. ಛಲವಿಲ್ಲದವರ ಮೆಚ್ಚ ಕೂಡಲಸಂಗಮದೇವಾ.

ಟೀ. ಈ ವಚನ ಕಾಣಬಂದರ್ಥ. ೧೩

ವ. ಒಡೆಯನಿಲ್ಲದ ಮನೆಯ ತುಡುಗುಣಿ ನಾಯಿ ಹೊಗುವಂತೆ, ನೀನಿಲ್ಲ ದವರ ಮನೆಯ ಹೊಗೆನು ಹೊಗೆನು ಸಂಗಯ್ಯಾ. ಶ್ವಪಚೋಪಿ ಗಳಾಗಲಿ ಕೂಡಲಸಂಗಯ್ಯ ನೀನಿದ್ದವನೇ ಕುಲಜನು.

ಟೀ. ಈ ವಚನ ಕಾಣಬಂದರ್ಥ. ೧೪

ವ. [೧]ವೇದಕ್ಕೆ ಒಱೆಯಕಟ್ಟುವೆ[೧]. ಶಾಸ್ತ್ರಕ್ಕೆ ನಿಗಳವನಿಕ್ಕುವೆ. ತರ್ಕದ ಬೆನ್ನ ಬಾರನೆತ್ತುವೆ. ಆಗಮದ ಮೂಗ ಕೊಯ್ಯುವೆ ನೋಡಯ್ಯಾ !

೧ ವೇದಕ್ಕೊಱೆಯನಿಕ್ಕುವೆ (ಹು.)

ಕೂಡಲಸಂಗಮದೇವ, ಮಾದರಚೆನ್ನಯ್ಯನ ಮನೆಯ ಮಗ
ನಾನಯ್ಯಾ !

ಟೀ. ಭಕ್ತಿಯೇ ಮುಕ್ತಿ. ಭಕ್ತಿಯೇ ಕುಲ. ಅಂತೆಂಬುದಕ್ಕೆ ಮಾದರ ಚೆನ್ನಯ್ಯಂಗೆ ಶಿವನೊಲಿದು ಒಡನುಂಡುದೇ ದೃಷ್ಟ. ಅದುಕಾರಣ ಭಕ್ತಿಯೇ ಮುಕ್ತಿಗೆ ಸಾಧನವೆಂದೂ ಉಳಿದ ವೇದಾಗಮ ತರ್ಕ ಶಾಸ್ತ್ರಂಗಳೆಲ್ಲಾ ಸಟೆಯೆಂದೂ ಜಱಿದು ನಿರಾಕರಿಸಿ ನಡೆದರು ಶರಣರು ಎಂಬುದೀ ವಚನದ ತಾತ್ಪರ್ಯಾರ್ಥ. ೧೫

ವ. ಆಗಮಪುರುಷರಿರಾ ನಿಮ್ಮಾಗಮ ವಾಯಕ್ಕೆ ಹೋಯಿತ್ತಲ್ಲಾ ! ವಿದ್ಯಾಪುರುಷರಿರಾ ನಿಮ್ಮ ವಿದ್ಯೆ ಅವಿದ್ಯೆಯಾಗಿ ಹೋದಲ್ಲಿ ಬಱಿ ಮುಖರಾಗಿ ಹೋದಿರಲ್ಲಾ ! ವೇದಪುರುಷರಿರಾ ನಿಮ್ಮ ವೇದ ಹೊಲಬುದಪ್ಪಿ ಹೋದಲ್ಲಿ ವೇದವೇ ದೈವವೆಂದು ಕೆಟ್ಟಿರಲ್ಲಾ ! ಪುರಾಣಪುರುಷರಿರಾ ನಿಮ್ಮ ಪುರಾಣವಿಚಾರ ಭ್ರಷ್ಟವಾಗಿ ಹೋದಲ್ಲಿ ನೀವೂ ಒಡನೆ ಭ್ರಷ್ಟರಾಗಿ ಹೋದಿರಲ್ಲಾ ! ಶಾಸ್ತ್ರಪುರುಷರಿರಾ ನಿಮ್ಮ ಶಾಸ್ತ್ರ ಮಹಾಪಥದ ಹೊನಲಲ್ಲಿ ಹೋದಲ್ಲಿ ಭಕ್ತದೇಹಿಕದೇವ ನೆಂದಱಿಯದೆ ಕೆಟ್ಟಿರಲ್ಲಾ ! ಯತ್ರ ಶಿವಸ್ತತ್ರ ಮಾಹೇಶ್ವರನೆಂದು ಹೇಳಿತ್ತು ಮುನ್ನ. ಅಂತು ಭಕ್ತ ನಿತ್ಯ ಸತ್ಯ ಸನ್ನಹಿತ ಗೊಹೇಶ್ವರಾ ನಿಮ್ಮ ಶರಣ.

ಟೀ. ವೇದಾಗಮ ಶಾಸ್ತ್ರ ಪುರಾಣವೆಲ್ಲಕ್ಕೂ ಲಯವುಂಟು. ಅವನೋದಿ ಸಂಪಾದಿಸಿದ ಪುರುಷರೆಲ್ಲರಿಗೂ ಲಯವುಂಟು. ಸಜ್ಜನ ಸದ್ಭಕ್ತರಲ್ಲಿ ಶಿವನಿಪ್ಪನು. ಅಂತಪ್ಪ ಭಕ್ತರೇ ನಿತ್ಯರೆಂಬುದೀ ವಚನದ ತಾತ್ಪರ್ಯಾರ್ಥ. ೧೬

ವ. ಎಡದ ಕೈಯಲ್ಲಿ ಕತ್ತಿ. ಬಲದ ಕೈಯಲ್ಲಿ ಮಾಂಸ. ಬಾಯಲ್ಲಿ ಸುರೆಯ ಗಡಿಗೆ. ಕೊರಳಲು ದೇವರಿರಲು ಅವರ ಲಿಂಗನೆಂಬೆ, ಸಂಗ ನೆಂಬೆ. ಕೂಡಲಸಂಗಮದೇವ ಅವರ ಮುಖಲಿಂಗಿಗಳೆಂಬೆ.

ಟೀ. ಅಂಗದ ಮೇಲೆ ಲಿಂಗವಿರ್ದ ಶರಣನ ಚಾರಿತ್ರವೆಂತಿರ್ದಡೆಯೂ ಆತನ ಲಿಂಗವೆಂದೇ ಕಾಣಬೇಕೆಂಬುದೀ ವಚನದ ತಾತ್ಪರ್ಯಾರ್ಥ. ೧೭

ವ. ಬಂದು ಬಲ್ಲಹ ಬಿಡಲು ಹೊಲೆಗೇರಿಯೆಂಬ ಹೆಸರುಂಟೇ ಅಯ್ಯಾ ? ಲಿಂಗವಿರ್ದ ಭಕ್ತನ ಮನೆ ಕೈಲಾಸವೆಂದು ನಂಬಬೇಕು.

ಗ್ರಂಥ :

ಚಾಂಡಾಲವಾಟಿಕಾಯಾಂ ವಾ ಶಿವಭಕ್ತಃ ಸ್ಥಿತೋ ಯದಿ
ತತ್ ಶ್ರೇಣಿಃ ಶಿವಲೋಕಃ ಸ್ಯಾತ್ ತದ್ಗೃಹಂ ಶಿವಮಂದಿರಂ

ಎಂದುದಾಗಿ ಲೋಕದ ಢಂಬಕರ ಮಾತು ಬೇಡ ಕೂಡಲಸಂಗನ ಶರಣರಿದ್ದುದೇ ಕೈಲಾಸ.

ಟೀ. ಈ ವಚನ ಕಾಣಬಂದರ್ಥ. ೧೮

ವ. ಕ್ಷೀರಸಾಗರದಲ್ಲಿರ್ದ ಹಂಸೆಗೆ ಹಾಲ ಬಯಸಲುಂಟೇ ? ಪುಷ್ಪದೊಳಗಿರ್ದ ತುಂಬಿಗೆ ಪರಿಮಳವ ಬಯಸಲುಂಟೇ ? ತಾ ಲಿಂಗದೊಳಗಿರ್ದು ಬೇಱೆ ಇತರ ಕಾಮ್ಯಾರ್ಥದೊಳಗಿರ್ಪ ಭ್ರಾಂತರನೇನೆಂಬೆನಯ್ಯಾ ಗೊಹೇಶ್ವರಾ ?

ಟೀ. ಸರ್ವಸುಖಂಗಳ ಜನನಸ್ಥಲಮಪ್ಪ ಮಹಾಘನಲಿಂಗವು ಕರಸ್ಥಲಕ್ಕೆ ಬಂದು ಒಳಹೊಱಗೆನ್ನದೆ ಸರ್ವಾಂಗಲಿಂಗವಾಗಿಪ್ಪ ಲಿಂಗಪದದ ನಿತ್ಯಸುಖವನೆ ಬಿಟ್ಟು, ಅನಿತ್ಯವಾದ ಅಲ್ಪ ಫಲಪದಂಗಳ ಬಯಸಿ, ಲಿಂಗವ ಪೂಜಿಸಿ, ಕರ್ಮಕ್ಕೀಡಾಗಿ ಹೋಹವರೆಲ್ಲಾ ಅಜ್ಞಾನಭ್ರಾಂತಿಜೀವಿಗಳೆಂಬುದೀ ವಚನದ ತಾತ್ಪರ್ಯಾರ್ಥ. ೧೯

ವ. ಈ ಸತ್ಕ್ರಿಯೆಗೀಫಲ, ಈ ಪುಷ್ಪಕ್ಕೀಫಲವೆಂಬ ಕೂಲಿಕಾರರು ಅವರೆಲ್ಲಾ ಕರ್ಮಿಗಳಯ್ಯಾ ! ಪುಣ್ಯ ಪಾಪವನುಂಬ ಕರ್ಮಿಗಳಯ್ಯಾ ! ಸ್ವರ್ಗ ನರಕವನುಂಬ ಕರ್ಮಿಗಳಯ್ಯಾ ! ಒಡಲೊಡವೆ ಪಡೆದರ್ಥ ಮೃಡದೇವ ಸೊಡ್ಡಳನೆಂಬಾತ ಬೆಡಗಿನ ಶಿವಪುತ್ರ, ಉಳಿದವರೆಲ್ಲಾ ಜಗದ ಮಿತ್ರರು.

ಟೀ. ಅರ್ಥ ಪ್ರಾಣಾಭಿಮಾನಂಗಳು ಮೊದಲಾದ ಸಕಲ ಪದಾರ್ಥಂಗಳ ಶಿವನೊಮ್ಮೆಂದು ಶಿವನಿಗರ್ಪಿಸಿ, ಫಲಪದಂಗಳನೇನನೂ ಬಯಸದೆಯಿಪ್ಪ ಸದ್ಭಕ್ತನೇ ಗುರುಕರಜಾತನಾದ ಗುರುಪುತ್ರ ಅಂತಲ್ಲದೆ ಲಿಂಗವ ಪೂಜಿಸಿ ಫಲಪದವ ಬಯಸುವರೆಲ್ಲಾ ಜೀವರೆಂಬುದೀ ವಚನದ ತಾತ್ಪರ್ಯಾರ್ಥ. ೨೦

ವ. ಇನ್ನು ಮುಕ್ತಿಯೆಂದು [1]ಮನದಲ್ಲಿ ಹೊಳೆದು ಕಾಮಿಸುವನ್ನಕ್ಕರ ಪ್ರಸಾದಲಿಂಗ ಸಾಹಿತ್ಯವಾದುದಿಲ್ಲ. ಇನ್ನು ಪರವೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕರ ಜಂಗಮಲಿಂಗಸಾಹಿತ್ಯವಾದುದಿಲ್ಲ. ಶಿವಲಿಂಗ ಕರದಲ್ಲಿರ್ದಂತೆ ಇನ್ನೊಂದು ಲಿಂಗವುಂಟೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕರ ಶಿವಲಿಂಗಸಾಹಿತ್ಯವಾದುದಿಲ್ಲ. ಇನ್ನು ವಿಶೇಷ ತತ್ತ್ವ ಉಂಟೆಂದು ಮನದಲ್ಲಿ ಹೊಳೆದು ಕಾಮಿಸುವನ್ನಕ್ಕರ ಗುರುಲಿಂಗಸಾಹಿತ್ಯವಾದುದಿಲ್ಲ. ಇಂತು ಗುರುಲಿಂಗ ಶಿವಲಿಂಗ ಜಂಗಮಲಿಂಗ ಪ್ರಸಾದಲಿಂಗ, ಈ ಲಿಂಗಚತುರ್ವಿಧವೂ ಏಕೀಕರಿಸಿದ ಮಹಾಮಹಿಮಂಗೆ ಇನ್ನು ಕಾಮಿಸಲಿಲ್ಲ, ಕಲ್ಪಿಸಲಿಲ್ಲ. ಭಾವಿಸಲಿಲ್ಲ, ಚಿಂತಿಸಲಿಲ್ಲ. ಆತ ನಿಶ್ಚಿಂತ, ಪರಮಸುಖಿ, ಪರಿಣಾಮಿ. ಆತನಿರ್ದುದೆ ಕೈಲಾಸ. ಆತನ ಸರ್ವಾಂಗವೆಲ್ಲಾ ಲಿಂಗಮಯವಯ್ಯಾ [1]ಕೂಡಲ ಸಂಗಮದೇವಯ್ಯಾ[1].

ಟೀ. ಶ್ರೀಗುರು ಉಪದೇಶಿಸಿದ ಇಷ್ಟಲಿಂಗವು ಸರ್ವಾಂಗವನಿಂಬುಗೊಂಡು, ಪ್ರಾಣ ಮನ ಇಂದ್ರಿಯಂಗಳೆಲ್ಲಾ ಲಿಂಗಸ್ವರೂಪಾಗಿ ಭಿನ್ನವಿಲ್ಲದೆ, ಲಿಂಗವೆಯಾಗಿರ್ಪನಾಗಿ ಶರಣಂಗೆ ಚತುರ್ವಿಧ ಫಲಪದಂಗಳ ಬಯಕೆಯಿಲ್ಲ. ಆತನಿರ್ದುದೆ ಕೈಲಾಸ. ಆತನೆಂತಿರ್ದುದೆಲ್ಲಾ ಪರಮಪದ. ಇಂತಪ್ಪ ಲಿಂಗಾಂಗ ಸಂಬಂಧದ ಭೇದವನಱಿಯದೆ ಅಂಗದಮೇಲೆ ಲಿಂಗವಿರ್ದು ಭಿನ್ನವಿಟ್ಟು ಪೂಜಿಸಿ ಫಲಪದಂಗಳ ಬಯಸುವ ಜೀವರ ಅಂಗದಲ್ಲಿ ಲಿಂಗಕಳೆಯಿರದೆಂಬುದೀ ವಚನದ ತಾತ್ಪರ್ಯಾರ್ಥ. ೨೧

ವ. ಪರಮಪದವಿಯ ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ. ಪರಮಪದವಿಯ ನಿಮ್ಮ ಎದೆಯಲ್ಲಿ ಇಱಿದುಕೊಳ್ಳಿ. ಎನಗೆ ನಿಮ್ಮ ತೊತ್ತು ಸೇವೆಯೆ ಸಾಕು ಮಹಾಲಿಂಗಕಲ್ಲೇಶ್ವರದೇವ!

ಟೀ. ಸರ್ವ ತತ್ತ್ವಂಗಳನೊಳಕೊಂಡು ಮೇಲಿಪ್ಪುದೇ ಶಿವಪದ. ಅಂತಪ್ಪ ಶಿವಪದವೀಗ 'ಪರಮಪದ'ವೆಂಬ ಶಬ್ದಕ್ಕರ್ಥ. ಅಂತಪ್ಪ ಶಿವನು ತನ್ನ ಪರಮ ಪದವ ಭಕ್ತರಿಗೆ ಕೊಟ್ಟೆನೆಂದರೆ ಶಿವನ ಪರಮಪದವು ಶಿವನಿಗೆ ಇರಲೆಂದು, ತಾವಾ ಪರಮಪದವನೊಲ್ಲೆನೆಂದು, ತಮಗೆ ತಮ್ಮ ಶಿವಸೇವೆಯೇ ಪರಮಪದವೆಂದು,

[1] ಕೂಡಲಚೆನ್ನಸಂಗಯ್ಯಾ (ಹು.)

ಏನನೂ ಬಯಸದೆ ಭಕ್ತಿಯನೆ ಬಯಸಿ ಭಕ್ತಿಯ ಮಾಡುತ್ತಿದ್ದರು ಸದ್ಭಕ್ತರೆಂಬುದೀ ವಚನದ ತಾತ್ಪರ್ಯಾರ್ಥ. ೨೨

ವ. ಜಂಬುದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯಾ ಎರಡಾಳಿನ ಭಾಷೆಯ! ಕೊಲುವೆನೆಂಬ ಭಾಷೆ ದೇವನದು, ಗೆಲುವೆನೆಂಬ ಭಾಷೆ ಭಕ್ತನದು. ಸತ್ಯವೆಂಬ[೧] ಕೂರಲಗ[೧] ಕಳೆದುಕೊಂಡು ಭಕ್ತರು ಗೆದ್ದರು [೨]ಕೂಡಲ ಸಂಗಮದೇವ[೨].

ಟೀ. ಹುಟ್ಟು ಹೊಂದ ಕೆಡಿಸಬೇಕೆಂದು ಸತ್ಯದಲ್ಲಿ ನಡೆದು ಶಿವಭಕ್ತಿಯ ಮಾಡಿ ನಿತ್ಯನಾದೆನೆಂಬ ಭಕ್ತನೊಬ್ಬ ಬಿರಿದಿನ ಮಾಸಾಳು. ಅಂತು ಭಕ್ತನೆಂಬ ಬಿರಿದಿನ ಮಾಸಾಳನು ಶಿವನೆಂಬ ಮಹಾವೀರ ಮಾಸಾಳು ಬಂದು ಭಕ್ತಿಯ ಸೋಲಿಸಿ, ಭವಕ್ಕೆ ತಹೆನೆಂದು ತನುವನಲ್ಲಾಡಿ ಮನವನಲ್ಲಾಡಿ ಧನವನಲ್ಲಾಡಿ ನೋಡುತ್ತಿರಲು, ಆ ಭಕ್ತನು ತನುಮನಧನದಲ್ಲಿ ಆಸೆಯಿಲ್ಲದೆ ಶಿವನಿಗಿತ್ತು, ನಡೆ ನುಡಿಯಲ್ಲಿ ಸತ್ಯವ ಬಿಡದೆ ಭಕ್ತಿಯ ಮಾಡಿ ನಿತ್ಯರಾದರು ಭಕ್ತರೆಂಬುದೀ ವಚನದ ತಾತ್ಪರ್ಯಾರ್ಥ. ೨೩

ವ. ಅರ್ಥವನನರ್ಥವ ಮಾಡುತ್ತಿರಲಿ. ಹುಟ್ಟಿದ ಮಕ್ಕಳ ನವಖಂಡವ ಮಾಡುತ್ತಿರಲಿ. ಮುಟ್ಟುವ ಸ್ತ್ರೀಯನೂ ಕಣ್ಣಮುಂದೆ ಅಭಿಮಾನಂಗೊಂಡು ನೆರೆಯುತ್ತಿರಲಿ. ಈ ತ್ರಿವಿಧವು ಹೋಜಿಗಣವು. ಇನ್ನೆನ್ನಂಗದ ಮೇಲೆ ಬರಲಿ, ಹಿಡಿಖಂಡವ ಕೊಯ್ಯಲಿ, ಇಕ್ಕುವ ಶೂಲ [೩]ಪ್ರಾಪ್ತಿಸಲಿ[೩], ಹಾಕೊಂದೆಸೆ ಹನ್ನೊಂದೆಸೆಯ ಮಾಡುತ್ತಿರಲಿ. ಮತ್ತೆಯೂ ಲಿಂಗಾರಾಧನೆಯ ' ಮಾಡುವೆ. ಜಂಗಮಾರಾಧನೆಯ ಮಾಡುವೆ. ಪ್ರಸಾದಕ್ಕೆ [೪]ತಪ್ಪೆ.[೪] ಈ ಭಾಷೆ ಕಿಂಚಿತ್ತು ಹುಸಿಯಾದಡೆ ನೀನಂದೇ ಮೂಗು ಕೊಯಿ ಕೂಡಲಸಂಗಮದೇವಾ!

ಟೀ. ಈ ವಚನ ಕಾಣಬಂದರ್ಥ. ೨೪

ವ. ಪಂಚಬ್ರಹ್ಮವ ಕೆಡಿಸಿತ್ತು, ಪ್ರಣವಮಂತ್ರವನೀಡಾಡಿತ್ತು, ಕರ್ಮಂಗಳನೆಲ್ಲವ ಕೆಡಿಸಿತ್ತು, ಕ್ರೀಯನೆಲ್ಲವ ಮೀಱಿತ್ತು, ಆಗಮದ ಹಲ್ಲ ಕೀಯಿತ್ತು ಕೂಡಲಸಂಗನ ಭಕ್ತಿಗಜ ಹೋ !

೧ ಕೂರಲಗನೆ (ಎ.) ೨ ಕೂಡಲಸಂಗಮದೇವಾ (ಎ.) ೩ ಪಾರ್ತಿಸಲಿ (ಹು.
೪ ತಪ್ಪೆನು (ಎ.)

ಟೀ. ಪಂಚಬ್ರಹ್ಮಮಯವೀ ಜಗತ್ತೆಂಬ ಪಂಚಭೂತಕಾಯವ ಕೆಡಿಸಿ ಸರ್ವಾಂಗಲಿಂಗವ ಮಾಡಿತ್ತು ಭಕ್ತಿಯೆಂಬುದೀಗ ' ಪಂಚಬ್ರಹ್ಮವ ಕೆಡಿಸಿತ್ತು ' ಎಂಬ ಶಬ್ದಕ್ಕರ್ಥ. ಪ್ರಣವ ಪಂಚಾಕ್ಷರಿಯನೇ ಅನುಶ್ರುತ ಜಿಹ್ವೆಯಲ್ಲಿ ಉಚ್ಚರಿಸುತ್ತಿಹುದೇ ಭಕ್ತಿ. ಅಂತು ಭಕ್ತನುಚ್ಚರಿಸುತ್ತಿಹ ಪ್ರಣವಮಂತ್ರವು ಸರ್ವಪಾಪಾತ್ಮರ ಕರ್ಣದಲ್ಲಿ ಬಿದ್ದು ಸರ್ವಾತ್ಮರೂ ಮುಕ್ತರಾಗುತ್ತಿಹರೆಂಬುದೀಗ ' ಪ್ರಣವಮಂತ್ರವನೀಡಾಡಿತ್ತು ' ಎಂಬ ಶಬ್ದಕ್ಕರ್ಥ. ಅಂತು ಅವಿರಳ ಭಾವದಿಂದ ಲಿಂಗದಲ್ಲಿ ಭೇದವಿಲ್ಲದೆ ಮಾಡುತ್ತಿಪ್ಪ ಭಕ್ತಂಗೆ ಸಂಚಿತ ಪ್ರಾರಬ್ಧ ಆಗಾಮಿಯೆಂಬ ಕರ್ಮಂಗಳು ಕೆಟ್ಟುಹೋದವು ಎಂಬುದೀಗ ' ಕರ್ಮಂಗಳನೆಲ್ಲವ ಕೆಡಿಸಿತ್ತು ' ಎಂಬ ಶಬ್ದಕ್ಕರ್ಥ. ಅಂತು ತಾನು ಜೀವನೆಂಬ ಭಾವವಳಿದು, ಲಿಂಗವೆಂಬ ಭಾವ ಘಟಿಸಿ, ಲಿಂಗೋಪಾಸ್ತೆಯ ಮಾಡುತಿಪ್ಪುದೇ ಭಕ್ತಿ. ಅಂತಪ್ಪ ಭಕ್ತಿಯಿಂದ ಕ್ರಿಯಾಫಲಂಗಳಿಲ್ಲವೆಂಬುದೀಗ ' ಕ್ರೀಯನೆಲ್ಲವ ಮೀಱಿತ್ತು' ಎಂಬ ಶಬ್ದಕ್ಕರ್ಥ. ಸಂಕಲ್ಪವಿಕಲ್ಪವೆಂಬವೀಗ 'ಹಲ್ಲೆ'ಂಬ ಶಬ್ದಕ್ಕರ್ಥ. ಅಂತು ಶಿವಜೀವರೆಂದೂ ಭಿನ್ನರೆಂದು ಹೇಳುವ ಆಗಮದ ಸಂಕಲ್ಪ ವಿಕಲ್ಪಂಗಳ ಹುಸಿಮಾಡಿ ಕಳೆಯಿತ್ತು ಭಕ್ತಿ ಎಂಬುದೀಗ ' ಆಗಮದ ಹಲ್ಲ ಕಳೆಯಿತ್ತು ' ಎಂಬ ಶಬ್ದಕ್ಕರ್ಥ. ಅಂತು ಜೀವನೆ ಅಂಗ, ಶಿವನೆ ಲಿಂಗ. ಅಂತಪ್ಪ ಲಿಂಗಾಂಗವೆರಡಾದುದೂ ಒಂದೇ ಪರಬ್ರಹ್ಮವೆಂದಱಿದು ಭಿನ್ನಭಾವವಿಲ್ಲದೆ ಮಾಡುತ್ತಿಪ್ಪುದೇ ಭಕ್ತಿ. ಅಂತಪ್ಪ ಭಕ್ತಿ ತಾನೆ ಶಿವನೆಂದಱಿದು ಮಾಡುತ್ತಿಪ್ಪಲ್ಲಿ ಆನೆಂಬ ಶಬ್ದವಾಯಿತ್ತಾಗಿ ಆನೆಂಬುದೀಗ 'ಗಜ'ವೆಂಬ ಶಬ್ದಕ್ಕರ್ಥ. ಅಂತು ತಾನು ಶಿವನೆಂದಱಿದು ಭಿನ್ನವಿಲ್ಲದೆ ಮಾಡುತ್ತಿಪ್ಪುದೆ ಭಕ್ತಿ. ಇಂತಪ್ಪ ಮಹತ್ವದ ಆಶ್ಚರ್ಯವನುಳ್ಳುದೆಂಬುದೀಗ ' ಭಕ್ತಿಗಜ ಹೋ ' ಎಂಬ ಶಬ್ದಕ್ಕರ್ಥ. ೨೫

ವ. [೧]ಲಿಂಗದಿಂದ ಉದಯಿಸಿ[೧] ಅಂಗವಿಡಿದಿಪ್ಪವರ ಇಂಗಿತವನೇನೆಂಬೆನಯ್ಯಾ ? ಅವರ ನಡೆಯೇ ಆಗಮ, ಅವರ ನುಡಿಯೇ ಪರಮಾಮೃತ. ಅವರ ಲೋಕದ ಮಾನವರೆನಬಹುದೇ ಅಯ್ಯಾ ? ಅಂಕೋಲೆಯ ಬೀಜ ತರುವನಪ್ಪುವಂತೆ ಅಪ್ಪುವರಯ್ಯಾ ಕೂಡಲಚೆನ್ನಸಂಗ ನಿಮ್ಮ ಶರಣರು!

ಟೀ. ಲಿಂಗದ ಚಿತ್ಕಲಾಂಶವೇ ಆತ್ಮನಾಯಿತ್ತು. ಅಂತಾದ ಆತ್ಮನೇ ಲಿಂಗಸ್ವರೂಪು, ಲಿಂಗವೇ ಪ್ರಾಣಸ್ವರೂಪು ಎಂಬ ಭೇದವ ತಿಳಿದು, ಲಿಂಗದಂಗ

೧ ಲಿಂಗದೊಳಗಿಂದುದಯಿಸಿ (ಎ.)

ವಾಗಿ ಆಚರಿಸುವ ಶರಣನ ಚಾರಿತ್ರವನುಪಮಿಸಬಾರದು. ಅದೆಂತೆಂದೊಡೆ : ಅವರು ನಡೆದುದೆ ಆಗಮಕ್ರೀ. ನುಡಿದುದೆ ಬ್ರಹ್ಮಜ್ಞಾನ. ಅವರು ದೇಹಿಗಳಾಗಿ ತಿರುಗಿ ಹುಟ್ಟರು, ಪರಬ್ರಹ್ಮವೆಯಪ್ಪರೆಂಬುದೀ ವಚನದ ತಾತ್ಪರ್ಯಾರ್ಥ. ೨೬

**ವ.** ಮಾಂಸಪಿಂಡವೆನಲೊಲ್ಲದೆ ಮಂತ್ರಪಿಂಡವೆಂದ ಬಸವಣ್ಣ. ಪಂಚಭೂತಕಾಯವೆನಲೊಲ್ಲದೆ ಪ್ರಸಾದಕಾಯವೆಂದ ಬಸವಣ್ಣ. ವಾಯುಪ್ರಾಣಿಯೆನಲೊಲ್ಲದೆ ಲಿಂಗಪ್ರಾಣಿಯೆಂದ ಬಸವಣ್ಣ. ಜಗಭರಿತನೆಂಬ ಶಬ್ದಕ್ಕೆ ಅಂಗವಿಸಲೊಲ್ಲದೆ ಶರಣಭರಿತನಾದ ಕೂಡಲಚೆನ್ನಸಂಗಯ್ಯ.

**ಟೀ.** ಲಿಂಗಾಂಗಸಂಬಂಧಿಯಾಗಿಪ್ಪ ಶರಣನ ತನು ಮನ ಪ್ರಾಣಂಗಳೆಲ್ಲಾ ಲಿಂಗಮಯವಾಗಿಪ್ಪುದು. ಅಂತು ಶರಣನಲ್ಲಿ ಲಿಂಗಕಳಾಚೈತನ್ಯ ಪರಿಪೂರ್ಣವಾಗಿ ಪ್ರಕಾಶಿಸುತ್ತಿಹುದಲ್ಲದೆ ಮತ್ತೆ ಉಳಿದ ಜೀವರಲ್ಲಿ ಶಿವಕಳೆ ಪ್ರಕಟಿಸಿ ತೋಱದೆಂಬುದೀ ವಚನದ ತಾತ್ಪರ್ಯಾರ್ಥ. ೨೭

**ವ.** ಪ್ರಸಾದಕಾಯವಾದ ಬಳಿಕ, ಸರ್ವಾಂಗ ಉತ್ತಮಾಂಗ ಪ್ರಾಣಲಿಂಗವಾದ ಬಳಿಕ ಸದಾಸನ್ನಹಿತ ಲಿಂಗಶರಣನಲ್ಲಿ ಭಾವಭೇದವಿಲ್ಲ. ನಿರಂತರ ಲಿಂಗಸಂಗಿ. ಅಕಾಯ ಭಕ್ತಕಾಯಸ್ತು ಎಂದುದು ಕೂಡಲಚೆನ್ನಸಂಗಯ್ಯನ ವಚನ.

**ಟೀ.** ಗುರು ಕರುಣಿಸಿಕೊಟ್ಟ ಇಷ್ಟಲಿಂಗವೆಂಬುದೀಗ ಪ್ರಸಾದಲಿಂಗ. ಅಂತಪ್ಪ ಪ್ರಸಾದಲಿಂಗ ಅಂಗದ ಮೇಲೆ ಸಾಹಿತ್ಯವಾದ ಬಳಿಕ ಆ ಶರಣನ ಕಾಯ ಮನ ಪ್ರಾಣಂಗಳೆಲ್ಲಾ ಲಿಂಗವೆಯಾಗಿ ಲಿಂಗಕ್ಕೆಯೂ ಶರಣಂಗೆಯೂ ಭೇದವಿಲ್ಲದೆ ಇಪ್ಪುದು. ಅಂತಪ್ಪ ಶರಣ ಮುಂದೆ ದೇಹವಿಡಿದು ಹುಟ್ಟುವನಲ್ಲವಾಗಿ ಆ ಶರಣ ನಿರ್ದೇಹಿಯೆಂಬುದೀ ವಚನದ ತಾತ್ಪರ್ಯಾರ್ಥ. ೨೮

**ವ.** ಅನ್ಯರಜವ ಸೋಂಕದೆ, ತನ್ನ ರಜವ ಬಾಧಿಸದೆ, ರವಿಯ ಬೆಳಸ ಬಳಸದೆ, ಲಿಂಗ ಬೆಳೆದ ಬೆಳಸ ತಂದು ಜಂಗಮದಲ್ಲಿ ಸವೆಸುತ್ತಿಪ್ಪನು ಲಿಂಗಭಕ್ತ. ಆ ಭಕ್ತನಲ್ಲಿ ಗೊಹೇಶ್ವರನಿಪ್ಪನು.

**ಟೀ.** ವೇದಾಗಮಂಗಳು ಹೇಳುವ ಶ್ರುತಜ್ಞಾನವೆಂಬುದೀಗ ‘ ಅನ್ಯರಜ ’ ವೆಂಬ ಶಬ್ದಕ್ಕರ್ಥ. ಅಂತಪ್ಪ ಶ್ರುತಜ್ಞಾನವಿಡಿದು ನಡೆವವನಲ್ಲ ಲಿಂಗಭಕ್ತ

ನೆಂಬುದೀಗ ' ಅನ್ಯರಜವ ಸೋಂಕದೆ ' ಎಂಬ ಶಬ್ದಕ್ಕರ್ಥ. ತನ್ನ ಸಮ್ಯಗ್‌ಜ್ಞಾನವೆಂಬುದೀಗ 'ತನ್ನ ರಜ'ವೆಂಬ ಶಬ್ದಕ್ಕರ್ಥ. ಅಂತು ತನ್ನ ಸಮ್ಯಗ್‌ಜ್ಞಾನಕ್ಕೆ ಸಂಕಲ್ಪ-ಸಂಶಯಂಗಳ ಶ್ರುತಜ್ಞಾನಂಗಳಿಂದ ಹುಟ್ಟಿಸುವರಲ್ಲ ಲಿಂಗಭಕ್ತರೆಂಬುದೀಗ ' ತನ್ನ ರಜವ ಬಾಧಿಸದೆ ' ಎಂಬ ಶಬ್ದಕ್ಕರ್ಥ. ಸೂರ್ಯೋದಯದಿಂದ ಸರ್ವಜೀವರಿಗೆ ಜಾಗ್ರಾವಸ್ಥೆಯ ತೋಱಿ ಸಂಸಾರವ್ಯಾಪಾರ ಘನವಾಗಿ ಬೆಳೆಯಿತ್ತು. ಅಂತಪ್ಪ ಸಂಸಾರವ್ಯಾಪಾರಿಯಾಗಿ ನಡೆವವನಲ್ಲ ಭಕ್ತನೆಂಬುದೀಗ ' ರವಿಯ ಬೆಳಸ ಬಳಸದೆ ' ಎಂಬ ಶಬ್ದಕ್ಕರ್ಥ. ಶಿವನ ಪಂಚಮುಖದಿಂದೊಗೆದ ಪಂಚತತ್ತ್ವವೆ ಜಗತ್ತೆಂಬುದೀಗ 'ಲಿಂಗ ಬೆಳೆದ ಬೆಳಸೆ'ಂಬ ಶಬ್ದಕ್ಕರ್ಥ. ಅಂತಪ್ಪ ತತ್ತ್ವಪದಾರ್ಥಂಗಳ ಜ್ಞಾನಮುಖದಿಂದ ಲಿಂಗಕ್ಕೆ ಸಮರ್ಪಿಸುತ್ತಿರ್ಪಾತನು ಲಿಂಗಭಕ್ತನೆಂಬುದೀಗ ' ಲಿಂಗ ಬೆಳೆದ ಬೆಳಸ ತಂದು ಜಂಗಮದಲ್ಲಿ ಸಮರ್ಪಿಸುತ್ತಿರ್ಪನು ಲಿಂಗಭಕ್ತ ' ನೆಂಬುದಕ್ಕೆ ಅರ್ಥ. ಅಂತಪ್ಪ ಸದ್ಭಕ್ತನಲ್ಲಿ ಸದಾ ಸನ್ನಿಹಿತವಾಗಿ ಭಿನ್ನವಿಲ್ಲದಿಪ್ಪ ಶಿವನೆಂಬುದೀಗ ' ಆ ಭಕ್ತನಲ್ಲಿ ಗೊಹೇಶ್ವರನಿಪ್ಪ ' ನೆಂಬ ಶಬ್ದಕ್ಕರ್ಥ. ೨೯

**ವ.** ಲಿಂಗಾಭಿಮಾನಿಗೆ ಅಂಗಾಶ್ರಯವಿಲ್ಲ ನೋಡಾ ! ಬಂದುದೇ ಪರಿಣಾಮ, ನಿಂದುದೇ ನಿವಾಸ. ಅದು ಇದು ಎಂಬುದಿಲ್ಲ ಕೂಡಲಚೆನ್ನಸಂಗನ ಶರಣಂಗೆ.

**ಟೀ.** ಪೂಜ್ಯ ಪೂಜಕನೆಂಬೆರಡಾದುದು ಒಂದೆ ವಸ್ತುವೆಂದಱಿದು ಭಿನ್ನಭಾವವಿಲ್ಲದೆ ಶಿವೋಹಂ ಎಂಬಲ್ಲಿ ಶಿವಭಾವ ಘಟಿಸಿ ದಾಸೋಹವ ಮಾಡುತ್ತಿಪ್ಪ ಸದ್ಭಕ್ತನು ದೇಹಸಂಬಂಧಿಯಲ್ಲ. ಆತ ದೇಹವಿಡಿದಿರ್ದಡೆಯೂ ಪರಮ ಪರಿಣಾಮಿ. ಆತನಿದ್ದುದೇ ಕೈಲಾಸ. ಆತಂಗೆ ಇಹಪರವೆಂಬ ಸಂಶಯವಿಲ್ಲ. ಆ ಶರಣನೇ ಲಿಂಗವೆಂಬುದೀ ವಚನದ ತಾತ್ಪರ್ಯಾರ್ಥ. ೩೦

**ವ.** ಆಹ್ವಾನವಿಲ್ಲ ಪ್ರಾಣಲಿಂಗವಾಗಿ. ವಿಸರ್ಜನವಿಲ್ಲ ಲಿಂಗ ನೆಲೆಗೊಂಡಿಪ್ಪುದಾಗಿ. ಇದುಕಾರಣ ಆಹ್ವಾನ ವಿಸರ್ಜನವಿಲ್ಲ. ಶರಣನ ಪರಿಬೇಱೆ. ಅಂಗಸಂಗವೇ ಲಿಂಗಸಂಗ, ಲಿಂಗಸಂಗವೇ ಮನ, ಕೂಡಲಸಂಗನ ಶರಣ ಸುಯಿಧಾನಿ.

**ಟೀ.** ಗುರುಕರುಣದಿಂದ ಲಿಂಗಾಂಗಸಂಬಂಧಿಯಾದ ಶರಣನ ತನು ಮನ ಪ್ರಾಣಂಗಳೆಲ್ಲಾ ಲಿಂಗವಾದವು. ಅಂತು ಲಿಂಗವಾದ ಶರಣ ಲಿಂಗವು ತಾನೆಯೆಂಬ

ಎಚ್ಚ ಱಗುಂದದಿಪ್ಪನು. ಅಂತಪ್ಪ ಶರಣಂಗೆ ಲಿಂಗವ ಬೇಱಿಟ್ಟು ಕರೆಯಲಿಲ್ಲ, ಕಳುಹಲಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೩೧

ವ. ಆಹ್ವಾನಿಸಿ ಕರೆವಲ್ಲಿ ಎಲ್ಲಿರ್ದನೋ, ಈರೇಳುಲೋಕ ಹದಿನಾಲ್ಕು ಭುವನನೊಳಕೊಂಡಿಪ್ಪ ದಿವ್ಯ ವಸ್ತು? ಮತ್ತೆ ವಿಸರ್ಜಿಸಿ ಬಿಡುವಾಗ ಎಲ್ಲಿ ಅಡಗಿರ್ದನೋ, ಮುಳ್ಳೂಱ ತೆಱಹಿಲ್ಲದಿಪ್ಪ ಅಖಂಡವಸ್ತು ? ಬಱಿಯ ಮಾತಿನ ಬಳಕೆಯ [೧]ತೂತಜ್ಞಾನವ[೧] ಬಿಟ್ಟು, ನೆಟ್ಟನೆ ತನ್ನ ಕರಸ್ಥಲದೊಳಗೆ ಇರುತ್ತಿಪ್ಪ ಇಷ್ಟಲಿಂಗವ ದೃಷ್ಟಿಸಿ ನೋಡಲು, ಅಲ್ಲಿ ತನ್ನ ಮನಕ್ಕೆ ಮನಸಂಧಾನವಾದ ದಿವ್ಯ ನಿಶ್ಚಯವೊದಗಿ, ಆ ದಿವ್ಯ ನಿಶ್ಚಯದಿಂದ ಕುಳವಡಗಿ ಅದ್ವೈತವಪ್ಪುದು. ಇದುಕಾರಣ ನಮ್ಮ ಕೂಡಲಸಂಗನ ಶರಣರು ಆಹ್ವಾನ ವಿಸರ್ಜನವೆಂಬವುಭಯ ಜಡತೆಯ ಬಿಟ್ಟು, ತಮ್ಮ ತಮ್ಮ ಕರಸ್ಥಲದಲ್ಲಿ ನಿಶ್ಚಯಿಸಿದರಾಗಿ ಸ್ವಯ ಲಿಂಗವಾದರು ಕಾಣಿ ಭೋ !

ಟೀ. ಲಿಂಗವು ಪೂರ್ಣವೆಂದಱಿಯದೆ ಆಹ್ವಾನ ವಿಸರ್ಜನವೆಂದು ಕರೆದು ಕಳುಹವ, ಹಿಡಿದು ಹಿಂಗುವ ಖಂಡಿತಭಾವವ ಬಿಟ್ಟು, ಅಖಂಡ ಪರಂಜ್ಯೋತಿ ಲಿಂಗವ ಕರಸ್ಥಲದಲ್ಲಿ ಧರಿಸಿ, ಅಭಿನ್ನ ಜ್ಞಾನದಿಂದ ಆಲೋಕಿಸಿ, ತನ್ನ ನಿಜವೆ ಇಷ್ಟಲಿಂಗವೆಂದಱಿದು, ನಿಶ್ಚಯದಿಂದ ಭಿನ್ನಭಾವ ಜಡತೆಯನಳಿದು, ಲಿಂಗವಾಗಿ ಲಿಂಗವ ಭಜಿಸುತ್ತ ದ್ವೈತವಿಲ್ಲದಿಪ್ಪರು ಶರಣರೆಂಬುದೀ ವಚನದ ತಾತ್ಪರ್ಯಾರ್ಥ. ೩೨

ವ. ಜ್ಞಾನವೇ ಪ್ರಸಾದಕಾಯ. ಜ್ಞೇಯವೇ ಚಿನ್ಮಯಲಿಂಗ. ಜ್ಞಾನ ಜ್ಞೇಯಸಂಪುಟದಿಂದ ಶರಣನೆನಿಸಿಕೊಂಡ ಜಂಗಮದ ಅಂತರಂಗದಲ್ಲಿ ನೀನೇ, ಬಹಿರಂಗದಲ್ಲಿ ನೀನೇ. ಎಂತು ನೋಡುವರೆ ಶರಣನ ಕಣ್ಣ ಮೊದಲಲ್ಲಿ ನೀನೇ. ಶಿವಜ್ಞಾನಸಂಪನ್ನನಾದ ಶರಣಂಗೆ ಆಹ್ವಾನ ವಿಸರ್ಜನವೆಲ್ಲಿಯದೋ ಉಱಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ ?

ಟೀ. ಚಿತ್ತುವೆ ಆತ್ಮನೆಂಬಂಗವಾಗಲು ಸತ್ತುವೆ ಲಿಂಗವಾಗಿ ಅಂತಪ್ಪ ಲಿಂಗಾಂಗಸಂಬಂಧದ ಕ್ರೀವಿಡಿದು ಶರಣನೆನಿಸಿಕೊಂಡು ಶಿವಜ್ಞಾನಸ್ವರೂಪನಾಗಿ

೧ ತೂತುಜ್ಞಾನವ (ಎ. ರಾ.)

ಆಚರಿಸುತ್ತಿಪ್ಪ ಶರಣಂಗೆ ಸರ್ವಾಂಗವೆಲ್ಲಾ ಲಿಂಗವಾಗಿಪ್ಪುದಾಗಿ ಆ ಶರಣಂಗೆ ಆಹ್ವಾನ ವಿಸರ್ಜನವ ಮಾಡಲಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೩೨

ವ. ಅಂಗಲಿಂಗಸಂಗವು [೧]ಹಿಂಗದಲ್ಲಿ[೧] ಆಯತವಯ್ಯಾ. ನಿಮಿಷ ಕರ ಸ್ಥಲವ ಹಿಂಗಿದರೆ ಭಂಗವಯ್ಯಾ. ಕಂಗಳೆ ಕರುವಾಗಿ ಲಿಂಗವೆ ಗೂಡಾಗಿ ಲಿಂಗ ನಿಷ್ಪತ್ತಿಯಲಿಪ್ಪ ಕೂಡಲಚೆನ್ನಸಂಗಾ ನಿಮ್ಮ ಶರಣಾ.

ಟೀ. ಆತ್ಮನೆಂಬಂಗವಾದುದೂ ಲಿಂಗವಾದುದೂ ಈ ಎರಡರ ಸಂಗದ ಜ್ಞಾನವಾದುದೂ ಒಂದೇ ಮಹಾಘನಲಿಂಗವಾದ ಕಾರಣ, ಶರಣನು ಕಣ್ಮನ ಕರ ಸ್ಥಲಂಗಳಲ್ಲಿ ಲಿಂಗವ [೨]ಸದಾ ಸನ್ನಹಿತ[೨]ವಾಗಿ ಹಿಂಗದೆ ಧರಿಸಿ, ಲಿಂಗವ ತದಾಕಾರವಾಗಿ ಶರಣನಾಚರಿಸುತ್ತಿಪ್ಪನಾಗಿ ಶರಣನ ಅವಸ್ಥಾತ್ರಯಂಗಳೆಲ್ಲಾ ನಿರಾವಸ್ಥೆಯಪ್ಪ ಲಿಂಗನಿಷ್ಪತ್ತಿಯೆಂಬುದೀ ವಚನದ ತಾತ್ಪರ್ಯಾರ್ಥ. ೩೩

ವ. ಕೂಟದ ತುರಿಯದಲ್ಲಿ ಬೇಟ ಮತ್ತೆರಡಾಗಿ ಆಟವನು ಆಡಿದೆನು ಚಿತ್ರತರದಾ ! ಕೂಟವೂ ಬೇಟವೂ ಆಟ ಮತ್ತೊಂದಾಗಿ ನೋಟಂಗಳನುಮಿಷ ದೃಷ್ಟಿ ನಟ್ಟು ತಾನು ತಾನಾಗೀಗ ಸಾನಂದ ಸಂಬಂಧ, ಆನಂದ ಮುಕ್ತ್ಯಂಗನೈಕ್ಯವಾಗಿ, ಲೋಕದೊಳಗೆಯಿರ್ದು ಲೋಕಿ ತಾನಲ್ಲದೆ ಏಕೈಕನಾದೆ ಕಪಿಲಸಿದ್ಧ ಮಲ್ಲಿಕಾರ್ಜುನನಲ್ಲಿ !

ಟೀ. ತನಗೆ ಅನನ್ಯನು ಶಿವನೆಂಬುದನಱಿಯದೆ ಶಿವನ ಭಿನ್ನವಿಟ್ಟು ಕೂಡಿ ಮುಕ್ತರಾದೆವೆಂಬ ಭಿನ್ನಜ್ಞಾನಿಗಳಿಗೆ ಶಿವನು ಭಿನ್ನವಾಗಿಪ್ಪನೆಂಬುದೀಗ 'ಕೂಟದ ತುರಿಯದಲ್ಲಿ ಬೇಟ ಮತ್ತೆರಡಾಗಿ' ಎಂಬ ಶಬ್ದಕ್ಕರ್ಥ. ಅಂತಪ್ಪ ಭಿನ್ನಜ್ಞಾನದಿಂದ ಶಿವನಲ್ಲಿ ಸಮರಸೈಕ್ಯವಿಲ್ಲದೆ ಫಲ ಪದಂಗಳ ಪಡೆದು, ಮರಳಿ ಭವಕ್ಕೆ ಬಂದು, ಹಲವು ದೇಹಂಗಳ ತೊಟ್ಟು, ಬಹುರೂಪ ನಟಿಸಿ ಚರಿಸಾಡುತ್ತಿರ್ದರೆನೆಂಬುದೀಗ 'ಆಟವನು ಆಡಿದೆನು ಚಿತ್ರತರದಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಭಿನ್ನ ಜ್ಞಾನಕ್ರೀಗಳೆಲ್ಲಾ ಭವಕ್ಕೆ ಕಾರಣವೆಂದಱಿದು ಅವ ಬಿಟ್ಟು, ಅಭಿನ್ನಜ್ಞಾನದಿಂದ ತನ್ನ ನಿಜವೆಲ್ಲಾ ಪರಶಿವಲಿಂಗವೆಂದಱಿದು ಲಿಂಗದಲ್ಲಿ ಅತಿರತಿಯಿಂದ ಮಾಡುವ ಮಾಡಿಸಿಕೊಂಬವೆರಡಾದುದೂ ಒಂದೇ ವಸ್ತುವೆಂಬ ನೈಷ್ಠಿಕಾಭಕ್ತಿ ಘಟಿಸಿತ್ತು ಶರಣಂಗೆಂಬುದೀಗ 'ಕೂಟವೂ ಬೇಟವೂ ಆಟ ಮತ್ತೊಂದಾಗಿ

---

೧ ಲಿಂಗದಲ್ಲಿ (ಎ. ಹು.) ೨ ಸದಾ ಸಂಹಿತ (ರಾ.)

ನೋಟಂಗಳನುಮಿಷ ದೃಷ್ಟಿ ನಟ್ಟು' ಎಂಬ ಶಬ್ದಕ್ಕರ್ಥ. ಅಂತು ಮಾಡುವ ಮಾಡಿಸಿಕೊಂಬವೆರಡಾದುದೂ ಒಂದೇ ವಸ್ತುವೆಂದು ಅಭಿನ್ನಜ್ಞಾನದೃಷ್ಟಿಯಿಂದ ಕಂಡು ದೃಢಭಕ್ತಿ ಘಟಿಸಿತ್ತಾಗಿ ತಾನೆಲ್ಲಾ [೧]ಲಿಂಗಸ್ವರೂಪನೆಯಾಗಿ[೧], ಲಿಂಗಾನಂದ ಸುಖ ದೊರಕಿ, ಲಿಂಗದ ಚಿದಾನಂದ ಸಾಮರ್ಥ್ಯ ಶಕ್ತಿಯೇ ತಾನೆಯಾಗಿರ್ದ ಶರಣನೆಂಬುದೀಗ 'ತಾನು ತಾನಾಗೀಗ ಸಾನಂದ ಸಂಬಂಧ ಆನಂದ ಮುಕ್ತ್ಯಂಗನೈಕ್ಯವಾಗಿ' ಎಂಬ ಶಬ್ದಕ್ಕರ್ಥ. ಅಂತು ಮರ್ತ್ಯಲೋಕದ ದೇಹಿಗಳೊಳಗೆ ದೇಹಿಯಾಗಿರ್ದು ದೇಹಿಯಲ್ಲದೆ ದೇಹವಿಡಿದಿರ್ದಂತೆ ಲಿಂಗವಾಗಿರ್ದ ಶರಣನೆಂಬುದೀಗ 'ಲೋಕದೊಳಗೆ ಇರ್ದು ಲೋಕಿ ತಾನಲ್ಲದೆ ಏಕೈಕನಾದೆ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ' ಎಂಬ ಶಬ್ದಕ್ಕರ್ಥ. ೩೫

ವ. ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯ ಪದಂಗಳ ಬಯಸಿ ಅರ್ಚಿಸಿದಡೆ ಲಿಂಗಸಂಗವಿಲ್ಲ. ಅಂಗ ಅಭ್ಯಂತರದ ಸಂಗವಿಲ್ಲ. ತಾನು ಹಂಗು ಹಱಿದು ಅರ್ಚಿಸುವ ಸಂಗಿಗಳಿಗೆ ಲಿಂಗಸಂಗವಕ್ಕು. ಮಂಗಳಾಂಗನೇ ನಿನ್ನ ಹಂಗಿಲ್ಲದಿರ್ದವರ ಸಂಗ ನಿನ್ನಯ ರೂಪು ಯೋಗಿನಾಥಾ !

ಟೀ. ಚತುರ್ವಿಧ ಫಲಂಗಳು ಮೊದಲಾದ ಫಲಪದಂಗಳ ಬಯಸಿ ಲಿಂಗವ ಪೂಜಿಸುವರಿಗೆ ಲಿಂಗದಲ್ಲಿ ಕೂಟವಿಲ್ಲ. ಸರ್ವ ಫಲಪದಂಗಳ ಬಯಕೆ ಏನೂ ಇಲ್ಲದೆ ಲಿಂಗವ ಬಿಡದೆ ಲಿಂಗಭಕ್ತಿಯ ಮಾಡುವ ಭಕ್ತ ಲಿಂಗವಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೩೬

ವ. ಸಜ್ಜನ ಸದ್ಭಾವಿ ಅನ್ಯರಲ್ಲಿ ಕೈಯಾಂತು ಬೇಡ, ಲಿಂಗವ ಮುಟ್ಟಿದ ಕೈ ಮೀಸಲು, ಕಂಗಳಲ್ಲಿ ಒಸೆದು ನೋಡ ಪರವಧುವ, ಅನ್ಯವ ನೆನೆಯ, ಮಾನವ ಸೇವೆಯ ಮಾಡ, ಲಿಂಗವ ಬಿಡ, ಲಿಂಗದ ಹಂಗನೊಲ್ಲ, ಧನದಲ್ಲಿ ವಂಚನೆಯಿಲ್ಲ ಕೂಡಲಚೆನ್ನಸಂಗಾ ನಿಮ್ಮ ಶರಣ.

ಟೀ. ಶರಣ ಪರಧನ ಪರಸ್ತ್ರೀಯರಿಗೆ ಆಸೆ ಮಾಡುವನಲ್ಲ. ಲಿಂಗವ ಪೂಜಿಸಿ ಫಲಪದಂಗಳ ಬೇಡುವನಲ್ಲ. ಶರಣ ನಿಃಕಾಮ್ಯನಾಗಿ ಲಿಂಗಭಕ್ತಿಯ ಮಾಡುತ್ತಿಹನೆಂಬುದೀ ವಚನದ ತಾತ್ಪರ್ಯಾರ್ಥ. ೩೭

೧ ಲಿಂಗಸ್ವರೂಪೆಯಾಗಿ (ಎ.)

ವ. ಮುತ್ತೂ ನೀರಲಾಯಿತ್ತು, ವಾರಿಕಲ್ಲೂ ನೀರಲಾಯಿತ್ತು, ಉಪ್ಪೂ ನೀರಲಾಯಿತ್ತು. ಉಪ್ಪುಕರಗಿತ್ತು, ವಾರಿಕಲ್ಲೂ ಕರಗಿತ್ತು, ಮುತ್ತು ಕರಗಿದುದನಾರೂ ಕಂಡವರಿಲ್ಲ. ಈ ಸಂಸಾರಿ ಮಾನವರು ಲಿಂಗವ ಮುಟ್ಟಿ ಭವಭಾರಿಗಳಾದರು. ನಾ ನಿಮ್ಮ ಮುಟ್ಟಿ ಕರಿಗೊಂಡೆನಯ್ಯಾ ಚೆನ್ನಮಲ್ಲಿಕಾರ್ಜುನಯ್ಯಾ !

ಟೀ. ತನ್ನ ನಿಜವ ಮಱೆದು ದೇಹಿಗಳಾಗಿಪ್ಪ ಆತ್ಮರುಗಳೊಳಗೆ ದೇಹ ಸಂಸಾರಸುಖಕ್ಕೆ ಮಚ್ಚಿ, ದೇಹಭೋಗವನೆ ಬಯಸಿ, ಲಿಂಗವ ಪೂಜಿಸಿದವರೆಲ್ಲಾ ಮರಳಿ ಭವಕ್ಕೆ ಬರುತ್ತಿಹರು. ಅಂತಪ್ಪ ದೇಹಸುಖಕ್ಕೆ ಮಚ್ಚದೆ ಲಿಂಗದ್ರೋಹಿ ಯಾಗಿ ಲಿಂಗವನೆ ಬಯಸಿ ಭಾವಿಸಿ ಲಿಂಗವಾದರು ಶರಣರೆಂಬುದೀ ವಚನದ ತಾತ್ಪರ್ಯಾರ್ಥ. ೩೮

ವ. ಕುಲವಳಿದು ಛಲವಳಿದು ಮದವಳಿದು ಮತ್ಸರವಳಿದು ಆತ್ಮತ್ರೇಜ ವಳಿದು ಸರ್ವಾಹಂಕಾರವಳಿದು ನಿಜ ಉಳಿಯಿತ್ತು. ಲಿಂಗ ಜಂಗಮ ವೆಂಬ ಶಬ್ದವಿಡಿದು ಸಾಧ್ಯವಾಯಿತ್ತು ನೋಡಾ. ತಾನಳಿದು ತಾನುಳಿದು ಸಹಜ ನಿಜಪದವಿಯಲ್ಲಿ ಕೂಡಲಚೆನ್ನಸಂಗಯ್ಯನಲ್ಲಿ ತಾನು ತಾನಾದ !

ಟೀ. ಸತ್ತು ಚಿತ್ತಾನಂದವಪ್ಪ ಪರಬ್ರಹ್ಮವೆ ಗುರುಲಿಂಗಜಂಗಮಸ್ವರೂಪ ವಾಯಿತ್ತು. ಅಂತಪ್ಪ ಗುರುಲಿಂಗಜಂಗಮವೆ ಇಷ್ಟ ಪ್ರಾಣ ಭಾವಂಗಳೆಂಬ ಲಿಂಗತ್ರಯವಾಗಿ ಭಕ್ತನ ತನುಮನಪ್ರಾಣಂಗಳನೊಳಕೊಂಡು ನೆಲಸಲು ಆ ಭಕ್ತನ ತನುವೇ ಗುರು, ಮನವೇ ಲಿಂಗ, ಪ್ರಾಣವೇ ಜಂಗಮವಾಯಿತ್ತಾಗಿ, ಭಕ್ತಂಗೆ ಕುಲಾಭಿಮಾನ ಮೊದಲಾದ ಅಷ್ಟಮದಂಗಳೆಲ್ಲಾ ನಷ್ಟವಾಗಿ, ಭಕ್ತನು ದೇಹ ಧರ್ಮಕರ್ಮವನುಳ್ಳ ಜೀವತ್ವವಳಿದು ಲಿಂಗವೆಯಾಗಿಪ್ಪ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೩೯

ವ. ಕುಲಮದವೆಂಬುದಿಲ್ಲ, ಅಯೋನಿಸಂಭವನಾಗಿ. ಛಲಮದವೆಂಬು ದಿಲ್ಲ, ಪ್ರತಿದೋಱದಾಗಿ. ಧನಮದವೆಂಬುದಿಲ್ಲ, ತ್ರಿಕರಣಶುದ್ಧನಾಗಿ. ವಿದ್ಯಾಮದವೆಂಬುದಿಲ್ಲ, ಅಸಾಧ್ಯವ ಸಾಧಿಸಿದನಾಗಿ. ಆವ ಮದ ವೆಂಬುದೂ ಇಲ್ಲ, ನೀನವಗ್ರಹಿಸಿದ ಕಾರಣ, ಚೆನ್ನಮಲ್ಲಿಕಾರ್ಜು ನಯ್ಯಾ ನಿಮ್ಮ ಶರಣನು ಅಕಾಯಚರಿತ್ರನಾಗಿ.

ಟೀ. ಕುಲಾಶ್ರಮದ ಧರ್ಮವನುಳ್ಳ ಮಾತಾಪಿತೃಗಳಲ್ಲಿ ಜನಿಸಿದ ಜನನ ಸ್ಥಲವನಳಿದು ಗುರುಕರಜಾತನಾದ ಶರಣಂಗೆ ಕುಲಾಭಿಮಾನದ ಅಹಂಕಾರವಿಲ್ಲ ವೆಂಬುದೀಗ 'ಅಯೋನಿಸಂಭವನಾಗಿ' ಎಂಬ ಶಬ್ದಕ್ಕರ್ಥ. ಅಂತು ಗುರು ಕಾರುಣ್ಯದಿಂದ ಲಿಂಗಾಂಗಸಂಬಂಧಿಯಾದ ಶರಣಂಗೆ ಲಿಂಗವು ಭಿನ್ನವಿಲ್ಲವಾಗಿ, ಲಿಂಗವ ಭಿನ್ನವಿಟ್ಟು ಸಾಧಿಸಿ ಕಂಡೆನೆಂಬ ಛಲಮದವಿಲ್ಲವೆಂಬುದೀಗ 'ಛಲಮದ ವೆಂಬುದಿಲ್ಲ ಪ್ರತಿದೋಱದಾಗಿ' ಎಂಬ ಶಬ್ದಕ್ಕರ್ಥ. ನಿತ್ಯವಸ್ತುವೆಂಬ ಪರಬ್ರಹ್ಮವೇ ತಾನಾಗಿರ್ದನಾಗಿ ಶರಣ ಅನಿತ್ಯವಪ್ಪ ಹೊನ್ನು ಹೆಣ್ಣು ಮಣ್ಣುಗಳು ತನ್ನವೆಂದು ಅಭಿಮಾನಿಸಿಕೊಂಡು ಅಹಂಕರಿಸುವ ಗುಣ ಮನ ವಚನ ಕಾಯದಲ್ಲಿಲ್ಲ ಶರಣಂ ಗೆಂಬುದೀಗ 'ಧನಮದವೆಂಬುದಿಲ್ಲ ತ್ರಿಕರಣಶುದ್ಧನಾಗಿ' ಎಂಬ ಶಬ್ದಕ್ಕರ್ಥ. ಅಂತು ಆರೂ ಸಾಧಿಸಬಾರದ ತೂರ್ಯಾತೀತವಾದ ಪರಬ್ರಹ್ಮವು ಶರಣನ ಭಕ್ತಿಗೆ ಸಾಧ್ಯವಾಗಿ, ಶರಣ ತಾನೇ ಲಿಂಗವಾದನಾಗಿ, ಶರಣಂಗೆ ಇನ್ನು ಜ್ಞಾನದಿಂದ ಮುಕ್ತ ನಾಗಬೇಕೆಂಬ ಜ್ಞಾನವನಭಿಮಾನಿಸಿಕೊಂಡಿಪ್ಪ ಅಹಂಕಾರವಿಲ್ಲದೆ ಹೋಯಿತ್ತೆಂಬು ದೀಗ 'ವಿದ್ಯಾಮದವೆಂಬುದಿಲ್ಲ, ಅಸಾಧ್ಯವ ಸಾಧಿಸಿದನಾಗಿ' ಎಂಬ ಶಬ್ದಕ್ಕರ್ಥ. ಅಂತು ಲಿಂಗವು ಅಂಗವನವಗ್ರಹಿಸಿ, ಅಷ್ಟಮದಂಗಳು ನಷ್ಟವಾಗಿ, ಅಂಗೇಂದ್ರಿ ಯಂಗಳೆಲ್ಲಾ ಲಿಂಗವಾದ ಶರಣನು ದೇಹಿಯಲ್ಲವೆಂಬುದೀಗ 'ಆವ ಮದ ವೆಂಬುದೂ ಇಲ್ಲ ನೀನವಗ್ರಹಿಸಿದ ಕಾರಣ ನಿಮ್ಮ ಶರಣನು ಅಕಾಯಚರಿತ್ರನಾಗಿ' ಎಂಬ ಶಬ್ದಕ್ಕರ್ಥ. ೪೦

ವ. ಆಱಾಱನೆ ಮೀಱಿ, ಮೂಱು ಮತ್ತಾಱಾಗಿ, ಆಱನತಿಗಳೆದನ್ನೈ ನಿಶ್ಚಿಂತದಾ, ತೋಱಿಪ್ಪ ಏಳೆಂಟ ಗಾಱುಮಾಡಿಯೆ ಜಱಿದು ಮೇಲೆ ನಿಂದಾತ ಗುರು ಯೋಗಿನಾಥಾ !

ಟೀ. ಶ್ರೀಗುರು ಕರುಣಿಸಿದ ಇಷ್ಟಲಿಂಗವೇ ತನುತ್ರಯಂಗಳನವಗ್ರಹಿಸಿ ಇಷ್ಟಲಿಂಗ ಪ್ರಾಣಲಿಂಗ ಭಾವಲಿಂಗವೆಂದು ಮೂಱಾಯಿತ್ತು. ಆ ಮೂಱು ಲಿಂಗವೇ ಶರಣನ ಷಡಂಗವನೊಳಕೊಂಡು ಆಚಾರಾದಿ ಮಹಾಲಿಂಗಂಗಳೆಂಬ ಆಱಾಯಿತ್ತೆಂಬುದೀಗ 'ಮೂಱು ಮತ್ತಾಱಾಗಿ' ಎಂಬ ಶಬ್ದಕ್ಕರ್ಥ. ಅಂತು ಅಂಗ ಮನ ಇಂದ್ರಿಯಂಗಳೆಲ್ಲಾ ಲಿಂಗವಾದ ಶರಣಂಗೆ ಪೃಥ್ವಿ ಅಪ್ಪು ತೇಜ ವಾಯು ಆಕಾಶ ಆತ್ಮನೆಂಬ ಆಱು ಅಂಗತತ್ತ್ವಂಗಳ ವಾಸನೆಯಳಿದು ಹೋಯಿ ತ್ತೆಂಬುದೀಗ 'ಆಱನತಿಗಳೆದನ್ನೈ' ಎಂಬ ಶಬ್ದಕ್ಕರ್ಥ. ಅಂತು ತನು ವಾಸನೆ ಯಳಿಯಿತ್ತಾಗಿ ಸಪ್ತವ್ಯಸನಂಗಳು ಅಷ್ಟಮದಂಗಳೆಲ್ಲಾ ನೆಲೆಯಾಗಿ ಹೋದ ವೆಂಬುದೀಗ 'ತೋಱಿಪ್ಪ ಏಳೆಂಟ ಗಾಱುಮಾಡಿಯೆ ಕಳೆದು' ಎಂಬ ಶಬ್ದಕ್ಕರ್ಥ.

ಅಂತು ಲಿಂಗಾಂಗಸಂಬಂಧಿಯಾದ ಶರಣನು ದೇಹವಾಸನೆಯನಳಿದು ಮೂವತ್ತಾಱು ತತ್ತ್ವಂಗಳ ಮೇಲಿಪ್ಪ ಪರಬ್ರಹ್ಮವೆಯಾಗಿ ನಿಶ್ಚಿಂತಪದದಲ್ಲಿ ಸುಖಿಯಾಗಿರ್ದ ಶರಣನೆಂಬುದೀಗ 'ಆಱಾಱನೇ ಮೀಱಿ ನಿಶ್ಚಿಂತದಾ ಮೇಲೆ ನಿಂದಾತ ಗುರು' ವೆಂಬ ಶಬ್ದಕ್ಕರ್ಥ. ೪೧

ವ. ತ್ರಿವಿಧದ ನಿತ್ಯ, ತ್ರಿವಿಧದ ಅನಿತ್ಯ. ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧ ಪ್ರಸಾದವ ಕೊಳಬಲ್ಲಾತನೇ ತ್ರಿವಿಧಪ್ರಸಾದಿಯೆಂಬೆ. ಆತನ ವೀರನೆಂಬೆ, ಧೀರನೆಂಬೆ. ಆತ ಗೊಹೇಶ್ವರ ಲಿಂಗದಲ್ಲಿ ಮಹಾಪ್ರಸಾದಿಯೆಂಬೆ.

ಟೀ. ಗುರುಲಿಂಗಜಂಗಮವೆಂಬ ತ್ರಿವಿಧಲಿಂಗವು ನಿತ್ಯವಸ್ತು. ಹೊನ್ನು ಹೆಣ್ಣು ಮಣ್ಣುಗಳೆಂಬ ತ್ರಿವಿಧವು ಅನಿತ್ಯ. ಅಂತಪ್ಪ ಹೊನ್ನು ಹೆಣ್ಣು ಮಣ್ಣುಗಳೆಂಬ ತ್ರಿವಿಧವ ಗುರು ಲಿಂಗ ಜಂಗಮಕ್ಕರ್ಪಿಸಿ, ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವ ಪಡೆದ ಶರಣನೇ ಮಾಯೆಯ ಜಯಿಸಿದ ವೀರಮಾಹೇಶ್ವರನು. ಆ ವೀರಮಾಹೇಶ್ವರನೇ ಪರವಸ್ತುವೆಂಬ ಮಹಾಪ್ರಸಾದವ ಪಡೆದ ಪ್ರಸಾದಿಯೆಂಬುದೀ ವಚನದ ತಾತ್ಪರ್ಯಾರ್ಥ. ೪೨

ಮಾಹೇಶ್ವರಸ್ಥಲ ಸಂಪೂರ್ಣ

ಅಂತು ಸ್ಥಲ ೧೧ಕ್ಕಂ ಶ್ಲೋಕ ೧೦೬ಕ್ಕಂ ವಚನ ೩೫೭ಕ್ಕಂ
ಮಂಗಳಂ
ಶ್ರೀ

# ೧೨ ಪ್ರಸಾದಿಸ್ಥಲ

*

**ಸೂತ್ರ.** ಇಂತು ಲಿಂಗದಲ್ಲಿ ಅವಿರಳ ಜ್ಞಾನ ನೈಷ್ಠಿಕಾ ಭಕ್ತಿಯಿಂದ ಗುರು ಲಿಂಗ ಜಂಗಮದಲ್ಲಿ ಭಿನ್ನವಳಿದು ತನು ಮನ ಪ್ರಾಣಂಗಳ ನಿವೇದಿಸಿ, ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವ ಪಡೆದ ಮಾಹೇಶ್ವರಂಗೆ ಆ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೆ ಇಷ್ಟ ಪ್ರಾಣ ಭಾವವಾಗಿ, ಆ ಇಷ್ಟ ಪ್ರಾಣ ಭಾವವೇ ಷಡ್ವಿಧಲಿಂಗವಾಗಿ, ಆ ಷಡ್ವಿಧಲಿಂಗವೇ ಸರ್ವಾಂಗಲಿಂಗವಾಗಿ, ಆ ಸರ್ವಾಂಗಲಿಂಗವಾದಲ್ಲಿ ಸರ್ವೇಂದ್ರಿಯ ಸುಖಭೋಗವೆಲ್ಲಾ ಲಿಂಗಭೋಗೋಪಭೋಗವಾಗಿ, ಆ ಲಿಂಗ ಭೋಗೋಪ ಭೋಗವಾದ ದ್ರವ್ಯಪದಾರ್ಥಂಗಳೆಲ್ಲಾ ಪ್ರಸಾದಸ್ವರೂಪವಾಗೆ, ಆ ಪ್ರಸಾದ ಸ್ವರೂಪವೇ ಪರಶಿವತತ್ತ್ವಸ್ವರೂಪು. ಆ ಪರಶಿವತತ್ತ್ವಸ್ವರೂಪಮಪ್ಪ ಪ್ರಸಾದಮಂ ಸೇವಿಸುವ ಪ್ರಸಾದಿಯು ಮುನ್ನವೆ ಪರಶಿವನೆಂದು ತನ್ನ ನಿಜವನಱಿದು, ಸಾವಧಾನ ಭಕ್ತಿಯಿಂದ ಲಿಂಗಾರ್ಪಿತವ ಮಾಡಿ ಪ್ರಸಾದಮಂ ಭೋಗಿಸುತ್ತಿರ್ಪಾತನೇ ಪ್ರಸಾದಿಯೆಂದು ಹೇಳಲಾದುದು.

**ಪ್ರಸಾದಿಸ್ಥಲಕ್ಕೆ ಶ್ಲೋಕ :**

ಲಿಂಗಾರ್ಪಿತ ಪ್ರಸಾದಂಚ ಸುಭೋಗೀ ಲಿಂಗಸಂಯುತಃ
ಅನರ್ಪಿತವಿಸರ್ಜಂ ಚ ಪ್ರಸಾದಿಸ್ಥಲಮುತ್ತಮಂ

**ಟೀ.** ಲಿಂಗಕ್ಕೆ ಸಮರ್ಪಿಸಿದ ಪದಾರ್ಥವನು ಲಿಂಗನೆನಹಿಂದವೆ ಭೋಗಿಸುವುದು. ಅನರ್ಪಿತವ ವಿಸರ್ಜಿಸುವುದು. ಇದೀಗ ಪ್ರಸಾದಿಸ್ಥಲವು. ೧

ಘ್ರಾಣೇನಾಚಾರಲಿಂಗಂ ಚ ಗಂಧಂ ಗೃಹ್ಣಾತಿ ಯತ್ ಸದಾ
ಜಿಹ್ವಯಾ ಗುರುಲಿಂಗಂ ತು ರಸಂ ಗೃಹ್ಣಾತಿ ಯತ್ ಸದಾ
ಚಕ್ಷುಷಾ ಶಿವಲಿಂಗಂ ಚ ರೂಪಂ ಗೃಹ್ಣಾತಿ ಯತ್ ಸದಾ
ತ್ವಚಾ ಜಂಗಮಲಿಂಗಂ ಚ ಸ್ಪರ್ಶಮಾದಾಯ ಸಾದರಂ
ಶ್ರೋತ್ರೇಣ ಶಬ್ದಂ ಗೃಹ್ಣಾತಿ ಪ್ರಸಾದೋ ಲಿಂಗಮೇವ ಚ
ಹೃದಯೇನ ಮಹಾಲಿಂಗಂ ಪರಿಣಾಮಂ ಪ್ರಯಚ್ಛತಿ

**ಟೀ.** ಆಚಾರಲಿಂಗವು ನಾಸಿಕದಿಂದ ಗಂಧವನು ಗ್ರಹಿಸುವುದು. ಗುರುಲಿಂಗವು ಜಿಹ್ವೆಯಲ್ಲಿ ರಸವನು ಗ್ರಹಿಸುವುದು. ಶಿವಲಿಂಗವು ನಯನದಿಂದ ರೂಪವನು ಗ್ರಹಿಸುವುದು. ಜಂಗಮಲಿಂಗವು ತ್ವಕ್ಕಿನಿಂದ ಸ್ಪರ್ಶವನು ಗ್ರಹಿಸುವುದು. ಪ್ರಸಾದಲಿಂಗವು ಶ್ರೋತ್ರದಲ್ಲಿ ಶಬ್ದವನು ಗ್ರಹಿಸುವುದು. ಮಹಾಲಿಂಗವು ಹೃದಯದಲ್ಲಿ ಪರಿಣಾಮವನ್ನು ಗ್ರಹಿಸುವುದು. ೩

ಲಿಂಗದೃಷ್ಟಿರ್ನಿರೀಕ್ಷಾಸ್ಯ ಲಿಂಗಹಸ್ತೋಽಸ್ಯ ಸ್ಪರ್ಶನಂ
ಲಿಂಗಶ್ರೋತ್ರಂ ಚ ಶ್ರುತವಾನ್ ಲಿಂಗಜಿಹ್ವಾರಸಾನ್ನವಾನ್
ಲಿಂಗಘ್ರಾಣಂ ತು ಘ್ರಾಣಂ ಚ ಲಿಂಗಸ್ಯ ವದತೇ ಸಃ
ಲಿಂಗಂ ಮನೋಗತಂ ವಾಽಪಿ ಇತ್ಯೇತೇ ಸಹಭೋಜನಂ

**ಟೀ.** ನೋಡುವುದು ಲಿಂಗದ ನಯನ. ಸ್ಪರ್ಶನವ ಮಾಡುವುದು ಲಿಂಗದ ಹಸ್ತ. ಕೇಳುವುದು ಲಿಂಗದ ಶ್ರೋತ್ರ. ರಸವ ಸ್ವಾದಿಸುವುದು ಲಿಂಗದ ಜಿಹ್ವೆ. ವಾಸನೆಯ ಕೊಂಬುದು ಲಿಂಗದ ನಾಸಿಕ. ನುಡಿವುದು ಲಿಂಗ ತಾನೆ. ಮನವ ಬೆರಸಿದುದು ಲಿಂಗ. ಹೀಂಗೆಂಬ ಭಾವವೇ ಸಹಭೋಜನವೆಂದು ಹೇಳಲ್ಪಟ್ಟುದು. ೫

ಲಿಂಗದೇಹೀ ಶಿವಾತ್ಮಾಯಂ ಲಿಂಗಾಚಾರೋ ನ ಲೌಕಿಕಃ
ಸರ್ವಲಿಂಗಮಯಂ ರೂಪಂ ಲಿಂಗೇನ ಸಮಮಶ್ನುತೇ

**ಟೀ.** ಲಿಂಗದೇಹೀ-ಲಿಂಗಮೂರ್ತಿಯಾಗಿ, ಶಿವಾತ್ಮಾ-ಶಿವಸ್ವರೂಪವಾಗಿ, ಅಯಂ-ಈ ಆತ್ಮನು, ಲಿಂಗಾಚಾರೋ-ಲಿಂಗವಿಷಯವಾದ ಆಚಾರವುಳ್ಳಾತನು, ಲೌಕಿಕಃ-ಲೋಕದ ಬಳಕೆಯವನು, ನ-ಅಲ್ಲ. ಲಿಂಗಮಯಂ-ಲಿಂಗಮಯವಾದ, ಸರ್ವರೂಪಂ-ಸರ್ವರೂಪವನು, ಲಿಂಗೇನ ಸಮಂ-ಲಿಂಗದೊಡನೆ ಕೂಡುವ ಹಾಂಗೆ ಅಶ್ನುತೇ-ಅನುಭವಿಸುತ್ತಿಹನು. ೬

ಸರ್ವಾಂಗಂ ಲಿಂಗಮೇವ ಸ್ಯಾದನ್ನಪಾನಾದ್ಯಮರ್ಪಿತಂ
ಪ್ರಸಾದಸ್ತೃಪ್ತಿರೇವ ಸ್ಯಾತ್ ಸರ್ವಂ ಲಿಂಗಮಯಂ ಭವೇತ್

ಟೀ. ಸರ್ವಾಂಗಂ-ಸರ್ವಾಂಗಲಿಂಗವಾದ ಅಂಗವು, ಲಿಂಗಮೇವ-ಲಿಂಗವೇ, ಸ್ಯಾತ್-ಆಹುದು. ಅನ್ನಪಾನಾದಿ-ಅನ್ನಪಾನ ಮೊದಲಾದವನು, ಅರ್ಪಿತಂ-ಅರ್ಪಿತವ ಮಾಡಿದ, ಪ್ರಸಾದಃ-ಪ್ರಸಾದವು, ತೃಪ್ತಿರೇವ-ತೃಪ್ತಿಯನೆಯಿದುವನೆ, ಸ್ಯಾತ್-ಆಹುದು. ಸರ್ವಂ-ಸಮಸ್ತವು, ಲಿಂಗಮಯಂ-ಲಿಂಗಸ್ವರೂಪವು, ಭವೇತ್-ಆಹುದು. ೭

ಪ್ರಸಾದಿಸ್ಥಲಕ್ಕೆ ವಚನ :

ವ. ಹೊಲೆಯುಂಟೇ ಲಿಂಗವಿದ್ದೆಡೆಯಲ್ಲಿ ? ಕುಲವುಂಟೇ ಜಂಗಮವಿದ್ದೆಡೆಯಲ್ಲಿ ? ಎಂಜಲುಂಟೇ ಪ್ರಸಾದವಿದ್ದೆಡೆಯಲ್ಲಿ ? ಅಪವಿತ್ರದ ನುಡಿಯ ನುಡಿವ ಸೂತಕವೇ ಪಾತಕ. ನಿಃಕಳಂಕ ನಿಜೈಕ್ಯ ತ್ರಿವಿಧ ನಿರ್ಣಯ [೧]ಕೂಡಲಸಂಗಾ[೧] ನಿಮ್ಮ ಶರಣ.

ಟೀ. ಸಾಕಾರವಪ್ಪ ಜೀವಭಾವವಳಿದು ಅಂಗವೆಲ್ಲಾ ಲಿಂಗವೆಯಾದ ಶರಣಂಗೆ ಲಿಂಗಜಂಗಮಪ್ರಸಾದಸಂಗ ಸಮರಸವಾಗಿರ್ದ ಕಾರಣ ಶರಣಂಗೆ ಕುಲಸೂತಕ ಹೊಲೆಸೂತಕ ಎಂಜಲಸೂತಕ ಮೊದಲಾದ ಸೂತಕಂಗಳುಂಟೆಂದು ನುಡಿದರೆ ಪಂಚಮಹಾಪಾತಕವೆಂಬುದೀ ವಚನದ ತಾತ್ಪರ್ಯಾರ್ಥ. ೧

ವ. ಹೋಹ ಬಾಹ ಬಟ್ಟೆಯಲೊಂದು ಮಾಯೆಯಿದ್ದುದ ಕಂಡೆ. ಠಾಣಾಂತರ ಹೇಳಿತ್ತು, ಠಾಣಾಂತರ ಹೇಳಿತ್ತು, ಅಲ್ಲಲ್ಲಿಗೆ ಅಲ್ಲಲ್ಲಿಗೆ ಗೊಹೇಶ್ವರನ ಕರಣಂಗಳು ಕುತಾಪಿಗಳಾದ ಕಾರಣ.

ಟೀ. ಜೀವನು ತಿರುಗಿ ತಿರುಗಿ ಹುಟ್ಟಿ ಹುಟ್ಟಿ ಬರುತ್ತಿಹನು ಭವದ ಬಟ್ಟೆಯಲಿ ಎಂಬುದೀಗ 'ಹೋಹ ಬಾಹ ಬಟ್ಟೆಯಲೊಂದು ಮಾಯೆಯಿದ್ದುದ ಕಂಡೆ' ನೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯೆಯ ಮುಂದುಗೊಂಡಿಪ್ಪ ಜೀವಂಗೆ ಹಲವು ದೇಹಂಗಳಲ್ಲಿ ಎಡೆಗೆಯ್ದು ಎಡೆಗೆಯ್ದು ಬರಬೇಕಾಯಿತ್ತೆಂಬುದೀಗ 'ಠಾಣಾಂತರ ಹೇಳಿತ್ತು ಠಾಣಾಂತರ ಹೇಳಿತ್ತು ಅಲ್ಲಲ್ಲಿಗೆ ಅಲ್ಲಲ್ಲಿಗೆ' ಎಂಬ ಶಬ್ದಕ್ಕರ್ಥ. ಅಂತಪ್ಪ

೧ ಕೂಡಲಚೆನ್ನಸಂಗಾ (ಹು.)

ಹಲವು ದೇಹಂಗಳಲ್ಲಿ ಬಹ ಕಾರಣವೇಕಾಯಿತ್ತೆಂದಡೆ, ಲಿಂಗದಿಂದಾದ ಆತ್ಮ ಮೊದಲಾದ ಸಕಲ ಇಂದ್ರಿಯ ಕರಣಂಗಳು ಸರ್ವವಿಷಯಸುಖಂಗಳ ಕರ್ತೃವಪ್ಪ ಲಿಂಗವ ಭಿನ್ನವಿಟ್ಟು ಭುಂಜಿಸಿದ ಕಾರಣವೆಂಬುದೀಗ 'ಗೊಹೇಶ್ವರನ ಕರಣಂಗಳು ಕುತಾಪಿಗಳಾದ ಕಾರಣ ' ಎಂಬ ಶಬ್ದಕ್ಕರ್ಥ. ೨

ವ. ಬಾರದು ಬಾರದು ಭಕ್ತಂಗೆ ಪರಧನ ಪರಸತಿ ಅನ್ಯಸಂಗ. ಬಾರದು ಬಾರದು ವಿಷಯಿಗೆ ಪಶುಪತಿವ್ರತವು. ಬಾರದು ಬಾರದು ಭವ ಭಾರಿಗೆ ಕೂಡಲಸಂಗಮದೇವರ ಒಕ್ಕುದ ಕೊಳಬಾರದು.

ಟೀ. ಈ ವಚನ ಕಾಣಬಂದರ್ಥ. ೩

ವ. ಹುತ್ತದ ಮೇಲಣ ರಜ್ಜು ಮುಟ್ಟಿದರೆ ಸಾವರು ಸಂಕಿತರಾದವರು. ಸರ್ಪ ಮುಟ್ಟಿದರೆಯೂ ಸಾಯರು ನಿಶ್ಶಂಕಿತರಾದವರು. ಕೂಡಲ ಸಂಗಮದೇವ ಸಂಕಿತಂಗೆ ಪ್ರಸಾದ ಸಿಂಗಿಕಾಳಕೂಟ ವಿಷವು.

ಟೀ. ಈ ವಚನ ಕಾಣಬಂದರ್ಥ. ೪

ವ. ಜೀವವ ತಪ್ಪಿಸಿ ಜೀವಿಸಬಾರದಾಗಿಗೆಯೂ. ಅಹಿಂಸಾ ಪರಮೋ ಧರ್ಮ ಎಂಬ ಶ್ರಾವಕರ ನಾನಾರನೂ ಕಾಣೆ.

ಶ್ಲೋಕ : ಪೃಥ್ವೀಬೀಜಂ ತಥಾ ಮಾಂಸಂ ಅಪ್ ದ್ರವ್ಯಂ ಸುರಾಮಯಂ
ಆತ್ಮಜೀವಸಮಾಯುಕ್ತಂ ಜೀವಂ ಜೀವೇನ ಭಕ್ಷಯೇತ್

ಇಂತೆಂದುದಾಗಿ ಲಿಂಗಾರ್ಪಿತ ಶುದ್ಧ, ಮಿಕ್ಕಿದು ಜೀವಮಯ ಗೊಹೇಶ್ವರಾ.

ಟೀ. ಈ ವಚನ ಕಾಣಬಂದರ್ಥ. ೫

ವ. ಮರ ಗಿಡು ಬಳ್ಳಿ ಧಾನ್ಯಂಗಳ ಬೆಳಸೆಲ್ಲವ ತರಿ ತರಿದು ಪ್ರಾಣವ ಕೊಂದುಂಡು ಶರೀರವ ಹೊರೆವ ದೋಷಕ್ಕೆ ಇನ್ನಾವುದು ವಿಧಿ ಯಯ್ಯ ? ಒಂದಿಂದ್ರಿಯ ಮೊದಲಾಗಿ ಐದಿಂದ್ರಿಯ ಕಡೆಯಾದ ಜೀವಜಾಲವಲ್ಲವೇ ಚರಾಚರವೆಲ್ಲಾ ? ಅದುಕಾರಣ ಕೂಡಲಸಂಗನ ಶರಣರು ಲಿಂಗಕ್ಕರ್ಪಿಸಿ ಪ್ರಸಾದವ ಕೊಂಡು ನಿರ್ದೋಷಿಗಳಾಗಿ ಬದುಕಿದರು.

ಟೀ. ಈ ವಚನ ಕಾಣಬಂದರ್ಥ. ೬

ವ. ನಿಮ್ಮ ಶ್ರೀಪಾದವ ಮುಟ್ಟಿ ಎನ್ನ ಕರ್ಮ ಹಱಿಯಿತ್ತು. ನಿಮ್ಮ ಪ್ರಸಾದದಿಂದ ಭವಗೆಟ್ಟಿತ್ತಯ್ಯಾ! ಮನ ಪರುಷ ದೃಷ್ಟಿ ಪರುಷ ಭಾವ ಪರುಷ ಲಿಂಗಗಣಂಗಳು. ಕೂಡಲಸಂಗಮದೇವ, ನಿಮ್ಮ ಶರಣರ ಅನುಭಾವದಿಂದ ಅನುಪಮ ಸುಖಿಯಾದೆನಯ್ಯಾ !

ಟೀ. ಶ್ರೀಗುರುವಿನ ಪಾದಸೋಂಕು ದೊರೆಕೊಂಡ, ಶಿವಪ್ರಸಾದ ದೊರೆಕೊಂಡ ಶಿವಶರಣರ ಅನುಭಾವದಿಂದ ಅಱಿವು ದೊರೆಕೊಂಡ ಶರಣಂಗೆ ಭವ ಕರ್ಮವಿಲ್ಲ. ಆ ಶರಣ ನಿತ್ಯಾನಂದಸುಖಿಯಾಗಿಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೭

ವ. ಕರ್ಣದ ಸೂತಕ ಹೋಯಿತ್ತು ಸದ್ಗುರುವಿನ ವಚನದಿಂದ. ಕಂಗಳ ಸೂತಕ ಹೋಯಿತ್ತು ಸದ್ಭಕ್ತರ ಕಂಡೆನಾಗಿ. ಕಾಯದ ಸೂತಕ ಹೋಯಿತ್ತು ನಿಮ್ಮ ಚರಣವ ಮುಟ್ಟಿದೆನಾಗಿ. ಬಾಯ ಸೂತಕ ಹೋಯಿತ್ತು ನಿಮ್ಮೊಕ್ಕುದ ಕೊಂಡೆನಾಗಿ. ನಾನಾಸೂತಕ ಹೋಯಿತ್ತು ನಿಮ್ಮ ಶರಣರ ಅನುಭಾವವ ಕೇಳಿದೆನಾಗಿ. ಕೂಡಲಸಂಗಮದೇವಯ್ಯ ಎನ್ನ ಮನದ ಸೂತಕ ಹೋಯಿತ್ತು ನೀವಲ್ಲದನ್ಯವಿಲ್ಲೆಂದಱಿದೆನಾಗಿ.

ಟೀ. ಪಂಚಭೌತಿಕಂಗಳೇ ತನು ಮನ ಧನೇಂದ್ರಿಯಂಗಳಾದುವು. ಆ ತನು ಮನ ಇಂದ್ರಿಯಂಗಳ ವಾಸನೆಯ ಗುರು ಲಿಂಗ ಜಂಗಮದ ದರುಶನ ಸ್ಪರ್ಶನ ಅವರ ಪ್ರಸಾದ ಅವರ ಅನುಭಾವದಱಿವು ಮೊದಲಾದವಱಿಂದ ನೆಲೆಮಾಡಿ ಕಳೆದು, ಶರಣ ತಾನೆಲ್ಲಾ ಲಿಂಗವೆಂದಱಿದು ಮನದ ಸಂಕಲ್ಪ ಸಂಶಯ ಸೂತಕವ ಕಳೆದಿಪ್ಪನು ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೮

ವ. ಮೌನದಲುಂಬುದು ಆಚಾರವೇ ಅಯ್ಯಾ ? ಲಿಂಗಾರ್ಪಿತವ ಮಾಡಿದ ಬಳಿಕ ತುತ್ತಿಗೊಮ್ಮೆ ಶಿವಶರಣೆನುತ್ತಿರಬೇಕು. ಕರಣ ವೃತ್ತಿಗಳಡಗುವವು ಕೂಡಲಸಂಗಮದೇವನ ನೆನೆವುತ್ತ ಉಂಡಡೆ.

ಟೀ. ಈ ವಚನ ಕಾಣಬಂದರ್ಥ. ೯

ವ. ಒಲ್ಲೆನೆಂಬುದು ವೈರಾಗ್ಯ. ಒಲಿವೆನೆಂಬುದು ಕಾಯಗುಣ. ಆವ ಪದಾರ್ಥವಾದರೇನು? ತಾನಿದ್ದೆಡೆಗೆ ಬಂದ ಪದಾರ್ಥವ ಲಿಂಗಾರ್ಪಿತವ ಮಾಡಿ ಭೋಗಿಸುವುದೇ ಆಚಾರ. ಕೂಡಲಸಂಗಮದೇವರ ಒಲಿಸ ಬಂದ ಪ್ರಸಾದಕಾಯವ ಕೆಡಿಸಲಾಗದು.

ಟೀ. ಈ ವಚನ ಕಾಣಬಂದರ್ಥ. ೧೦

ವ. ಹೊನ್ನು ಭಕ್ತನೆಂಬೆನೇ ? ಹೊನ್ನಿನೊಳಗಣ ಮುದ್ರೆ ಭವಿ. ಹೆಣ್ಣು ಭಕ್ತನೆಂಬೆನೇ ? ಹೆಣ್ಣಿನೊಳಗಣ ವಿರಹ ಭವಿ. ಮಣ್ಣು ಭಕ್ತನೆಂಬೆನೇ ? ಮಣ್ಣಿನೊಳಗಣ ಬೆಳಸು ಭವಿ. ಈ ತ್ರಿವಿಧ ಭವಿಯ ಕಳೆದು ಪ್ರಸಾದವ ಮಾಡಿಕೊಳಬಲ್ಲರೆ ಕೂಡಲಚೆನ್ನಸಂಗಯ್ಯನಲ್ಲಿ ಅಚ್ಚಪ್ರಸಾದಿಯೆಂಬೆ.

ಟೀ. ತನು ಮನ ಪ್ರಾಣೇಂದ್ರಿಯಂಗಳೆಲ್ಲಾ ಲಿಂಗವಾಗಿಪ್ಪ ಶರಣನು ಒಲಿದು ನೋಡಿದ ಹೊನ್ನು ಹೆಣ್ಣು ಮೊದಲಾದ ಪದಾರ್ಥಂಗಳೆಲ್ಲಾ ಲಿಂಗರೂಪಪ್ಪವಾಗಿ ಅವಱ ಭವಿತನ ಹೋಹುದು. ಅಂತು ಭವಿತನ ಹೋಗಿ ಲಿಂಗರೂಪಾದ ಪದಾರ್ಥವ ಲಿಂಗಕ್ಕರ್ಪಿಸಿದಡೆ ಪ್ರಸಾದವಪ್ಪುದು. ಅಂತಪ್ಪ ಪ್ರಸಾದವ ಕೊಂಬಾತನೀಗ ಮಹಾಪ್ರಸಾದಿಯೆನಿಸಿಕೊಂಬನೆಂಬುದೀ ವಚನದ ತಾತ್ಪರ್ಯಾರ್ಥ. ೧೧

ವ. ಆಳಿಕಾಱನೆನಗೊಬ್ಬ ಮಗ ಹುಟ್ಟಿದನೆಂದು ಆಳಿಯ ಕೆಡಲೀಸದೆ ನಡೆಸುವನೆಮ್ಮಯ್ಯ. ಪಂಚಭೂತಕಾಯವ ಭವಿಯೆಂದೆನಿಸಲೀದೆ ಪ್ರಸಾದಕಾಯವ ಮಾಡಿ ಸಲಹುವನೆಮ್ಮಯ್ಯ. ಆಳಿ ಸಾವಲ್ಲಿ ಅವ ಧಾನಿಯಾಗಿರ್ದಡೆ ಆಳ್ದನು ನಮ್ಮ ಕೂಡಲಸಂಗಮದೇವ.

ಟೀ. ಶಿವಸಾಮ್ರಾಜ್ಯವನಾಳುವ ಭಕ್ತಿಜ್ಞಾನವನಿತ್ತು ಭಕ್ತರ ಸಲಹುತ್ತಿಪ್ಪಾತನು ಗುರುವಾದ ಕಾರಣ ಶ್ರೀಗುರುವೆಂಬಾತನೀಗ 'ಆಳಿಕಾಱ' ನೆಂಬ ಶಬ್ದಕ್ಕರ್ಥ. ಅಂತಪ್ಪ ಶ್ರೀಗುರುವಿನ ಕರಕಮಲದಲುದಯಿಸಿದ ತಚ್ಛಿಷ್ಯನೆಂಬಾತನೀಗ 'ಮಗ ಹುಟ್ಟಿದನೆ'ಂಬ ಶಬ್ದಕ್ಕರ್ಥ. ಅಂತು ಉದಯಿಸಿದ ಶಿಷ್ಯಂಗೆ ಶ್ರೀಗುರು ತನ್ನ ಒಡೆತನ ಕೆಡದ ಹಾಂಗೆ ಆ ಶಿಷ್ಯನ ಪಂಚಭೂತ ಕಾಯವನಳಿದು, ಲಿಂಗಾಂಗ ಸಂಬಂಧಿಯ ಮಾಡಿ, ಲಿಂಗಕಾಯವೆನಿಸಿ, ಭವಿತ್ವವ ಕಳೆದು ಭಕ್ತನೆಂದೆನಿಸಿ, ಶಿವಕ್ರೀಯಲ್ಲಿ ನಡೆಸಿ ಸಲಹಿದಾತ ಗುರುವಾದ ಕಾರಣ 'ಆಳಿಯ ಕೆಡಲೀಯದೆ

ನಡೆಸುವನೆಮ್ಮಯ್ಯ. ಪಂಚಭೂತಕಾಯವ ಭವಿಯೆಂದೆನಿಸಲೀಯದೆ ಪ್ರಸಾದ ಕಾಯವ ಮಾಡಿ ಸಲಹುವನೆಮ್ಮಯ್ಯ'ನೆಂಬ ಶಬ್ದಕ್ಕರ್ಥ. ಪ್ರಸಾದಕಾಯವೆಂದರೆ ಲಿಂಗಕಾಯ. ಅಂತು ಲಿಂಗಕಾಯವಾದ ಭಕ್ತನು ಆ ಲಿಂಗಕಾಯ ಸುಖಭೋಗಂಗಳ ಲಿಂಗಕ್ಕರ್ಪಿಸುವ ಸಾವಧಾನವ ಮಱೆಯದೆ ಅರ್ಪಿಸುವ ಭಾವ ದೇಹಾಂತ್ಯದಲ್ಲಿಯೂ ಇರ್ದಡೆ ಆ ಶರಣ ಲಿಂಗವಪ್ಪನೆಂಬುದೀಗ 'ಅಳಿ ಸಾವಲ್ಲಿ ಅವಧಾನಿಯಾಗಿರ್ದೊಡೆ ಆಳ್ದನು ನಮ್ಮ ಕೂಡಲಸಂಗಮದೇವ' ನೆಂಬ ಶಬ್ದಕ್ಕರ್ಥ. ೧೨

**ವ.** ರೂಪಾಗಿ ಬಂದುದ ಕಾಯದ ಕೈಯಲ್ಲಿ ಕೊಡುವುದು. ರುಚಿಯಾಗಿ ಬಂದುದ ಪ್ರಾಣದ ಕೈಯಲ್ಲಿ ಕೊಡುವುದು. ತೃಪ್ತಿಯಾಗಿ ಬಂದುದ ಭಾವದ ಕೈಯಲ್ಲಿ ಕೊಡುವುದು. ಅರ್ಪಿಸುವ ತೆಱನಿದು ಪ್ರಸಾದಿಗಯ್ಯಾ.

ಗ್ರಂಥ : ಇಷ್ಟಾರ್ಪಿತಂ ತು ರೂಪಂ ಚ ರುಚಿಃ ಪ್ರಾಣಸಮರ್ಪಿತಾ
ತೃಪ್ತಿರ್ಭಾವಸಮಾಯುಕ್ತಾ ಅರ್ಪಿತಂ ತ್ರಿವಿಧೋಚ್ಯತೇ

ಈ ರೂಪು ರುಚಿ ತೃಪ್ತಿಗಳನಱಿದು ಕೊಡಬಲ್ಲ ಕೂಡಲ ಚೆನ್ನಸಂಗಯ್ಯನಲ್ಲಿ ಮಹಾಪ್ರಸಾದಿ.

**ಟೀ.** ಈ ವಚನ ಕಾಣಬಂದರ್ಥ. ೧೩

**ವ.** ನಿಮ್ಮಲ್ಲಿ ಸನ್ನಹಿತವಲ್ಲದ ತನುವಿನ ಭಿನ್ನಭಾವವ ನಾನೇನ ಹೇಳುವೆನಯ್ಯಾ ? ಲಿಂಗಭಿನ್ನಭಾವವಾದ ಮನವಿನ ಭಿನ್ನಭಾವವಾದ ತನುವಿನ ಅನ್ಯಯದಲ್ಲಿ ಅರ್ಪಿತವಾಯಿತ್ತು. ಎನ್ನಲ್ಲಿ ಅನುದಿನ ಅಗಲದಿರು ಕೂಡಲಚೆನ್ನಸಂಗಯ್ಯಾ, ಎನ್ನ ಪ್ರಾಣನಾಥಾ !

**ಟೀ.** ಲಿಂಗಕ್ಕೆ ದೇಹಸಂಬಂಧವೆಂದೂ ಇಲ್ಲ. ಅಂತು ದೇಹಸಂಬಂಧವಿಲ್ಲದಿರ್ದ ಲಿಂಗದ ಚಿದಂಗವೆ ಆತ್ಮನಾಯಿತ್ತು. ಅಂತಪ್ಪ ಚಿದಾತ್ಮಂಗೆ ಮಿಥ್ಯಾದೇಹ ಸಂಬಂಧಿಸಿ, ಆ ದೇಹದ ಅಜ್ಞಾನಭಾವ ತನ್ನ ನಿಜವ ಮಱೆಸಿರ್ದುದ ಶಿವಜ್ಞಾನಿ ಶರಣ ನೋಡಿ ಆಶ್ಚರ್ಯಂಬಡುತ್ತಿರ್ದನೆಂಬುದೀಗ 'ನಿಮ್ಮಲ್ಲಿ ಸನ್ನಹಿತವಿಲ್ಲದ ತನುವಿನ ಭಿನ್ನಭಾವವ ನಾನೇನ ಹೇಳುವೆನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ತಾನು ಲಿಂಗವೆಂಬುದ ಮಱೆಸಿ, ಅಜ್ಞಾನವ ಪುಟ್ಟಿಸಿ, ಭಿನ್ನ ಜೀವಭಾವ ಘಟಿಸಿತ್ತು ದೇಹ ಕರಣಂಗಳಿಂದ. ಅಂತಪ್ಪ ದೇಹಕರಣಂಗಳನಳಿದು, ಮುನ್ನಿ

ನಂತೆ ಲಿಂಗವಾದೆನೆಂಬಾತಂಗೆ ಆ ದೇಹಕರಣ ಇಂದ್ರಿಯಂಗಳನು ಕ್ರೀಯಿಂದ ಲಿಂಗಕ್ಕರ್ಪಿಸಿದಲ್ಲದೆ ಲಿಂಗವಾಗಬಾರದಾರಿಗೆಯೂ. ಅದುಕಾರಣ ಲಿಂಗವೆಂದು ಪದಾರ್ಥವೆಂದು ಅರ್ಪಿತವೆಂದು [1]ಎಡೆಬಿಡುಹಾದ[1] ಭಿನ್ನವೆಲ್ಲಾ ದೇಹ ಕರಣಂಗಳಿಂದ ಆಯಿತ್ತೆಂಬುದೀಗ 'ಲಿಂಗಭಿನ್ನಭಾವವಾದ ಮನವಿನ ಭಿನ್ನಭಾವವಾದ ತನುವಿನ ಅನ್ಯಯದಲರ್ಪಿತವಾಯಿತ್ತು' ಎಂಬ ಶಬ್ದಕ್ಕರ್ಥ. ಅಂತಪ್ಪ ಮಿಥ್ಯಾದೇಹ ಸಂಬಂಧ ಎರಡೆಂದೂ ಇಲ್ಲದಂತೆ ಮಾಡಿ ಎನ್ನ ಪ್ರಾಣಸ್ವರೂಪವೆಲ್ಲಾ ಲಿಂಗ ನೀನೆಯಾಗಿ ಅಗಲದಿಪ್ಪ ಪ್ರಸನ್ನ ಪ್ರಸಾದವ ಕರುಣಿಸೆಂದು ಬಿನ್ನೈಸಿದರು ಶರಣರೆಂಬುದೀಗ 'ಎನ್ನಲ್ಲಿ ಅನುದಿನ ಅಗಲದಿರು ಕೂಡಲಚೆನ್ನಸಂಗಯ್ಯ ಎನ್ನ ಪ್ರಾಣನಾಥಾ' ಎಂಬ ಶಬ್ದಕ್ಕರ್ಥ. ೧೪

ವ. ಅರ್ಪಿತಂಗಳನಾಱು ಮುಖದಲ್ಲಿ ಮಾಡಬಲ್ಲರೆ ಕಲ್ಪಿತಂಗಳು ಹೊದ್ದಲಮ್ಮವು. ಅರ್ಪಿತವಳವಡದ ಭೇದ ಮರಳಿತ್ತು [2]ಚಿಮ್ಮಲಿಗೆಯ[2] ಚೆನ್ನರಾಮನೆಂಬ ಲಿಂಗದಲ್ಲಿ.

ಟೀ. ಈ ವಚನ ಕಾಣಬಂದರ್ಥ. ೧೫

ವ. ಲಿಂಗಮುಖವನಱಿದಂಗೆ ಅಂಗವೆಂಬುದಿಲ್ಲ. ಜಂಗಮಮುಖವನಱಿದಂಗೆ ಸಂಸಾರವೆಂಬುದಿಲ್ಲ. ಪ್ರಸಾದಮುಖವನಱಿದಂಗೆ ಇಹಪರವೆಂಬುದಿಲ್ಲ. ಈ ತ್ರಿವಿಧ ಒಂದೆಂದಱಿದವಂಗೆ ಮುಂದೆ ಏನೂ ಇಲ್ಲ. ಈ ತ್ರಿವಿಧದ ನೆಲೆಯ ಶ್ರುತಿ ಸ್ಮೃತಿಗಳಱಿಯವು ಕೂಡಲಚೆನ್ನಸಂಗಾ, ನಿಮ್ಮ ಶರಣ ಬಲ್ಲ !

ಟೀ. ಒಂದೆಯಾಗಿರ್ದ ಮಹಾಘನಲಿಂಗವು ತಾನೆ ತನ್ನ ಲೀಲೆಯಿಂದ ಲಿಂಗವೆಂದು ಅಂಗವೆಂದು ಎರಡಾಯ್ತು. ಅಂತು ಎರಡಾದ ಭೇದವನಱಿದು, ಭಿನ್ನಭಾವವಳಿದು, ತನು ಕರಣೇಂದ್ರಿಯಂಗಳೆಲ್ಲಾ ಲಿಂಗವಾಗಿ ಲಿಂಗಾರ್ಪಿತವ ಮಾಡಬಲ್ಲ ಶರಣಂಗೆ ದೇಹವಾಸನೆಯಿಲ್ಲವೆಂಬುದೀಗ 'ಲಿಂಗಮುಖವನಱಿದಂಗೆ ಅಂಗವೆಂಬುದಿಲ್ಲ' ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗದ ಕಳಾಚೈತನ್ಯವೆಲ್ಲಾ ಜಂಗಮಸ್ವರೂಪವೆಂಬುದನಱಿದು, ಅರ್ಥಪ್ರಾಣಾಭಿಮಾನಂಗಳು ಜಂಗಮದ ಸೊಮ್ಮೆಂದಱಿದು, ಜಂಗಮಕ್ಕರ್ಪಿಸುತ್ತ ಅವರಲ್ಲಿ ನಿರ್ವಂಚಕನಾಗಿ, ನಿರಹಂಭಾವಿಯಾಗಿಪ್ಪ ಶರಣಂಗೆ ಮಾಯಾದೇಹಸಂಸಾರಸಂಬಂಧವಿಲ್ಲವೆಂಬುದೀಗ 'ಜಂಗಮ

೧ ಎಡೆಬಿಡವಾದ (ಹು.)   ೨ ನಿಮ್ಮಲಿಗೆಯ (ಎ.)

ಮುಖವನಱಿದಂಗೆ ಸಂಸಾರವಿಲ್ಲ ' ಎಂಬ ಶಬ್ದಕ್ಕರ್ಥ. ಪ್ರಸಾದವೆಂದಡೆ ಪರವಸ್ತು. ಆ ಪರವಸ್ತುವೇ ಲಿಂಗಜಂಗಮಸ್ವರೂಪವಾಯಿತ್ತೆಂದಱಿದು, ಆ ಲಿಂಗಜಂಗಮಕ್ಕರ್ಪಿಸಿದ ಪದಾರ್ಥಂಗಳೆಲ್ಲಾ ಪರಮಪ್ರಸಾದವಾಯಿತ್ತೆಂದಱಿದು ಪ್ರಸಾದಿಯಾದ ಶರಣಂಗೆ ಹುಟ್ಟುಹೊಂದಿಲ್ಲ ಆ ಶರಣ ಪರಬ್ರಹ್ಮವೆಯಾಗಿಪ್ಪನೆಂಬುದೀಗ ' ಪ್ರಸಾದಮುಖವನಱಿದಂಗೆ ಇಹಪರವೆಂಬುದಿಲ್ಲ ' ವೆಂಬ ಶಬ್ದಕ್ಕರ್ಥ. ಅಂತು ಲಿಂಗಜಂಗಮಪ್ರಸಾದವೆಂಬ ತ್ರಿವಿಧವು ಒಂದೇ ಪರಬ್ರಹ್ಮವೆಂದಱಿದು ಪ್ರಸಾದಿಯಾದ ಪ್ರಸಾದಿಯು ಪರಬ್ರಹ್ಮವಾದನಾಗಿ ಪರಬ್ರಹ್ಮವ ಬೇಱಿಟ್ಟಱಸಲಿಲ್ಲದೆ ಹೋಯಿತ್ತೆಂಬುದೀಗ ' ಈ ತ್ರಿವಿಧ ಒಂದೇ ಎಂದಱಿದಂಗೆ ಮುಂದೆ ಏನೂ ಇಲ್ಲ ' ವೆಂಬ ಶಬ್ದಕ್ಕರ್ಥ. ಅಂತು ಸತ್ತು ಚಿತ್ತಾನಂದಮಪ್ಪ ಪರಬ್ರಹ್ಮವೇ ಲಿಂಗಜಂಗಮಪ್ರಸಾದವೆಂಬ ವರ್ಮವನಱಿದು ಕೂಡುವ ಭಕ್ತಿಯೋಗವ ಸಮ್ಯಗ್ಜ್ಞಾನಿಯಾದ ಶರಣ ಬಲ್ಲನಲ್ಲದೆ ಉಳಿದ ವೇದಾಗಮಂಗಳಱಿಯವೆಂಬುದೀಗ ' ಈ ತ್ರಿವಿಧದ ನೆಲೆಯು ಶ್ರುತಿ ಸ್ಮೃತಿಗಳಱಿಯವು ಕೂಡಲ ಚೆನ್ನಸಂಗಾ ನಿಮ್ಮ ಶರಣ ಬಲ್ಲ ' ನೆಂಬ ಶಬ್ದಕ್ಕರ್ಥ. ೧೬

ವ. ನಡೆ ಚೆನ್ನ, ನುಡಿ ಚೆನ್ನ, ಎಲ್ಲಿ ನೋಡಿದಡಲ್ಲಿ ಚೆನ್ನ ! ಪ್ರಮಥರೊಳಗೆ ಚೆನ್ನ, ಪುರಾತರೊಳಗೆ ಚೆನ್ನ, ಪ್ರಸಾದಿಗಳೊಳಗೆ ಚೆನ್ನ ! ಸವಿದು ನೋಡಿ ಅಂಬಲಿ ರುಚಿಯಾಯಿತ್ತೆಂದು ಕೂಡಲಸಂಗಮದೇವರಿಗೆ ಬೇಕಾಯಿತ್ತೆಂದು ಕಯ್ದುಗೆದ ನಮ್ಮ ಚೆನ್ನ!

ಟೀ. ವೇದ ಶಾಸ್ತ್ರಾಗಮಂಗಳು ಹೇಳಿದ ಕ್ರಿಯೋಕ್ತವಾಗಿ ಮಾಡಿದ ಪೂಜಾ ನೈವೇದ್ಯಂಗಳಲ್ಲಿ ಶಿವನು ಸಂತುಷ್ಟನಲ್ಲ. ಸದ್ಭಕ್ತರು ಎಂತು ಮಾಡಿದ ಪೂಜಾ ನೈವೇದ್ಯಂಗಳಲ್ಲಿ ಶಿವನು ಸಂತುಷ್ಟನು. ಅದುಕಾರಣ ಸರ್ವೇಂದ್ರಿಯ ಸುಖಂಗಳ ಶಿವಲಿಂಗಕ್ಕರ್ಪಿಸಬಲ್ಲ ಸದ್ಭಕ್ತರ ಕ್ರಿಯಾಚಾರವೆಂತಿರ್ದಡೆಯೂ ಶಿವಂಗೆ ಒಪ್ಪು. ಅಂತು ಶಿವನೊಪ್ಪಿದುದೇ ಚೆನ್ನ. ಅದುಕಾರಣ ಶಿವನೊಪ್ಪಿದ ಮಾದರಚೆನ್ನಯ್ಯ ಚೆನ್ನಾದ ರುದ್ರಗಣಂಗಳೊಳಗೆಂಬುದೀ ವಚನದ ತಾತ್ಪರ್ಯಾರ್ಥ. ೧೭

ವ. ಲೋಕದ ಹೊಲೆ ಉದಕದಿಂದ ಹೋಹುದೆಂಬರು. ಉದಕದ ಹೊಲೆ ಏತಱಿಂದ ಹೋಹುದು ? ವಾಕುಪ್ರಮಾಣಿನಿಂದ ಅಗ್ಘಣಿಯೆನಿಸಿತ್ತು. ಸಾಹಿತ್ಯವಱಿದುಕೊಳಬಲ್ಲರೆ ಚೆನ್ನನ ಪ್ರಸಾದ ಲಿಂಗಕ್ಕೋಗರವಾಯಿತ್ತು ಕೂಡಲಚೆನ್ನಸಂಗಮದೇವಾ !

೭೯. ಲೋಕದ ಮನುಜರು ಹೊಲೆಯೆಂಬ ಸೂತಕವ ಜಲದಿಂದ ಕಳೆಯ ಬಲ್ಲರಲ್ಲದೆ, ಜಲವೆಂಬ ಭೌತಿಕಸೂತಕವ ಕಳೆಯಲರಿಯರು. ಲಿಂಗಾಂಗ ಸಂಬಂಧಿಯಾಗಿರ್ದ ಶಿವಭಕ್ತರು ಲಿಂಗಹಸ್ತಸ್ಪರ್ಶನ ವಾಕು ಶೀಲಂಗಳಿಂದ ಭೌತಿಕಜಲವೆಂಬ ಭವಿತ್ವಸೂತಕದ ಪಾತಕವನಳಿದು ಲಿಂಗಕ್ಕೆ ಅಗ್ಘಣಿಯೆಂದು ಮಾಡಿದರಾಗಿ, ಲಿಂಗಮಜ್ಜನ ಮೊದಲಾದ ಲಿಂಗಾರ್ಪಿತಕ್ಕೆ ಸಲುವ ಪದಾರ್ಥ ವಾಯಿತ್ತು ಆ ಭಕ್ತರ ಮುಖದಿಂದ. ಅದುಕಾರಣ ಲಿಂಗಸಾಹಿತ್ಯವಾಗಿರ್ದ ಲಿಂಗಶರಣರು ಸರ್ವೇಂದ್ರಿಯ ಸುಖಂಗಳನೆಲ್ಲಾ ಲಿಂಗಮುಖದಿಂದವೆ ಅರಿ ದರಿದು ರೂಪು ರುಚಿ ತೃಪ್ತಿಗಳನರ್ಪಿಸುವರು. ಅದೆಂತೆಂದಡೆ : ರೂಪಾಗಿ ಬಂದುದು ಕಾಯದ ಕೈಯಲ್ಲಿ ಇಷ್ಟಕ್ಕೆ ಕೊಡಲು ಶುದ್ಧಪ್ರಸಾದವಾಯಿತ್ತು. ಅಂತಾದ ಶುದ್ಧಪ್ರಸಾದವ ಶರಣ ತಾನು ಭುಂಜಿಸುತ್ತ ಶುದ್ಧಪ್ರಸಾದದ ರುಚಿಯ ನರಿದು ಪ್ರಾಣಲಿಂಗಕ್ಕೆ ಅರ್ಪಿಸಲು ಸಿದ್ಧಪ್ರಸಾದವಾಯಿತ್ತು. ಆ ಸಿದ್ಧಪ್ರಸಾದ ವನಾ ಶರಣ ಸವಿದು ಭಾವಲಿಂಗಕ್ಕೆ ಕುಡಲು ಪ್ರಸಿದ್ಧಪ್ರಸಾದವಾಯಿತ್ತು. ಆ ಪ್ರಸಿದ್ಧಪ್ರಸಾದವ ಕೊಂಡು ಶರಣ ತೃಪ್ತನಾದನಾಗಿ ಮಹಾಪ್ರಸಾದಿಯೆನಿಸಿದ. ಅಂತು ಲಿಂಗಾಂಗಸಂಬಂಧಿಯಾಗಿ ಲಿಂಗದಲ್ಲಿ ಭಿನ್ನವಳಿದಿಪ್ಪ ಶರಣನ ಸರ್ವಾಂಗ ವೆಲ್ಲವೂ ಲಿಂಗವೆಯಾಗಿ ಲಿಂಗಕ್ಕೆ ಅರ್ಪಿಸುತಿಹನಾಗಿ ಶರಣ ನೋಡಿದ ರೂಪು, ಮುಟ್ಟಿದ ಸ್ಪರ್ಶನ, ಕೇಳಿದ ನಾದ, ವಾಸಿಸಿದ ಗಂಧ, ರುಚಿಸಿದ ಸವಿಯೆಲ್ಲವೂ ಪ್ರಸಾದ. ಅಂತಪ್ಪ ಪ್ರಸಾದವ ಶರಣ ಸವಿದು ಮರಳಿ ಲಿಂಗಕ್ಕರ್ಪಿಸಲು ಲಿಂಗವು ಆ ಶರಣನ ಪ್ರಸಾದವ ಪದಾರ್ಥವಾಗಿ ಸವಿದು ತೃಪ್ತನಾದನೆಂಬುದೀ ವಚನದ ತಾತ್ಪರ್ಯಾರ್ಥ. ೧೮

ವ. ಜಂಗಮವಾರೋಗಿಸಿ ಮಿಕ್ಕುದು ಲಿಂಗಕ್ಕೋಗರ. ಲಿಂಗವಾರೋಗಿಸಿ ಮಿಕ್ಕುದು ಪ್ರಸಾದ. ನೀಡಬಹುದು ಜಂಗಮಮುಖದಲ್ಲಿ. ಅರ್ಪಿತ ವಾದುದು ಓಗರವಾಯಿತ್ತು. ಲಿಂಗಮುಖದಲ್ಲಿ ಪ್ರಸಾದವಾಯಿತ್ತು. ಅದೆಂತೆಂದಡೆ :

ಸಾಕ್ಷಿ : ಕಾಳಿಕಾಖಾಂಡೇ

ಜಂಗಮೇ ಸರ್ವವಸ್ತೂನಿ ಸಮರ್ಪ್ಯ ಸುವಿಚಾರತಃ
ತದ್ದ್ರವ್ಯಂ ಚ ಪದಾರ್ಥೋಕ್ತಂ ತತ್ಪದಾರ್ಥಂ ಚ ಲಿಂಗಕೇ
ನಿವೇದಿತ ಪ್ರಸಾದಂ ಚ ಭೋಜಯೇತ್ ತತ್ಪದಂ ಸುಧೀಃ

ಇಂತೆಂದುದಾಗಿ ಕೂಡಲಚೆನ್ನಸಂಗಯ್ಯಾ ನಿನಗೆಯೂ ಎನಗೆಯೂ ಜಂಗಮಪ್ರಸಾದವೇ ಪ್ರಾಣವಯ್ಯಾ.

ಟೀ. ಈ ವಚನ ಕಾಣಬಂದರ್ಥ. ೧೯

ವ. ವಿಶ್ವವೆಲ್ಲವೂ ಮಾಯೆಯ ವಶವಾಗಿ, ವಿಶ್ವದೊಳಗಾದ ದ್ರವ್ಯ ಮಾಯೋಚ್ಛಿಷ್ಟವೆಂದು ಶಿವನೊಲ್ಲ. ಅಂತಪ್ಪ ಮಾಯೆಯ ಗೆಲಿದು ಮಾಯಾತೀತವಾದ ಭಕ್ತರಿಂದೊದಗಿದ ಪ್ರಸಾದ ಮಾಯಾತೀತವಾದ ಶಿವಂಗೆ ಮಹಾ ನೈವೇದ್ಯ, ಪರಮತೃಪ್ತಿ ಎಂಬುದ ನಾ ಬಲ್ಲೆನಯ್ಯಾ ಅದೆಂತೆಂದೊಡೆ :

ಗ್ರಂಥ :

ಮಾಯೋಚ್ಛಿಷ್ಟಂ ಜಗತ್ ಸರ್ವಂ ಶುದ್ಧಂ ಪಂಚಾಕ್ಷರೇಣ ಚ
ಅಭಿಮಂತ್ರ್ಯ ತದುಚ್ಛಿಷ್ಟಂ ಪದಾರ್ಥಂ ಭಕ್ತಿಮಾನ್ ನರಃ
ಚರಲಿಂಗೇ ವಿಚಾರೇಣ ಸಮರ್ಪ್ಯ ತದನಂತರಂ
ಸ್ವಲಿಂಗೇ ಚ ಪ್ರಸಾದಾನ್ನಂ ದತ್ವಾ ಭೋಜನಮಾಚರೇತ್

ಎಂದುದಾಗಿ ಚೆನ್ನಯ್ಯನುಂಡು ಮಿಕ್ಕುದ ಚಪ್ಪಿಱಿದು ಸವಿದ, ಚೋಳಿಯಕ್ಕನೊಕ್ಕುದ ಕೊಂಡ. ಅದುಕಾರಣ ನಿಮ್ಮ ಪರಮ ಕಲಾರೂಪನಾದ ಜಂಗಮಪ್ರಸಾದವ ನಿಮಗೆ ದಣಿಯಿತ್ತು, ನಿಮ್ಮ ಪ್ರಸಾದವೆಂಬ ಜ್ಯೋತಿ ಎನ್ನಂಗ ಪ್ರಾಣ ಭಾವ ಜ್ಞಾನವ ಹಿಂಗದೆ ಬೆಳಗುತ್ತಿರ್ದೆ ನೋಡಾ ಕೂಡಲಚೆನ್ನಸಂಗಮದೇವಾ !

ಟೀ. ಈ ಸಾಕ್ಷೀ ಗ್ರಂಥವೇ ಈ ವಚನದ ತಾತ್ಪರ್ಯಾರ್ಥ. ೨೦

ವ. ಕಂಗಳು ನೋಡಿದ ಪದಾರ್ಥ ಲಿಂಗಾರ್ಪಿತವಲ್ಲ. ಕಿವಿಗಳು ಕೇಳಿದ ಪದಾರ್ಥ ಲಿಂಗಾರ್ಪಿತವಲ್ಲ. ನಾಸಿಕ ಮುಟ್ಟಿದ ಪದಾರ್ಥ ಲಿಂಗಾರ್ಪಿತವಲ್ಲ. ಜಿಹ್ವೆ ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲ. ತನು ಸೋಂಕಿದ ಪದಾರ್ಥ ಲಿಂಗಾರ್ಪಿತವಲ್ಲ. ಸಂಕಲ್ಪ ವಿಕಲ್ಪ ವಿರಹಿತನಾಗಿ ರೂಪು ರುಚಿ ಗಂಧ ಸ್ಪರ್ಶನ ಶಬ್ದವನು ಕೂಡಲಚೆನ್ನ ಸಂಗಯ್ಯಾ ನೀನಱಿಯಲು ಪ್ರಸಾದವೆನಗೆ.

ಟೀ. ತನುಭೋಗ ವಿಷಯಸುಖಂಗಳ ಪಂಚೇಂದ್ರಿಯಂಗಳಿಂದ ತಾನ ಱಿದು ಭುಂಜಿಸಿದ ಬಳಿಕ ಲಿಂಗಕ್ಕೆ ಅರ್ಪಿತವೆಂದಡೆ ಅದು ಲಿಂಗಕ್ಕೆ ಅರ್ಪಿತ ವಾಗದು. ಅಂತು ಲಿಂಗಕ್ಕೆ ಅರ್ಪಿತವಾಗದಾಗಿ ಪ್ರಸಾದವಿಲ್ಲ. ಅಂತು ಇಂದ್ರಿಯ ಮುಖಂಗಳಲ್ಲಿ ಬಂದ ಪದಾರ್ಥಂಗಳು ಲಿಂಗಕ್ಕೆ ಅರ್ಪಿತವಾಗದು. ಆಯಿತ್ತೆಂಬ ಸಂಕಲ್ಪ ವಿಕಲ್ಪವಿಲ್ಲದೆ ತನು ಮನ ಪ್ರಾಣೇಂದ್ರಿಯಂಗಳೆಲ್ಲಾ ಲಿಂಗವೆಯಾಗಿ, ಸರ್ವಸುಖಂಗಳ ಲಿಂಗವೆ ಅಱಿದು ಭೋಗಿಸುತ್ತಿಪ್ಪ ಲಿಂಗದ ವರ್ಮವ ತಿಳಿದು, ಅಭಿನ್ನಭಾವ ಘಟಿಸಿದ ಶರಣಂಗೆ ಪ್ರಸಾದ ಸಾಧ್ಯವಾಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೨೧

ವ. ಪಂಚೇಂದ್ರಿಯ ಮುಖದಲ್ಲಿ ಅಲ್ಲಲ್ಲಿ ತಾಗಿದ ಸುಖವ ಸುಖಿಸಿ ಲಿಂಗಾ ರ್ಪಿತವೆಂಬರು. ಅದು ಲಿಂಗಾರ್ಪಿತವೇ? ಅಲ್ಲಲ್ಲ. ಅರ್ಪಿತವ ಮಾಡದೆ ಅನರ್ಪಿತವ ಹೊದ್ದದೆ ಅರ್ಪಿಸಬೇಕು. ಅರ್ಪಿಸುವ ಭೇದವುಳ್ಳನ್ನಕ್ಕರ ಶರಣನೆನಿಸಬಾರದು ಕೂಡಲಚೆನ್ನಸಂಗಯ್ಯಾ.

ಟೀ. ಪಂಚವಿಷಯ ಪದಾರ್ಥಂಗಳ ಪಂಚೇಂದ್ರಿಯ ಮುಖದಲ್ಲಿ ಮನಃ ಕರಣಂಗಳು ತುಡುಕಿ ಸುಖಿಸಿದ ಬಳಿಕ ಎಂಜಲಾಯಿತ್ತಾಗಿ ಆ ಸುಖವು ಲಿಂಗ ಕ್ಕರ್ಪಿತವಾಗದು. ಅಂತು ಲಿಂಗಕ್ಕೆ ಅರ್ಪಿತವಾಗದೆಯಿದ್ದ ಅನರ್ಪಿತವ ಶರಣ ಭುಂಜಿಸಲೆ ಆಗದು. ಅದುಕಾರಣ ಲಿಂಗವ ಭಿನ್ನವಿಟ್ಟು ಅರ್ಪಿಸಿಹೆನೆಂಬಾತಂಗೆ ಎಂದೆಂದಿಗೆಯೂ ಲಿಂಗಕ್ಕರ್ಪಿತವಿಲ್ಲವೆಂಬುದನಱಿದು, ಲಿಂಗದಲ್ಲಿ ಭಿನ್ನಭಾವ ವಳಿದು, ತನ್ನನ ಲಿಂಗಕ್ಕೆ ಅರ್ಪಿಸಿ ತಾನೆಲ್ಲಾ ಲಿಂಗವೆಯಾಗಿ ಕಾಣುತ್ತಿರ್ಪ ಶರಣನ ಮುಖದಲ್ಲಿ ಲಿಂಗಕ್ಕರ್ಪಿತವಹುದಲ್ಲದೆ ಎರಡಿಟ್ಟು ಅರ್ಪಿಸುವಾತಂಗೆ ಶರಣಪದ ವಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೨೨

ವ. ಕೊಟ್ಟುದು ಸೂತಕ, ಮುಟ್ಟಿದುದು ಸೂತಕ, ಕೊಟ್ಟುಕೊಂಬುದೆ ಸೂತಕ ಲಿಂಗನಿಜೈಕ್ಯಂಗೆ. ಎಲೆ ಕೂಡಲ ಚೆನ್ನಸಂಗಯ್ಯಾ ಲಿಂಗ ನಾನೆಂಬುದೇ ಸೂತಕ !

ಟೀ. ಭೌತಿಕಸೂತಕವ ಶಿವಭಾವದಿಂದ ಶುದ್ಧವ ಮಾಡಿ, ಲಿಂಗಕ್ಕೆ ಅರ್ಪಿ ಸಲಱಿಯದೆ ಜೀವಭಾವದಿಂದ ಲಿಂಗಕ್ಕರ್ಪಿಸಿದಡೆ ಅರ್ಪಿತವಾಗದು, ಭೌತಿಕ ಸೂತಕ ಹೋಗದೆಂಬುದೀಗ 'ಕೊಟ್ಟುದು ಸೂತಕ' ವೆಂಬ ಶಬ್ದಕ್ಕರ್ಥ. ಅಂತಪ್ಪ ದ್ರವ್ಯಂಗಳನು ಇಂದ್ರಿಯಂಗಳು ಮುಟ್ಟಿ ಕೊಡುವಲ್ಲಿ ಇಂದ್ರಿಯಂಗಳ ಎಂಜಲಾದ ವೆಂಬುದೀಗ 'ಮುಟ್ಟಿದುದು ಸೂತಕ' ವೆಂಬ ಶಬ್ದಕ್ಕರ್ಥ. ಅಂತು ಭೌತಿಕ

ಸೂತಕವನುಳ್ಳಂಥಾ ಇಂದ್ರಿಯೋಚ್ಛಿಷ್ಟವಾದಂಥಾ ದ್ರವ್ಯಂಗಳ ಭಿನ್ನಭಾವದಿಂದ ಲಿಂಗಕ್ಕೆ ಕೊಟ್ಟು, ಅರ್ಪಿತವಾಯಿತ್ತೆಂದು, ಪ್ರಸಾದವಾಯಿತ್ತೆಂದು ಕೊಂಡಾತಂಗೆ ಭೌತಿಕದೇಹಸೂತಕವೆಂದೆಂದೂ ಹಿಂಗದೆ ಇಹುದೆಂಬುದೀಗ 'ಕೊಟ್ಟು ಕೊಂಬುದೇ ಸೂತಕ' ವೆಂಬ ಶಬ್ದಕ್ಕರ್ಥ. ಅಂತು ಲಿಂಗ ನಾನೆಂದು ಎರಡಿಟ್ಟು ಅರ್ಪಿಸುವ ಭಿನ್ನಭಾವಿಗಳಿಗೆ ಜನನ ಮರಣಂಗಳ ಸೂತಕ ಹಿಂಗದೆಂಬುದೀಗ 'ಲಿಂಗ ನಾನೆಂಬುದೇ ಸೂತಕ' ವೆಂಬ ಶಬ್ದಕ್ಕರ್ಥ. ಅಂತು ಭಿನ್ನಭಾವದಿಂದ ಕೊಟ್ಟು ಕೊಂಬುದು ಸೂತಕವೆಂದು ಕಳೆದಿಪ್ಪನು ಲಿಂಗದಲ್ಲಿ ಭಿನ್ನವಳಿದು ಲಿಂಗ ವಾಗಿರ್ದ ಶರಣನು ಎಂಬುದೀಗ 'ಕೊಟ್ಟು ಕೊಂಬುದೇ ಸೂತಕ ಲಿಂಗನಿಜೈಕ್ಯಂಗೆ' ಎಂಬ ಶಬ್ದಕ್ಕರ್ಥ. ೨೩

ವ. ಶಬ್ದವೆಂಬೆನೇ ? ಶ್ರೋತ್ರದೆಂಜಲು. ಸ್ಪರ್ಶನವೆಂಬೆನೇ ? ತ್ವಕ್ಕಿನೆಂಜಲು. ರೂಪೆಂಬೆನೇ ? ನೇತ್ರದೆಂಜಲು. ರುಚಿಯೆಂಬೆನೇ ? ಜಿಹ್ವೆಯೆಂಜಲು. ಗಂಧವೆಂಬೆನೇ ? ಘ್ರಾಣದೆಂಜಲು. ನಾನೆಂಬೆನೇ ? ಅರುಹಿನೆಂಜಲು. ಎಂಜಲೆಂಬ ಭಿನ್ನಸೂತಕವಳಿದುಳಿದು ಬೆಳಗಿನ ಬೆಳಗು ಗುಹೇಶ್ವರಾ ನಿಮ್ಮ ಶರಣ !

ಟೀ. ತಾನು ಭಿನ್ನಜೀವನಾಗಿ ಪಂಚೇಂದ್ರಿಯಂಗಳಿಂದ ವಿಷಯಸುಖಂಗಳ ನರುಹಿದು ಭುಂಜಿಸಿದ ಬಳಿಕ, ಆ ಉಚ್ಛಿಷ್ಟವಾದ ಸುಖಂಗಳನೆಲ್ಲವ ಲಿಂಗಕ್ಕರ್ಪಿಸಿಹೆನೆಂದರೆ ಅರ್ಪಿತವಾಗದು. ಅದುಕಾರಣ ತಾನೆಂಬ ಅಹಂಭಾವವನುಳ್ಳ ಜೀವ ನಾದುದೆಲ್ಲಾ ಅರುವಿಂಗೆ ಬಂದ ಮರವೆಯು ಸೂತಕ. ಅಂತು ಜೀವನಾಗಿಪ್ಪ ಮರವೆಯು ಭಿನ್ನಸೂತಕವ ಮಹಾಪ್ರಕಾಶವನುಳ್ಳ ಲಿಂಗಸಂಗದಿಂದಳಿದು ಹೋಗಿ ಸರ್ವಾಂಗವೆಲ್ಲಾ ಲಿಂಗವಾದನು ಶರಣನು. ಅಂತಾದ ಶರಣನು ತಾನು ಮುನ್ನ ಆ ಮಹಾಲಿಂಗದ ಚಿತ್ಪ್ರಭಾಕಲಾಂಶಿಕನು. ಅದುಕಾರಣ ಸರ್ವಾಂಗಲಿಂಗಮಯ ವಾದ ಶರಣನು ನೋಡಿದ, ಮುಟ್ಟಿದ ಪದಾರ್ಥಂಗಳೆಲ್ಲಾ ಲಿಂಗಸ್ವರೂಪುಗಳಾಗಿ ಲಿಂಗಕ್ಕರ್ಪಿತವಾಗುತ್ತಿಹವೆಂಬುದೀ ವಚನದ ತಾತ್ಪರ್ಯಾರ್ಥ. ೨೪

ವ. ಕಾಯವಿಡಿದು ಭಕ್ತಿಯ ಮಾಡುವರಲ್ಲದೆ ಭಕ್ತಿವಿಡಿದು ಭಕ್ತಿಯ ಮಾಡುವವರಾರೂ ಇಲ್ಲ. ಅರ್ಪಿತವಂತಿರಲಿ, ಅನರ್ಪಿತವೆ ಲೇಸು! ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣ ಮಾಡುವುದೆಲ್ಲಾ ಅನರ್ಪಿತ !

ಟೀ. ಕಾಮ್ಯಾರ್ಥದಿಂದ ಭಕ್ತಿಯೆ ಒಂದು ಕಾಯವಾಗಿ, ಲಿಂಗವ ಭಜಿಸಿ, ಲಿಂಗದಲ್ಲಿ ಫಲಪದವ ಪಡೆದು ಭೋಗಿಸಿ ತೀರಿದ ಬಳಿಕ ಭವಕ್ಕೆ ಬರುತ್ತಿಹರು

ಅನಂತರುಂಟಲ್ಲದೆ, ತನ್ನಾತ್ಮನೇ ಅಂಗ, ಆ ಆತ್ಮಾಂಗದ ಚೈತನ್ಯವಪ್ಪ ಪರಬ್ರಹ್ಮವೇ ಲಿಂಗ, ಅಂತಪ್ಪ ಲಿಂಗಾಂಗವೆರಡಱ ಕೂಟವೇ ಭಕ್ತಿಯೆಂದಱಿದು ಭಿನ್ನಭಾವ ವಳಿದು, ಮಾಡುವ ಮಾಡಿಸಿಕೊಂಬವೆರಡೂ ಲಿಂಗವೆಯೆಂದು ಭಕ್ತಿಯ ಮಾಡುವ ಭಕ್ತರು ಅಪೂರ್ವವೆಂಬುದೀಗ 'ಕಾಯವಿಡಿದು ಭಕ್ತಿಯ ಮಾಡುವರಲ್ಲದೆ, ಭಕ್ತಿ ವಿಡಿದು ಭಕ್ತಿಯ ಮಾಡುವರಾರೂ ಇಲ್ಲ' ವೆಂಬ ಶಬ್ದಕ್ಕರ್ಥ. ಅಂತು ಲಿಂಗವ ಭಿನ್ನವಿಟ್ಟು ಲಿಂಗಕ್ಕರ್ಪಿತವ ಮಾಡಿದರೆ ಜನನ ಮರಣ ಉಂಟೆಂದಱಿದು, ಲಿಂಗವ ಭಿನ್ನವಿಟ್ಟು ಅರ್ಪಿತವ ಮಾಡಿದರೆ ಅಖಂಡಚೈತನ್ಯಕಳಾಲಿಂಗವು ಇಷ್ಟ ಪ್ರಾಣ ಭಾವವಾಗಿ ಸರ್ವಾಂಗವನೊಳಕೊಂಡು ಶರಣನೆಲ್ಲಾ ಲಿಂಗವೆಯಾಗಿಪ್ಪ ಲಿಂಗದ ಅಭಿನ್ನತೆಯನಱಿದು ಭಿನ್ನಭಾವವಳಿದಿಪ್ಪನಾ ಶರಣನು. ಅಂತಪ್ಪ ಶರಣನ ಅಂಗಭೋಗಂಗಳನೆಲ್ಲವ ಲಿಂಗವೆ ಲೇಸಾಗಿ ಭೋಗಿಸುತ್ತಿಪ್ಪ ಕಾರಣ ಆ ಶರಣನು ಲಿಂಗವ ಭಿನ್ನವಿಟ್ಟು ಅರ್ಪಿತವ ಮಾಡನು. ಅಂತು ಲಿಂಗವ ಭಿನ್ನವಿಟ್ಟು ಅರ್ಪಿತವ ಮಾಡದಿಹುದೇ ಅನರ್ಪಿತವೆನಿಸಿಕೊಂಬುದು. ಅದೀಗ 'ಅರ್ಪಿತವಂತಿರಲಿ, ಅನರ್ಪಿತವೆ ಲೇಸು' ಎಂಬ ಶಬ್ದಕ್ಕರ್ಥ. ಅಂತು ಅಭಿನ್ನಕ್ರಿಯಾರ್ಪಣವೇ ಲಿಂಗಕ್ಕೆ ಲೇಸಾದ ಅರ್ಪಿತವೆಂದು, ಎರಡಿಟ್ಟು ಅರ್ಪಿಸುವ ಭಿನ್ನ ಕ್ರಿಯಾರ್ಪಣವ ಬಿಟ್ಟು ಆಚರಿಸಿದರು ಬಸವಾದಿ ಪುರಾತನರು ಎಂಬುದೀಗ 'ಕೂಡಲಚೆನ್ನಸಂಗಯ್ಯ ನಲ್ಲಿ ಬಸವಣ್ಣ ಮಾಡುವುದೆಲ್ಲಾ ಅನರ್ಪಿತ' ವೆಂಬ ಶಬ್ದಕ್ಕರ್ಥ. ೨೫

ವ. ಅರ್ಪಿತ ರೌರವನರಕವೆಂದಿತ್ತು ಗುರುವಚನ. ಅನರ್ಪಿತ ರೌರವ ನರಕವೆಂದಿತ್ತು ಗುರುವಚನ. ಭುಂಜನೆಯ ಮಾಡಿದ ರುಚಿಯ ಲಿಂಗಕ್ಕೆಂಬ ಕರ್ಮಿಯ ತಾಗಿದ ಸೋಂಕಿದ ಸುಖವ ಲಿಂಗಕ್ಕೆಂಬ ಗುರುದ್ರೋಹಿಯ, ಲಿಂಗಭಾಜನದಲ್ಲಿ ಶರಣ ಸಹಭೋಜನವ ಮಾಡಿದರೆ ಇಹಪರವಿಲ್ಲೆಂದುದು ಕೂಡಲಚೆನ್ನಸಂಗಮದೇವಾ.

೬೦. ಭಿನ್ನಜ್ಞಾನದಿಂದ ಲಿಂಗವ ಭಿನ್ನವಿಟ್ಟು ಪದಾರ್ಥವನರ್ಪಿಸಿದರೆ ಫಲಪದಭೋಗವುಂಟು. ಆ ಫಲಪದಭೋಗ ತೀರಿದಡೆ ಮರಳಿ ಭವಹೇತುವಪ್ಪ ನರಕವುಂಟೆಂಬುದು ಗುರುವಚನಪ್ರಮಾಣವೆಂಬುದೀಗ 'ಅರ್ಪಿತ ರೌರವನರಕ ವೆಂದಿತ್ತು ಗುರುವಚನ' ಎಂಬ ಶಬ್ದಕ್ಕರ್ಥ. ಅಂತು ಲಿಂಗಕ್ಕರ್ಪಿಸದೆ ಇದ್ದ ಜೀವನು ಎಂದೆಂದೂ ನರಕಿಯೆಂಬುದು ಗುರುವಚನಪ್ರಮಾಣವೆಂಬುದೀಗ 'ಅನರ್ಪಿತ ರೌರವನರಕವೆಂದಿತ್ತು ಗುರುವಚನ' ಎಂಬ ಶಬ್ದಕ್ಕರ್ಥ. ಅಂತು ಜೀವಭಾವದಿಂದ ದೇಹೇಂದ್ರಿಯ ವಿಷಯಸುಖಂಗಳನಱಿದು ಭುಂಜಿಸಿದ ಬಳಿಕ ಆ ಎಂಜಲಾದ ಸುಖವ ಲಿಂಗಕ್ಕರ್ಪಿತವೆಂಬಾತನಿಗೆ ಭವದುಃಖ ಕರ್ಮ ಬಿಡದು.

ಆತ ಗುರುಮತಕ್ಕೆ ದೂರವೆಂಬುದೀಗ 'ಭುಂಜನೆಯ ಮಾಡಿದ ರುಚಿಯು ಲಿಂಗಕ್ಕೆಂಬ ಕರ್ಮಿಯ ತಾಗಿದ ಸೋಂಕಿದ ಸುಖವ ಲಿಂಗಕ್ಕೆಂಬ ಗುರುದ್ರೋಹಿಯು' ಎಂಬ ಶಬ್ದಕ್ಕರ್ಥ. ಅಂತಪ್ಪ ಭಿನ್ನಕ್ರಿಯೆಯುಳಿದು ಗುರು ಲಿಂಗಾಂಗಸಂಬಂಧವ ಮಾಡಿದ ಭೇದವನಱಿದು, ಲಿಂಗದಲ್ಲಿ ಭಿನ್ನವಳಿದಿಪ್ಪ ಶರಣನ ಸರ್ವಾಂಗವೆಲ್ಲಾ ಲಿಂಗಕಾಯವಾಗಿ, ಆ ಕಾಯದ ಸುಖಭೋಗಂಗಳನೆಲ್ಲಾ ಲಿಂಗಮುಂತಾಗಿಯೆ ಭೋಗಿಸುತ್ತಿರ್ಪನಾಗಿ ಶರಣ ಲಿಂಗಭೋಗೋಪಭೋಗಿಯೆಂಬುದೀಗ 'ಲಿಂಗ ಭಾಜನದಲ್ಲಿ ಶರಣ ಸಹಭೋಜನವ ಮಾಡಿದ'ನೆಂಬ ಶಬ್ದಕ್ಕರ್ಥ. ಅಂತು ಲಿಂಗದಲ್ಲಿ ಭೇದವಳಿದು, ಲಿಂಗಭೋಗೋಪಭೋಗಿಯಾಗಿಪ್ಪ ಶರಣಂಗೆ ಇಹದ ಬಂಧನವಿಲ್ಲ, ಪರದ ಮೋಕ್ಷವಿಲ್ಲ. ಆ ಶರಣ ಪರಬ್ರಹ್ಮವೆಯಪ್ಪನೆಂಬುದೀಗ 'ಸಹಭೋಜನವ ಮಾಡಿದರೆ ಇಹಪರವಿಲ್ಲ' ಎಂಬ ಶಬ್ದಕ್ಕರ್ಥ. ೨೬

**ವ.** ಅರ್ಪಿತ ಅನರ್ಪಿತವನಾರು ಬಲ್ಲರಯ್ಯಾ? ಅರ್ಪಿಸಿ ಕೊಂಬುದು ಅನರ್ಪಿತ. ಅರ್ಪಿಸದೆ ಕೊಂಬುದು ಅನರ್ಪಿತ. ಅರ್ಪಿಸಿ ಅರ್ಪಿಸದೆ ಕೊಳಬಲ್ಲ ಗೊಹೇಶ್ವರಾ ನಿಮ್ಮ ಪ್ರಸಾದಿ.

**ಟೀ.** ಜೀವಭಾವ ಹಿಂಗದೆ ಲಿಂಗವ ಭಿನ್ನವಿಟ್ಟು ಅರ್ಪಿಸೆನೆಂಡಡೆ ಅದು ಲಿಂಗಕ್ಕೆ ಅರ್ಪಿತವಾಗದಾಗಿ ಅದು ಅನರ್ಪಿತ. ಲಿಂಗಕ್ಕೆ ಅರ್ಪಿಸದೆ ಕೊಂಬುದು ಮುನ್ನವೆ ಅನರ್ಪಿತವೆಂಬುದೀಗ 'ಅರ್ಪಿಸಿ ಕೊಂಬುದು ಅನರ್ಪಿತ, ಅರ್ಪಿಸದೆ ಕೊಂಬುದು ಅನರ್ಪಿತ'ವೆಂಬ ಶಬ್ದಕ್ಕರ್ಥ. ಮತ್ತೆಂತೆಂದೊಡೆ: ಲಿಂಗಕ್ಕೆ ತನ್ನನೆ ಅರ್ಪಿಸಬೇಕು. ಅಂತು ತನ್ನನೆ ಲಿಂಗಕ್ಕೆ ಅರ್ಪಿಸಿದೊಡೆ ತಾನೆಲ್ಲಾ ಪ್ರಸಾದಸ್ವರೂಪನಪ್ಪನು. ಅಂತಪ್ಪ ಪ್ರಸಾದಸ್ವರೂಪವೇ ಲಿಂಗವಾದ ಕಾರಣ 'ಲಿಂಗವಾದ'ನೆಂಬ ಶಬ್ದಕ್ಕರ್ಥ. ಅಂತು ತನ್ನನರ್ಪಿಸಿ ತಾನೆಲ್ಲಾ ಲಿಂಗವಾದ ಶರಣನು ಲಿಂಗವ ಭಿನ್ನವಿಟ್ಟು ಅರ್ಪಿಸನೆಂಬುದೀಗ 'ಅರ್ಪಿಸಿ ಅರ್ಪಿಸದೆ' ಎಂಬ ಶಬ್ದಕ್ಕರ್ಥ. ಅಂತು ಲಿಂಗವ ಭಿನ್ನವಿಟ್ಟು ಅರ್ಪಿಸದೆ ಲಿಂಗಭೋಗೋಪಭೋಗಿಯಾಗಿರಬಲ್ಲ ಶರಣನೇ ಶಿವಪ್ರಸಾದಿಯೆಂಬುದೀಗ 'ಅರ್ಪಿಸಿ ಅರ್ಪಿಸದೆ ಕೊಳಬಲ್ಲ ಗೊಹೇಶ್ವರಾ ನಿಮ್ಮ ಪ್ರಸಾದಿ' ಎಂಬ ಶಬ್ದಕ್ಕರ್ಥ. ೨೭

**ವ.** ಪದವು ಪದಾರ್ಥವೆಂದೆಂಬಿರಿ. ಪದವಾವುದು, ಪದಾರ್ಥವಾವುದೆಂದಱಿಯಿರಿ. ಪದವೇ ಲಿಂಗ, ಪದಾರ್ಥವೇ ಭಕ್ತ. ಇದಱಿದರ್ಪವ ತಂದು ಲಿಂಗಾರ್ಪಿತವ ಮಾಡಬಲ್ಲರೆ ಕೂಡಿಕೊಂಡಿಪ್ಪ ನಮ್ಮ ಕೂಡಲಚೆನ್ನಸಂಗಮದೇವ.

ಟೀ. ಸಕಲ ತತ್ತ್ವಂಗಳ ಮೇಲಿಪ್ಪ ಮಹಾಘನಲಿಂಗವೇ ಪರಮಪದವೆಂಬುದೀಗ ‘ ಪದವೆ ಲಿಂಗ ’ ವೆಂಬ ಶಬ್ದಕ್ಕರ್ಥ. ಅಂತಪ್ಪ ಮಹಾಘನಲಿಂಗದ ಚಿದಂಶವೇ ಆತ್ಮನೆಂಬ ಅಂಗವಾಯಿತ್ತು. ಅಂತಾದ ಆತ್ಮಾಂಗ ತಾನೆಂದಱಿದು, ತನ್ನಾತ್ಮಾಂಗವು ಲಿಂಗಸಂಬಂಧವಾಗಿ ಹಿಂಗದೆ ಇಪ್ಪ ಅಭಿನ್ನಜ್ಞಾನಕ್ರಿಯಾನ್ವಯವನಱಿದು ಭೇದವ ತಿಳಿದಿರ್ಪಾತನೇ ಭಕ್ತನೆಂಬುದೀಗ ‘ ಪದಾರ್ಥವೇ ಭಕ್ತ ’ ನೆಂಬ ಶಬ್ದಕ್ಕರ್ಥ. ಅಂತು ಅಭಿನ್ನಜ್ಞಾನದಿಂದ ಭಿನ್ನವಳಿದು ಲಿಂಗವು ತಾನೆಂಬ ಅಹಂಭಾವ ತಲೆದೋಱಲು ಆ ತೋಱುವ [೧]ಪ್ರಾಣಜ್ಞಾನವೆಲ್ಲಾ[೧] ಲಿಂಗದ ಗುಣಧರ್ಮವೆಂದು ಲಿಂಗಕ್ಕೆ ಆರೋಪಿಸಿ ಲಿಂಗವೆಯಾಗಿರಬಲ್ಲಡೆ ಲಿಂಗಾರ್ಪಿತವಾಯಿತ್ತು. ಅಂತಪ್ಪ ಲಿಂಗಾರ್ಪಿತವ ಮಾಡಬಲ್ಲ ಶರಣನಲ್ಲಿ ಲಿಂಗವು ಭಿನ್ನವಿಲ್ಲದಿರ್ಪನೆಂಬುದೀಗ ‘ ಇದಱ ದರ್ಪವ ತಂದು ಲಿಂಗಕ್ಕರ್ಪಿತವ ಮಾಡಬಲ್ಲರೆ ಕೂಡಿಕೊಂಡಿಪ್ಪ ನಮ್ಮ ಕೂಡಲಚೆನ್ನಸಂಗಮದೇವ ’ ನೆಂಬ ಶಬ್ದಕ್ಕರ್ಥ. ೨೮

ವ. ಸ್ಥಲದಿಂದ ಸ್ಥಲವನರ್ಪಿಸುವುದು ಒಡಲ ಗುಣ. ನಿಃಸ್ಥಲದಿಂದ ನಿಃಸ್ಥಲವನರ್ಪಿಸುವುದು ಪ್ರಾಣನ ಗುಣ. ನೋಡಿ ಆರೈವುದೇ ಅರ್ಪಿತದ ಗುಣ. ಇಂಥ [೨]ಮಹಂತರ[೨] ತೋಱ ಬದುಕಿಸಯ್ಯಾ ಕೂಡಲಚೆನ್ನಸಂಗಮದೇವಾ !

ಟೀ. ಅಂಗಸ್ಥಲಸ್ವರೂಪವೇ ಪಂಚತತ್ತ್ವಸ್ವರೂಪಾಗಿಪ್ಪ ಕಾರಣ, ಆ ಪಂಚತತ್ತ್ವಸ್ವರೂಪು ಪದಾರ್ಥವ ಕಾಯದ ಕೈಯಿಂದ ಇಷ್ಟಲಿಂಕ್ಕರ್ಪಿಸಿ, ದೇಹವಾಸನೆಯನುಳಿಯಬೇಕೆಂದೀಗ ‘ ಸ್ಥಲದಿಂದ ಸ್ಥಲವನರ್ಪಿಸುವುದು ಒಡಲಗುಣ ’ ವೆಂಬ ಶಬ್ದಕ್ಕರ್ಥ. ಅಂತಪ್ಪ ಪಂಚತತ್ತ್ವ ಪದಾರ್ಥಂಗಳ ರೂಪಿನೊಳಗಣ ರುಚಿಯ ಪ್ರಾಣನ ಕೈಯಿಂದ ಪ್ರಾಣಲಿಂಗಕ್ಕೆ ಅರ್ಪಿಸಿ, ವಾಯುಪ್ರಾಣವನಳಿದು ಲಿಂಗಪ್ರಾಣವಪ್ಪುದೆಂಬುದೀಗ ‘ ನಿಃಸ್ಥಲದಿಂದ ನಿಃಸ್ಥಲವನರ್ಪಿಸುವುದು ಪ್ರಾಣನ ಗುಣ ’ ವೆಂಬ ಶಬ್ದಕ್ಕರ್ಥ. ಅಂತು ರೂಪು ರುಚಿಗಳ ಲಿಂಗಕ್ಕರ್ಪಿಸುವಲ್ಲಿ ಅಭಿನ್ನಭಾವದೃಷ್ಟಿಯಿಂದ ಲಿಂಗವನಾಲೋಕಿಸುತ್ತ ಹಿಂಗದೆ ಸಾವಧಾನಿಯಾಗಿ ಲಿಂಗಾರ್ಪಿತಂಗಳ ಮಱೆಯದಿರ್ದಡೆ ಲಿಂಗಾರ್ಪಿತವಹುದೆಂಬುದೀಗ ‘ ನೋಡಿ ಆರೈವುದೇ ಅರ್ಪಿತಗುಣ ’ ವೆಂಬ ಶಬ್ದಕ್ಕರ್ಥ. ಅಂತು ತ್ರಿವಿಧ ಪದಾರ್ಥಂಗಳ ಲಿಂಗಕ್ಕರ್ಪಿಸುವ ಸಾವಧಾನಜ್ಞಾನಿಯೇ ಮಹಾಘನಲಿಂಗಸ್ವರೂಪವಾದ ಕಾರಣ ಆ ಮಾಹೇಶ್ವರರ ದರುಶನವ ಮಾಡಿದವರೆಲ್ಲಾ ಮುಕ್ತರೆಂಬುದೀಗ ‘ ಇಂಥ

೧ ತೃಣಜ್ಞಾನವೆಲ್ಲಾ (ಎ.)    ೨ ಮಹಾತ್ಮರ (ಎ.)

ಮಹಂತರ ತೋೞಿ ಬದುಕಿಸಯ್ಯಾ ಕೂಡಲಚೆನ್ನಸಂಗಮದೇವಾ ' ಎಂಬ ಶಬ್ದಕ್ಕರ್ಥ. ೨೯

ವ. ಲಿಂಗಕ್ಕೆಂದೆ ನೆನೆವೆ. ಲಿಂಗಕ್ಕೆಂದೆ ಮಾಡುವೆ. ಲಿಂಗಕ್ಕೆಂದೆ ಕೂಡುವೆ ನಾನಯ್ಯಾ ! ಸಕಲ ಪದಾರ್ಥಂಗಳ ಲಿಂಗಕ್ಕೆಂದೆ ಭಾವಿಸುವೆ ! ಅವ ಗುಣಂಗಳನಱಿಯೆನಯ್ಯಾ ! ಲಿಂಗಕ್ಕೆಂದೆ ಕಾಮಿಸುವೆನು. ನಿಷ್ಕಾಮಿಯಾಗಿ ಎನ್ನ ದೇಹೇಂದ್ರಿಯ ಮನ ಪ್ರಾಣಾದಿಗಳು ಲಿಂಗದ ಸತಿಗಳಾಗಿ ಲಿಂಗಕ್ಕೆಂದೆ ಬಯಸಿ, ಲಿಂಗಪ್ರಾಣಿಗಳಾದ ಕಾರಣ ಲಿಂಗಕ್ಕೆಂದೆ ಕೈಕೊಂಬೆನು. ಅನರ್ಪಿತವನಱಿಯೆನು ಕೂಡಲಚೆನ್ನ ಸಂಗಮದೇವಾ.

ಟೀ. ದೇಹಭಾವವಳಿದು, ಶಿವಭಾವ ಘಟಿಸಿ, ಲಿಂಗಾಂಗಸಂಬಂಧವಾದ ಶರಣನ ತನು ಮನ ಪ್ರಾಣೇಂದ್ರಿಯಂಗಳೆಲ್ಲಾ ಲಿಂಗದ ಭಕ್ತ್ಯಂಗನೆಯರಾಗಿ ಸಕಲ ಪದಾರ್ಥಂಗಳ ಲಿಂಗಕ್ಕೆಂದೇ ಬಯಸಿ ಭಾವಿಸಿ ಲಿಂಗಕ್ಕರ್ಪಿಸಿ, ಆತನು ಕರಣೇಂದ್ರಿಯಂಗಳೆಲ್ಲಾ ಲಿಂಗವೆಯಾಗಿ ಲಿಂಗವೇ ಭೋಗಿಸುತ್ತಿಪ್ಪನಾಗಿ ಶರಣಂಗೆ ಅನರ್ಪಿತವಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೩೦

ವ. ಅರ್ಪಿಸುವ ಸುಖ ತಪ್ಪದೆ ಇಂಬುಗೊಂಡಿತ್ತಾಗಿ ಅಲ್ಲಿಯೇ ಅರ್ಪಿತವಾಯಿತ್ತಯ್ಯಾ ! ಅಂಗವೆಂಬ ಶಂಕೆ ತಾನೆತ್ತ ಹೋಯಿತ್ತೆಂದಱಿಯೆ! ಕಾಯಸುಖವೇ ಲಿಂಗಸುಖಕ್ಕೀಡಾಯಿತ್ತು ! ಅಂತಪ್ಪ ಅರ್ಪಿತದಷ್ಟ ತಲೆಗೇಱಿದಲ್ಲಿ ನೀ ಮುಂತಾಗಿರ್ದೆ ಕೂಡಲಸಂಗವ ದೇವಾ!

ಟೀ. ಜೀವಾತ್ಮನೆಂಬಂಗವ ಮಹಾಘನಲಿಂಗಕ್ಕೆ ಸಂಬಂಧವ ಮಾಡಿ ಅರ್ಪಿಸಿ, ಲಿಂಗಮುಖವನಱಿದು ಹಿಂಗದೆಯಿಪ್ಪ ಶರಣನ ದೇಹೇಂದ್ರಿಯ ಸುಖಂಗಳೆಲ್ಲಾ ಲಿಂಗಾರ್ಪಿತವಾದವೆಂಬುದೀಗ ' ಅರ್ಪಿಸುವ ಸುಖ ತಪ್ಪದೆ ಇಂಬುಗೊಂಡಿತ್ತಾಗಿ ಅಲ್ಲಿಯೆ ಅರ್ಪಿತವಾಯಿತ್ತಯ್ಯಾ ' ಎಂಬ ಶಬ್ದಕ್ಕರ್ಥ. ಅಂತು ಜೀವಾತ್ಮನೆಂಬಂಗವ ಲಿಂಗಾರ್ಪಿತವ ಮಾಡಿದ ಶರಣಂಗೆ ಶಿವಭಾವ ಘಟಿಸಿತ್ತಾಗಿ ಜೀವಭಾವವಿಲ್ಲದೆ ಹೋಯಿತ್ತೆಂಬುದೀಗ ' ಅಂಗವೆಂಬ ಶಂಕೆ ತಾನೆತ್ತ ಹೋಯಿತ್ತೆಂದಱಿಯೆ ' ನೆಂಬ ಶಬ್ದಕ್ಕರ್ಥ. ಅಂತು ಜೀವಾತ್ಮನು ತಾ ಮೊದಲಾಗಿ ಕಾಯದ ಸುಖಂಗಳನೆಲ್ಲವ ಲಿಂಗಕ್ಕರ್ಪಿಸಿದ ಕಾರಣ ಶರಣಂಗೆ ಲಿಂಗಸುಖ ದೊರಕಿತ್ತೆಂಬುದೀಗ ' ಕಾಯಸುಖವೇ ಲಿಂಗಸುಖಕ್ಕೀಡಾಯಿತ್ತು ' ಎಂಬ ಶಬ್ದಕ್ಕರ್ಥ.

ತನುಸುಖಂಗಳನೆಲ್ಲವ ಲಿಂಗಕ್ಕರ್ಪಿಸಲು ಶರಣನು ಅರ್ಪಿಸಿಕೊಂಡ ಲಿಂಗವು ಆ ಶರಣನ ಸರ್ವಾಂಗವನವಗ್ರಹಿಸಿತ್ತೆಂಬುದೀಗ 'ಅಂತಪ್ಪ ಅರ್ಪಿತದಷ್ಟ'ವೆಂಬ ಶಬ್ದಕ್ಕರ್ಥ. ಅಂತು ಶರಣನ ಸರ್ವಾಂಗಲಿಂಗವಾಗಿ ಭಿನ್ನವಿಲ್ಲದಿದ್ದುದ ಅಭಿನ್ನ ಜ್ಞಾನಮುಖದಿಂದಲಱಿದು ಲಿಂಗವೆಯಾಗಿರ್ದ ಶರಣನೆಂಬುದೀಗ 'ದಷ್ಟ ತಲೆ ಗೇಱಿದಲ್ಲಿ ನೀ ಮುಂತಾಗಿರ್ದೆ' ನೆಂಬ ಶಬ್ದಕ್ಕರ್ಥ. ೩೧

**ವ.** ಕಾಯವೇ ಲಿಂಗಾರ್ಪಿತ. ಆ ಅರ್ಪಿತವೇ ಪ್ರಸಾದ. ಅದೇ ಮತ್ತೆ ಮತ್ತೆ ಅರ್ಪಿತ. ದರುಶನದಿಂದಲಾಯಿತ್ತು ಸ್ಪರ್ಶನದಿಂದಲಾಯಿತ್ತು. ಅಪ್ಪಿನ ಸೋಂಕಿನ ಸುಖವ ಅರ್ಪಿಸದಿರ್ದಡೆ ಭ್ರಾಂತಿ. ಕೂಡಲ ಚೆನ್ನಸಂಗನ ಪ್ರಸಾದಿಯ ಪ್ರಸಾದವನತಿಗಳೆದರೆ ಮುಂದೆ ಅದಕಿನ್ನೆಂತೋ ?

**ಟೀ.** ಅಂಗಲಿಂಗಸಂಬಂಧವಾದ ಬಳಿಕ ಅಂಗ ಮನ ಇಂದ್ರಿಯಂಗಳೆಲ್ಲಾ ಲಿಂಗಾರ್ಪಿತವಾದ ಕಾರಣ ಪ್ರಸಾದಕಾಯವಾಯಿತ್ತು. ಅಂತಪ್ಪ ಪ್ರಸಾದಕಾಯ ಸೋಂಕಿದ ಮುಟ್ಟಿದ ಪದಾರ್ಥಂಗಳೆಲ್ಲಾ ಪ್ರಸಾದವಾಯಿತ್ತು. ಅಂತಾದ ಪ್ರಸಾದ ವನೆ ಇಷ್ಟಲಿಂಗಕ್ಕರ್ಪಿಸಬೇಕು. ಆ ಇಷ್ಟಲಿಂಗದ ಪ್ರಸಾದವನೆ ಪ್ರಾಣಲಿಂಗಕ್ಕೆ ಅರ್ಪಿಸಬೇಕು. ಆ ಪ್ರಾಣಲಿಂಗದ ಪ್ರಸಾದವನೆ ಭಾವಲಿಂಗಕ್ಕರ್ಪಿಸಬೇಕು. ಇಂತು ಅರ್ಪಿಸಿದುದ ಅರ್ಪಿಸುವ ವರ್ಮವನಱಿಯದಿದ್ದೊಡೆ ಜೀವಭಾವ ಹಿಂಗದು. ಅದುಕಾರಣ ಶಿವಪ್ರಸಾದಿಗಳ ಪ್ರಸಾದ ಲಿಂಗಕ್ಕೆ ಸಲ್ಲದೆಂಬವರುಗಳ ಪಾತಕಕ್ಕೆ ಗಣಿತವಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೩೨

**ವ.** ಶರಣ ಸನ್ನಹಿತ ಲಿಂಗವಾಗಿ, ಲಿಂಗಸನ್ನಹಿತ ಶರಣನಾಗಿ, ಸಂಗವೇ ಸನುಮತವಾಯಿತ್ತಾಗಿ ಮತ್ತೊಂದನಱಿಸಲಿನ್ನೆಲ್ಲಿಯದೋ ಅಯ್ಯಾ ? ಶರಣನೇ ಓಗರ, ಲಿಂಗವೇ ಪ್ರಸಾದ, ಕೂಡಲಚೆನ್ನಸಂಗಾ, ನಿಮ ಶರಣಂಗೆ !

**ಟೀ.** ಲಿಂಗವು ತನಗನ್ಯವೆಂದಱಿದು ಅಭಿನ್ನಜ್ಞಾನಿಯಾಗಿಪ್ಪ ಶರಣನಲ್ಲಿ ಲಿಂಗವು ಭಿನ್ನವಿಲ್ಲದೆ ಇಪ್ಪನಾಗಿ, ಶರಣನೆಂದು ಲಿಂಗವೆಂದು ಬೇಱಿಟ್ಟು ಹೇಳಲಿಲ್ಲ ವೆಂಬುದೀಗ 'ಶರಣನೇ ಸನ್ನಹಿತ ಲಿಂಗವಾಗಿ, ಲಿಂಗವೇ ಸನ್ನಹಿತ ಶರಣನಾಗಿ, ಸಂಗವೇ ಸನುಮತವಾಯಿತ್ತಾಗಿ ಮತ್ತೊಂದನಱಿಸಲಿನ್ನೆಲ್ಲಿಯದೋ ಅಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಶರಣನೆಲ್ಲಾ ಲಿಂಗದಲ್ಲಿ ಬೆರೆದು ಭಿನ್ನವಿಲ್ಲದೆ ಏಕತೆ

ಯಾಗಿರ್ದನೆಂಬುದೀಗ ' ಶರಣನೆ ಓಗರ ' ವೆಂಬ ಶಬ್ದಕ್ಕರ್ಥ. ಅಂತು ಶರಣ ನೆಂಬಂಗವೆಲ್ಲಾ ಲಿಂಗವೆಯಾಗಿ ಉಳಿಯಿತ್ತು. ಆ ಉಳಿದ ಲಿಂಗವೇ ಶೇಷವೆನಿಸಿ ತ್ತೆಂಬುದೀಗ ' ಲಿಂಗವೇ ಪ್ರಸಾದ ' ವೆಂಬ ಶಬ್ದಕ್ಕರ್ಥ. ಅಂತಪ್ಪ ಪ್ರಸಾದ ಸಾಧ್ಯವಾಯಿತ್ತು ಶಿವಶರಣರಿಗೆಂಬುದೀಗ ' ಕೂಡಲಚೆನ್ನಸಂಗಯ್ಯ ನಿಮ್ಮ ಶರಣಂಗೆ ' ಂಬ ಶಬ್ದಕ್ಕರ್ಥ. ೩೩

ವ. ಕಾಯದ ಕೈಯಲು ಲಿಂಗಾರ್ಪಿತ ಖಂಡಿತ ಭಾಷೆ. ಕರಣದ ಕೈಯಲು ಲಿಂಗಾರ್ಪಿತ ಖಂಡಿತ ಭಾಷೆ. ಭಾವದ ಕೈಯಲು ಲಿಂಗಾರ್ಪಿತ ಖಂಡಿತ ಭಾಷೆ. ಲಿಂಗಮಧ್ಯೇ ಶರಣ, ಶರಣಮಧ್ಯೇ ಲಿಂಗ. ಎಲ್ಲಿ ತಾಗಿದ ಸುಖವೆಲ್ಲಾ ಲಿಂಗಾರ್ಪಿತ. ಇದುಕಾರಣ ಕೂಡಲಚೆನ್ನ ಸಂಗನ ಶರಣರು ಸಹಜರೆಂಬೆ.

ಟೀ. ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳ ಭಿನ್ನವಿಟ್ಟು, ರೂಪು ರುಚಿ ತೃಪ್ತಿಗಳನರಿದರ್ಪಿಸೇನೆಂದಡೆ ಅರ್ಪಿತವಾಗದು. ಮತ್ತೆಂತೆಂದೊಡೆ ಅಖಂಡ ಚಿತ್‌ಪ್ರಕಾಶವನುಳ್ಳ ಲಿಂಗವು ಇಷ್ಟ ಪ್ರಾಣ ಭಾವವಾಗಿ, ಅಂತರಂಗ ಬಹಿರಂಗವ ನೆಲ್ಲವನೊಳಕೊಂಡು ಸರ್ವಾಂಗಲಿಂಗವಾದುದ ಅಭಿನ್ನಜ್ಞಾನದೃಷ್ಟಿಯಿಂದ ಕಂಡು ಭಿನ್ನವಳಿದಿಪ್ಪ ಶರಣನೆಲ್ಲಾ ಲಿಂಗವೆಯಾಗಿರ್ದ ಕಾರಣ, ತಾಗಿದ ಸೋಂಕಿದ ಸುಖವೆಲ್ಲಾ ಲಿಂಗಾರ್ಪಿತ. ಅಂತಪ್ಪ ಅರ್ಪಿತ ಶಿವಂಗೆ ಒಪ್ಪು ಎಂಬುದೀ ವಚನದ ತಾತ್ಪರ್ಯಾರ್ಥ. ೩೪

ವ. ಶಬ್ದ ಸ್ಪರ್ಶ ರೂಪು ರಸ ಗಂಧ ಪಂಚೇಂದ್ರಿಯ ಮೊದಲಾದುವು ನಡೆ ದುವು ಲಿಂಗದತ್ತಲೆ! ಬಂದ ಭೋಗ ಸುಖ ದುಃಖ ಲಿಂಗಾರ್ಪಿತ ವೆಂದು ನಡೆದುವು ಲಿಂಗದತ್ತತ್ತ ಕೂಡಲಚೆನ್ನಸಂಗಯ್ಯ ನಿವಾಸಿಯಾ ಗಿರ್ದ ಶರಣಂಗೆ.

ಟೀ. ಅಖಂಡಚೈತನ್ಯವಪ್ಪ ಮಹಾಘನಲಿಂಗವು ತನ್ನ ಪ್ರಾಣಕಳಾಸ್ವರೂ ಪೆಂದರಿದು ಭಿನ್ನಭಾವವಳಿದಿರ್ದ ಶರಣನ ಅಂಗದಲ್ಲಿ ಲಿಂಗವು ವಿಶ್ರಮಿಸಿಕೊಂಡು ಸರ್ವಸುಖಂಗಳ ಲಿಂಗವೇ ಭೋಗಿಸುತ್ತಿರ್ಪ ಕಾರಣ ಇಂದ್ರಿಯ ವಿಷಯ ಸುಖ ದುಃಖಂಗಳು ಮೊದಲಾದವೆಲ್ಲಾ ಲಿಂಗದವಾಗಿ ಲಿಂಗದತ್ತಲೆಯ್ದಿ ಲಿಂಗದೊಳಗೆ ಕೂಡಿಹೋದ ಕಾರಣ, ಅದು ಲಿಂಗಾರ್ಪಿತವೆನಿಸುವುದು. ಅಂತಪ್ಪ ಲಿಂಗಾರ್ಪಿತ ವಾಗಿ ಲಿಂಗವೆಯಾದ ಶರಣಂಗೆ ಮುಂದೆ ದೇಹ ಕರಣ ಸುಖ ದುಃಖ ಜನನ ಮರಣಂಗಳೇನೂ ಇಲ್ಲ ಶರಣಂಗೆಂಬುದೀ ವಚನದ ತಾತ್ಪರ್ಯಾರ್ಥ. ೩೫

ವ. ಘನವೆಂಬ ಮನದ ತಲೆವಾಗಿಲಲ್ಲಿ ಸದಾ ಸನ್ನಿಹಿತವಾಗಿ ನೀನಿಪ್ಪೆಯಲ್ಲಾ ಎಲೆ ಅಯ್ಯಾ ! ಬಂದ ಪದಾರ್ಥದ ಪೂರ್ವಾಶ್ರಯವ ಕಳೆದು ನೀನೆ ಅವಧರಿಸುತ್ತಿಪ್ಪೆಯಲ್ಲಾ ಎಲೆ ಅಯ್ಯಾ! ನಿಮ್ಮ ಮುಟ್ಟಿ ಬಹುದಲ್ಲದೆ ನಿಮ್ಮ ಮುಟ್ಟದೆ ಬಾರದೆಂಬುದಕ್ಕೆ ನಿಮ್ಮ ಮನಕ್ಕೆ ನೀವೇ ಸಾಕ್ಷಿಯಲ್ಲಾ ಕೂಡಲಚೆನ್ನಸಂಗಮದೇವಾ !

ಟೀ. ಅಖಂಡ ಪರಿಪೂರ್ಣಮಪ್ಪ ಮಹಾಘನಲಿಂಗವು ತನಗೆ ಅನನ್ಯವೆಂದಱಿದು ಭಿನ್ನಭಾವನಳಿದು ತನ್ನನೆಲ್ಲಾ ಮಹಾಘನಲಿಂಗವೆಯಾಗಿ ಕಾಣುತ್ತಿಪ್ಪ ಶರಣನ ಅಭಿನ್ನಜ್ಞಾನಕ್ಕೆ ಲಿಂಗವು ಭಿನ್ನಭಾವವಿಲ್ಲದೆ ಸದಾ ಸನ್ನಿಹಿತನಾಗಿ ಶರಣನ ಸರ್ವಾಂಗವೆಲ್ಲಾ ಲಿಂಗವು ತಾನೆಯಾಗಿಪ್ಪ ಕಾರಣ ಅಂಗದ ಸುಖಭೋಗಂಗಳನೆಲ್ಲವ ಲಿಂಗವೇ ಅಱಿದು ಅರ್ಪಿಸಿಕೊಂಬ ಭೇದವನಱಿದು ಲಿಂಗಾರ್ಪಿತವಾಯಿತ್ತೆಂಬ ನಿಶ್ಚಯದಿಂದ ಸಂಶಯವನಳಿದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೩೬

ವ. ಗುರು ಲಿಂಗ ಜಂಗಮದೇಕಾರ್ಥವನೇನೆಂದುಪಮಿಸಬಹುದು ? ಗುರು ಪ್ರಾಣ, ಲಿಂಗ ದೇಹ, ಜಂಗಮ ಆಪ್ಯಾಯನವೆಂದುದಾಗಿ. ಪ್ರಾಣ ಮುಟ್ಟಿ ಬಂದಡೇನು? ಕಾಯಮುಟ್ಟಿ ಬಂದಡೇನು? ಜಿಹ್ವೆಮುಟ್ಟಿ ಬಂದಡೇನು? ಜಂಗಮಮುಖ ಆಪ್ಯಾಯನವೆಂದುದಾಗಿ. ಇದು ಕಾರಣ ಕೂಡಲಚೆನ್ನಸಂಗಮದೇವ ಜಂಗಮಪ್ರಸಾದ ಸರ್ವಸಿದ್ಧಿ.

ಟೀ. ಗುರುವೇ ಪ್ರಣವಮಂತ್ರಸ್ವರೂಪನಾದ ಕಾರಣ ಆ ಶ್ರೀಗುರುವಿನ ಪ್ರಣವಮಂತ್ರ ಪ್ರಾಣವ ವೇಧಿಸಿ ವಾಯುಪ್ರಾಣವೆಲ್ಲಾ ಲಿಂಗಪ್ರಾಣವಾಯಿತ್ತೆಂಬುದೀಗ ' ಗುರು ಪ್ರಾಣ ' ವೆಂಬ ಶಬ್ದಕ್ಕರ್ಥ. ಅಂತಪ್ಪ ಪ್ರಾಣಲಿಂಗದ ಕಳೆ ತಾನೆ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬಂದು, ದೇಹೇಂದ್ರಿಯಂಗಳನೊಳಕೊಂಡು ಸರ್ವಾಂಗಲಿಂಗವಾಗಿ ಲಿಂಗಕಾಯವೆನಿಸಿತ್ತೆಂಬುದೀಗ ' ಲಿಂಗ ದೇಹ ' ವೆಂಬ ಶಬ್ದಕ್ಕರ್ಥ. ಅಂತು ಒಳಹೊಱಗೆನ್ನದೆ ಸರ್ವಾಂಗಲಿಂಗವಾದ ಶರಣನಲ್ಲಿ ವಿಷಯತೃಷ್ಣೆಯಿಂದ ಸಂಚಲಿಸುವ ಕರಣಂಗಳೆಲ್ಲಾ ಜ್ಞಾನಜಂಗಮವೆಂಬುದೀಗ ' ಜಂಗಮದ ಆಪ್ಯಾಯನವೆಂದುದಾಗಿ ' ಎಂಬ ಶಬ್ದಕ್ಕರ್ಥ. ಅಂತು ಸರ್ವಾಂಗಲಿಂಗವಾದ ಶರಣನ ಕರಣಂಗಳೆಲ್ಲವೂ ಚರಲಿಂಗವಾದ ಕಾರಣ ಆ ಕರಣಂಗಳ ವಿಷಯತೃಷ್ಣೆಯೆಲ್ಲವು ಚರಲಿಂಗದ ತೃಷ್ಣೆಯಾಯಿತ್ತು. ಅಂತು ದೇಹ ಪ್ರಾಣ ಇಂದ್ರಿಯಂಗಳಲ್ಲಿ ಒಪ್ಪ ಸುಖಂಗಳನೆಲ್ಲವ ಬಯಸಿ, ಅಱಿದು ಸುಖಿಸುವದೀ ಘನವೆಲ್ಲಾ

ಒಂದೇ ಜಂಗಮವೆಂಬುದೀಗ ' ಪ್ರಾಣಮುಟ್ಟಿ ಬಂದಡೇನು, ಕಾಯಮುಟ್ಟಿ ಬಂದಡೇನು, ಜಿಹ್ವೆಮುಟ್ಟಿ ಬಂದಡೇನು, ಜಂಗಮಮುಖ ಆಪ್ಯಾಯನವೆಂದುದಾಗಿ ' ಎಂಬ ಶಬ್ದಕ್ಕರ್ಥ. ಅಂತು ಶರಣನ ಅಂಗವೆಲ್ಲಾ ಇಷ್ಟಲಿಂಗಸ್ವರೂಪು. ಪ್ರಾಣವೆಲ್ಲಾ ಪ್ರಾಣಲಿಂಗಸ್ವರೂಪು. ಅಜೀವ ಕರಣಂಗಳೆಲ್ಲಾ ಜಂಗಮಸ್ವರೂಪಾದ ಕಾರಣ ಜಂಗಮದ ಪ್ರಸಾದವು ಇಷ್ಟಲಿಂಗ ಪ್ರಾಣಲಿಂಗಗಳಿಗೆ ಸಮರ್ಪಿಸಲಾಯಿತ್ತು. ಅಂತು ಸಮರ್ಪಿಸಿ ತ್ರಿವಿಧಲಿಂಗವೇಕವಾಯಿತ್ತು ಶರಣಂಗೆ. ಅಂತಾದುದ ಉಪಮಿಸಿ ಹೇಳಬಾರದೆಂಬುದೀಗ ' ಗುರುಲಿಂಗಜಂಗಮದೇಕಾರ್ಥವನೇನೆಂದುಪಮಿಸಬಹುದೆ'ಂಬ ಶಬ್ದಕ್ಕರ್ಥ. ಅಂತು ಉಪಮಿಸಬಾರದ ಲಿಂಗಪದಸಿದ್ಧಿಯಾಯಿತ್ತು ಶರಣಂಗೆ ಜಂಗಮದ ಪ್ರಸಾದದಿಂದಲೆಂಬುದೀಗ ' ಇದುಕಾರಣ ಜಂಗಮಪ್ರಸಾದ ಸರ್ವಸಿದ್ಧಿ ' ಎಂಬ ಶಬ್ದಕ್ಕರ್ಥ. ೩೭

ವ. ಸೋಂಕಿನ ಸುಖ ಮೊದಲಾದವೆಲ್ಲವನೂ ಚರಲಿಂಗಕ್ಕರ್ಪಿಸುವೆ. ಆ ಅರ್ಪಿತ ಮುಖದಲ್ಲಿ ಇಷ್ಟಲಿಂಗವನರಿದು ಚರಲಿಂಗಕ್ಕರ್ಪಿಸುವೆ. ಆ ಚರಲಿಂಗಕ್ಕರ್ಪಿಸಿ ಮಿಕ್ಕ ಶೇಷವನು ಇಷ್ಟಲಿಂಗಕ್ಕೆ ಓಗರವಾಗಿ ನೀಡಿ ಪ್ರಸಾದವಾಗಿ ಕೈಕೊಂಬೆ ಕಪಿಲಸಿದ್ಧ ಮಲ್ಲಿಕಾರ್ಜುನಾ.

ಟೀ. ಗುರುಲಿಂಗಜಂಗಮವೇ ಇಷ್ಟಪ್ರಾಣಭಾವವಾಯಿತ್ತಾಗಿ, ಗುರುವೇ ಇಷ್ಟ, ಪ್ರಾಣವೇ ಲಿಂಗ, ಭಾವವೇ ಜಂಗಮವಾಯಿತ್ತು. ಅಂತು ಭಾವಲಿಂಗವೇ ಜಂಗಮವಾದ ಕಾರಣ ಭಾವಸಂಬಂಧವಾದ ಜ್ಞಾನ ಮನ ಬುದ್ಧಿ ಮೊದಲಾದ ಷಟ್ಕರಣಂಗಳೆಲ್ಲವೂ ಚರಲಿಂಗವಾದವಾಗಿ, ಪದಾರ್ಥಂಗಳನರಿದು ನೋಡುವ ಮುಟ್ಟುವ ಕೇಳುವ ವಾಸಿಸುವ ಸುಖಿಸುವವೆಲ್ಲಾ ಚರಲಿಂಗವೆಂದು ಚರಲಿಂಗದರ್ಪಿತಭಾವದಲ್ಲಿ ಭಿನ್ನವಳಿದಿರ್ದ ಶರಣನ ಸಾವಧಾನದೆಚ್ಚರಿಕೆಯಿಂದ ಕ್ರೀಯ ಮರೆಯದೆ, ಆ ಚರಲಿಂಗದ ಪ್ರಸಾದವ ಇಷ್ಟಲಿಂಗಕ್ಕೆ ಅರ್ಪಿಸಿ, ಆ ಇಷ್ಟಲಿಂಗದ ಪ್ರಸಾದವ ಸ್ವೀಕರಿಸುತ್ತಿಪ್ಪನು ಪ್ರಸಾದಿ ಎಂಬುದೀ ವಚನದ ತಾತ್ಪರ್ಯಾರ್ಥ. ೩೮

ವ. ಜಂಗಮದ ಪ್ರಸಾದವ ಲಿಂಗಕ್ಕೆ ಸಲಿಸಬಾರದೆಂಬ ಮಾತ ಕೇಳಲಾಗದು. ಪ್ರಸಾದವೇ ಲಿಂಗ, ಆ ಲಿಂಗವೇ ಅಂಗ. ಆ ಜಂಗಮವೇ ಚೈತನ್ಯ. ಆ ಚೈತನ್ಯವೇ ಪ್ರಸಾದ. ಇಂತೀ ಉಭಯದ ಭೇದವನರಿಯರು ನೋಡಾ ! ಜಿಹ್ವೆಯಲ್ಲಿ ಉಂಡ ರಸ ಸರ್ವೇಂದ್ರಿಯಕ್ಕೆ ಬೇರಾಗಬಲ್ಲುದೇ ? ಪ್ರಾಣಲಿಂಗದಲ್ಲಿ ಸವಿದು ಭಾವಲಿಂಗದಲ್ಲಿ ತೃಪ್ತಿಯಾದ ಬಳಿಕ ಇಷ್ಟಲಿಂಗಕ್ಕೆ ಭಿನ್ನವುಂಟೇ ? ಇದನರಿದು

ಅರ್ಪಿಸಿ ಸುಖಿಸಲೊಲ್ಲರು. ದೇಹಭಾವದಲ್ಲಿ ಕೊಂಬುದು ಅನರ್ಪಿತ ವೆಂದಱಿಯರು. ಲಿಂಗಕ್ಕೂ ಭಕ್ತಂಗೂ ಭೇದವಿಲ್ಲೆಂಬುದಱಿಯ ಲಱಿಯರು. ಜಂಗಮಮುಖದಿಂದೊದಗಿದುದು ಪ್ರಸನ್ನಪ್ರಸಾದ ವೆಂದಱಿಯರು.

ಸಾಕ್ಷಿ :

ಸರ್ವೇಂದ್ರಿಯಮುಖದ್ವಾರೇ ಸದಾ ಸನ್ನಿಹಿತಃ ಶಿವಃ
ಪ್ರಾಣಲಿಂಗಸ್ಥಿತಂ ಲಿಂಗಂ ಯೋ ಭುಂಕ್ತೇ ಲಿಂಗವರ್ಜಿತಃ
ಸಃಸ್ವಮಾಂಸಂ ಸ್ವರುಧಿರಂ ಸಾದರಂ ಭಕ್ಷಕೋ ಭವೇತ್
ತಸ್ಮಾತ್ ಲಿಂಗಪ್ರಸಾದಂ ಚ ನಿರ್ಮಾಲ್ಯಂ ತಜ್ಜಲಂ ತಥಾ
ನೈವೇದ್ಯಂ ಚರಲಿಂಗಸ್ಯ ಶೃಣು ಷಣ್ಮುಖ ಸರ್ವದಾ

ಇದುಕಾರಣ ಪ್ರಸಾದವೇ ಇಷ್ಟ ಪ್ರಾಣ ಭಾವವಾಗಿ ನಿಂದುದನಱಿಯರು. ಇಂತೀ ವರ್ಮವ ನಮ್ಮ ಬಸವಣ್ಣ ಬಲ್ಲ. ಇದನೆಲ್ಲರಿಗೆ ತೋಱಿ ಲಕ್ಷದ ಮೇಲೆ ತೊಂಭತ್ತಾಱು ಸಾವಿರ ಜಂಗಮದ ಒಕ್ಕುದ ನೆತ್ತಿಕೊಂಬ. ಅಚ್ಚಪ್ರಸಾದವ ಲಿಂಗಕ್ಕಿತ್ತುಕೊಂಬ. ಪ್ರಸಾದಿಗಳು ಮೂವತ್ತಿಚ್ಛಾಸಿರದೊಳಗೆ ತಾನೊಬ್ಬನಾಗಿ ಸುಖಿಸುವುದ ನಾನು ಬಲ್ಲೆನಾಗಿ ಸಂದೇಹವಳಿದು ಬದುಕಿದೆನಯ್ಯಾ ಕೂಡಲಚೆನ್ನಸಂಗಮದೇವಾ !

ಟೀ. ಈ ವಚನ ಕಾಣಬಂದರ್ಥ. ೩೯

ವ. ಲಿಂಗಪ್ರಸಾದ ಭವಕ್ಕೆ ಬೀಜ, ಜಂಗಮಪ್ರಸಾದ ಭವಂ ನಾಸ್ತಿ. ವಾಸನೆಯೆ ಶಿವಲಿಂಗಭಕ್ತಿ. ನಿರ್ವಾಸನೆಯೆ ಜಂಗಮಭಕ್ತಿ. ಅದು ಕಾರಣ ಜಂಗಮಪ್ರಸಾದವನಲ್ಲದೆ ಕೊಂಡೆನಾದಡೆ ಅಘೋರನರಕ ಕೂಡಲಚೆನ್ನಸಂಗಮದೇವಾ !

ಟೀ. ಈ ವಚನ ಕಾಣಬಂದರ್ಥ. ೪೦

ವ. ಅಂಗವ ಮುಟ್ಟಿ ಆಚಮಾನವ ಮಾಡುವರು. ಲಿಂಗಾಂಗಿಗಳಲ್ಲದವರು ಮಾಡಿದಡೆಯೂ ಮಾಡಲಿ. ಲಿಂಗಪಾದೋದಕ ಧರಿಸಿ ಅಪವಿತ್ರ

ಶಂಕೆಯಿಂದ ಆಚಮಾನವ ಮಾಡಿದಡೆ ಅಘೋರನರಕದಲ್ಲಿಕ್ಕುವು ದಯ್ಯಾ ಆ ಪಾದೋದಕವೇ ವಿಷವಾಗಿ.

ಸಾಕ್ಷಿ :

ಶಂಭೋಃ ಪಾದೋದಕಂ ಪೀತ್ವಾ ಪಶ್ಚಾದಶುಚಿಶಂಕಯಾ
( ಯೋ ಆಚಮತಿ ? ) ಮೋಹೇನ ತಂ ವಿದ್ಯಾದ್ ಬ್ರಹ್ಮಘಾತಕಂ

ಇಂತೆಂಬ ವಚನವ ಕೇಳಿ ನಂಬುವುದಯ್ಯಾ. ಪರಮ ಪಾವನವಪ್ಪ ಪಾದೋದಕವ ನಂಬದವರು ಬಸವಪ್ರಿಯ ಕೂಡಲಚೆನ್ನಬಸ ವಂಗೆಂದೂ ದೂರ.

**ಟೀ.** ಈ ವಚನ ಕಾಣಬಂದರ್ಥ. ೪೧

**ವ.** ಕರುಣಜಲ ವಿನಯಜಲ ಸಮತೆಜಲ. ಕರುಣಜಲವೇ ಗುರು ಪಾದೋದಕ. ವಿನಯಜಲವೇ ಲಿಂಗಪಾದೋದಕ. ಸಮತೆಜಲವೇ ಜಂಗಮಪಾದೋದಕ. ಗುರುಪಾದೋದಕ ಸಂಚಿತಕರ್ಮನಾಸ್ತಿ. ಲಿಂಗಪಾದೋದಕ ಪ್ರಾರಬ್ಧಕರ್ಮನಾಸ್ತಿ. ಜಂಗಮಪಾದೋದಕ ಆಗಾಮಿಕರ್ಮನಾಸ್ತಿ. ಇಂತೀ ತ್ರಿವಿಧೋದಕದಲ್ಲಿ ತ್ರಿವಿಧಕರ್ಮ ನಾಸ್ತಿ. ಇದುಕಾರಣ ಕೂಡಲಚೆನ್ನಸಂಗಮದೇವ, ತ್ರಿವಿಧೋದಕವ ನಿಮ್ಮ ಶರಣ ಬಲ್ಲ.

**ಟೀ.** ಗುರುಭಕ್ತಿಯಿಂದ ಗುರುಪಾದೋದಕವ ಸೇವಿಸಿದಾತಂಗೆ ಸಂಚಿತ ಕರ್ಮವಪ್ಪ ಜನನದ ಅಜ್ಞಾನದ ಭವಿತ್ವವಳಿದು, ಶಿವಭಕ್ತಿಜ್ಞಾನವ ಕೊಡುವು ದೆಂಬುದೀಗ ' ಕರುಣಜಲವೇ ಗುರುಪಾದೋದಕ. ಸಂಚಿತಕರ್ಮನಾಸ್ತಿ ' ಎಂಬ ಶಬ್ದಕ್ಕರ್ಥ. ಲಿಂಗಭಕ್ತಿಯಿಂದ ಲಿಂಗಪಾದೋದಕವ ನಿತ್ಯ ಸೇವನೆಯ ಮಾಡಿ ದಾತಂಗೆ ಇಹಲೋಕದ ತನುಭೋಗವಪ್ಪ ಪ್ರಾರಬ್ಧಕರ್ಮವಳಿದು ಶಿವಲೋಕದಲ್ಲಿ ಶಿವಸಾನ್ನಿಧ್ಯವಾಗಿ ಇತ್ತಬಾರೆಂದೆನಿಸಿಕೊಂಬ ಪದವಹುದೆಂಬುದೀಗ ' ವಿನಯ ಜಲವೇ ಲಿಂಗಪಾದೋದಕ. ಪ್ರಾರಬ್ಧಕರ್ಮನಾಸ್ತಿ ' ಎಂಬ ಶಬ್ದಕ್ಕರ್ಥ. ಜಂಗಮ ಪಾದೋದಕವ ಜಂಗಮಭಕ್ತಿಯಿಂದ ನಿತ್ಯ ಸೇವನೆಯ ಮಾಡಿದಾತಂಗೆ ಲಯ ಧರ್ಮವಪ್ಪ ಆಗಾಮಿಕರ್ಮವಳಿದು ಇಹಪರಕ್ಕೆಡೆಯಾಡುವ ಅವಸ್ಥೆಗಳೇನೂ ಯಿಲ್ಲದೆ ಪರಬ್ರಹ್ಮಾನಂದಸ್ವರೂಪನಾಗಿ ಸ್ವಸ್ಥಲದಲ್ಲಿಪ್ಪ ಪದವಹುದೆಂಬುದೀಗ

' ಸಮತೆಜಲವೇ ಜಂಗಮ ಪಾದೋದಕ. ಆಗಾಮಿಕರ್ಮನಾಸ್ತಿ ' ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧೋದಕದಲ್ಲಿ ತ್ರಿವಿಧಕರ್ಮನಾಸ್ತಿಯೆಂದು ತ್ರಿವಿಧಲಿಂಗ ಭಕ್ತಿಯ ಬಿಡದೆ ಮಾಡುತ್ತ ತ್ರಿವಿಧ ಪಾದೋದಕವ ನಿತ್ಯ ಸೇವನೆಯ ಮಾಡಬಲ್ಲಾತನೇ ಶಿವಶರಣನೆಂಬುದೀಗ ' ಇಂತೀ ತ್ರಿವಿಧೋದಕದಲ್ಲಿ ತ್ರಿವಿಧಕರ್ಮನಾಸ್ತಿ. ಇದುಕಾರಣ ತ್ರಿವಿಧೋದಕವ ನಿಮ್ಮ ಶರಣಬಲ್ಲ ' ನೆಂಬ ಶಬ್ದಕ್ಕರ್ಥ. ೪೨

ವ. ತನ್ನ ಮುಟ್ಟಿ ನೀಡುವುದೆ ಪ್ರಸಾದ. ತನ್ನ ಮುಟ್ಟದೆ ನೀಡುವುದೆ ಓಗರ. ಲಿಂಗಕ್ಕೆ ಕೊಟ್ಟು ಕೊಂಡರೆ ಪ್ರಸಾದಿ. ಇದುಕಾರಣ ಇಂತಪ್ಪ ಭೃತ್ಯಾಚಾರಿಗಲ್ಲದೆ ಪ್ರಸಾದವಿಲ್ಲ ಗೊಹೇಶ್ವರಾ.

ಟೀ. ತನ್ನ ನಿಜವೇ ಪರಶಿವನೆಂದಱಿದು, ತಾ ಮೊದಲಾಗಿ ಸಕಲ ಪದಾರ್ಥಂಗಳ ಲಿಂಗಸ್ವರೂಪವಾಗಿ ಕಾಬ ಲಿಂಗದೃಷ್ಟಿ ಉಳ್ಳಾತನಾಗಿ, ಕ್ರೀಯಿಂದ ಪದಾರ್ಥಂಗಳ ಲಿಂಗಕ್ಕರ್ಪಿಸಿದಡೆ ಆ ಅರ್ಪಿತವಾದವೆಲ್ಲಾ ಪರವಸ್ತುವಾದುವೆಂಬುದೀಗ ' ತನ್ನ ಮುಟ್ಟಿ ನೀಡುವುದೆ ಪ್ರಸಾದ ' ವೆಂಬ ಶಬ್ದಕ್ಕರ್ಥ. ಅಂತು ತಾನು ಶಿವನೆಂದಱಿಯದೆ ಲಿಂಗವ ಭಿನ್ನವಿಟ್ಟು ಜೀವಭಾವದಿಂದ ಪದಾರ್ಥಂಗಳ ಲಿಂಗಕ್ಕರ್ಪಿಸಿದಡೆ ಅರ್ಪಿತವಾಗದಾಗಿ, ಪದಾರ್ಥ ಪದಾರ್ಥದಂತೆ ಇದ್ದಿತ್ತೆಂಬುದೀಗ ' ತನ್ನ ಮುಟ್ಟದೆ ನೀಡುವುದೇ ಓಗರ ' ವೆಂಬ ಶಬ್ದಕ್ಕರ್ಥ. ಅಂತು ತಾನೆ ಶಿವನೆಂದಱಿದು ಶಿವೋಹಂ ಎನ್ನದೆ ದಾಸೋಹಂ ಭಾವದಿಂದ ಸಕಲ ಪದಾರ್ಥಂಗಳ ಲಿಂಗಕ್ಕೆ ಕೊಟ್ಟುಕೊಳಬಲ್ಲಾತಂಗಲ್ಲದೆ ಪರವಸ್ತು ಸಾಧ್ಯವಲ್ಲವೆಂಬುದೀಗ ' ಲಿಂಗಕ್ಕೆ ಕೊಟ್ಟುಕೊಂಡಡೆ ಪ್ರಸಾದಿ. ಇದುಕಾರಣ ಇಂತಪ್ಪ ಭೃತ್ಯಾಚಾರಿಗಲ್ಲದೆ ಪ್ರಸಾದವಿಲ್ಲ ' ವೆಂಬ ಶಬ್ದಕ್ಕರ್ಥ. ೪೩

ವ. ಮೊದಲಲ್ಲಿ ಮೊದಲಲ್ಲಿ ಅಚ್ಚೊತ್ತಿದ ಕಾಱಣ ಎಚ್ಚಱಿಕೆಯಾಯಿತ್ತು. ಗುರುಕಾರುಣ್ಯದಿಂದ ಅಱಿವಾಯಿತ್ತು, ಆಚಾರವಾಯಿತ್ತು, ಜಂಗಮದಿಂದ ತಿಳಿದ ತಿಳುವಿನಲ್ಲಿ ಶಿವಪ್ರಸಾದ ಸಾಧ್ಯವಾಯಿತ್ತು- ಕೂಡಲಚೆನ್ನಸಂಗಯ್ಯನಲ್ಲಿ ಏಕಾರ್ಥವಾಯಿತ್ತು.

ಟೀ. ದೇಹಸಂಬಂಧಿಯಾಗಿರ್ದ ಆತ್ಮನು ಮುನ್ನ ಶಿವಾಂಶಿಕನು. ಅಂತು ಶಿವಾಂಶಿಕನಾದ ಕಾರಣ ಸಮ್ಯಗ್ ಜ್ಞಾನೋದಯವಾಯಿತ್ತೆಂಬುದೀಗ ' ಮೊದಲಲ್ಲಿ ಮೊದಲಲ್ಲಿ ಅಚ್ಚೊತ್ತಿದ ಕಾರಣ ಎಚ್ಚಱಿಕೆಯಾಯಿತ್ತೆ ' ಂಬ ಶಬ್ದಕ್ಕರ್ಥ. ಅಂತು ಸಮ್ಯಗ್ ಜ್ಞಾನೋದಯದಿಂದ ತನ್ನ ನಿಜವೇ ಪರಬ್ರಹ್ಮವೆಂದಱಿದಾತಂಗೆ ಬ್ರಹ್ಮವು ಕಾಣಿಸಿತ್ತೆಂಬ ಮಾತ್ರದಲ್ಲಿ ದೇಹವಾಸನೆಯಳಿದು ಬ್ರಹ್ಮವಪ್ಪನೇ ? ಆಗದು. ಅದು

ಕಾರಣ ಜ್ಞಾನೋದಯವಾಗಿ ತನ್ನ ನಿಜವಪ್ಪ ಪರಬ್ರಹ್ಮವ ಕೂಡುವ ಅವಸ್ಥೆಯಿಂದ ೧ಗುರೋಪಾಸ್ತೆಯು೧ ಮಾಡಿ ಗುರುಕರುಣಮಂ ಪಡೆದು ಷಟ್‌ಸ್ಥಲಜ್ಞಾನಕ್ರಿಯಾಚಾರವಳವಟ್ಟಿತ್ತು. ಶರಣಂಗೆಂಬುದೀಗ 'ಗುರುಕರುಣದಿಂದ ಅಱಿವಾಯಿತ್ತು, ಆಚಾರವಾಯಿತ್ತು' ಎಂಬ ಶಬ್ದಕ್ಕರ್ಥ. ಅಂತು ಷಟ್‌ಸ್ಥಲವಿಡಿದು ಆಚರಿಸುವ ಜ್ಞಾನವೇ 'ಜಂಗಮ'ವೆಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಾಚಾರವ ತಿಳಿದು ಅಱಿದು ಆಚರಿಸುವ ಆಚಾರದಿಂದ ಅಂಗವೆಲ್ಲಾ ಲಿಂಗವೆಯಾಗಿ ಭಿನ್ನದೋಱದೆ ಇದ್ದಿತ್ತೆಂಬುದೀಗ 'ಜಂಗಮದಿಂದ ತಿಳಿದ ತಿಳುವಿನಲ್ಲಿ ಪ್ರಸಾದ ಸಾಧ್ಯವಾಯಿತ್ತು ಕೂಡಲಚೆನ್ನಸಂಗಯ್ಯನಲ್ಲಿ ಏಕಾರ್ಥವಾಯಿತ್ತು' ಎಂಬ ಶಬ್ದಕ್ಕರ್ಥ. ೪೪

**ವ.** ಮಾರ್ಗಕ್ರೀಯ ಸಂಪಾದಿಸನಾಗಿ ದ್ವೈತಿಯಲ್ಲ. ಜ್ಞಾನೋದಯ ಮೋಕ್ಷವೆಂಬುದ ಸಂಪಾದಿಸನಾಗಿ ಅದ್ವೈತಿಯಲ್ಲ. ೨ನೀಱಿ೨ಜಱ ಹದುಳಿಗನಾಗಿ ಸ್ವರ್ಗಿಯೂ ಅಲ್ಲ, ಅಪವರ್ಗಿಯೂ ಅಲ್ಲ. ಕೂಡಲಚೆನ್ನಸಂಗಯ್ಯನಲ್ಲಿ ಸಾಹಿತ್ಯವನಱಿದ ಪ್ರಸಾದಿ ಶರಣ.

**ಟೀ.** ಎಂದೆಂದೂ ಮಲಮಾಯಾಯುಕ್ತನಪ್ಪ ಜೀವ ತಾನೆಂದು ಭಿನ್ನ ಕ್ರೀಯನಾಚರಿಸಿ, ಫಲಪದಂಗಳ ಪಡೆದು, ಭಿನ್ನಮುಕ್ತರಾಗಿ ಮರಳಿ ಭವಕ್ಕೆ ಬಂದು ಸಂಸಾರ ಪಂಕದಲ್ಲಿ ಬಿದ್ದು ಹೊರಳುತ್ತಿಹ ಶೈವಸಿದ್ಧಾಂತದ ದ್ವೈತ ಮಾರ್ಗವನಾಚರಿಸುವನಲ್ಲ ಶರಣ. '೩ಜ್ಞಾನಾದೇವ೩ ಮೋಕ್ಷ'ವೆಂದು, ಪುಣ್ಯಪಾಪವಿಲ್ಲೆಂದು, ಬ್ರಹ್ಮೋಹಂ ಎಂದು ವಾಗದ್ವೈತವ ನುಡಿದು, ದೇಹವಾಸನೆಯನಳಿಯಲಱಿಯದೆ ಸತ್ತು ಹುಟ್ಟುತ್ತಿಹ ವೇದಾಂತಮಾರ್ಗವನಾಚರಿಸುವನಲ್ಲ ಶರಣ. ಮತ್ತೆಂತೆಂದೊಡೆ: ಸತ್ತುವೆನಿಸಿದ ಚೈತನ್ಯಬ್ರಹ್ಮವೆ ಲಿಂಗವೆನಿಸಿತ್ತು. ಆ ಲಿಂಗದ ಸಮವೇತವಾಗಿಪ್ಪ ಚಿತ್ತುವೇ ಆತ್ಮನೆಂಬಂಗವಾಗಿ ಶರಣನೆನಿಸಿದ ಕಾರಣ ಲಿಂಗಾಂಗ ಸಂಬಂಧದ ಅಭೇದಕ್ರೀಯನಱಿದು ಆಚರಿಸಿ ಲಿಂಗವಾದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೪೫

**ವ.** ಹುಸಿಯಿಂದ ಜನಿಸಿದೆನಯ್ಯಾ ಮರ್ತ್ಯಲೋಕದೊಳಯಿಂಕೆ. ಹುಸಿಯಿಂದ ಲಿಂಗವ ಹೆಸರುಗೊಂಡು ಕರೆದೆನಯ್ಯಾ. ಅದು ಎನಗೆ ಭಾವವೂ ಅಲ್ಲ ನಿರ್ಭಾವವೂ ಅಲ್ಲದೆ ನಿಂದುದಯ್ಯಾ. ಅದಱ

೧ ಗುರೋಪವಸ್ಥೆಯು (ಎ.), ಗುರೋಪಾಸ್ತಿ (ರಾ.) ೨ ನೀಱಿ (ಎ.)
೩ ಜ್ಞಾನೋದಯುವೆ (ಎ.)

ಅವಯವಂಗಳೆಲ್ಲಾ ಜಂಗಮವಯ್ಯಾ. ಅದಕ್ಕೆ ಎನ್ನಲುಳ್ಳ [೧]ಸ್ವೈಧಾನವ[೧] ನೀಡಿದೆನಯ್ಯಾ. ಆ ಪ್ರಸಾದಕ್ಕೆ ಶರಣೆಂಬೆನಯ್ಯಾ. ಅದು ಸಾರವೂ ಅಲ್ಲ, ನಿಸ್ಸಾರವೂ ಅಲ್ಲ. ಆ ಪ್ರಸಾದದಲ್ಲಿ ನಾನೇ ತದ್ಗತನಾದೆನಯ್ಯಾ ಕೂಡಲಸಂಗಮದೇವಾ.

**ಟೀ.** ಶಿವಾಂಶಿಕರುಗಳಾದ ಆತ್ಮರುಗಳ ಅಱಿವಿಂಗೆ ಶಿವಾಜ್ಞೆಯಿಂದ ಮಿಥ್ಯಾಮಱವೆಯೆಡೆಗೊಳಲು, ಹುಸಿ ದೇಹ ಕರಣ ಸಂಬಂಧಿಯಾಗಿ ಹುಟ್ಟಿದೆನೆಂಬುದೀಗ 'ಹುಸಿಯಿಂದ ಜನಿಸಿದೆನಯ್ಯಾ ಮರ್ತ್ಯಲೋಕದೊಳಯಿಂಕೆ' ಎಂಬ ಶಬ್ದಕ್ಕರ್ಥ. ಅಂತಾದ ಹುಸಿದೇಹಸಂಬಂಧದಿಂದ ನಾಮರೂಪಿಲ್ಲದ ವಸ್ತುವ ನಾಮರೂಪು ಮಾಡಿ ಕರೆಯಲಾಯಿತ್ತು ಎಂಬುದೀಗ 'ಹುಸಿಯಿಂದ ಲಿಂಗವ ಹೆಸರುಗೊಂಡು ಕರೆದೆನಯ್ಯಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾಲಿಂಗವ ಭಾವಿಸಿಹೆನೆಂದಡೆ ಭಾವಕ್ಕೆ ಭಿನ್ನವಾಗಿ ಗೋಚರಿಸದಾಗಿ ಲಿಂಗವ ಭಿನ್ನವಿಟ್ಟು ಭಾವಿಸುವ ಭಾವವಿಲ್ಲ ಶರಣಂಗೆಂಬುದೀಗ 'ಅದು ಎನಗೆ ಭಾವವೂ ಅಲ್ಲ' ವೆಂಬ ಶಬ್ದಕ್ಕರ್ಥ. ಅಂತು ಲಿಂಗವ ಭಾವಿಸದೆ ಜೀವನಾಗಿ ಸುಮ್ಮನೆ ಇರ್ದವನಲ್ಲ, ಲಿಂಗದಲ್ಲಿ ಅಭಿನ್ನಭಾವಿಯಾಗಿರ್ಪನು ಶರಣ. ಅಂತಿರ್ಪ ಶರಣನ ಸರ್ವಾಂಗ ಲಿಂಗವಾಗಿ ಭಿನ್ನದೋಱದೆ ಇಪ್ಪಿತ್ತೆಂಬುದೀಗ 'ನಿರ್ಭಾವವೂ ಅಲ್ಲದೆ ನಿಂದುದಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಸರ್ವಾಂಗಲಿಂಗವಾದ ಅಂಗದಲ್ಲಿ ಆಚರಿಸುವ ಕರಣಂಗಳೆಲ್ಲಾ ಚರಲಿಂಗವೆಂಬುದೀಗ 'ಅದಱ ಅವಯವಂಗಳೆಲ್ಲಾ ಜಂಗಮವಯ್ಯಾ' ಎಂಬ ಶಬ್ದಕ್ಕರ್ಥ ಅಂತು ಇಂದ್ರಿಯ ಕರಣಂಗಳೆಲ್ಲಾ ಜಂಗಮವಾಗಿಪ್ಪ ಕಾರಣ ಶರಣನ ಅಂಗಕ್ಕೆ ಬಂದ ವಿಷಯ ಪದಾರ್ಥಂಗಳೆಲ್ಲಾ ಜಂಗಮಕ್ಕೆ ಅರ್ಪಿತವಾಯಿತ್ತೆಂಬುದೀಗ 'ಅದಕ್ಕೆ ಎನ್ನಲುಳ್ಳ ಸ್ವೈಧಾನವ ನೀಡಿದೆನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಸರ್ವವಿಷಯಪದಾರ್ಥಂಗಳೆಲ್ಲಾ ಲಿಂಗಾರ್ಪಿತವಾಗಿ ಪ್ರಸಾದವಾದವೆಂದು ಭಕ್ತಿಯಿಂದ ಸೇವಿಸಿದೆನೆಂಬುದೀಗ 'ಆ ಪ್ರಸಾದಕ್ಕೆ ಶರಣೆಂಬೆನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ದೇಹೇಂದ್ರಿಯ ವಿಷಯಪದಾರ್ಥಂಗಳೆಲ್ಲಾ ಲಿಂಗವೆಯಾದ ಕಾರಣ ಶರಣಂಗೆ ಸಂಸಾರವಿಲ್ಲವೆಂಬುದೀಗ 'ಅದು ಸಾರವೂ ಅಲ್ಲ' ವೆಂಬ ಶಬ್ದಕ್ಕರ್ಥ. ಅಂತು ಸಂಸಾರಸಾರವಿಲ್ಲದೆ ಶರಣಂಗೆ ಲಿಂಗಾನಂದಸಾರ ಉಂಟಾದ ಕಾರಣ ನಿಸ್ಸಾರವೂ ಅಲ್ಲವೆಂಬುದೀಗ 'ನಿಸ್ಸಾರವೂ ಅಲ್ಲ' ವೆಂಬ ಶಬ್ದಕ್ಕರ್ಥ. ಅಂತು ಲಿಂಗದಲ್ಲಿ ಭಿನ್ನವಳಿದು ಲಿಂಗಭೋಗೋಪ

೧ ಸ್ವೈದಾನ (ಎ.)

ಭೋಗಿಯಾಗಿರ್ದ ಶರಣನೆಂಬುದೀಗ 'ಆ ಪ್ರಸಾದದಲ್ಲಿ ನಾನೇ ತದ್ಗತನಾದೆ ಕಾಣಾ' ಎಂಬ ಶಬ್ದಕ್ಕರ್ಥ. ೪೬

ವ. ರೂಪನರ್ಪಿಸಿದ ಬಳಿಕ ಅಂಗವೆಂಬುದಿಲ್ಲ. ರುಚಿಯನರ್ಪಿಸಿದ ಬಳಿಕ ಪ್ರಾಣವೆಂಬುದಿಲ್ಲ. ಭಾವ ನಿರ್ಭಾವವ ನಿಜ ನುಂಗಿತ್ತು. ಅರ್ಪಿಸುವ ಪರಿ ಇನ್ನೆಂತೋ ? ರೂಪು ಲಿಂಗ, ರುಚಿ ಜಂಗಮ, ಅರ್ಪಿಸುವ ಅರ್ಪಣ ಮುನ್ನಿಲ್ಲ ಕೂಡಲಚೆನ್ನಸಂಗಮದೇವಾ.

ಟೀ. ದೇಹಸಂಬಂಧವಾದ ಇಂದ್ರಿಯ ವಿಷಯಂಗಳ ರೂಪೆಲ್ಲವ ಇಷ್ಟ ಲಿಂಗಕ್ಕರ್ಪಿಸಿದ ಬಳಿಕ ರೂಪಾಗಿರ್ದ ದೇಹೇಂದ್ರಿಯ ವಿಷಯಂಗಳೆಲ್ಲಾ ಲಿಂಗ ವಾದವೆಂಬುದೀಗ 'ರೂಪನರ್ಪಿಸಿದ ಬಳಿಕ ಅಂಗವೆಂಬುದಿಲ್ಲ' ವೆಂಬ ಶಬ್ದಕ್ಕರ್ಥ. ಆ ರೂಪಿನೊಳಗಣ ರುಚಿಯೇ ಪ್ರಾಣಸಂಬಂಧ. ಅಂತಪ್ಪ ಪ್ರಾಣಸಂಬಂಧವಾದ ರುಚಿಯ ಪ್ರಾಣಲಿಂಗಕ್ಕೆ ಅರ್ಪಿಸಿದ ಬಳಿಕ ಪ್ರಾಣನು ಲಿಂಗವಾಯಿತ್ತೆಂಬುದೀಗ 'ರುಚಿಯನರ್ಪಿಸಿದ ಬಳಿಕ ಪ್ರಾಣವೆಂಬುದಿಲ್ಲ' ವೆಂಬ ಶಬ್ದಕ್ಕರ್ಥ. ಭಾವ ಸಂಬಂಧವೀಗ ತೃಪ್ತಿ, ಅಂತಪ್ಪ ತೃಪ್ತಿಯೆಂಬುದೀಗ ನಿರ್ಭಾವ. ಅಂತು ಭಾವ ಸಂಬಂಧವಾದ ತೃಪ್ತಿಯೇ ಮಹಾಲಿಂಗಕ್ಕರ್ಪಿತವಾದ ಬಳಿಕ ಭಾವತೃಪ್ತಿ ಮಹಾ ಲಿಂಗವಾಯಿತ್ತೆಂಬುದೀಗ 'ಭಾವ ನಿರ್ಭಾವವ ನಿಜ ನುಂಗಿತ್ತು' ಎಂಬ ಶಬ್ದ ಕ್ಕರ್ಥ. ಅಂತು ಶರಣನ ದೇಹ ಮೊದಲಾದ ರೂಪಾದಿ ಪದಾರ್ಥಂಗಳೆಲ್ಲಾ ಇಷ್ಟ ಲಿಂಗಸ್ವರೂಪವಾಯಿತ್ತು. ಪ್ರಾಣ ಮೊದಲಾದ ರುಚಿಯೆಲ್ಲಾ ಚೈತನ್ಯಲಿಂಗವೆ ಯಾಯಿತ್ತಾಗಿ ಅರ್ಪಿಸುವ ಅರ್ಪಿಸಿಕೊಂಬವೆರಡಿಲ್ಲದೆ ಅರ್ಪಿಸುವ ಅರ್ಪಿಸಿ ಕೊಂಬವೆರಡೂ ಲಿಂಗವೆಯೆಂಬುದೀಗ 'ಅರ್ಪಿಸುವ ಪರಿಯಿನ್ನೆಂತೋ ? ರೂಪು ಲಿಂಗ, ರುಚಿ ಜಂಗಮ, ಅರ್ಪಿಸುವ ಅರ್ಪಣ ಮುನ್ನಿಲ್ಲ'ವೆಂಬ ಶಬ್ದಕ್ಕರ್ಥ. ೪೭

ವ. [೧]ಆದಿಯು[೧] ಕುಳಸನ್ನಿತವಾದ ಏಕಾದಶಪ್ರಸಾದದ [೨]ಕುಳವ[೨] ತಿಳಿವಡೆ ಪ್ರಥಮದಲ್ಲಿ ಗುರುಪ್ರಸಾದ, ದ್ವಿತೀಯದಲ್ಲಿ ಲಿಂಗಪ್ರಸಾದ, ತೃತೀಯ ದಲ್ಲಿ ಜಂಗಮಪ್ರಸಾದ, ಚತುರ್ಥದಲ್ಲಿ ಪ್ರಸಾದಿಯ ಪ್ರಸಾದ, ಪಂಚ ಮದಲ್ಲಿ ಆಪ್ಯಾಯನ ಪ್ರಸಾದ, ಷಷ್ಠಮದಲ್ಲಿ ಸಮಯಪ್ರಸಾದ, ಸಪ್ತಮದಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ, ಅಷ್ಟಮದಲ್ಲಿ ಅಂತಃ ಕರಣಚತುಷ್ಟಯವಿರಹಿತ ಪ್ರಸಾದ, ನವಮದಲ್ಲಿ ಸದ್ಭಾವ ಪ್ರಸಾದ,

೧ ಅನಾದಿಯ (ಎ.), ಆದಿ (ಹು.). ೨ ಭೇದವ (ಹು.)

ದಶಮದಲ್ಲಿ ಸಮತಾಪ್ರಸಾದ, ಏಕಾದಶದಲ್ಲಿ ಜ್ಞಾನಪ್ರಸಾದ. ಇಂತೀ ಏಕಾದಶಪ್ರಸಾದಸ್ಥಲವನತಿಗಳೆದ ಕೂಡಲಚೆನ್ನಸಂಗಯ್ಯನಲ್ಲಿ ಐಕ್ಯ ಪ್ರಸಾದಿಗೆ ನಮೋ ನಮೋ ಎಂಬೆ.

೮೬. ಜ್ಞಾನೋದಯವಾಗಿ ಗುರುವನಱಸುವಾತಂಗೆ ಗುರು ಕರುಣಿಸಿ ಪ್ರಸನ್ನವಾದುದೀಗ ಪ್ರಥಮವಾದ ಕಾರಣ 'ಪ್ರಥಮದಲ್ಲಿ ಗುರುಪ್ರಸಾದ' ವೆಂಬ ಶಬ್ದಕ್ಕರ್ಥ. ಅಂತು ಗುರುಕರುಣವಾದಲ್ಲಿ ಮಹಾಘನಲಿಂಗವು ಕರಸ್ಥಲಕ್ಕೆ ಬಂದು ಪ್ರಸನ್ನವಾದುದು ಎರಡನೆಯದೆಂಬುದೀಗ 'ದ್ವಿತೀಯದಲ್ಲಿ ಲಿಂಗಪ್ರಸಾದ' ವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಕಳಾಚೈತನ್ಯವೇ ಜಂಗಮವಾದ ಕಾರಣ ಆ ಲಿಂಗಕಳಾಚೈತನ್ಯವು ತನ್ನ ಅಱಿವಿಂಗೆ ಪ್ರಸನ್ನವಾದುದು ಮೂಱನೆಯದೆಂಬುದೀಗ 'ತೃತೀಯದಲ್ಲಿ ಜಂಗಮಪ್ರಸಾದ' ವೆಂಬ ಶಬ್ದಕ್ಕರ್ಥ. ಅಂತಪ್ಪ ಗುರು ಲಿಂಗ ಜಂಗಮದ ಪ್ರಸನ್ನಪ್ರಸಾದವ ಪಡೆದಿಪ್ಪ ತ್ರಿವಿಧಲಿಂಗಾನುಭಾವಿಗಳ ಅನುಭವ ತನ್ನ ಅಱಿವಿಂಗೆ ಪ್ರಸನ್ನವಾದುದು ನಾಲ್ಕನೆಯದೆಂಬುದೀಗ 'ಚತುರ್ಥದಲ್ಲಿ ಪ್ರಸಾದಿಯ ಪ್ರಸಾದ' ವೆಂಬ ಶಬ್ದಕ್ಕರ್ಥ. ಇಂತು ಶಿವಶರಣರ ಅನುಭಾವ ಸಂಗದಿಂದ ತನ್ನ ಅಱಿವಿಂಗೆ ಶಿವಾಪೇಕ್ಷೆಯ ಆಪ್ಯಾಯನ ಘನವಾದುದು ಐದನೆಯದಾದಕಾರಣ 'ಪಂಚಮದಲ್ಲಿ ಆಪ್ಯಾಯನ ಪ್ರಸಾದ' ವೆಂಬ ಶಬ್ದಕ್ಕರ್ಥ. ಇಂತು ಶಿವಶರಣರ ಅನುಭಾವ ಸಂಗದಿಂದ ಶಿವಾಪೇಕ್ಷೆ ಘನವಾಗಿ, ಶಿವಲಾಂಛನವೆಲ್ಲವ ಶಿವನೆಂದು ಕಾಬ ಭಾವ ಘಟಿಸಿ, ಅವರ ಪ್ರಸಾದವ ಕೊಂಬುದು ಆಱನೆಯದೆಂಬುದೀಗ 'ಷಷ್ಠಮದಲ್ಲಿ ಸಮಯಪ್ರಸಾದ' ವೆಂಬ ಶಬ್ದಕ್ಕರ್ಥ. ಅಂತು ಶಿವಲಾಂಛನ ವೆಲ್ಲಾ ಶಿವನೆಂಬ ದೃಢಭಾವದಿಂದ ಶಿವಲಾಂಛನಕ್ಕೆ ರೂಪಾದಿ ಪದಾರ್ಥಂಗಳ ನರ್ಪಿಸಿ ಪಡೆದ ಸಮಯಪ್ರಸಾದರೂಪ ಇಷ್ಟಲಿಂಗಾರ್ಪಿತವ ಮಾಡಿ ಪ್ರಸಾದವ ಭುಂಜಿಸಿದೊಡೆ ದೇಹೇಂದ್ರಿಯಂಗಳೆಲ್ಲಾ ಲಿಂಗರೂಪೆಯಾದ ಕಾರಣ ಅದು ಏಳ ನೆಯದೆಂಬುದೀಗ 'ಸಪ್ತಮದಲ್ಲಿ ಪಂಚೇಂದ್ರಿಯ ವಿರಹಿತ ಪ್ರಸಾದ' ವೆಂಬ ಶಬ್ದಕ್ಕರ್ಥ. ಅಂತು ಇಷ್ಟಲಿಂಗಕ್ಕರ್ಪಿಸಿದ ರೂಪಿನೊಳಗಣ ರುಚಿಪ್ರಸಾದವ ಪ್ರಾಣಲಿಂಗಕ್ಕರ್ಪಿಸಲು, ಪ್ರಾಣ ಮೊದಲಾದ ಅಂತಃಕರಣಂಗಳೆಲ್ಲಾ ಲಿಂಗವಾ ಗಿಪ್ಪುದೆಂಟನೆಯದೆಂಬುದೀಗ 'ಅಷ್ಟಮದಲ್ಲಿ ಅಂತಃಕರಣ ಚತುಷ್ಟಯವಿರಹಿತ ಪ್ರಸಾದ' ವೆಂಬ ಶಬ್ದಕ್ಕರ್ಥ. ಅಂತು ಸಗುಣಪ್ರಸಾದದ ರೂಪುರುಚಿಗಳ ಆನಂದ ಪ್ರಸಾದವ ಭಾವಲಿಂಗಕ್ಕೆ ಅರ್ಪಿಸಿ ಭಾವಲಿಂಗವಾದುದು ಒಂಬತ್ತನೆಯದೆಂಬು ದೀಗ 'ನವಮದಲ್ಲಿ ಸದ್ಭಾವಪ್ರಸಾದ' ವೆಂಬ ಶಬ್ದಕ್ಕರ್ಥ. ಅಂತು ಒಳಹೊಱ ಗೆನ್ನದೆ ಸರ್ವಾಂಗಲಿಂಗವಾಗಿ ಭಿನ್ನದೋಱದೆಯಿರ್ದ ಶರಣಂಗೆ ಲಿಂಗವು ದೂರಸ್ಥ ವೆಂದು ಭಾವಿಸಬೇಕು, ಬೆರಸಬೇಕು ಎಂಬ ಅವಸ್ಥೆಗಳೇನೂ ಇಲ್ಲದೆ ನಿರಾತಂಕ

ವಾಗಿ ಸಮಾಧಾನವನೆಯ್ದಿದ್ದುದು ಹತ್ತನೆಯದಾದಕಾರಣ ' ದಶಮದಲ್ಲಿ ಸಮತಾ ಪ್ರಸಾದ ' ವೆಂಬ ಶಬ್ದಕ್ಕರ್ಥ. ಅಂತು ಭಿನ್ನಾವಸ್ಥೆಗಳೇನೂ ಇಲ್ಲದೆ ಸಮಾಧಾನಿಸಿ ನಿಂದ ನಿಲುಕಡೆಯಲ್ಲಿ ಸಿರ್ಥರವಾಗಿ ಲಿಂಗ ತಾನಾಗಿ ಕಾಣುತ್ತಿಪ್ಪ ಅಭಿನ್ನಜ್ಞಾನಾ ನಂದಸುಖದಲ್ಲಿಪ್ಪುದು ಹನ್ನೊಂದನೆಯದಾದ ಕಾರಣ ' ಏಕಾದಶದಲ್ಲಿ ಜ್ಞಾನ ಪ್ರಸಾದ ' ವೆಂಬ ಶಬ್ದಕ್ಕರ್ಥ. ಅಂತು ಪ್ರಸಾದ ಹನ್ನೊಂದೆಂಬ ಖಂಡಿತವನಳಿದು ಅಖಂಡಿತ ಲಿಂಗದೊಳಗೆ ಬೆರೆದು ಬೇಱಿಲ್ಲದಿಪ್ಪ ಶರಣ ಭೋಗಿಸಿದುದೆಲ್ಲಾ ಲಿಂಗಾ ರ್ಪಿತವಾಗಿ ಪ್ರಸಾದವಪ್ಪುದು. ಅಂತಪ್ಪ ಅಖಂಡಿತಪ್ರಸಾದಿಗೆ ನಮಸ್ಕಾರವ ಮಾಡುತ್ತಿರ್ದನು ಶರಣನೆಂಬುದೀಗ ' ಇಂತೀ ಏಕಾದಶಪ್ರಸಾದಸ್ಥಲವನತಿಗಳೆದ ಐಕ್ಯಪ್ರಸಾದಿಗೆ ನಮೋ ನಮೋಯೆಂಬೆ ' ನೆಂಬ ಶಬ್ದಕ್ಕರ್ಥ. ೪೮

ವ. ಪಸಾದವನೆ ಬಿತ್ತಿ ಪ್ರಸಾದವನೆ ಬೆಳೆದ ಫಲದ ಪರಿಯ ಬೆಸಗೊಳ ಲಿಲ್ಲ ಪದಾರ್ಥಕಾಯ ಪ್ರಸಾದಕ್ಕೆ ಭೇದವಿಲ್ಲ ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ!

ಟೀ. ಗುರುಮುಖದಿಂದೊದಗಿದ ಪ್ರಸಾದಲಿಂಗವ ತನುವೆಂಬ ಭೂಮಿಯ ಮೇಲೆ ಬಿತ್ತಿ, ಇಷ್ಟ ಪ್ರಾಣ ಭಾವವೆಂಬ ಮೂಱುಮಾಡಿ, ಆಚಾರಾದಿ ಮಹಾಲಿಂಗ ವೆಂಬ ಆಱುಮಾಡಿ, ಸರ್ವಾಂಗಲಿಂಗವ ಮಾಡಿ ಬೆಳಸಿದ ಶರಣನೆಂಬುದೀಗ ' ಪ್ರಸಾದವನೆ ಬಿತ್ತಿ ಪ್ರಸಾದವನೆ ಬೆಳೆದ ' ನೆಂಬ ಶಬ್ದಕ್ಕರ್ಥ. ಅಂತು ಸರ್ವಾಂಗ ಲಿಂಗವಾದ ಶರಣನ ಫಲಪದವನುಪಮಿಸಬಾರದೆಂಬುದೀಗ ' ಫಲದ ಪರಿಯ ಬೆಸಗೊಳಲಿಲ್ಲ ' ವೆಂಬ ಶಬ್ದಕ್ಕರ್ಥ. ಅಂತು ಶರಣನ ದೇಹ ಮೊದಲಾದ ವಿಷಯ ಪದಾರ್ಥಂಗಳೆಲ್ಲವು ಲಿಂಗವೆಯಾಗಿ ಭಿನ್ನವಳಿದಿಪ್ಪುದು ಶರಣಂಗೆಂಬುದೀಗ ' ಪದಾರ್ಥಕಾಯ ಪ್ರಸಾದಕ್ಕೆ ಭೇದವಿಲ್ಲ ನಿಮ್ಮ ಶರಣಂಗೆ'ಂಬ ಶಬ್ದಕ್ಕರ್ಥ. ೪೯

ವ. ಆತ್ಮಲಿಂಗ, ಪರಮಾತ್ಮ ಜಂಗಮ, ತನುಮಧ್ಯಪ್ರಸಾದವಾಯಿತ್ತು. ನಿಶ್ಚಿಂತನಿವಾಸವಾಯಿತ್ತು, ಕೂಡಲಚೆನ್ನಸಂಗನ ಶರಣರ ಸಂಗದಿಂದ ನಿಶ್ಚಿಂತನಿವಾಸವಾಯಿತ್ತು.

ಟೀ. ಗಣಮೇಳದಿಂ ಶ್ರೀಗುರು ಇಷ್ಟಲಿಂಗಕಳಾಸಂಬಂಧವ ಜೀವಾತ್ಮಂಗೆ ಮಾಡಿ, ಜೀವಭಾವವನಳಿದು ಶಿವಾತ್ಮನ ಮಾಡಿದರಾಗಿ ' ಆತ್ಮಲಿಂಗ ' ವೆಂಬ ಶಬ್ದಕ್ಕರ್ಥ. ಅಂತು ಜೀವಭಾವವಳಿದು ತನ್ನನೆಲ್ಲಾ ಲಿಂಗವೆಂದೇ ಕಾಬ ಪರಮ ಚೈತನ್ಯಜ್ಞಾನಸ್ವರೂಪೇ ಜಂಗಮವೆಂಬುದೀಗ ' ಪರಮಾತ್ಮ ಜಂಗಮ ' ವೆಂಬ ಶಬ್ದಕ್ಕರ್ಥ. ಅಂತು ಅಱಿವ ಪರಮಚೈತನ್ಯಜ್ಞಾನಸ್ವರೂಪವೇ ಜಂಗಮವಾಗಿ

ಅಱುಹಿಸಿಕೊಂಬ ಜೀವಾತ್ಮನೆಲ್ಲಾ ಲಿಂಗವಾಗಿರ್ದ ಶರಣನ ದೇಹಸುಖಂಗಳ ನಱಿದು ಅರ್ಪಿಸುವ ಅಱಿವೆಲ್ಲಾ ಜಂಗಮ. ಅರ್ಪಿಸಿಕೊಂಡು ಭೋಗಿಸುವ ನೆಲ್ಲಾ ಲಿಂಗವಾದ ಕಾರಣ ಅರ್ಪಿತವಾದ ದೇಹಾದಿಸುಖಂಗಳೆಲ್ಲಾ ಲಿಂಗವಾದ ನೆಂಬುದೀಗ 'ತನುಮಧ್ಯಪ್ರಸಾದವಾಯಿತ್ತು' ಎಂಬ ಶಬ್ದಕ್ಕರ್ಥ. ಅಂತು ದೇಹ ಲಿಂಗವಾದ ಬಳಿಕ ಭವಬಂಧನದ ಚಿಂತೆ ಹೋಗಿ ನಿಶ್ಚಿಂತನಿವಾಸವಾಯಿತ್ತು ಶರಣಂಗೆ. ಅಂತಾದ ನಿಶ್ಚಿಂತದ ಸುಖವು ನಿಮ್ಮ ಶರಣರ ಅನುಭವಸಂಗದಿಂದ ಲೆಂಬುದೀಗ 'ನಿಶ್ಚಿಂತನಿವಾಸವಾಯಿತ್ತು, ಕೂಡಲಚೆನ್ನಸಂಗನ ಶರಣರ ಸಂಗ ದಿಂದ ನಿಶ್ಚಿಂತನಿವಾಸವಾಯಿತ್ತು' ಎಂಬ ಶಬ್ದಕ್ಕರ್ಥ. ೫೦

**ವ.** ಲಿಂಗದಲ್ಲಿ ಕೊಡಲುಂಟು ಕೊಳಲುಂಟಾಗಿ ಅರ್ಪಿತ. ಜಂಗಮದಲ್ಲಿ ಕೊಟ್ಟು ಕೊಳಲಿಲ್ಲಾಗಿ ಅನರ್ಪಿತ. ಪ್ರಸಾದದಲ್ಲಿ ಕೊಳಲೂ ಕೊಡಲೂ ಇಲ್ಲವಾಗಿ ಉಭಯನಾಸ್ತಿ. ಇಂತೀ ತ್ರಿವಿಧ ಸಂಚದ ಸನುಮತವ ಕೂಡಲಚೆನ್ನಸಂಗಾ ನಿಮ್ಮ ಶರಣ ಬಲ್ಲ!

**ಟೀ.** ಲಿಂಗವ ಪೂಜಿಸಿದಡೆ ಫಲಪದವ ಕೊಡುವುದಾಗಿ, ಅದ ಜನ್ಮಾಂತರ ದಲ್ಲಿ ಬಂದು ಅನುಭವಿಸಬೇಕೆಂಬುದೀಗ 'ಲಿಂಗದಲ್ಲಿ ಕೊಡಲುಂಟು ಕೊಳ ಲುಂಟಾಗಿ ಅರ್ಪಿತ'ವೆಂಬ ಶಬ್ದಕ್ಕರ್ಥ. ಜಂಗಮವ ಪೂಜೆಯ ಮಾಡಿದಡೆ ಫಲಪದಂಗಳಿಲ್ಲವಾಗಿ ತಿರುಗಿ ಬಂದು ಅನುಭವಿಸಲಿಲ್ಲವೆಂಬುದೀಗ 'ಜಂಗಮದಲ್ಲಿ ಕೊಟ್ಟು ಕೊಳಲಿಲ್ಲಾಗಿ ಅನರ್ಪಿತ'ವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಜಂಗ ಮದ ಪ್ರಸಾದವೆ ವಸ್ತುವೆಂದಱಿದು ಪ್ರಸಾದವ ಕೊಂಡಾತನು ಪ್ರಸಾದವೆಯಪ್ಪನು. ಅಂತು ಪ್ರಸಾದ ಪ್ರಸಾದವನೆ ಮಾಳ್ಪುದಲ್ಲದೆ ಪ್ರಸಾದದಲ್ಲಿ ಕೊಟ್ಟು ಕೊಂಬ ಪೂಜಾಫಲಂಗಳೆಂಬವೆರಡಿಲ್ಲವೆಂಬುದೀಗ 'ಪ್ರಸಾದದಲ್ಲಿ ಕೊಡಲೂ ಕೊಳಲೂ ಇಲ್ಲವಾಗಿ ಉಭಯನಾಸ್ತಿ' ಎಂಬ ಶಬ್ದಕ್ಕರ್ಥ. ಅಂತು ಲಿಂಗ ಜಂಗಮ ಪ್ರಸಾದವೆಂಬ ಮೂಱಱ ವರ್ಮವ ತಿಳಿದು ಪ್ರಸಾದವೇ ಪರವೆಂದಱಿದು ಪ್ರಸಾದಿ ಯಾದ ಶರಣಂಗೆ ತ್ರಿವಿಧವೂ ಭಿನ್ನವಿಲ್ಲವೆಂಬುದೀಗ 'ಇಂತೀ ತ್ರಿವಿಧದ ಸಂಚದ ಸನುಮತವ ನಿಮ್ಮ ಶರಣ ಬಲ್ಲ'ನೆಂಬ ಶಬ್ದಕ್ಕರ್ಥ. ೫೧

**ವ.** ತ್ರಿವಿಧಪ್ರಸಾದವೆಂದೆಂಬರು, [೧]ಅದೆಂತಹುದೋ?[೧] ಶುದ್ಧಪ್ರಸಾದ ಗುರುವಿನದು, ಸಿದ್ಧಪ್ರಸಾದ ಲಿಂಗದದು, ಪ್ರಸಿದ್ಧಪ್ರಸಾದ ಜಂಗಮ

೧ ಅದೆಂತಾದೊ (ಎ.)

ದದು. ಇಂತೀ ತ್ರಿವಿಧವೊಂದಾದವರ ತೋಱಿ ಬದುಕಿಸಾ [೧]ಕೂಡಲ ಸಂಗಮದೇವಾ ![೧]

ಟೀ. ಗುರು ಲಿಂಗ ಜಂಗಮುಕ್ಕೆ ಪದಾರ್ಥಂಗಳ ಸಮರ್ಪಿಸಿ ಪಡೆದ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದಂಗಳ ಭಿನ್ನವಿಟ್ಟು ಅಱಿದು ಭೋಗಿಸುವ ಭಿನ್ನಭಾವಿಗಳಿಗೆ ಫಲಪದವುಂಟು. ತನುಮನಧನವ ಗುರುಲಿಂಗಜಂಗಮುಕ್ಕೆ ಅರ್ಪಿತವ ಮಾಡಿ ತನು ಶುದ್ಧಪ್ರಸಾದವಾಯಿತ್ತು, ಮನ ಸಿದ್ಧಪ್ರಸಾದವಾಯಿತ್ತು, ದ್ರವ್ಯಪದಾರ್ಥಂಗಳೆಲ್ಲಾ ಪ್ರಸಿದ್ಧಪ್ರಸಾದವಾಯಿತ್ತೆಂಬ ಅಭಿನ್ನಭಾವ ಘಟಿಸಿದ ಶರಣನೇ ತ್ರಿವಿಧ ಪ್ರಸಾದಸ್ವರೂಪನು. ಅಂತಪ್ಪ ಶರಣನ ದರ್ಶನ ಸ್ಪರ್ಶನವ ಮಾಡಿದವರೆಲ್ಲಾ ನಿತ್ಯರಾಗಿ ಬಾಳ್ವರೆಂಬುದೀ ವಚನದ ತಾತ್ಪರ್ಯಾರ್ಥ. ೫೨

ವ. ಲಿಂಗದ ಘನವನಱಿದೆನೆಂದಡೆ ಅದೇ ಕುಚಿತ್ತ. ಜಂಗಮದ ಘನವ ಅಱಿದೆನೆಂದಡೆ ಅದೇ ಕುಚಿತ್ತ. ಪ್ರಸಾದದ ಘನವನಱಿದೆನೆಂದಡೆ ಅದೇ ಕುಚಿತ್ತ. ಗುರುಲಿಂಗಜಂಗಮದಲೊದಗಿದ ಪ್ರಸಾದದ ಘನಕ್ಕೆ ಘನಮನವೇದ್ಯವೆಂದು ತೋಱಿದನೆನಗೆ ಶ್ರೀಗುರು. ಕೂಡಲ ಚೆನ್ನಸಂಗಯ್ಯನ ಶರಣಂಗಲ್ಲದಿಲ್ಲ.

ಟೀ. ನಿಷ್ಕಲ ಪರಬ್ರಹ್ಮವೇ ಸತ್ತು ಚಿತ್ತಾನಂದಸ್ವರೂಪು. ಅಂತಪ್ಪ ಸತ್ತುವೇ ಲಿಂಗ, ಚಿತ್ತುವೇ ಜಂಗಮ, ಆನಂದವೇ ಪ್ರಸಾದವಾಗಿ ಇಪ್ಪುದೆಂದವಱ ಘನವ ಶ್ರುತಿ ಸ್ಮೃತಿ ಜ್ಞಾನಂಗಳಿಂದಱಿದಾಗವೇ ತಾವು ಬ್ರಹ್ಮವಾದೆವೆಂಬ ಹಮ್ಮಿನ ಬಱಿಯಱಿವೆಲ್ಲಾ ಅಜ್ಞಾನಧರ್ಮವೆಂಬುದೀಗ 'ಲಿಂಗದ ಘನವನಱಿದೆನೆಂದಡೆ ಅದೇ ಕುಚಿತ್ತ. ಜಂಗಮದ ಘನವನಱಿದೆನೆಂದಡೆ ಅದೇ ಕುಚಿತ್ತ. ಪ್ರಸಾದದ ಘನವನಱಿದೆನೆಂದಡೆ ಅದೇ ಕುಚಿತ್ತ'ವೆಂಬ ಶಬ್ದಕ್ಕರ್ಥ. ಅಂತು ಬಱಿಯ ಅದ್ವೈತಜ್ಞಾನವೆಲ್ಲಾ ಅಜ್ಞಾನವೆಂದದ ಬಿಟ್ಟು ಗುರೂಪದೇಶವಿಡಿದು ಗುರುಲಿಂಗ ಜಂಗಮದ ಪ್ರಸಾದವೇ ಮಹಾಘನವಸ್ತುವೆಂದಱಿದು, ಕ್ರೀಯಿಂದ ಗ್ರಹಿಸಲು ತನುಮನಪ್ರಾಣಂಗಳೆಲ್ಲಾ ಮಹಾಘನವಸ್ತುವಪ್ಪವು. ಅಂತಪ್ಪ ಕ್ರಿಯಾಜ್ಞಾನ ಶಿವಶರಣಂಗಲ್ಲದಿಲ್ಲವೆಂಬುದೀಗ 'ಗುರುಲಿಂಗಜಂಗಮದಲೊದಗಿದ ಪ್ರಸಾದದ ಘನಕ್ಕೆ ಮನವೇದ್ಯವೆಂದು ತೋಱಿದನೆನಗೆ ಶ್ರೀಗುರು. ಕೂಡಲಚೆನ್ನಸಂಗಯ್ಯನ ಶರಣಂಗಲ್ಲದಿಲ್ಲ'ವೆಂಬ ಶಬ್ದಕ್ಕರ್ಥ. ೫೩

೧ ಕೂಡಲಚೆನ್ನಸಂಗಮದೇವ (ಹು.)

ವ. ಭಾವದಿಂದಲಾದ ಶೇಷವ ಕ್ರೀಗರ್ಪಿಸುವೆ. ಕ್ರೀಯಿಂದಲಾದ ಶೇಷವ ನಿಷ್ಕ್ರೀಗರ್ಪಿಸುವೆ. ನಿಃಕ್ರೀಯಿಂದಲಾದ ಶೇಷವ ಭಕ್ತಿಗರ್ಪಿಸುವೆ. ಭಕ್ತಿಯಿಂದಲಾದ ಶೇಷವ ಜಂಗಮುಕ್ಕರ್ಪಿಸುವೆ. ಜಂಗಮದಿಂದಾದ ಶೇಷವ ಪ್ರಸಾದಕ್ಕರ್ಪಿಸುವೆ. ಪ್ರಸಾದದಿಂದಾದ ಶೇಷವ ಲಿಂಗಕ್ಕರ್ಪಿಸುವೆ. ಲಿಂಗದಿಂದಾದ ಜ್ಞಾನ, ಜ್ಞಾನದಿಂದ ತೃಪ್ತನಾದೆ ಕಾಣಾ ಕಲಿದೇವರ ದೇವಯ್ಯಾ!

ಟೀ. 'ಯಥಾಕಲಾ ತಥಾ ಭಾವೋ ಯಥಾ ಭಾವಸ್ತಥಾಮನಃ' ಎಂದು ಮಹಾಘನವಸ್ತು ಶ್ರೀಗುರುವಿನ ಭಾವದಿಂದೊಗೆದುದು ಇಷ್ಟಲಿಂಗವಾಗಿ ಶರಣನ ಕ್ರೀಗೊಳಗಾಯಿತ್ತೆಂಬುದೀಗ 'ಭಾವದಿಂದಾದ ಶೇಷವ ಕ್ರೀಗರ್ಪಿಸುವೆ' ನೆಂಬ ಶಬ್ದಕ್ಕರ್ಥ. ಅಂತು ಲಿಂಗಕ್ರಿಯಾಸಂಬಂಧದಿಂದ ಅಂಗವೆಲ್ಲಾ ಲಿಂಗವಾದ ಕ್ರಿಯಾಲಿಂಗವ ಪ್ರಾಣಸಂಬಂಧವ ಮಾಡಿದ ಶರಣನೆಂಬುದೀಗ 'ಕ್ರೀಯಿಂದಲಾದ ಶೇಷವ ನಿಃಕ್ರೀಗರ್ಪಿಸುವೆ' ನೆಂಬ ಶಬ್ದಕ್ಕರ್ಥ. ಅಂತು ಪ್ರಾಣನು ಲಿಂಗ ಸಂಬಂಧದಿಂದ ಪ್ರಾಣನೆಲ್ಲಾ ಲಿಂಗವಾಗಿ ಭೇದದೋಱದೆ ಇರ್ದ ಕೂಟವೀಗ ಭಕ್ತಿಯೆಂದು ಪ್ರಾಣಲಿಂಗವ ಭಕ್ತಿಗಾರೋಪಿಸಿದ ಶರಣನೆಂಬುದೀಗ 'ನಿಃಕ್ರೀಯಿಂದಾದ ಶೇಷವ ಭಕ್ತಿಗರ್ಪಿಸುವೆ' ನೆಂಬ ಶಬ್ದಕ್ಕರ್ಥ. ಅಂತು ಭಿನ್ನವಳಿದ ಅಭೇದ್ಯವೇ ಭಕ್ತಿ. ಅಂತಾದ ಅಭೇದ್ಯದಿಂದ ಚರಿಸುವ ಕರಣಂಗಳೆಲ್ಲಾ ಚರಲಿಂಗವಾದವಾಗಿ ಚರಲಿಂಗಕ್ಕಾರೋಪಿತವ ಮಾಡಿದ ಶರಣನೆಂಬುದೀಗ 'ಭಕ್ತಿಯಿಂದಾದ ಶೇಷವ ಜಂಗಮುಕ್ಕರ್ಪಿಸುವೆ' ನೆಂಬ ಶಬ್ದಕ್ಕರ್ಥ. ಅಂತು ಕರಣಂಗಳು ಚರಲಿಂಗವಾಗಿ ತುಡುಕಿ ಮುಟ್ಟಿದ ಪದಾರ್ಥಂಗಳೆಲ್ಲವು ಪ್ರಸಾದವೆಂದು ಆರೋಪಿಸಿದ ಶರಣನೆಂಬುದೀಗ 'ಜಂಗಮದಿಂದಾದ ಶೇಷವ ಪ್ರಸಾದಕ್ಕರ್ಪಿಸುವೆ'ನೆಂಬ ಶಬ್ದಕ್ಕರ್ಥ. ಅಂತಪ್ಪ ಪ್ರಸಾದವೇ ಲಿಂಗ. ಅಂತು ಲಿಂಗಸ್ವರೂಪವಾದ ಪದಾರ್ಥಂಗಳು ಇಷ್ಟಲಿಂಗಕ್ಕರ್ಪಿಸುತ್ತಿರ್ಪನು ಶರಣನೆಂಬುದೀಗ 'ಪ್ರಸಾದದಿಂದಾದ ಶೇಷವ ಲಿಂಗಕ್ಕರ್ಪಿಸುವೆ' ನೆಂಬ ಶಬ್ದಕ್ಕರ್ಥ. ಅಂತು ಅಂಗ ಪ್ರಾಣ ಕರಣ ಇಂದ್ರಿಯ ವಿಷಯಪದಾರ್ಥಂಗಳೆಲ್ಲವು ಲಿಂಗಸ್ವರೂಪಾದುದನಱಿದು ಲಿಂಗಕ್ಕರ್ಪಿಸುತ್ತಿರ್ಪ ಶರಣಂಗೆ ಅಭಿನ್ನಜ್ಞಾನ ನಿರ್ಧರವಾಯಿತ್ತೆಂಬುದೀಗ 'ಲಿಂಗದಿಂದಾದ ಜ್ಞಾನ'ವೆಂಬ ಶಬ್ದಕ್ಕರ್ಥ. ಅಂತು ಅಭಿನ್ನಜ್ಞಾನ ನಿರ್ಧರವಾದಲ್ಲಿ ಸರ್ವಾಪೇಕ್ಷೆಯುಡಗಿತ್ತೆಂಬುದೀಗ 'ಜ್ಞಾನದಿಂದ ತೃಪ್ತನಾದೆ ಕಾಣಾ' ಎಂಬ ಶಬ್ದಕ್ಕರ್ಥ. ೫೪

ವ. ಅಗ್ನಿ ಮುಟ್ಟಲು ತೃಣವಗ್ನಿಯಪ್ಪುದು ತಪ್ಪದಯ್ಯಾ. ಗುರುಪ್ರಸಾದ

ಅಂಗ ೧ಸೋಂಕಿದಲ್ಲಿ೧ ಸರ್ವಾಂಗ ಗುರುವಪ್ಪುದು ತಪ್ಪದಯ್ಯಾ. ಲಿಂಗಪ್ರಸಾದ ಮನ ೧ಸೋಂಕಿದಲ್ಲಿ೧ ಮನ ಲಿಂಗವಪ್ಪುದು ತಪ್ಪದಯ್ಯಾ. ಜಂಗಮ ಪ್ರಸಾಧ ಅಱಿವು ೧ಸೋಂಕಿದಲ್ಲಿ೧ ಅಖಂಡಿತ ಪ್ರಸನ್ನ ಪ್ರಸಾದವಪ್ಪುದು ತಪ್ಪದಯ್ಯಾ. ಶಿವ ಶಿವಾ ! ಪ್ರಸಾದದ ಮಹಿಮೆಯನೇನೆಂದುಪಮಿಸುವೆ ? ಪ್ರಸಾದವೇ ಗುರು, ಪ್ರಸಾದವೇ ಲಿಂಗ, ಪ್ರಸಾದವೇ ಜಂಗಮ, ಪ್ರಸಾದವೇ ಪರಾತ್ಪರ, ಪ್ರಸಾದವೇ ಪರಮಾನಂದ, ಪ್ರಸಾದವೇ ಪರಮಾಮೃತ, ಪ್ರಸಾದವೇ ಪರಮಜ್ಞಾನ, ಪ್ರಸಾದವೇ ವಾಙ್ಮನೋತೀತ, ಪ್ರಸಾದವೇ ನಿತ್ಯಪರಿಪೂರ್ಣ. ಇಂತಪ್ಪ ಪ್ರಸಾದವ ಕೊಂಡು ಬದುಕಿದೆನಯ್ಯಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ !

**ಟೀ.** ಪ್ರಸಾದವೆಂದಡೆ ಪರವಸ್ತು. ಅಂತಪ್ಪ ಪರವಸ್ತುವೇ ಗುರುಲಿಂಗಜಂಗಮವಾಗಿಪ್ಪ ಕಾರಣ, ಆ ಗುರುಲಿಂಗಜಂಗಮಕ್ಕೆ ಅರ್ಪಿತವಾದ ಪದಾರ್ಥಂಗಳೆಲ್ಲಾ ಪ್ರಸಾದಸ್ವರೂಪಮಪ್ಪ ಪರವಸ್ತುವೆಂದಱಿದು ಪ್ರಸಾದಿಯಾದಾತನು ಪರಬ್ರಹ್ಮವೆ ಎಂಬುದೀ ವಚನದ ತಾತ್ಪರ್ಯಾರ್ಥ. ೫೫

**ವ.** ಲೋಹ ಪರುಷವ ಮುಟ್ಟುವುದಲ್ಲದೆ ಪರುಷ ಲೋಹವ ಮುಟ್ಟುವುದೇ ? ಅಂಗವಿಡಿದಂಗೆ ಲಿಂಗವುಂಟಲ್ಲದೆ ಲಿಂಗವಿಡಿದಂಗೆ ಅಂಗವುಂಟೇ ? ಅಣೋರಣೀಯಾನ್ ಮಹತೋ ಮಹೀಯಾನ್ ಹಿರಿದಿಂಗೆ ಹಿರಿದು ಕಿಱಿದಿಂಗೆ ಕಿಱಿದು ವಾಙ್ಮನಕ್ಕಗೋಚರ ಕೂಡಲಸಂಗಮದೇವ ಸ್ವರೂಪುಪ್ರಸಾದ ನಿರೂಪುಪ್ರಸಾದದಿಂದ ನಿಂದುದು!

**ಟೀ.** ಕಬ್ಬುನ ಪರುಷವ ಮುಟ್ಟೆ ಸುವರ್ಣವಹುದು ತಥ್ಯ. ಪರುಷ ಕಬ್ಬುನವ ಮುಟ್ಟೆ ಕಬ್ಬುನವಾದಿತ್ತೆಂಬುದು ತಥ್ಯವಲ್ಲದ ಹಾಂಗೆ ಎಂದೆಂದೂ ಮಲಮಾಯಾದಿ ದೇಹಸಂಬಂಧಿಯಪ್ಪ ಜೀವ ತಾನೆಂದು ಲಿಂಗವ ಭಿನ್ನವಿಟ್ಟು ಪೂಜಿಸಿ ಫಲಪದವ ಪಡೆದು ಬದುಕಿಹೆನೆಂಬಾತಂಗೆ ಲಿಂಗವು ಭಿನ್ನವಾಗಿಪ್ಪುದೆಂಬುದೀಗ 'ಅಂಗವಿಡಿದಂಗೆ ಲಿಂಗವುಂಟಲ್ಲದೆ' ಎಂಬ ಶಬ್ದಕ್ಕರ್ಥ. ಅಂತು ಲಿಂಗವ ಭಿನ್ನವಿಡಿದೇ ಲಿಂಗದ ತದಂಶವಾದ ಸಾಕಾರಲಿಂಗವು ತಾನೆಂದಱಿದು ತನ್ನ ನಿಜಸ್ವರೂಪವನೆ ಇಷ್ಟಲಿಂಗವ ಮಾಡಿ ಕರದಲ್ಲಿ ಪಿಡಿದು ಭಿನ್ನಭಾವವಿಲ್ಲದೆ ಪೂಜಿಸು

೧ ಸೋಂಕಾದಲ್ಲಿ (ಎ.)

ತ್ತಿಪ್ಪ ಶರಣನ ಸಂಗವಿಡಿದು ದೇಹ ಲಿಂಗವಪ್ಪುದಲ್ಲದೆ ಶರಣ ದೇಹಸಂಗವಿಡಿದು ದೇಹಿಯಾಗನೆಂಬುದೀಗ 'ಲಿಂಗವಿಡಿದಂಗೆ ಅಂಗವುಂಟೇ' ಎಂಬ ಶಬ್ದಕ್ಕರ್ಥ. ಅಂತು ಮಹಾಘನವಸ್ತು ಸಕಲತತ್ತ್ವಂಗಳನೊಳಕೊಂಡಿರ್ದು ಮಹವೆನಿಸಿಪ್ಪುದು ತಾನೆ, ಅಣುರೂಪವಾದ ಆತ್ಮರೊಳು ಅಣುರೂಪವಾಗಿ ಸಾಕಾರವನೈದಿಪ್ಪ ಶರಣನು ತಾನೆಯಾಗಿಪ್ಪನೆಂಬುದೀಗ 'ಅಣೋರಣೀಯಾನ್ ಮಹತೋ ಮಹೀಯಾನ್ ಹಿರಿದಿಂಗೆ ಹಿರಿದು ಕಿಱಿದಿಂಗೆ ಕಿಱಿದು' ಎಂಬ ಶಬ್ದಕ್ಕರ್ಥ. ನಿರಾಕಾರ ಪ್ರಸಾದ ವೆಂದರೆ ಲಿಂಗ. ಸಾಕಾರಪ್ರಸಾದವೆಂದಡೆ ಶರಣ. ಅಂತು ವಾಙ್ಮನಕ್ಕೆ ಬಾರದ ನಿರಾಕಾರ ಲಿಂಗದ ತದಂಶವೇ ಸಾಕಾರವಾಗಿ ಶರಣನೆನಿಸಿದನೆಂಬುದೀಗ 'ವಾಙ್ಮನ ಕ್ಕಗೋಚರ ಕೂಡಲಸಂಗಮದೇವ ಸ್ವರೂಪುಪ್ರಸಾದ ನಿರೂಪುಪ್ರಸಾದದಿಂದ ನಿಂದುದು' ಎಂಬ ಶಬ್ದಕ್ಕರ್ಥ. ೫೬

ವ. ಸರ್ವಾಂಗಲಿಂಗವಾದ ಆರೋಗಣೆಗೆ ಆಪ್ಯಾಯನವೇ ಕರಸ್ಥಲ, ನಿಂದುದೇ ಓಗರ, ಬಂದ ಪರಿಣಾಮವೇ ಪ್ರಸಾದ. ಹೇಳಲಿಲ್ಲದ ಕೇಳ ಲಿಲ್ಲದ ನಿರ್ಣಯ ಕೂಡಲಿಲ್ಲ ಕಳೆಯಲಿಲ್ಲ ನೋಡಾ ! ಇದುಕಾರಣ ಕೂಡಲಚೆನ್ನಸಂಗಮದೇವ ಬಸವನನುಗ್ರಹಿಸಿಕೊಟ್ಟ ನಿಂದ ನಿಲವಿನ ಸಹಜ ಉದಯಿಸಿದ ಲಿಂಗನಿರಂತರನಿಜದ ಪರಿಯಿಂತುಟು.

ಟೀ. ಶ್ರೀಗುರು ಉಪದೇಶಿಸಿದ ಇಷ್ಟಲಿಂಗವೇ ಅಂಗ ಪ್ರಾಣ ಭಾವಂಗಳ ನೆಲ್ಲವನೊಳಕೊಂಡು ಸರ್ವಾಂಗವೆಲ್ಲಾ ಲಿಂಗವಾಗಿರ್ದ ಶರಣನ ಅಂಗೇಂದ್ರಿಯಂಗ ಳಲ್ಲಿ ಪದಾರ್ಥವ ಬಯಸುವ ಕ್ಷುತ್ತಿಪಾಸೆ ಮೊದಲಾದ ದೀಪನವು ಇಷ್ಟಲಿಂಗವೆ ಯಾಗಿ ಪದಾರ್ಥಂಗಳ ಭುಂಜಿಸುತ್ತಿಹನೆಂಬುದೀಗ 'ಸರ್ವಾಂಗಲಿಂಗವಾದ ಆರೋ ಗಣೆಗೆ ಆಪ್ಯಾಯನವೇ ಕರಸ್ಥಲ' ವೆಂಬ ಶಬ್ದಕ್ಕರ್ಥ. ಅಂತು ಶರಣನ ದೀಪನ ವೆಲ್ಲಾ ಲಿಂಗವೆಯಾಗಿ ಪದಾರ್ಥಂಗಳನಾರೋಗಿಸುತ್ತಿಪ್ಪಲ್ಲಿ ಲಿಂಗಕ್ಕೆ ಇಚ್ಛೆಯಾ ದಪ್ಪನಾರೋಗಿಸಿ ಆನಂದಿಸಿವುದೆಲ್ಲಾ ಪರಮಪ್ರಸಾದ. ಲಿಂಗಕ್ಕೆ ಅನಿಚ್ಛೆಯಾಗಿ ಬಿಟ್ಟುಳಿದುದೆಲ್ಲಾ ದ್ರವ್ಯಪದಾರ್ಥವೆಂಬುದೀಗ 'ನಿಂದುದೆ ಓಗರ, ಬಂದ ಪರಿ ಣಾಮವೆ ಪ್ರಸಾದ' ವೆಂಬ ಶಬ್ದಕ್ಕರ್ಥ. ಇಂತಪ್ಪ ಲಿಂಗಾರ್ಪಿತದ ವರ್ಮವ ಶರಣನು ಲಿಂಗವ ಭಿನ್ನವಿಟ್ಟು ಅರ್ಪಿಸುವ ಜೀವಭಾವಿಗಳಿಗೆ ಹೇಳಲಿಲ್ಲ, ಅವರ ಕೈಯಿಂದ ಲಿಂಗಾರ್ಪಿತವ ಕೇಳಲಿಲ್ಲವೆಂಬುದೀಗ 'ಹೇಳಲಿಲ್ಲದ ಕೇಳಲಿಲ್ಲದ ನಿರ್ಣಯ' ವೆಂಬ ಶಬ್ದಕ್ಕರ್ಥ. ಅಂತು ಶರಣನ ಅಂಗವೆಲ್ಲಾ ಲಿಂಗವೆಯಾಗಿ ಸರ್ವಸುಖಂಗಳನೆಲ್ಲವ ಲಿಂಗವೆ ಭೋಗಿಸುತ್ತಿಪ್ಪನಾಗಿ ಶರಣಂಗೆ ಲಿಂಗವ ಕೂಡ ಬೇಕೆಂಬ ಅವಸ್ಥೆಯಿಲ್ಲ. ದೇಹಸಂಸಾರ ಬಂಧನವೆಂದು ಬಿಟ್ಟು ಕಳೆಯಬೇಕೆಂಬ

ದುಃಖವಿಲ್ಲವೆಂಬುದೀಗ ‘ ಕೂಡಲಿಲ್ಲ ಕಳೆಯಲಿಲ್ಲ ನೋಡಾ ’ ಎಂಬ ಶಬ್ದಕ್ಕರ್ಥ. ಅಂತು ಗುರೂಪದೇಶದಿಂದ ತನ್ನಂಗದಲ್ಲಿರ್ದ ತನ್ನ ನಿಜಸ್ವರೂಪಪ್ಪ ಲಿಂಗ ಉದಯಿಸಿ ಶರಣನ ಸರ್ವಾಂಗವನೊಳಕೊಂಡು ಅಂಗಭೋಗಂಗಳನೆಲ್ಲವ ಎಡೆಬಿಡುವಿಲ್ಲದೆ ಲಿಂಗವೆ ಭೋಗಿಸುತ್ತಿಪ್ಪುದು ದಿಟ ಶರಣನಲ್ಲಿ ಎಂಬುದೀಗ ‘ ಬಸವನನು ಗ್ರಹಿಸಿ ಕೊಟ್ಟ ನೀದ ನಿಲವಿನ ಸಹಜ ಉದಯಿಸಿದ ಲಿಂಗನಿರಂತರನಿಜದ ಪರಿಯಿಂತುಟು ’ ಎಂಬ ಶಬ್ದಕ್ಕರ್ಥ. ೫೭

ವ. ಮುಟ್ಟಿದ ಮುನ್ನ ದಿಟ ಘಟಿಸಿ ನಿಂದುದು ಸಟೆಯಿಲ್ಲ ಕಾಣಿರೇ ! ಮುಟ್ಟಿತೇ ಮಹಾಪ್ರಸಾದ ಕೂಡಲಚೆನ್ನಸಂಗಮದೇವಾ.

ಟೀ. ಇಷ್ಟಲಿಂಗ ಬಂದು ಅಂಗಸಂಬಂಧವಾದಾಗವೇ ಅಂಗವೆಲ್ಲಾ ಲಿಂಗವಾಯಿತ್ತೆಂಬುದು ನಿಜವೆಂದಱಿದ ಶರಣಂಗೆ ಆ ಲಿಂಗವಾದ ಅಂಗ ಮುಟ್ಟಿದ ಪದಾರ್ಥಂಗಳೆಲ್ಲಾ ಪರಮಪ್ರಸಾದವಪ್ಪುದು ತಪ್ಪದೆಂಬುದೀ ವಚನದ ತಾತ್ಪರ್ಯಾರ್ಥ. ೫೮

ವ. ಜ್ಯೋತಿಯ ಮುಟ್ಟಿದ ಬತ್ತಿಯೆಲ್ಲಾ ಜ್ಯೋತಿಯಪ್ಪುವಯ್ಯಾ. ಸಾಗರವ ಮುಟ್ಟಿದ ನದಿಗಳೆಲ್ಲಾ ಸಾಗರವಪ್ಪುವಯ್ಯಾ. ಪ್ರಸಾದವ ಮುಟ್ಟಿದ ಪದಾರ್ಥವೆಲ್ಲಾ ಪ್ರಸಾದವಪ್ಪುವಯ್ಯಾ. ಲಿಂಗವ ಮುಟ್ಟಿದ ಅಂಗವೆಲ್ಲಾ ಲಿಂಗವಪ್ಪುದಯ್ಯಾ. ಸಕಳೇಶ್ವರದೇವಾ ನಿಮ್ಮ ಮುಟ್ಟಿದವರೆಲ್ಲಾ ನಿಮ್ಮಂತಪ್ಪರಯ್ಯಾ!

ಟೀ. ಈ ವಚನ ಕಾಣಬಂದರ್ಥ, ೫೯

ವ. ಅಂಗ ಮೂವತ್ತಾಱು ಮೇಲೆ ಲಿಂಗ. ನಿಸ್ಸಂಗವೆಂಬ ಕರದಲ್ಲಿ ಹಿಡಿದು ಅಂಗವಿಸಿ, ಅಹುದಾಗದೆಂಬ ನಿಸ್ಸಂಗದರ್ಪಣವ ಮಾಡಿ, ಸುಸಂಗಪ್ರಸಾದವ ಕೊಳಬಲ್ಲವಂಗೆ ಗೊಹೇಶ್ವರ ಮುಂದೆ ಬಯಲು, ಬಯಲು, ಬಟ್ಟಬಯಲು!

ಟೀ. ಮಹಾಲಿಂಗದ ಚಿದಂಗವೇ ಮೂವತ್ತಾಱು ತತ್ತ್ವಂಗಳಾದುವು. ಆ ಮೂವತ್ತಾಱು ತತ್ತ್ವಂಗಳನೊಳಕೊಂಡು ಮೇಲಿಪ್ಪುದೇ ಆ ಮಹಾಘನಲಿಂಗವೆಂಬುದೀಗ ‘ಅಂಗ ಮೂವತ್ತಾಱು ಮೇಲೆ ಲಿಂಗ ’ ವೆಂಬ ಶಬ್ದಕ್ಕರ್ಥ. ಅಂತಾದ ಮೂವತ್ತಾಱು ಅಂಗತತ್ತ್ವಂಗಳ ಸಂಗದ ಬಯಕೆಯನಳಿದು ಮೇಲಣ ಲಿಂಗವು

ತನ್ನ ನಿಜವೆಂದು ಸದ್ಭಾವಹಸ್ತದಿಂದ ಪಿಡಿದು, ಅಂಗದಲ್ಲಿ ಇಷ್ಟಲಿಂಗವಾಗಿ ಧರಿಸಿ ಕೊಳ್ಳಬೇಕು ಶರಣನೆಂಬುದೀಗ 'ನಿಸ್ಸಂಗವೆಂಬ ಕರದಲ್ಲಿ ಪಿಡಿದು ಅಂಗವಿಸಿ' ಎಂಬ ಶಬ್ದಕ್ಕರ್ಥ. ಅಂತು ತನ್ನಲ್ಲಿ ಅಹುದಾಗಿರ್ದ ಅಂಗತತ್ತ್ವಂಗಳನಲ್ಲೆಂದು ಕಳೆದು ನಿಸ್ಸಂಗಿಯಾಗಿರಬೇಕೆಂಬ ಶರಣಂಗೆ ಆ ನಿಸ್ಸಂಗವ ಮಾಡುವ ಅಂಗ ತತ್ತ್ವಂಗಳನೆಲ್ಲವ ಆ ಇಷ್ಟಲಿಂಗಕ್ಕೆ ಅರ್ಪಿಸಬೇಕೆಂಬುದೀಗ 'ಅಹುದಾಗದೆಂಬ ನಿಸ್ಸಂಗದರ್ಪಣವ ಮಾಡಿ' ಎಂಬ ಶಬ್ದಕ್ಕರ್ಥ. ಅಂತು ನಿಸ್ಸಂಗವ ಮಾಡುವ ಅಂಗತತ್ತ್ವಂಗಳ ಇಷ್ಟಲಿಂಗಕ್ಕೆ ಅರ್ಪಿಸಿ ಲಿಂಗವು ತನಗೆ ಅನನ್ಯವೆಂದು ಅಭಿನ್ನ ಭಾವ ಘಟಿಸಿ, ಲಿಂಗವ ಭಿನ್ನವಿಡದೆ ಲಿಂಗವಾಗಿರಬಲ್ಲ ಶರಣಂಗೆ ಉತ್ಪತ್ತ್ಯ ಸ್ಥಿತಿ ಲಯಂಗಳಿಲ್ಲವೆಂಬುದೀಗ 'ಸುಸಂಗಪ್ರಸಾದವ ಕೊಳಬಲ್ಲವಂಗೆ ಗುಹೇಶ್ವರ ಮುಂದೆ ಬಯಲು ಬಯಲು ಬಟ್ಟಬಯಲೆ' ಎಂಬ ಶಬ್ದಕ್ಕರ್ಥ. ೬೦

ವ. ಶುದ್ಧವ ಗುರುವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯಾ. ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧವಾಯಿತ್ತೆಂಬೆನಯ್ಯಾ. ಪ್ರಸಿದ್ಧವ ಜಂಗಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯಾ. ಗುರುಲಿಂಗಜಂಗಮುವನೇ ಕಾರ್ಥವಾಗಿ ಕಾಣಲಱಿಯದಿರ್ದಡೆ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದ ವೊಡನೆ ನುಡಿವುತ್ತೈದಾವೆ. ತನು ಮನ ಧನವ ನಿವೇದಿಸಲಱಿಯೆ ನಾಗಿ ಕೂಡಲಸಂಗಮದೇವರು ಒಲಿಯೆಂದಡೆಂತೊಲಿವ ?

ಟೀ. ಶುದ್ಧವೆಂದರೆ ಗುರು, ಸಿದ್ಧವೆಂದರೆ ಲಿಂಗ, ಪ್ರಸಿದ್ಧವೆಂದರೆ ಜಂಗಮ. ಅಂತಿಪ್ಪ ಲಿಂಗತ್ರಯಂಗಳ ಶ್ರೀಗುರು ಅಂಗತ್ರಯಂಗಳಿಗೆ ಸಂಬಂಧವ ಮಾಡಿ ದಾಗವೇ ಭಕ್ತನ ತನುವೇ ಗುರು, ಮನವೇ ಲಿಂಗ, ಪ್ರಾಣಾದಿದ್ರವ್ಯಂಗಳೆಲ್ಲಾ ಜಂಗಮವಾಯಿತ್ತೆಂಬ ಭೇದವನಱಿದು ಅಭಿನ್ನಭಾವ ಘಟಿಸಿಪ್ಪ ಭಕ್ತನು ತನ್ನ ಗುರುರೂಪಾದ ತನುವನ್ನೇ ಗುರುವಿಂಗೆ ಸಮರ್ಪಿಸಿ, ತನು ಗುರುಸ್ವರೂಪಾಯಿ ತ್ತೆನ್ನಬೇಕು. ಲಿಂಗರೂಪಾದ ಮನವನ್ನೇ ಲಿಂಗಕ್ಕರ್ಪಿಸಿ, ಮನ ಲಿಂಗವಾಯಿ ತ್ತೆನ್ನಬೇಕು. ಜಂಗಮರೂಪಾದ ಪ್ರಾಣಾದಿದ್ರವ್ಯಂಗಳನೆಲ್ಲವ ಜಂಗಮಕ್ಕರ್ಪಿಸಿ, ಪ್ರಾಣಾದಿ ದ್ರವ್ಯಂಗಳು ಜಂಗಮವಾಯಿತ್ತೆನ್ನಬೇಕು ಎಂಬುದೀಗ 'ಶುದ್ಧವ ಗುರು ವಿಂಗೆ ಕೊಟ್ಟು ಶುದ್ಧವಾಯಿತ್ತೆಂಬೆನಯ್ಯಾ. ಸಿದ್ಧವ ಲಿಂಗಕ್ಕೆ ಕೊಟ್ಟು ಸಿದ್ಧವಾಯಿ ತ್ತೆಂಬೆನಯ್ಯಾ. ಪ್ರಸಿದ್ಧವ ಜಂಗಮಕ್ಕೆ ಕೊಟ್ಟು ಪ್ರಸಿದ್ಧವಾಯಿತ್ತೆಂಬೆನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಬಂಧವಾದಾಗವೆ ಭಕ್ತನ ತನು ಮನ ಪ್ರಾಣಾದಿದ್ರವ್ಯಂಗಳೆಲ್ಲಾ ಲಿಂಗರೂಪಾದ ಅಭೇದವನಱಿದು, ಲಿಂಗರೂಪಾದ ಪದಾರ್ಥಂಗಳ ಲಿಂಗಕ್ಕರ್ಪಿಸಿ ಪ್ರಸಾದವೆಂದು ಗ್ರಹಿಸಿ ಭೇದವಿಲ್ಲದಿರ್ದಡಾತನೇ

ಪ್ರಸಾದಸ್ವರೂಪಪ್ಪನು. ಅಂತಲ್ಲದೆ ಗುರು ಲಿಂಗ ಜಂಗಮುವ ಭಿನ್ನವಿಟ್ಟು ಕಂಡು ತನು ಮನ ಧನವ ಸಮರ್ಪಿಸಿದಾತಂಗೆ ಫಲಪದಂಗಳ ಕೋ ಎಂದು ನುಡಿದು ಕೊಡುತ್ತಿಹವು ತ್ರಿವಿಧಲಿಂಗಂಗಳು ಭಿನ್ನವಾಗಿ ಎಂಬುದೀಗ ‘ ಗುರುಲಿಂಗಜಂಗಮುವನೇಕಾರ್ಥವಾಗಿ ಕಾಣಲಱಿಯದಿರ್ದಡೆ ಶುದ್ಧ ಸಿದ್ಧ ಪ್ರಸಿದ್ಧ ಪ್ರಸಾದವೊಡನೆ ನುಡಿವುತ್ತೈದಾವೆ ತನು ಮನ ಧನವ ನಿವೇದಿಸಲಱಿಯೆನಾಗಿ ’ ಎಂಬ ಶಬ್ದಕ್ಕರ್ಥ. ಅಂತು ತ್ರಿವಿಧಲಿಂಗವ ಭಿನ್ನವಿಟ್ಟು ಪದಾರ್ಥವನರ್ಪಿಸಿ ಶಿವನ ಶಿವತ್ವವ ಬೇಡಿದಡೆ ಶಿವನು ಕೃಪೆಯಾಗನೆಂಬುದೀಗ ‘ ಕೂಡಲಸಂಗಮದೇವನೊಲಿಯೆಂದಡೆಂತೊಲಿವ’ ನೆಂಬ ಶಬ್ದಕ್ಕರ್ಥ. ೬೧

ವ. ಬೆಳಗಿನೊಳಗಣ ರೂಪ ತಿಳಿದು ನೋಡಿಯೆ ಕಂಡು, ಹಿಡಿಯದೆ ಹಿಡಿದುಕೊಳಬಲ್ಲನಾಗಿ ಲಿಂಗಪ್ರಸಾದಿ. ಜಾತಿಸೂತಕವ ಕಳೆದು ಶಂಕೆ ತಲೆದೋಱದೆ ನಿಶ್ಶಂಕನಾಗಿ ಆತ ಸಮಯಪ್ರಸಾದಿ. ಸಕಲ ಭ್ರಮೆಯ ಜಱಿದು ಗೊಹೇಶ್ವರಲಿಂಗದಲ್ಲಿ ಬಸವಣ್ಣನೊಬ್ಬನೇ ಪ್ರಸಾದಿ.

ಟೀ. ಬೆಳಗೆಂದರೆ ಜ್ಞಾನಪ್ರಕಾಶ. ಅಂತು ತನ್ನಂತರಂಗದಲ್ಲಿ ಸ್ವಾಯತವಾಗಿ ಜ್ಞಾನಪ್ರಕಾಶವಾಗಿ ತೋಱುತ್ತಿಪ್ಪ ಪರಂಜ್ಯೋತಿಲಿಂಗವ ತಿಳಿದು, ಭಿನ್ನವಿಡದೆ ಅಭಿನ್ನಭಾವದಿಂದ ಹಿಡಿದು ಕರಸ್ಥಲದಲ್ಲಿ ಧರಿಸಿ, ಒಳಹೊಱಗೆನ್ನದೆ ಸರ್ವಾಂಗಲಿಂಗವಾಗಿ, ಲಿಂಗಭೋಗೋಪಭೋಗಿಯಾಗಿರಬಲ್ಲ ಶರಣನೇ ಲಿಂಗಪ್ರಸಾದಿಯೆಂಬುದೀಗ ‘ ಬೆಳಗಿನೊಳಗಣ ರೂಪ ತಿಳಿದು ನೋಡಿಯೆ ಕಂಡು ಹಿಡಿಯದೆ ಹಿಡಿದುಕೊಳಬಲ್ಲನಾಗಿ ಲಿಂಗಪ್ರಸಾದಿ ’ ಎಂಬ ಶಬ್ದಕ್ಕರ್ಥ. ಅಂತು ಲಿಂಗವ ಭಿನ್ನವಿಟ್ಟು ಕಾಣದೆ, ತನ್ನನೆಲ್ಲಾ ಲಿಂಗವೆಯಾಗಿ ಕಾಣುತ್ತಿಪ್ಪ ಸದ್ಭಕ್ತನು ಜಾತಿಸೂತಕ ಮೊದಲಾದ ಲೌಕಿಕಾಚಾರವನಳಿದು, ನಿಶ್ಶಂಕನಾಗಿ ಶಿವಭಕ್ತರೆಲ್ಲಾ ಶಿವನೆಂಬ ಸದ್ಭಾವ ಘಟಿಸಿ, ಶಿವಭಕ್ತರುಂಡು ಮಿಕ್ಕ ಶೇಷವೇ ಪರಮ ಪ್ರಸಾದವೆಂದು ಸೇವಿಸುತ್ತಿಪ್ಪನಾಗಿ ಶರಣ ಸಮಯಪ್ರಸಾದಿಯೆನಿಸಿದನೆಂಬುದೀಗ ‘ ಜಾತಿಸೂತಕವ ಕಳೆದು ಶಂಕೆ ತಲೆದೋಱದೆ ನಿಶ್ಶಂಕನಾಗಿ ಆತ ಸಮಯಪ್ರಸಾದಿ ’ ಯೆಂಬ ಶಬ್ದಕ್ಕರ್ಥ. ಅಂತು ದೇಹಭ್ರಾಂತಿಗಳನೆಲ್ಲವನಳಿದು, ಲಿಂಗಜಂಗಮ ಪ್ರಸಾದವೇ ಪರವಸ್ತುವೆಂದು ಸೇವಿಸಿ ಪ್ರಸಾದಿಯಾಗಿ ಭಿನ್ನವಳಿದಿಪ್ಪ ಸದ್ಭಕ್ತನೇ ಬಸವಣ್ಣನೆಂಬುದೀಗ ‘ ಸಕಲ ಭ್ರಮೆಯನೆ ಜಱಿದು ಗೊಹೇಶ್ವರಲಿಂಗದಲ್ಲಿ ಬಸವಣ್ಣನೊಬ್ಬನೇ ಪ್ರಸಾದಿ ’ ಯೆಂಬ ಶಬ್ದಕ್ಕರ್ಥ. ೬೨

ವ. ಜಿಹ್ವೆ ಗುರು, ಕಂಗಳು ಲಿಂಗ, ನಾಸಿಕವಾಚಾರ, ಕರ್ಣ ಪ್ರಸಾದ, ಹಸ್ತ ಜಂಗಮ, ಭಾವ ಮಹಾಲಿಂಗ, ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣ ಸರ್ವಾಂಗಪ್ರಸಾದಿ.

ಟೀ. ಅಂಗದೊಳಗಿರ್ದ ಚಿತ್ಕಲಾಲಿಂಗವು ಇಷ್ಟಲಿಂಗವಾಗಿ ಬಹಿರಂಗವ ನೊಳಕೊಂಡು ಶರಣನ ಷಡಿಂದ್ರಿಯಂಗಳಲ್ಲಿ ಪ್ರಕಾಶಿಸಿ, ಆಚಾರಾದಿ ಮಹಾ ಲಿಂಗಂಗಳಾಗಿ, ಸರ್ವವಿಷಯಪದಾರ್ಥಂಗಳನೆಲ್ಲವ ಲಿಂಗವೆ ಭೋಗಿಸಲು, ಶರಣನ ಸರ್ವಾಂಗ ಪ್ರಸಾದವಾಯಿತ್ತೆಂಬುದೀಗ ವಚನದ ತಾತ್ಪರ್ಯಾರ್ಥ. ೬೩

ವ. ಕಲ್ಪಿಸಿ ಅರ್ಪಿಸಲಿಲ್ಲ, ಅರ್ಪಿಸಿ ಭೋಗಿಸಲಿಲ್ಲ. ಅರ್ಪಿತ ಅನರ್ಪಿತ ವೆಂಬೆರಡಳಿದನಾಗಿ ಕಾಯದ ಕೈಗಳ ಕೈಯು, ಭಾವದ ಕೈಗಳ ಕೈಯ ಅರ್ಪಿಸುವನಲ್ಲ. ಆತ ಅರ್ಪಿತ ತಾನಾಗಿ ಅರ್ಪಿತ ಅನರ್ಪಿತವೆಂಬ ಸಂದಳಿದುಳಿದನು. ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ ಪ್ರಸಾದವೇ ಪ್ರಳಯವಾಯಿತ್ತು.

ಟೀ. ಕಾಯ ಮನ ಭಾವಂಗಳ ಕೈಯ ಕಲ್ಪಿಸಿ ಭಾವಿಸಿ, ಲಿಂಗವ ಭಿನ್ನ ವಿಟ್ಟು ಪದಾರ್ಥವನರ್ಪಿಸಿ ಭೋಗಿಸಬೇಕು, ಅರ್ಪಿತವಾಯಿತ್ತು ಆಗದು ಎಂಬ ಸಂಕಲ್ಪ ವಿಕಲ್ಪಂಗಳೇನೂ ಇಲ್ಲ ಶರಣಂಗೆ. ಅದೇಕಯ್ಯಾಯೆಂದಡೆ : ಅಂಗಲಿಂಗ ಸಂಬಂಧಿಯಾಗಿ ಲಿಂಗವು ಸರ್ವಾಂಗವನೊಳಕೊಂಡು ಶರಣಂಗೆ ಜೀವಭಾವವಳಿದು ಹೋದ ಕಾರಣವೆಂಬುದೀ ವಚನದ ತಾತ್ಪರ್ಯಾರ್ಥ. ೬೪

ವ. ರೂಪೆಂದಡೆ ರುಚಿಯಾಯಿತ್ತು. ರುಚಿಯೆಂದಡೆ ಸವಿಯಾಯಿತ್ತು. ಸವಿಯೆಂದಡೆ ಸಂದಾಯಿತ್ತು. ರೂಪೆನ್ನದೆ ರುಚಿಯೆನ್ನದೆ ಸವಿಯೆ ನ್ನದೆ ಸಂದೆನ್ನದೆ ಇದ್ದ ಪ್ರಸಾದಿಗೆ ನಮೋ ನಮೋ ಎಂಬೆ ಕೂಡಲ ಚೆನ್ನಸಂಗಯ್ಯಾ!

ಟೀ. ರೂಪು ರುಚಿ ತೃಪ್ತಿಗಳ ತಾನಱಿದಱಿದು ಲಿಂಗವ ಬಿನ್ನವಿಟ್ಟು ಅರ್ಪಿಸಿದಡೆ ಅರ್ಪಿತವಾಗದು. ಲಿಂಗದಲ್ಲಿ ಅನನ್ಯಭಾವಿಯಾಗಿ ಭಿನ್ನವಳಿದು ಲಿಂಗಭೋಗೋಪಭೋಗಿಯಾದ ಶರಣನೇ ಲಿಂಗವೆಂದು ನಮಸ್ಕಾರವ ಮಾಡಬೇ ಕೆಂಬುದೀ ವಚನದ ತಾತ್ಪರ್ಯಾರ್ಥ. ೬೫

ವ. ಅಂಗವ ಲಿಂಗಮುಖದಲ್ಲಿ ಅರ್ಪಿಸಿ ಅಂಗವನಂಗವಾಯಿತ್ತು. ಮನವನಱಿದು ಲಿಂಗಕ್ಕರ್ಪಿಸಿ ಮನ ಲೀಯವಾಯಿತ್ತು. ಅಂಗ

ಭಾವ ಮನೋಭಾವವಳಿದ ಕಾರಣ ಎನ್ನ ಕಾಯ ಅಕಾಯವಾಯಿತ್ತು. ಎನ್ನ ಅಕಾಯದ ಸುಖಭೋಗವ ಲಿಂಗವೇ ಭೋಗಿಸುವನಾಗಿ ಶರಣಸತಿ ಲಿಂಗಪತಿಯಾದೆನು. ಇದುಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನ ಒಳಹೊಕ್ಕು ಬೆರಸಿದೆನು.

**ಟೀ.** ಕಾಯ ಮನ ಭಾವಂಗಳ ಲಿಂಗಕ್ಕರ್ಪಿಸಿದ ಶರಣನ ಕಾಯ ಮನ ಭಾವಂಗಳೆಲ್ಲಾ ಲಿಂಗವಾಗಿ, ಶರಣನ ಅಂಗಭೋಗಂಗಳ ಲಿಂಗವೇ ಭೋಗಿಸುತ್ತಿಪ್ಪಲ್ಲಿ ಶರಣನು ಲಿಂಗದ ಅಭಿನ್ನಚಿಚ್ಛಕ್ತಿಯಾಗಿ ಭಿನ್ನವಳಿದಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೬೬

**ವ.** ಕಾಯ ಪ್ರಸಾದವೆನ್ನ, ಮನ ಪ್ರಸಾದವೆನ್ನ, ಪ್ರಾಣ ಪ್ರಸಾದವೆನ್ನ, ಭಾವ ಪ್ರಸಾದವೆನ್ನ, ೧ಸ್ಯೆಧಾನ೧ ಪ್ರಸಾದವೆನ್ನ, ಸಮುಭೋಗ ಪ್ರಸಾದವೆನ್ನ. ಚೆನ್ನಮಲ್ಲಿಕಾರ್ಜುನಾ ನಿಮ್ಮ ಪ್ರಸಾದವ ಹಾಸಿ ಹೊದಿಸಿಕೊಂಡಿಪ್ಪೆ.

**ಟೀ.** ಲಿಂಗಾಂಗಸಂಗವಾಗಿ ಭಿನ್ನಭಾವವಳಿದ ಶರಣನ ಅಂಗ ಪ್ರಾಣ ಮನ ಭಾವ ದ್ರವ್ಯಪದಾರ್ಥಂಗಳೆಲ್ಲಾ ಅಖಂಡಿತಲಿಂಗವಾಗಿ, ಲಿಂಗದೊಳಗೆ ಭಿನ್ನದೋರದೆ ಚಿದ್ಘನಲಿಂಗವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೬೭

**ವ.** ಗುರು ಲಿಂಗ ಜಂಗಮದಿಂದ ಪಾದೋದಕ ಪ್ರಸಾದವಾಯಿತ್ತು. ಅನುಭಾವವೇ ಮಹಾನುಭಾವವಾಯಿತ್ತು. ಎನಗೆ ಬೇಱೆ ಪ್ರಸಾದವೆಂಬುದಿಲ್ಲ ಕೂಡಲಸಂಗಮದೇವಾ!

**ಟೀ.** ಪ್ರಸಾದವೆಂದರೆ ಪರವಸ್ತು. ಅಂತಪ್ಪ ಪರವಸ್ತುವೇ ಮೂಱಾದ ಗುರು ಲಿಂಗ ಜಂಗಮಕ್ಕೆ ಅರ್ಪಿಸಿದ ಉದಕ ಮೊದಲಾದ ಪದಾರ್ಥಂಗಳೆಲ್ಲಾ ಪಾದೋದಕಪ್ರಸಾದವಾಯಿತ್ತು. ಅಂತಾದ ಪಾದೋದಕಪ್ರಸಾದವೇ ಪರವಸ್ತುವೆಂಬುದನಱಿದು ನಿಶ್ಚಯಭಾವದಿಂದ ಆ ಪಾದೋದಕಪ್ರಸಾದವ ಸೇವಿಸುವ ಭಕ್ತನ ಅಂಗ ಪ್ರಾಣ ಮನ ಭಾವವೆಲ್ಲಾ ಪರವಸ್ತುವೆಯಾಗಿಪ್ಪನಾಗಿ ಶರಣಂಗೆ ಬೇಱೆ ಪರವಸ್ತುವೆಂಬುದಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೬೮

೧ ಸ್ಯೆದಾನ (ಹು.)

೮. ಕಂಗಳ ಪೂಜೆ ಲಿಂಗಕ್ಕರ್ಪಿತ. ಮನ ಮುಟ್ಟಿದಾರೋಗಣೆಯೆಂಬುದೇನೋ, ಸಂಕಲ್ಪವಿರಹಿತ ನಿಮ್ಮ ಶರಣಂಗೆ ? ಆಗಮವಿರಹಿತ ಶರಣನಲ್ಲದೇನೋ ? ಶರಣಂಗೆ ಸೀಮೆಯೆಂಬುದೇನೋ ? ಕಾಯದ ಕೈಯಲ್ಲಿ ಲಿಂಗಾರ್ಪಿತ ಅದು ಕಿಲ್ಬಿಷ ಕೂಡಲಸಂಗಮದೇವಾ!

ಟೀ. ಒಳಹೊರಗೆ ತೆರಹಿಲ್ಲದ ಅಖಂಡ ಲಿಂಗವು ತನಗನನ್ಯವಾಗಿದ್ದುದ ಅಭಿನ್ನಜ್ಞಾನ ದೃಕ್ಕಿಂದ ಕಂಡು, ಭಿನ್ನವಿಡದೆ ಮಾಡುವ ಪೂಜೆಯೆಲ್ಲಾ ಲಿಂಗಕ್ಕರ್ಪಿತವಹುದೆಂಬುದೀಗ 'ಕಂಗಳ ಪೂಜೆ ಲಿಂಗಕ್ಕರ್ಪಿತ'ವೆಂಬ ಶಬ್ದಕ್ಕರ್ಥ. ಅಂತು ಅಭಿನ್ನಜ್ಞಾನದಿಂದ ಲಿಂಗವ ಭಿನ್ನವಿಡದೆ ಮಾಡುವ ಮಾಡಿಸಿಕೊಂಬವೆರಡೂ ಲಿಂಗವೆಯೆಂದು ಭಕ್ತಿಮಾಡುವ ಶರಣನಲ್ಲಿ ಲಿಂಗವು ಭಿನ್ನವಿಲ್ಲದಿಪ್ಪನಾಗಿ ಆ ಶರಣ ತನ್ನ ಸ್ವಯಿಚ್ಛೆಯಿಂದ ಏಂತು ಮಾಡುವುದೆಲ್ಲಾ ಲಿಂಗಕ್ಕೆ ಸತ್ಕ್ರಿಯಾಪೂಜೆ.ಅಂತಪ್ಪ ಶರಣನೆಲ್ಲಾ ಲಿಂಗವು ತಾನೆಯಾಗಿ ಆ ಶರಣನ ಅಂಗೇಂದ್ರಿಯಂಗಳೆಲ್ಲಾ ಲಿಂಗವೆಯಾಗಿಪ್ಪನಾಗಿ ಆ ಶರಣ ನೋಡಿದ ಮುಟ್ಟಿದ ಪದಾರ್ಥಂಗಳೆಲ್ಲಾ ಲಿಂಗಾರ್ಪಿತವಾದವಾಗಿ ಪ್ರಸಾದವಾಯಿತ್ತು. ಅಂತು ಪ್ರಸಾದವಾದ ಪದಾರ್ಥಂಗಳನೇ ಇಷ್ಟಲಿಂಗಕ್ಕೆ ಅರ್ಪಿಸಿ, ಅಂತು ಅರ್ಪಿತವಾದ ಪ್ರಸಾದವ ಭೋಗಿಸುತ್ತಿಹುದಾಗಿ ಶರಣಂಗೆ ತನು ಮುಟ್ಟಿದ ಮನ ಮುಟ್ಟಿದ ಪದಾರ್ಥ ಅರ್ಪಿತವಾಗದು, ಆಯಿತ್ತೆಂಬ ಸಂಕಲ್ಪವಿಲ್ಲ. ಉಳಿದ ವ್ರತ ನಿಯಮಂಗಳ ಸೀಮಾಸಂಗಿಯಲ್ಲ ಶರಣನೆಂಬುದೀಗ 'ಮನಮುಟ್ಟಿದ ಆರೋಗಣೆಯೆಂಬುದೇನೋ ? ಸಂಕಲ್ಪವಿರಹಿತ ನಿಮ್ಮ ಶರಣಂಗೆ ಸೀಮೆಯೆಂಬುದೇನೋ ?' ಎಂಬ ಶಬ್ದಕ್ಕರ್ಥ. ಶಿವ ಜೀವರೆಂದೆಂದೂ ಭಿನ್ನರೆಂದು ಹೇಳುವ ಆಗಮಮಾರ್ಗದ ಕರ್ಮಕಾಂಡವ ಹೊದ್ದುವನಲ್ಲ ಶರಣನೆಂಬುದೀಗ 'ಆಗಮ ವಿರಹಿತ ಶರಣನಲ್ಲದೇನೋ' ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಕ್ರಿಯಾಚಾರಿತ್ರವನರಿಯದೆ ಲಿಂಗವ ಭಿನ್ನವಿಟ್ಟು ಜೀವ ತಾನೆಂದು, ತನ್ನ ತನು ಮನ ಮುಟ್ಟಿದ ಉಚ್ಛಿಷ್ಟ ದ್ರವ್ಯಂಗಳ ತಂದು ಲಿಂಗಕ್ಕರ್ಪಿತವ ಮಾಡುವರೆಲ್ಲರೂ ಭವಹೇತುಗಳಾಗಿ ಕ್ರಿಮಿಕೀಟಕಜಾತಿಗಳಾಗಿ ತೊಳಲಿ ಬಳಲುತ್ತಿಹರೆಂಬುದೀಗ 'ಕಾಯದ ಕೈಯಲ್ಲಿ ಲಿಂಗಾರ್ಪಿತವದು ಕಿಲ್ಬಿಷ'ವೆಂಬ ಶಬ್ದಕ್ಕರ್ಥ. ೬೯

೯. ಸ್ಪರ್ಶನ ವಿರಹಿತ ಅರ್ಪಿತ, ರುಚಿ ವಿರಹಿತ ಪ್ರಸಾದಿಯೆಂದೆನೆಂದೆ. ಆರಿಗಾದಡರೂ ಸಾಧ್ಯವಾಗಲಿ. ಕೂಡಲಚೆನ್ನಸಂಗನ ಪ್ರಸಾದಿಯ್ಯ ಪ್ರಸಾದದಿಂದಯೆಂದೆನೆಂದೆ. ಆರಿಗಾದರೂ ಸಾಧ್ಯವಾಗಲಿ.

ಟೀ. ಲಿಂಗಾಂಗಸಂಬಂಧಿಯಾಗಿ, ಅಂಗಭಾವವಳಿದು, ಲಿಂಗಭಾವ ಘಟಿಸಿದ ಶರಣನ ಸರ್ವಾಂಗವೆಲ್ಲಾ ಲಿಂಗವೆಯಾಗಿ, ಸಕಲ ಪದಾರ್ಥಂಗಳನೆಲ್ಲವನೂ

ನೋಡುವ ಮುಟ್ಟುವ ರುಚಿಸುವನೆಲ್ಲಾ ಲಿಂಗವೆಯಾಗಿ ಲಿಂಗವು ಭೋಗಿಸಲು ಪ್ರಸಾದವಾಯಿತ್ತು ಶರಣಂಗೆ. ಅಂತು ಲಿಂಗವೆ ಮುಟ್ಟಿ ಲಿಂಗವೆ ರುಚಿಸಿ ಪ್ರಸಾದ ವಾಯಿತ್ತಾಗಿ ತನು ಮನ ಮುಟ್ಟಿದ ರುಚಿಸಿದ ಉಚ್ಛಿಷ್ಟ ಪದಾರ್ಥವಲ್ಲವೆಂಬುದೀಗ 'ಸ್ಪರ್ಶನ ವಿರಹಿತ ಅರ್ಪಿತ, ರುಚಿ ವಿರಹಿತ ಪ್ರಸಾದಿ' ಯೆಂಬ ಶಬ್ದಕ್ಕರ್ಥ. ಅಂತು ಸರ್ವಾಂಗಲಿಂಗವಾಗಿ ಅರ್ಪಿಸುವ ವರ್ಮವ ಶಿವಶರಣರ ಪ್ರಸಾದಜ್ಞಾನ ಬೋಧೆಯಿಂದ ಅಱಿದವರು ಪ್ರಸಾದಿಗಳಪ್ಪರೆಂದು ಚೆನ್ನಬಸವಣ್ಣ ಸಾರಿನುಡಿದ ರೆಂಬುದೀ ವಚನದ ತಾತ್ಪರ್ಯಾರ್ಥ. ೭೦

ವ. ಎಡೆಗೊಡುವನಲ್ಲ, ಎಡೆಗೊಂಬವನಲ್ಲ. ನುಡಿಯೆಡೆಯೊಳಗೆ ಮರಳು ವನಲ್ಲ. ತನ್ನ ತಾನು ಮಹಾಪ್ರಸಾದಿ. ಕಡೆಗೊಂಡ ನಿರ್ಲೇಪ ಪ್ರಸಾದಿ. ಎಡೆಯಲ್ಲಿ ಅಂಧಕಾರರೂಪನಲ್ಲ. ಇದುಕಾರಣ ಕೂಡಲ ಚೆನ್ನಸಂಗಯ್ಯನಲ್ಲಿ ಇರ್ದುದನರ್ಪಿಸಬಲ್ಲನಾಗಿ ಆತ ಮಹಾಪ್ರಸಾದಿ.

ಟೀ. ಲಿಂಗಾಂಗಸಂಬಂಧಿಯಾಗಿಪ್ಪ ಶರಣನು ತನ್ನಂಗದೊಳಹೊಱಗೆಲ್ಲಾ ಲಿಂಗವ ತುಂಬಿಕೊಂಡಿಹನಲ್ಲದೆ ಅನ್ಯವಾದ ಮಾಯಾಪ್ರಪಂಚಿನ ಗುಣಂಗಳಿಗೆ ಇಂಬುಗೊಡುವನಲ್ಲವೆಂಬುದೀಗ 'ಎಡೆಗೊಡುವನಲ್ಲ' ವೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಆ ಮಾಯಾಪ್ರಪಂಚಿನ ಸಂಸಾರಂಗಳಲ್ಲಿ ಮೋಹಿತನಾಗಿ ಮಗ್ನ ತೆಯನೈದುವನಲ್ಲವೆಂಬುದೀಗ 'ಎಡೆಗೊಂಬವನಲ್ಲ'ವೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಬಱಿಯ ವಾಗದ್ವೈತವ ನುಡಿದು ಬಲ್ಲೆನೆಂದು ಅಹಂಕರಿಸಿ ಮರಳಿ ಭವಕ್ಕೆ ಬಹನಲ್ಲವೆಂಬುದೀಗ 'ನುಡಿಯೊಳಗೆ ಮರಳುವನಲ್ಲ'ವೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ತನ್ನ ಸಮ್ಯಗ್ಜ್ಞಾನದಿಂದ ತನ್ನ ನಿಜವೇ ಮಹಾಲಿಂಗ ವೆಂದಱಿದು ಲಿಂಗದಲ್ಲಿ ಭಿನ್ನಭಾವವಳಿದಿರ್ದ ಶರಣನೆಂಬುದೀಗ 'ತನ್ನ ತಾನು ಮಹಾಪ್ರಸಾದಿ' ಯೆಂಬ ಶಬ್ದಕ್ಕರ್ಥ. ಅಂತು ತನ್ನ ನಿಜವೆ ಮಹಾಘನಲಿಂಗ ವೆಂದಱಿದು ಶರಣನು ತನ್ನಲ್ಲಿ ಬಿಡದೆಯಿರ್ದ ದೇಹೇಂದ್ರಿಯ ವಿಷಯಸುಖಂಗಳ ನೆಲ್ಲವ ಲಿಂಗಕ್ಕರ್ಪಿಸಿ ಪ್ರಸಾದಿಯಾಗಲು ಶರಣಂಗೆ ದೇಹವಾಸನೆ ಬಿಡುಗಡೆಯಾಗಿ ಹೋಯಿತ್ತೆಂಬುದೀಗ 'ಕಡೆಗೊಂಡ ನಿರ್ಲೇಪಪ್ರಸಾದಿ' ಯೆಂಬ ಶಬ್ದಕ್ಕರ್ಥ. ಅಂತು ದೇಹವಾಸನೆಯಳಿದು ತಾನೆಲ್ಲಾ ಲಿಂಗವೆಯಾಗಿರ್ದ ಶರಣನು ತನ್ನ ಅಱಿವಿಂಗೆ ಮಱವೆಯೆಡೆವೊಗದಂತೆ, ಲಿಂಗಸಾವಧಾನದೆಚ್ಚಱುಗುಂದದೆ ಇರ್ದ ಶರಣ ನೆಂಬುದೀಗ 'ಎಡೆಯಲ್ಲಿ ಅಂಧಕಾರರೂಪನಲ್ಲ' ವೆಂಬ ಶಬ್ದಕ್ಕರ್ಥ. ಅಂತು ಸರ್ವಾಂಗವೆಲ್ಲಾ ಲಿಂಗಕರ್ಪಿತವಾಗಿ ಲಿಂಗವಾಗಿಪ್ಪ ಶರಣಂಗೆ ಲಿಂಗವು ತಾನೆಂಬ

ಅಱಿವು ¹ಒಂದುಳಿದುದಿರಲು¹ ಆ ಅಱಿವು ಲಿಂಗದದುಯೆಂದು ಲಿಂಗಕ್ಕೆ ಆರೋಪಿತವ ಮಾಡಿ ಮಹಾಘನಲಿಂಗವೆಯಾಗಿರ್ದ ಶರಣನೆಂಬುದೀಗ 'ಇರ್ದುದನರ್ಪಿಸಬಲ್ಲನಾಗಿ ಆತ ಮಹಾಪ್ರಸಾದಿ' ಎಂಬ ಶಬ್ದಕ್ಕರ್ಥ. ೭೧

**ವ.** ರೂಪನರ್ಪಿಸಿ ತಾ ನಿರೂಪಪ್ರಸಾದಿ. ತನ್ನನರ್ಪಿಸಿ ತಾನಿಲ್ಲದ ಪ್ರಸಾದಿ. ಇಲ್ಲವೆಯನರ್ಪಿಸಿ ಬಯಲಪ್ರಸಾದಿ, ಕೂಡಲಚೆನ್ನಸಂಗಯ್ಯಾ ನಿಮ್ಮ ಪ್ರಸಾದಿ.

**ಟೀ.** ಕಾಯವ ಲಿಂಗಕ್ಕರ್ಪಿಸಿ ಕಾಯಗುಣವಳಿದು, ಶರಣನ ಕಾಯ ಲಿಂಗಕಾಯವಾಯಿತ್ತೆಂಬುದೀಗ 'ರೂಪನರ್ಪಿಸಿ ತಾ ನಿರೂಪಪ್ರಸಾದಿ' ಯೆಂಬ ಶಬ್ದಕ್ಕರ್ಥ. ತನ್ನ ಪ್ರಾಣವ ಲಿಂಗಕ್ಕರ್ಪಿಸಿ, ವಾಯುಪ್ರಾಣವಳಿದು ಶರಣನ ಪ್ರಾಣ ಲಿಂಗವಾಯಿತ್ತೆಂಬುದೀಗ 'ತನ್ನನರ್ಪಿಸಿ ತಾನಿಲ್ಲದ ಪ್ರಸಾದಿ' ಯೆಂಬ ಶಬ್ದಕ್ಕರ್ಥ. ಅಂತು ಅಂಗಪ್ರಾಣಂಗಳೆಲ್ಲಾ ಲಿಂಗವೆಯಾಗಿ, ಲಿಂಗವಲ್ಲದೆ ಏನೂ ಇಲ್ಲದೆ ಶರಣ ತನ್ನನೆಲ್ಲಾ ಲಿಂಗವೆಯಾಗಿ ಕಾಣುತ್ತಿಹನಾಗಿ, ಆ ಕಾಣುತ್ತಿಪ್ಪ ಸಮ್ಯಗ್‌ಜ್ಞಾನ ಆ ಕಾಣಿಸಿಕೊಂಬ ಲಿಂಗದ ಪ್ರಕಾಶವೆಂದು ಲಿಂಗಕ್ಕೆ ಭಿನ್ನವಿಡದೆ ಅರ್ಪಿಸಿ ಬಚ್ಚ ಬಱಿಯ ಲಿಂಗವೆಯಾಗಿರ್ದ ಶರಣನೆಂಬುದೀಗ 'ಇಲ್ಲವೆಯನರ್ಪಿಸಿ ಬಯಲಪ್ರಸಾದಿ' ಯೆಂಬ ಶಬ್ದಕ್ಕರ್ಥ. ೭೨

**ವ.** ಲಿಂಗಭೋಗೋಪಭೋಗದಲ್ಲಿ ಆಪ್ಯಾಯನ ಪ್ರಸಾದಿ. ಶರಣ ಭೋಗೋಪಭೋಗದಲ್ಲಿ ಆಪ್ಯಾಯನ ಪ್ರಸಾದಿ. ಪ್ರಸಾದ ಭೋಗೋಪಭೋಗದಲ್ಲಿ ಆಪ್ಯಾಯನ ಪ್ರಸಾದಿ. ಕೊಡದ ಕೊಳದ ಉಭಯ ರಹಿತನು, ಕ್ರೀ ಹಿಂದಾಗಿ ಲಿಂಗ ಮುಂತಾದ ಪ್ರಸಾದಿ. ತನಗೆ ತಾನೇ ಪ್ರಸಾದ, ತನಗೆ ತಾನೇ ಪ್ರಸಾದ ಗ್ರಾಹಕನು. ಇದು ಕಾರಣ ಕೂಡಲಚೆನ್ನಸಂಗಯ್ಯ ನಿಮ್ಮ ಪ್ರಸಾದಿಗೆ ನಮೋ ನಮೋ ಎಂಬೆ!

**ಟೀ.** ಶಿವಜ್ಞಾನಿಯಪ್ಪ ಶಿವಶರಣನ ಅಱಿವಿನ ಬಯಕೆಯೆಲ್ಲವು ಲಿಂಗ ಜಂಗಮಕ್ಕೆ ಸಕಲ ಭೋಗಪದಾರ್ಥಂಗಳನರ್ಪಿಸಿ ಆ ಲಿಂಗ ಜಂಗಮ ಪ್ರಸಾದವನೆ ಭೋಗಿಸುವ ಬಯಕೆಯೆಂಬುದೀಗ 'ಲಿಂಗಭೋಗೋಪಭೋಗದಲ್ಲಿ ಆಪ್ಯಾಯನ ಪ್ರಸಾದಿ, ಶರಣಭೋಗೋಪಭೋಗದಲ್ಲಿ ಆಪ್ಯಾಯನ ಪ್ರಸಾದಿ, ಪ್ರಸಾದ

೧ ಒಂದುಳಿದಿರಲು (ಎ.ಹು.)

ಭೋಗೋಪಭೋಗದಲ್ಲಿ ಆಪ್ಯಾಯನ ಪ್ರಸಾದಿ ' ಯೆಂಬ ಶಬ್ದಕ್ಕರ್ಥ. ಅಂತು ಶರಣನು ಪದಾರ್ಥಂಗಳ ಲಿಂಗಜಂಗಮಕ್ಕರ್ಪಿಸುವಲ್ಲಿ ಅರ್ಪಿತವ ಮಾಡುವ ಮಾಡಿಸಿಕೊಂಬವೆರಡೂ ಒಂದೇ ಲಿಂಗವೆಂದಱಿದು, ಭಿನ್ನಭಾವವಳಿದ ಶರಣ ತಾನೇ ಲಿಂಗವಾಗಿ ಲಿಂಗವ ಭಜಿಸುತ್ತಿಹನೆಂಬುದೀಗ ' ಕೊಡದ ಕೊಳದ ಉಭಯ ರಹಿತನು, ಕ್ರೀ ಹಿಂದಾಗಿ ಲಿಂಗ ಮುಂತಾದ ಪ್ರಸಾದಿ ' ಯೆಂಬ ಶಬ್ದಕ್ಕರ್ಥ. ಅಂತು ಒಂದೇ ಪರವಸ್ತು ತಾನೇ ಲಿಂಗವಾಗಿ ಪ್ರಸಾದವೆನಿಸಿ, ತಾನೇ ಶರಣನಾಗಿ ಲಿಂಗವ ಗ್ರಹಿಸಿ ಪ್ರಸಾದಿಯೆನಿಸಿದನಾಗಿ, ಆ ಪ್ರಸಾದಿಯೇ ಪರವಸ್ತುವೆಂದು ನಮಸ್ಕಾರವ ಮಾಡಬೇಕೆಂಬುದೀಗ ' ತನಗೆ ತಾನೇ ಪ್ರಸಾದ, ತನಗೆ ತಾನೇ ಪ್ರಸಾದಗ್ರಾಹಕನು. ಇದುಕಾರಣ ನಿಮ್ಮ ಪ್ರಸಾದಿಗೆ ನಮೋ ನಮೋ ಎಂಬೆ ' ನೆಂಬ ಶಬ್ದಕ್ಕರ್ಥ. ೭೩

ವ. ಸ್ಥಾವರಾರಾಧನೆಯ ಪೂಜೆ ಪುನಸ್ಕಾರ, ಅಂಗರಚನೆಗೆ ರತಿಯಿಲ್ಲದ ಪ್ರಸಾದಿ. ಜಂಗಮದ ಗುಣವ ಸಂಪಾದಿಸಿ ಮನಕ್ಕೆ ತಾರದ ಪ್ರಸಾದಿ. ಸ್ತ್ರೀಪುರುಷರೇಕೋವರ್ಣವಾಗಿ ಸಂಯೋಗವಿಲ್ಲದ ಪ್ರಸಾದಿ. ನಾದ ಸಂಯೋಗವನು ಕರಸ್ಥಲಕ್ಕೆ ತಂದು ಪರಗಮನವಿರಹಿತ ಪ್ರಸಾದಿ. ಇದುಕಾರಣ ಕೂಡಲಚೆನ್ನಸಂಗ ಸಮಾಪ್ತವಾಗಿ ಲಿಂಗೈಕ್ಯವಾದ ಪ್ರಸಾದಿ.

ಟೀ. ಲಿಂಗವ ಪೂಜಿಸಿದಡೆ ಫಲಪದವುಂಟು, ಮರಳಿ ಭವವುಂಟೆಂಬುದೀಗ ' ಸ್ಥಾವರಾರಾಧನೆಯ ಪೂಜೆ ಪುನಸ್ಕಾರ ' ಎಂಬ ಶಬ್ದಕ್ಕರ್ಥ. ಅಂತು ಲಿಂಗವ ಪೂಜಿಸಿ ಅಂಗಭೋಗಂಗಳ ಪಡೆಯಬೇಕೆಂಬ ಅಂಗಮೋಹಿತನಲ್ಲ ಶರಣ. ಲಿಂಗಮೋಹಿತನೆಂಬುದೀಗ ' ಅಂಗರಚನೆಗೆ ರತಿಯಿಲ್ಲದ ಪ್ರಸಾದಿ ' ಯೆಂಬ ಶಬ್ದಕ್ಕರ್ಥ. ಅಂತು ಭವಕ್ಕೆ ಬರುತ್ತಿಹ ಲಿಂಗಪೂಜೆಯ ಬಿಟ್ಟು, ಜಂಗಮಪೂಜೆ ಭವವಿರಹಿತವೆಂದು ಜಂಗಮ ದೇಹಿಗಳೆಂದೆನ್ನದೆ ಜಂಗಮವೇ ಪರವಸ್ತುವೆಂದು ಮನನಂಬುಗೆಯಿಂದ ಜಂಗಮಪ್ರಸಾದಿಯಾಗಿಪ್ಪ ಶರಣನೆಂಬುದೀಗ ' ಜಂಗಮದ ಗುಣವ ಸಂಪಾದಿಸಿ ಮನಕ್ಕೆ ತಾರದ ಪ್ರಸಾದಿ ' ಯೆಂಬ ಶಬ್ದಕ್ಕರ್ಥ. ಅಂತು ಅಖಂಡ ಪರಶಿವನು ತಾನೇ ಚಿತ್‍ಪ್ರಣವವೆಂಬ ಏಕಾಕ್ಷರಸ್ವರೂಪವಾಗಿಪ್ಪನು. ಅಂತಿಪ್ಪ ಶಿವನು ತಾನೇ ಲಿಂಗಾಂಗವೆರಡಾಗಿ ಶರಣಸತಿ, ಲಿಂಗಪತಿಯೆನಿಸಿದ. ಅದೆಂತೆಂದೊಡೆ : ಒಂದೇ ಚಿತ್‍ಪ್ರಣವನಾದಚೈತನ್ಯವೇ ಲಿಂಗವೆನಿಸಿತ್ತು. ಆ ನಾದಚೈತನ್ಯಲಿಂಗದ ಪ್ರಕಾಶಕಲಾಂಗವೇ ಶರಣನೆನಿಸಿದ. ಅದುಕಾರಣ ಶರಣಂಗೆಯೂ ಲಿಂಗಕ್ಕೆಯೂ ಎಂದೆಂದೂ ವಿಯೋಗವಿಲ್ಲವಾಗಿ ಶರಣಂಗೆ ಲಿಂಗವ

ಭಿನ್ನವಿಟ್ಟು ಕೂಡುವ ಕೂಟವಿಲ್ಲೆಂಬುದೀಗ ' ಸ್ತ್ರೀಪುರುಷರೇಕೋವರ್ಣವಾಗಿ ಸಂಯೋಗವಿಲ್ಲದ ಪ್ರಸಾದಿ ' ಯೆಂಬ ಶಬ್ದಕ್ಕರ್ಥ. ಅಂತು ಶರಣ ತನ್ನಂತರಂಗದಲ್ಲಿ ಸಂಯೋಗವಾಗಿರ್ದ ಪರಮಕಳಾಚೈತನ್ಯಲಿಂಗವ ಬಹಿಷ್ಕರಿಸಿ, ಕರಸ್ಥಲಕ್ಕೆ ತಂದು, ಬಹಿರಂಗವ ತುಂಬಿ, ಒಳಹೊಱಗೆನ್ನದೆ ಸರ್ವಾಂಗ ಲಿಂಗಾರ್ಪಿತವಾಗಿ ಶರಣ ಲಿಂಗವ ಭಜಿಸುತ್ತಿಹನಲ್ಲದೆ ಲಿಂಗವ ಬೇಱಿಟ್ಟು ಕೂಡಬೇಕೆಂಬ ಭಿನ್ನ ಕ್ರೀಯನಾಚರಿಸುವನಲ್ಲ ಶರಣನೆಂಬುದೀಗ ' ನಾದಸಂಯೋಗವ ಕರಸ್ಥಲಕ್ಕೆ ತಂದು ಪರಗಮನವಿರಹಿತ ಪ್ರಸಾದಿ ' ಯೆಂಬ ಶಬ್ದಕ್ಕರ್ಥ. ಅಂತು ಒಳಹೊಱಗೆನ್ನದೆ ಸರ್ವಾಂಗವೆಲ್ಲಾ ಲಿಂಗಾರ್ಪಿತವಾಗಿ ಅಂಗಭಾವವಳಿದು ಲಿಂಗವೆಯಾಗಿಪ್ಪನು ಶರಣನೆಂಬುದೀಗ ' ಇದು ಕಾರಣ ಕೂಡಲಚೆನ್ನಸಂಗ ಸಮಾಪ್ತವಾಗಿ ಲಿಂಗಲೀಯವಾದ ಪ್ರಸಾದಿ ' ಯೆಂಬ ಶಬ್ದಕ್ಕರ್ಥ. ೭೪

**ವ.** ಸ್ವಯಮಜ್ಜನ ಸ್ವಯಪೂಜೆ ಸ್ವಯಾರ್ಪಿತ. ನಾ ನೀನೆಂಬ ಸಂಶಯನಿಂದ ನಿಲವೆಂತಿದ್ದಿತ್ತೆಂದೊಡೆ: ಪರತಂತ್ರವ ಮೀಱಿ, ಭಾವವ ಬಿಟ್ಟು, ಘನರವಿಲೋಚನನಾಗಿ, ಅನರ್ಪಿತವೇ ಭುಂಜಿತ, ಸ್ಥೂಲಸೂಕ್ಷ್ಮ ಘನ ನಿತ್ಯವೆಂದಱಿದು, ಕಾಯ ಜೀವಪ್ರಸಾದವ ಬಿಟ್ಟು ಸರ್ವಭವರುಚಿ ಪ್ರಸಾದಿ, ಕೂಡಲಚೆನ್ನಸಂಗಯ್ಯನಲ್ಲಿ ಆತ ಸರ್ವಾಂಗ ಪ್ರಸಾದಿ.

**ಟೀ.** ಶರಣ ತನ್ನ ಪ್ರಾಣಲಿಂಗಕ್ಕೆ ತನ್ನ ಸದ್ವಿವೇಕ ಜಲವೇ ಅಭಿಷೇಕವಾಗಿ, ತನ್ನ ಮನಃಪುಷ್ಪವೇ ಪೂಜೆಯಾಗಿ, ತನ್ನಾತ್ಮನನೆ ನೈವೇದ್ಯವ ಮಾಡಿ ಅರ್ಪಿಸಿದನು ಎಂಬುದೀಗ ' ಸ್ವಯಮಜ್ಜನ ಸ್ವಯಪೂಜೆ ಸ್ವಯಾರ್ಪಿತ ' ವೆಂಬ ಶಬ್ದಕ್ಕರ್ಥ. ಅಂತು ಶರಣ ತನ್ನನೆಲ್ಲಾ ಲಿಂಗಕ್ಕರ್ಪಿಸಿ, ಶರಣ ಲಿಂಗವೆಂಬ ಭೇದವಳಿದು, ಶರಣನೆಲ್ಲಾ ಲಿಂಗವೆಯಾಗಿರ್ದನೆಂಬುದೀಗ 'ನಾ ನೀನೆಂಬ ಸಂಶಯನಿಂದ ನಿಲವೆ'ಂಬ ಶಬ್ದಕ್ಕರ್ಥ. ಅಂತಪ್ಪ ಶರಣ ತಾನೇ ಲಿಂಗವೆಂಬ ಸ್ವತಂತ್ರ ಭಾವ ತನಗೆ ಘಟಿಸಿತಾಗಿ ಶರಣಂಗೆ ಲಿಂಗವ ಭಿನ್ನವಿಟ್ಟು ಭಾವಿಸುವ ಭಾವವಿಲ್ಲದೆ ಹೋಯಿತ್ತೆಂಬುದೀಗ ' ಪರತಂತ್ರವ ಮೀಱಿ ಭಾವವ ಬಿಟ್ಟು' ಎಂಬ ಶಬ್ದಕ್ಕರ್ಥ. ಅಂತು ಮಹಾಘನಲಿಂಗ ತಾನೆಂದು ಕಂಡಿರ್ಪ ಅಖಂಡಜ್ಞಾನದೃಕ್ಕೆಯಾಗಿರ್ದ ಶರಣನೆಂಬುದೀಗ ' ಘನರವಿಲೋಚನನಾಗಿ ' ಎಂಬ ಶಬ್ದಕ್ಕರ್ಥ. ಅಂತು ಮಹಾಜ್ಞಾನದಱಿವಿಂದ ಆರೂ ಗ್ರಹಿಸಬಾರದ ಮಹಾಘನಲಿಂಗವು ತನ್ನ ನಿಜವೆಂದೇ ಗ್ರಹಿಸಿ ತಾನೆ ಲಿಂಗವೆಂದು ದ್ವೈತಭಾವವಳಿದಿರ್ದ ಶರಣನೆಂಬುದೀಗ ' ಅನರ್ಪಿತವೆ ಭುಂಜಿತ ' ವೆಂಬ ಶಬ್ದಕ್ಕರ್ಥ. ಅಂತಪ್ಪ ಮಹಾಜ್ಞಾನದಿಂದ

ನಿತ್ಯವಪ್ಪ ಮಹಾವಸ್ತುವಿನ ಸ್ಥೂಲವೇ ಗುರು, ಸೂಕ್ಷ್ಮವೇ ಲಿಂಗ, ಕಾರಣವೇ ಜಂಗಮವೆಂದಱಿದು, ಆ ಗುರುಲಿಂಗಜಂಗಮದ ತ್ರಿವಿಧಪ್ರಸಾದಸೇವಕನಾಗಿ ಕ್ರೀವಿಡಿದಿರ್ದ ಶರಣನೆಂಬುದೀಗ ' ಸ್ಥೂಲ ಸೂಕ್ಷ್ಮ ಘನ ನಿತ್ಯವೆಂದಱಿದು ' ಎಂಬ ಶಬ್ದಕ್ಕರ್ಥ. ಅಂತು ಗುರುಲಿಂಗಜಂಗಮದ ಪ್ರಸಾದಸೇವನೆಯಿಂದ ಹಲವು ಪರಿಭವಕ್ಕೆ ಕಾರಣವಾದ ಕಾಯಜೀವದ ವಾಸನಾಶೇಷವೆಲ್ಲವೂ ಬಿಟ್ಟು ಹೋಗಿ, ಸರ್ವಾಂಗಲಿಂಗಪ್ರಕಾಶಮಯವಾಯಿತ್ತು ಶರಣಂಗೆಂಬುದೀಗ ' ಕಾಯ ಜೀವ ಪ್ರಸಾದವ ಬಿಟ್ಟು ಸರ್ವಭವ ರುಚಿಪ್ರಸಾದಿ ' ಯೆಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಸರ್ವಾಂಗವೆಲ್ಲಾ ಲಿಂಗವೆಂಬುದೀಗ ' ಆತ ಸರ್ವಾಂಗಪ್ರಸಾದಿ ' ಯೆಂಬ ಶಬ್ದಕ್ಕರ್ಥ. ೭೫

ವ. ಅಂಗಕ್ಕೆ ಆಚಾರವಳವಟ್ಟಲ್ಲಿ ಲಿಂಗಕ್ಕೆ ಆ ಅಂಗವೇ ಅರ್ಪಿತ. ಪ್ರಾಣಕ್ಕೆ ಪ್ರಸಾದ ಸಾಧ್ಯವಾದಲ್ಲಿ ಲಿಂಗಕ್ಕೆ ಆ ಪ್ರಾಣವೇ ಅರ್ಪಿತ. ಮನ ಮಹವನಿಂಬುಗೊಂಡಲ್ಲಿ ಆ ಮಹವಿಂಗೆ ಮನವೇ ಅರ್ಪಿತ. ಭಾವಕ್ಕೆ ಭ್ರಮೆಯಳಿದು ನಿಭ್ರಾಂತನಾದಲ್ಲಿ ಲಿಂಗಕ್ಕೆ ಆ ಭಾವವೇ ಅರ್ಪಿತ. ಜ್ಞಾತೃ ಜ್ಞಾನ ಜ್ಞೇಯ ಸಂಪುಟವಾದಲ್ಲಿ, ಅಱಿವು ನಿರ್ಣಯ ನಿಷ್ಪತ್ತಿಯಾಗಿ ಕುಱುಹುಗೆಟ್ಟಲ್ಲಿ ಆ ಲಿಂಗಕ್ಕೆ ಆ ಅಱಿವೇ ಅರ್ಪಿತ. ಇಂತು ಸರ್ವಾಂಗ ಅರ್ಪಿತವಾಗಿ ಲಿಂಗಕ್ಕೆ ಒಡೆತನವ ನಿತ್ತ ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ನಾ ನೀನೆಂಬುದಿಲ್ಲದೆ ನಿಂದ ನಿಜದ ಮಹಾಪ್ರಸಾದಿ.

ಟೀ. ಜ್ಞಾತೃವೆಂದರೆ ಜೀವನು, ಜ್ಞಾನವೆಂದರೆ ಅಱಿವು, ಜ್ಞೇಯವೆಂದರೆ ಅಱುಹಿಸಿಕೊಂಬ ಲಿಂಗ. ಅಂತು ಶರಣ ತನ್ನ ಜೀವಸಂಬಂಧವಾದ ಅಂಗ ಪ್ರಾಣ ಮನ ಭಾವಂಗಳೆಲ್ಲವನು ಜ್ಞಾನಮುಖದಿಂದ ಲಿಂಗಕ್ಕೆ ಅರ್ಪಿಸಿ, ಜೀವ ಸ್ವರೂಪವಾದ ಅಂಗವೆಲ್ಲವು ಲಿಂಗವ ಕೂಡಿ, ಶರಣನೆಲ್ಲಾ ಲಿಂಗವೆಯಾಗಿ, ಲಿಂಗ ತಾನೆಂಬ ಅಱಿವಿನ ತೋಱಿಕೆಯಡಗಿ ಲಿಂಗವೆ ಉಳಿದಲ್ಲಿ ಲಿಂಗವಾಗಿರ್ದ ಶರಣ ನೆಂಬುದೀ ವಚನದ ತಾತ್ಪರ್ಯಾರ್ಥ. ೭೬

ವ. ಇಲ್ಲೆಂಬುದನಿಲ್ಲೆನಬಲ್ಲರೆ ಅರ್ಪಿತ. ಉಂಟೆಂಬುದನುಂಟೆನಬಲ್ಲರೆ ಪ್ರಸಾದ. ಆ ಪ್ರಸಾದವ ತಾನಿಲ್ಲದೆ ಕೊಳಬಲ್ಲರೆ ಪ್ರಸಾದಿ. ಆ ಪ್ರಸಾದಿಯ ಪರಮಪರಿಣಾಮವೆ ಪ್ರಸಾದವಾಗಿ, ಆ ಪ್ರಸಾದವೆ ತಾನಾಗಿ ಬೆಳಗುತ್ತಿಪ್ಪನಯ್ಯ ಕೂಡಲಚೆನ್ನಸಂಗಾ ನಿಮ್ಮ ಶರಣ !

**ಟೀ.** ಇಲ್ಲದ ದೇಹಕರಣಾದಿಗಳು ತನಗೆಂದೂ ಇಲ್ಲವೆಂದೇ ಅಱಿದು ಕಳೆದು, ತನ್ನನೆಲ್ಲಾ ಪರಮಲಿಂಗವೆಯಾಗಿ ಕಾಣುತ್ತಿಪ್ಪ ಸಮ್ಯಗ್‌ಜ್ಞಾನ ಘಟಿಸಿದರೆ ಆ ಶರಣ ಲಿಂಗಕ್ಕೆ ಅರ್ಪಿತವಪ್ಪನೆಂಬುದೀಗ 'ಇಲ್ಲೆಂಬುದನಿಲ್ಲೆನಬಲ್ಲರೆ ಅರ್ಪಿತ' ವೆಂಬ ಶಬ್ದಕ್ಕರ್ಥ. ಅಂತು ಅನಿತ್ಯವ ಬಿಟ್ಟು ನಿತ್ಯ ಪರಿಪೂರ್ಣವನುಳ್ಳ ಪರಮ ಲಿಂಗವು ತಾನಾಗಿ, ಕಂಡು ಭಾವಿಸುತ್ತಿರ್ದ ಆ ಸದ್ಭಾವ ಹಸ್ತದಿಂದ ಆ ಲಿಂಗವ ಕರಸ್ಥಲಕ್ಕೆ ತಂದು, ಪ್ರತ್ಯಕ್ಷವಾಗಿ ಉಂಟೆನಿಸಿ, ಒಳಹೊಱಗೆಂಬ ಸಂಶಯವಳಿದಡೆ ಆ ಶರಣ ತಾನೆ ಪರವಸ್ತುವೆಂಬುದೀಗ 'ಉಂಟೆಂಬುದನುಂಟೆನಬಲ್ಲರೆ ಪ್ರಸಾದ' ವೆಂಬ ಶಬ್ದಕ್ಕರ್ಥ. ಅಂತು ತನ್ನ ನಿಜವಪ್ಪ ನಿರಾಕಾರಲಿಂಗವು ಸರ್ವಾಂಗವ ನೊಳಕೊಂಡು ಕರಸ್ಥಲದಲ್ಲಿ ಬೆಳಗುತ್ತಿರ್ದ ಇಷ್ಟಲಿಂಗದ ಪರಮಕಳೆಯೆಲ್ಲಾ ಶರಣ ತಾನೆಯಾಗಿ ಕಂಡು, ಲಿಂಗವು ನಾನೆಯೆನುತ್ತಿರ್ದನಾಗಿ ಆ ನಾನೇ ಲಿಂಗ ವೆಂಬ ಅಱಿವಿನ ತೋಱಿಕೆಯ ಭಿನ್ನವಳಿದು ಲಿಂಗವೆಯಾಗಿರಬಲ್ಲ ಶರಣಂಗೆ ಲಿಂಗಪದ ಸಿದ್ಧಿಯಹುದೆಂಬುದೀಗ 'ಆ ಪ್ರಸಾದವ ತಾನಿಲ್ಲದೆ ಕೊಳಬಲ್ಲರೆ ಪ್ರಸಾದಿ' ಯೆಂಬ ಶಬ್ದಕ್ಕರ್ಥ. ಅಂತು ಅಂಗಲಿಂಗಸಂಬಂಧವಾಗಿ ಅಱಿವಿನ ತೋಱಿಕೆಯ ಭಿನ್ನವಳಿದು ಲಿಂಗವೆಯಾದ ಶರಣಂಗೆ ಆ ಮಹಾಲಿಂಗಾನಂದದಲ್ಲಿ ಪರಿಣಾಮಿಸಿದನಾಗಿ ಆ ಪರಿಣಾಮವೇ ಪರಮಪ್ರಸಾದವೆಂಬುದೀಗ 'ಆ ಪ್ರಸಾ ದಿಯ ಪರಮಪರಿಣಾಮವೇ ಪ್ರಸಾದವಾಗಿ' ಯೆಂಬ ಶಬ್ದಕ್ಕರ್ಥ. ಅಂತು ಅಖಂಡಚಿತ್‌ಪ್ರಕಾಶಲಿಂಗವೆಯಾಗಿಪ್ಪ ಶಿವಶರಣನೆಂಬುದೀಗ 'ಆ ಪ್ರಸಾದವೆ ತಾನಾಗಿ ಬೆಳಗುತ್ತಿಪ ನಯ್ಯಾ ನಿಮ್ಮ ಶರಣ' ನೆಂಬ ಶಬ್ದಕ್ಕರ್ಥ. ೭೭

**ವ.** ಇದೇನಯ್ಯಾ ಪ್ರಸಾದ ಒಡನೆ ನುಡಿವುತ್ತಿಪ್ಪುದ ಕಂಡೆ! ಇದೇ ನಯ್ಯಾ ಪ್ರಸಾದ ಒಡನೆ ನಡೆವುತ್ತಿಪ್ಪುದ ಕಂಡೆ! ಪ್ರಾಣನ ಮೇಲೆ ಲಿಂಗಪ್ರತಿಷ್ಠೆಯಾದ ಶರಣಂಗೆ ಅದು ತಾನೆ ನಡೆವುದು, ಅದು ತಾನೆ ನುಡಿವುದು. ಎರಡೆಂಬುದಿಲ್ಲವಾಗಿ ಅದು ತಾನೆ ಒಂದು ಕೂಡಲ ಚೆನ್ನಸಂಗಾ ನಿಮ್ಮ ಶರಣಂಗೆ.

**ಟೀ.** ಒಂದೆ ಪರಬ್ರಹ್ಮವು ಲಿಂಗಾಂಗವೆರಡಾಯಿತ್ತು. ಆ ಎರಡಾದಲ್ಲಿ ಅಂಗವೆ ಶರಣನಾದ ಕಾರಣ ಆ ಶರಣನ ಅಂಗ ಪ್ರಾಣವೆಲ್ಲವು ಲಿಂಗಸ್ವರೂಪು. ಅಂತು ಶರಣನ ಅಂಗ ಪ್ರಾಣವೆಂಬ ಅಂಗದಲ್ಲಿ ಲಿಂಗವೇ ಪ್ರಾಣವಾಗಿ ನೆಲೆಗೊಂಡ ಶರಣನ ಸರ್ವಾಂಗವೆಲ್ಲಾ ಲಿಂಗವೆಯಾಗಿ, ನಡೆವ ನುಡಿವ ನೋಡುವವೆಲ್ಲಾ ಲಿಂಗವೆಯಾಗಿ, ಶರಣನ ಅಂಗಭೋಗಂಗಳನೆಲ್ಲವ ಲಿಂಗವೇ ಭೋಗಿಸುತ್ತಿಪ್ಪನಾಗಿ ಲಿಂಗವೂ ಶರಣನೂ ಎಂದೆಂದೂ ಒಂದೇ ವಸ್ತು. ಅಂತು ಶರಣನೂ ಲಿಂಗವೂ

ಒಂದೇ ವಸ್ತುವೆಂಬುದು ಶರಣಂಗಲ್ಲದೆ ಮತ್ತಾರಿಗೂ ಇಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೭೮

ವ. ಮಧ್ಯಾಹ್ನದಿಂದ ಮೇಲೆ ಹಿರಿಯರಿಲ್ಲ. ಅಸ್ತಮಾನದಿಂದ ಮೇಲೆ ಜಿತೇಂದ್ರಿಯರಿಲ್ಲ. ವಿಧಿಯ ಮೀಱುವ ಅಮರರಿಲ್ಲ. ಕ್ಷುಧೆ ವಿಧಿ ವ್ಯಸನಕ್ಕಂಜಿ ನಾ ನಿಮ್ಮ ಮಱೆಹೊಕ್ಕು ಬದುಕಿದೆ ಚೆನ್ನಮಲ್ಲಿಕಾರ್ಜುನಾ !

ಟೀ. ಕ್ಷುತ್ತಿನ ಬಾಧೆಯನೂ ಕಾಮವಿಕಾರವನೂ ಬಿಟ್ಟಿಹೆನೆಂದರೆಯೂ ಅವು ಬಿಡದೆ ಹಿಡಿದು ಕಾಡುತ್ತಿಪ್ಪವಾಗಿ ದೇಹಭೋಗ ಹಿಂಗದು. ದೇಹಭೋಗ ಹಿಂಗದಾಗಿ ಜನನ ಮರಣ ತಪ್ಪದು. ಅಂತು ದೇಹೇಂದ್ರಿಯ ವಿಷಯಸುಖ ಭೋಗಂಗಳನಾರೂ ಜಯಿಸಲಱಿಯದೆ ಷಡುದರುಶನಾದಿಗಳು ದೇವತಾದಿಗಳೆಲ್ಲರೂ ಜನನಮರಣಕ್ಕೊಳಗಾದರು. ಲಿಂಗದ ಮಱೆಹೊಕ್ಕು ಶರಣ ಅಂಗಭೋಗಂಗಳನೆಲ್ಲವ ಲಿಂಗಕ್ಕರ್ಪಿಸಿ, ಲಿಂಗಪ್ರಸಾದಭೋಗಿಯಾಗಿ ಶರಣ ನಿತ್ಯಮುಕ್ತನಾದನೆಂಬುದೀ ವಚನದ ತಾತ್ಪರ್ಯಾರ್ಥ. ೭೯

ಪ್ರಸಾದಿಸ್ಥಲ ಸಂಪೂರ್ಣ

**ಅಂತು ಸ್ಥಲ ೧೨ ಕ್ಕಂ ಶ್ಲೋಕ ೧೧೩ ಕ್ಕಂ ವಚನ ೪೩೬ ಕ್ಕಂ**
**ಮಂಗಳಂ**

**ಶ್ರೀ**

# ೧೩ ಪ್ರಾಣಲಿಂಗಿಸ್ಥಲ

*

**ಸೂತ್ರ.** ಅಂತು ಇಷ್ಟ ಪ್ರಾಣ ಭಾವವೆಂಬ ತ್ರಿವಿಧಲಿಂಗವಿಡಿದು ಆಚಾರಾದಿ ಮಹಾಲಿಂಗಂಗಳ ಮುಖವನಱಿದು, ಸರ್ವೇಂದ್ರಿಯ ಸುಖಭೋಗಂಗಳನೆಲ್ಲಾ ಸಾವಧಾನಭಕ್ತಿಯಿಂದರ್ಪಿಸಿ, ಪ್ರಸಾದ ಭೋಗೋಪಭೋಗಿಯಾದ ಪ್ರಸಾದಿಯ ತನುವೇ ಗುರು, ಮನವೇ ಲಿಂಗ, ಪ್ರಾಣವೇ ಜಂಗಮಲಿಂಗಸ್ವರೂಪು. ಅಂತಾದ ಲಿಂಗತ್ರಯದೊಳಗೆ ಪ್ರಾಣಸ್ವರೂಪಾಗಿಪ್ಪ ಲಿಂಗವೆ ಸರ್ವಕಾರಣಸ್ವರೂಪವೆಂದಱಿದು, ಆ ಸರ್ವಕಾರಣವಾದ ಪ್ರಾಣಲಿಂಗವೆ ಇಷ್ಟಲಿಂಗವೆಂದಱಿದು, ಇಷ್ಟಲಿಂಗ ಪ್ರಾಣಲಿಂಗ ಒಂದೆಯೆಂದಱಿದು ಪ್ರಾಣಲಿಂಗಸ್ವರೂಪನಾಗಿ ಲಿಂಗ ಸುಖವನನುಭವಿಸುತ್ತ, ಎರಡಳಿದು ಅನುಭಾವಭಕ್ತಿಯಿಂದ ಪ್ರಾಣಲಿಂಗಾರ್ಚನೆಯ ಮಾಡುತ್ತಿಪ್ಪುದೇ ಪ್ರಾಣಲಿಂಗಿಯೆಂದು ಹೇಳಲಾಯಿತ್ತು.

**ಪ್ರಾಣಲಿಂಗಿಸ್ಥಲಕ್ಕೆ ಶ್ಲೋಕ :**

ತಥಾ ಪ್ರಾಣೇ ಗುಣೇ ಲಿಂಗೇ ಲಿಂಗಪ್ರಾಣಸಮಾಯುತಂ
ಸುಖದುಃಖಭಯಂ ನಾಸ್ತಿ ಪ್ರಾಣಲಿಂಗಿಸ್ಥಲಂ ಭವೇತ್

**ಟೀ.** ಪ್ರಾಣನ ಗುಣವಳಿದು, ಲಿಂಗದಲ್ಲಿ ನೆನಹು ಸಂಬಂಧಿಸಿ, ಸುಖದುಃಖಭಯವು ತನಗಿಲ್ಲದಿರ್ದಡೆ ಪ್ರಾಣಲಿಂಗಿಸ್ಥಲವೆಂದು ಈಶ್ವರನು ಹೇಳಿದನು. ೧

ಸಚ್ಚಿತ್ಸುಖಾದ್ವಯಂ ಪೂರ್ಣಂ ಯದೇಕಂ ಬ್ರಹ್ಮಸಂಜ್ಞಕಂ
ತದ್ವಸ್ತು ಸ ಮಹಾದೇವಸ್ತದ್ಯುಕ್ತಃ ಪ್ರಾಣಲಿಂಗವಾನ್

ಟೀ. ಸಚ್ಚಿತ್ಸುಖಾದ್ವಯಂ-ಸಚ್ಚಿದಾನಂದರೂಪವಾಗಿ, ಅದ್ವಯಂ-ಎರಡಿಲ್ಲದುದಾಗಿ, ಪೂರ್ಣಂ-ಪರಿಪೂರ್ಣವಾಗಿ, ಏಕಂ-ಒಂದೆಯಾಗಿ, ಬ್ರಹ್ಮಸಂಜ್ಞಕಂ-ಬ್ರಹ್ಮವೆಂಬ ಹೆಸರನುಳ್ಳುದು, ಯತ್-ಆವುದಾನೊಂದು ವಸ್ತು ಉಂಟು, ತದ್ವಸ್ತು-ಆ ವಸ್ತುವು, ಸ ಮಹಾದೇವಃ - ಆ ಮಹಾದೇವನು, ತದ್ಯುಕ್ತಃ-ಆ ಮಹಾದೇವನೊಡನೆ ಕೂಡಿದಂಥಾ ಆತನು, ಪ್ರಾಣಲಿಂಗವಾನ್ - ಪ್ರಾಣಲಿಂಗಿಯೆನಿಸಿಕೊಂಬನು. ೨

## ಯೋಗಸಾರದಲ್ಲಿ :

ಅವ್ಯಕ್ತಂ ಕಾರಣಂ ಲಿಂಗಂ ಅಕ್ಷರಂ ಪರಮಂ ಪದಂ
ನಿರ್ಗುಣಂ ಶುದ್ಧವಿಜ್ಞಾನಂ ಹೃದಿ ಪಶ್ಯಂತಿ ಯೋಗಿನಃ

ಟೀ. ಯೋಗಿನಃ - ಯೋಗಿಗಳು, ಕಾರಣಂ - ಜಗದುತ್ಪತ್ತಿಕಾರಣವಾದ, ಲಿಂಗಂ-ಲಿಂಗವನು, ಅವ್ಯಕ್ತಂ - ವ್ಯಕ್ತವಲ್ಲದುದಾಗಿ, ಅಕ್ಷರಂ - ಕೇಡಿಲ್ಲದುದಾಗಿ, ಪರಮಂ-ಪ್ರಕೃತಿಗಿಂದವೂ ಮೇಲಣದಾಗಿ, ನಿರ್ಗುಣಂ-ಸತ್ತ್ವರಜಸ್ತಮಂಗಳಿಲ್ಲದುದಾಗಿ, ಶುದ್ಧಂ - ಶುದ್ಧವಾಗಿ, ವಿಜ್ಞಾನಂ - ಸಮ್ಯಗ್‌ಜ್ಞಾನಸ್ವರೂಪವಾದ, ಪದಂ-ವಸ್ತುವನಾಗಿ, ಹೃದಿ-ಹೃದಯದಲ್ಲಿ, ಪಶ್ಯಂತಿ-ಕಾಣುತ್ತಿಹರು. ೩

ತದ್ದೇಹಮಿಂದ್ರಿಯಾಣ್ಯೇವ ಸರ್ವದಾ ಲಿಂಗಭೋಗಿನಾಂ
ತನ್ಮುಖಂ ಪಂಚವಕ್ತ್ರಂ ಚ ಪ್ರಾಣಲಿಂಗಸ್ಯ ಲಕ್ಷಣಂ

ಟೀ. ಪ್ರಾಣನ ಪೂರ್ವಗುಣವಳಿದು, ಪ್ರಾಣಲಿಂಗಿಯ ದೇಹವು ಆವಾಗವೂ ಲಿಂಗಸಹಿತವಾಗಿ ಇಂದ್ರಿಯಭೋಗವ ಭೋಗಿಸುವುದು ಪ್ರಾಣಲಿಂಗಿಯ ಲಕ್ಷಣವು. ಹೀಂಗೆಂದು ಈಶ್ವರನ ಪಂಚಮುಖಕ್ಕೆ ಪಂಚೇಂದ್ರಿಯಂಗಳನರ್ಪಿಸುವುದು. ೪

## ಪ್ರಾಣಲಿಂಗಿಯ ಸ್ಥಲಕ್ಕೆ ವಚನ :

ಘಟಸಂಸ್ಕಾರದಲ್ಲಿ ಪಟಲ ಹಱಿವುದೇ ? ಜೀವಸಂಸ್ಕಾರವಿಲ್ಲದನ್ನಕ್ಕರ ಭವವೆಂತು ಹಱಿವುದು ? ಅಂಗಭವಿ ಲಿಂಗಭವಿಯ ಕಳೆದುಳಿದಲ್ಲದೆ ಕೂಡಲಚೆನ್ನಸಂಗನ ಹೊದ್ದಬಾರದು.

ಟೀ. ಶಿವಜ್ಞಾನವಿಲ್ಲದ ಜೀವರು ಅಂಗದ ಮೇಲೆ ಲಿಂಗವ ಧರಿಸಿದ ಮಾತ್ರದಲ್ಲಿಯೆ ಜೀವರ ಮಾಯಾಕರ್ಮಭವಪಾಶಂಗಳು ಹಱಿಯವೆಂಬುದೀಗ 'ಘಟಸಂಸ್ಕಾರದಲ್ಲಿ ಪಟಲ ಹಱಿವುದೇ? ಜೀವಸಂಸ್ಕಾರವಿಲ್ಲದನ್ನಕ್ಕರ ಭವವೆಂತು ಹಱಿವುದು ?' ಎಂಬ ಶಬ್ದಕ್ಕರ್ಥ. ಅಂಗವೆಂದಡೆ ಜೀವಾತ್ಮನು. ಅಂತಪ್ಪ ಜೀವಾತ್ಮಂಗೆ ಜ್ಞಾನೋದಯವಾಗಿ ಇಷ್ಟಲಿಂಗದ ಕಳಾಸ್ವರೂಪೆಲ್ಲಾ ತಾನೆಯೆಂದಱಿದು ಅನನ್ಯಭಾವದಿಂದ ಲಿಂಗವನಾತ್ಮಸಂಬಂಧವ ಮಾಡಿಕೊಂಡು, ಜೀವಭಾವವಳಿದಲ್ಲದೆ ಅಂಗದ ಭವಿತ್ವ ಹೋಗದು. ಅಂತು ಇಷ್ಟಲಿಂಗದ ಶಿಲಾಮೂರ್ತಿಯಲ್ಲಿ ಶ್ರೀಗುರು ಶಿವಕಳೆಯ ತುಂಬಿ ಶಿಲಾಭಾವವಳಿದಲ್ಲದೆ ಇಷ್ಟಲಿಂಗದ ಭವಿತ್ವ ಹೋಗದು. ಅದುಕಾರಣ ಅಂಗದ ಸ್ವರೂಪ, ಲಿಂಗದ ಸ್ವರೂಪ, ಈ ಉಭಯದ ಸ್ವರೂಪವನಱಿದು ಜ್ಞಾನಕ್ರೀಯಿಂದ ಲಿಂಗಾಂಗ ಸಂಬಂಧವಾಗಿ ಭವಿತ್ವವನಳಿದಾತನಲ್ಲದೆ ಲಿಂಗವಾಗಬಾರದೆಂಬುದೀಗ 'ಅಂಗಭವಿ ಲಿಂಗಭವಿಯು ಕಳೆದುಳಿದಲ್ಲದೆ ಕೂಡಲಚೆನ್ನಸಂಗನ ಹೊದ್ದಬಾರದು' ಎಂಬ ಶಬ್ದಕ್ಕರ್ಥ. ೧

ವ. ತನು ಮುಟ್ಟಿ ಮನ ಮುಟ್ಟದೆ ದೂರವಾದರಯ್ಯಾ ! ಬೆಲೆವೆಣ್ಣಿನಂತೆ ಸೂಳೆ ತನು ಮುಟ್ಟಿ ಅಪ್ಪುವಳಲ್ಲದೆ ಮನ ಮುಟ್ಟಿ ಅಪ್ಪಳಾಗಿ ಆಚಾರವಱಿಯದ ಅರೆಮರುಳುಗಳು ಸುಖವನೆತ್ತ ಬಲ್ಲರು ಕೂಡಲಸಂಗಮದೇವಾ ?

ಟೀ. ಅನಿತ್ಯವಾದ ಮಾಯಾದೇಹಭೋಗಸುಖಂಗಳ ಬಯಕೆಯನಳಿದು ಅಂಗ ಪ್ರಾಣಂಗಳ ಲಿಂಗಕ್ಕರ್ಪಿಸಿ, ಲಿಂಗಸುಖವ ಪಡೆದು, ಅಂಗಪ್ರಾಣಂಗಳೆಲ್ಲಾ ಲಿಂಗವೆಯಾಗಿಪ್ಪ ಪದವನಱಿಯದೆ, ದೇಹಭೋಗಕ್ಕಾಗಿ ಲಿಂಗವ ಪೂಜಿಸಿ, ಫಲಪದವ ಪಡೆವ ಅಜ್ಞಾನಿಗಳೆಲ್ಲರೂ ವೇಶ್ಯಾಂಗನೆಯರಂತೆಂಬುದೀ ವಚನದ ತಾತ್ಪರ್ಯಾರ್ಥ. ೨

ವ. ಹಿಡಿದ ಕೈಯ ಮೇಲೆ ಕತ್ತಲೆಯಯ್ಯಾ ! ನೋಡುವ ಕಂಗಳ ಮೇಲೆ ಕತ್ತಲೆಯಯ್ಯಾ ! ನೆನೆವ ಮನದ ಮೇಲೆ ಕತ್ತಲೆಯಯ್ಯಾ ! ಕತ್ತಲೆಯೆಂಬುದು ಇತ್ತಲೆಯಯ್ಯಾ ! ಗೊಹೇಶ್ವರನೆಂಬುದು ಅತ್ತಲೆಯಯ್ಯಾ !

ಟೀ. ತನ್ನ ಪ್ರಾಣಕಳಾಸ್ವರೂಪಮಪ್ಪ ಪರಬ್ರಹ್ಮವೆ ಸರ್ವಾಂಗವನೊಳಕೊಂಡು ಇಷ್ಟಲಿಂಗವಾಗಿ ಕರಸ್ಥಲದಲ್ಲಿ ಬೆಳಗುತ್ತಿಪ್ಪ ಭೇದವನಱಿಯದೆ, ಆ ಕರಸ್ಥಲದ ಲಿಂಗವ ಭಿನ್ನವಿಟ್ಟು ಪೂಜಿಸುವ, ಭಿನ್ನವಿಟ್ಟು ನೋಡುವ, ಭಿನ್ನವಿಟ್ಟು

ನೆನೆವ ಭಿನ್ನಭಾವಿಗಳ ಸರ್ವಾಂಗವೆಲ್ಲವೂ ಅಜ್ಞಾನ. ಅಂತಪ್ಪ ಅಜ್ಞಾನಿಗಳಿಗೆ ಲಿಂಗವು ದೂರಸ್ಥವೆಂಬುದೀ ವಚನದ ತಾತ್ಪರ್ಯಾರ್ಥ. ೩

**ವ.** ಆಸನಬದ್ಧರು ಸುಮ್ಮನಿರರು. ಭಸ್ಮವ ಪೂಸಿ ಸ್ವರವ ಹಿಡಿವರು ಸಾಯದಿಪ್ಪರೇ ? ಕಾಲಕರ್ಮ ಪ್ರಳಯಂಗಳಾಗಿ ಸಾಯದಿಪ್ಪರೇ ? ಸತ್ಯವನೆ ಮಱೆದು, ಅಸತ್ಯವನೆ ಹಿಡಿದು, ಸತ್ತುಹೋದರು ಗೊಹೇಶ್ವರಾ.

**ಟೀ.** ಅಂತರಂಗದಲ್ಲಿರ್ದ ಪರಂಜ್ಯೋತಿಲಿಂಗವು ಗುರುಮುಖದಿಂದ ಬಹಿಷ್ಕರಿಸಿ ಸರ್ವಾಂಗವನೊಳಕೊಂಡು ಕರಸ್ಥಲಕ್ಕೆ ಬಂದು ಕಣ್ಮನ ಭಾವಂಗಳಿಗೆ ಪ್ರತ್ಯಕ್ಷವಾಗಿ ಬೆಳಗುತಿಪ್ಪ ಇಷ್ಟಲಿಂಗದ ಪರಮಕಳೆಯೆ ತನ್ನ ನಿಜವೆಂದಱಿದು, ಭೇದಬುದ್ಧಿಯನಳಿದು ಕೂಡುವ ಭಕ್ತಿಯೋಗವನಱಿಯದೆ, ಪವನ ಭೇದದಿಂದ ಯೋಗವ ಸಾಧಿಸಿ ಲಿಂಗವನಱಿದು ಕೂಡಿಹೆನೆಂಬ ಅಷ್ಟಾಂಗಯೋಗಿಗಳೆಲ್ಲರೂ ಭವಕ್ಕೆ ಭಾಜನರಾದರೆಂಬುದೀ ವಚನದ ತಾತ್ಪರ್ಯಾರ್ಥ. ೪

ವ. ಗುರು ತೋಱಿದ ಲಿಂಗವೆ ಮನಸ್ಥಲವಾಗಿರಲು ಪವನಭೇದದಿಂದ ಅಱಿದಿಹೆನೆಂದಡೆ ಅದೇ ದ್ರೋಹ. ಈಡಾ ಪಿಂಗಳ ಸುಷುಮ್ನನಾಳ ವಿಡಿದು ಅಱಿದಿಹೆನೆಂದಡೆ ಕೂಡಲಸಂಗಮದೇವ ಮೂಗ ಕೊಯ್ಯದೆ ಮಾಣ್ಬನೇ ?

ಟೀ. ಈ ವಚನ ಕಾಣಬಂದರ್ಥ. ೫

ವ. ಪ್ರಾಣಲಿಂಗವ ಪರಲಿಂಗವ ಮಾಡಿ, ಇಷ್ಟಲಿಂಗದ ಪೂಜೆಯ ಕಷ್ಟವ ನೋಡಾ ! ತೊಟ್ಟಿಲ ಶಿಶುವಿಂಗೆ ಜೋಗುಳವಲ್ಲದೆ ಹೊಟ್ಟೆಯ ಶಿಶುವಿಂಗೆ ಜೋಗುಳವುಂಟೇ ? ಬಯಲಾಸೆ ಹಾಸ್ಯವಾಯಿತ್ತು ಚಿಕ್ಕಯ್ಯಪ್ರಿಯ ಸಿದ್ಧಲಿಂಗವಿಲ್ಲದ ಕಾರಣ !

ಟೀ. ಹೊಟ್ಟೆಯೊಳಗಿರ್ದ ಶಿಶು ಕಾಣಿಸದಾಗಿ ಅದು ಮಕ್ಕಳಾಗಿ ತಾಯಿಗಳಿಗೆ ಮೋಹಸುಖವ ಕೊಡುವುದೇ ? ಕೊಡದಾಗಿ ಅಂತು ಹೊಟ್ಟೆಯೊಳಗಿರ್ದ ಶಿಶು ಹೊಱವಂಟ ಬಳಿಕ ಮುದ್ದಿನ ಮೋಹದಪ್ಪಿನ ಸುಖವ ತಾಯಿಗಳಿಗಿತ್ತು ಜೋಗುಳವಾಡಿಸಿಕೊಂಬಂತೆ, ಅಂಗದೊಳಗಿರ್ದ ಪ್ರಾಣಚೈತನ್ಯವೆ ಪರಶಿವಲಿಂಗವೆಂದಱಿಯದೆ ಬಱಿಯ ವಾಗದ್ವೈತವ ನುಡಿದು, ಬಯಲನೆ ಭಾವಿಸಿದಲ್ಲಿ ದೇಹ

ವಾಸನೆಯಳಿಯದಾಗಿ ಹಾಸ್ಯಕ್ಕೊಳಗಾಗಿ ಸತ್ತುಹೋದರು ಅದ್ವೈತಿಗಳು. ಅದು ಕಾರಣ ಅಂಗದೊಳಗಿರ್ದ ಪ್ರಾಣಕಳಾಲಿಂಗವು ಗುರುಮುಖದಿಂದ ಬಹಿಷ್ಕರಿಸಿ ಕರಸ್ಥಲಕ್ಕೆ ಬಂದ ಇಷ್ಟಲಿಂಗದ ಕಳಾಸ್ವರೂಪವ ಕಂಡು, ತನ್ನ ನಿಜವೆಂದಱಿದು ಮೋಹಿಸಿ, ಸರ್ವಕ್ರಿಯೋಪಚಾರವ ಮಾಡುವ ಶರಣಂಗೆ ದೇಹವಾಸನೆಯಳಿದು ಸರ್ವಾಂಗಲಿಂಗವಪ್ಪುದು ತಪ್ಪದೆಂಬುದೀ ವಚನದ ತಾತ್ಪರ್ಯಾರ್ಥ. ೬

**ವ.** ಶ್ವಾನಜ್ಞಾನ ಗಜಜ್ಞಾನ ಕುಕ್ಕುಟಜ್ಞಾನವೆಂಬ ಜ್ಞಾನತ್ರಯಂಗಳೇನಾದವು ? ಅಂತು ತ್ರಿಕಾಲಜ್ಞಾನಂಗಳಿಂದೇನಹುದು ? ಕೂಡಲಸಂಗಮ್ಮದೇವಾ ನಿಮ್ಮನಱಿಯದ ಜ್ಞಾನವೆಲ್ಲಾ ಅಜ್ಞಾನ !

**ಟೀ.** ಲಿಂಗಾಂಗಸಂಬಂಧದ ಸ್ವರೂಪವನಱಿವುದೇ ಸಮ್ಯಗ್ ಜ್ಞಾನ. ಅಂತಪ್ಪ ಸಮ್ಯಗ್ ಜ್ಞಾನವಿಲ್ಲದೆ ತ್ರಿಕಾಲಜ್ಞಾನಂಗಳು ಮೊದಲಾದ ಜ್ಞಾನಂಗಳೆಲ್ಲವೂ ಅಜ್ಞಾನವೆಂಬುದೀ ವಚನದ ತಾತ್ಪರ್ಯಾರ್ಥ. ೭

**ವ.** ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು, ಹೊದ್ದಿಯೂ ಹೊದ್ದದಿರ್ದ ಭೇದವನು, ಲಿಂಗದೊಳಗೆ ಶರಣ ಸಂದಿರ್ದ ಭೇದವನು ಲೋಕದ ಸಂದೇಹಿಗಳೆತ್ತ ಬಲ್ಲರಯ್ಯಾ ರಾಮನಾಥಾ ?

**ಟೀ.** ಬಿಂದುವೆಂದರೆ ದೇಹ. ನಾದವೆಂದರೆ ಚೈತನ್ಯಾತ್ಮನು. ಅಂತಪ್ಪ ಚೈತನ್ಯಾತ್ಮನು ದೇಹೋಹಂಭಾವದಿಂದೀ ದೇಹಿಯಾಗಿ, ದೇಹಸಂಬಂಧ ಆತ್ಮಂಗೆ ಬಿಡದೆ ಇಹುದೆಂಬುದೀಗ ' ಬಿಂದುವಿನೊಳಗೆ ನಾದ ಹೊಂದಿರ್ದ ಭೇದವನು ' ಎಂಬ ಶಬ್ದಕ್ಕರ್ಥ. ಅಂತು ದೇಹಿಯಾಗಿರ್ದ ಜೀವಾತ್ಮನ ಅಂತರಂಗದಲ್ಲಿ ಪರಮಚಿಲ್ಲಿಂಗವಿದ್ದು, ಆ ದೇಹಾತ್ಮರ ಗುಣಧರ್ಮಂಗಳ ಹೊದ್ದದೆ, ಸರ್ವಸಾಕ್ಷಿಕನಾಗಿಯಿಪ್ಪನೆಂಬುದೀಗ ' ಹೊದ್ದಿಯೂ ಹೊದ್ದದಿರ್ಪ ಭೇದವನು ' ಎಂಬ ಶಬ್ದಕ್ಕರ್ಥ. ಅಂತು ಅಂತರಂಗದಲ್ಲಿಪ್ಪ ಪರಮ ಚಿತ್ ಕಲಾಲಿಂಗವ ಪ್ರತ್ಯಕ್ಷವ ಮಾಡಿಕೊಂಡು, ಜ್ಞಾನಕ್ರಿಯಿಂದ ಬೆರೆದು ಭೇದವಳಿದು, ಅಂಗ ಪ್ರಾಣಂಗಳೆಲ್ಲಾ ಲಿಂಗವಾಗಿರ್ದ ಲಿಂಗಶರಣನ ಇರವ ಲೋಕದ ಅಜ್ಞಾನಿ ಜಡಜೀವರುಗಳಱಿಯರೆಂಬುದೀಗ ' ಲಿಂಗದೊಳಗೆ ಶರಣ ಸಂದಿರ್ದ ಭೇದವನು ಲೋಕದ ಸಂದೇಹಿಗಳೆತ್ತ ಬಲ್ಲರಯ್ಯಾ ರಾಮನಾಥಾ ? ' ಎಂಬ ಶಬ್ದಕ್ಕರ್ಥ. ೮

ವ ಅಂಗದಿಂದ ಲಿಂಗ ಹಿಂಗಬಾರದೆಂಬರು. ಅಂಗ ಲಿಂಗ ಸಂಬಂಧ ವಾದಲ್ಲಿ ಫಲವೇನು, ಮನಲಿಂಗವಾಗದನ್ನಕ್ಕ ? ಕೂಡಲಚೆನ್ನಸಂಗಾ, ಮನದಿಂದಲೇನೂ ಘನವಿಲ್ಲ!

ಟೀ. ಅಂಗದಮೇಲೆ ಇಷ್ಟಲಿಂಗವ ಧರಿಸಿ, ಆ ಇಷ್ಟಲಿಂಗದ ಕಳಾಸ್ವರೂಪವ ಮನವಱಿದು ಕೂಡುವ ಜ್ಞಾನ ಮನಕ್ಕಿಲ್ಲದಿದ್ದಡೆ ಅಂಗಲಿಂಗಸಂಬಂಧವಾದಲ್ಲಿ ಫಲವೇನೂ ಇಲ್ಲ. ಅದುಕಾರಣ ಆ ಇಷ್ಟಲಿಂಗದ ಕಳಾಸ್ವರೂಪವ ಮನವಱಿದು, ಕ್ರೀಯಿಂದ ಕೂಡಿ ಮನಕ್ಕೆ ಲಿಂಗಸಂಬಂಧವಾದಡೆ ಆ ಮನವೇ ಲಿಂಗವಪ್ಪುದು. ಅಂತು ಮನವು ಲಿಂಗವಾದರೆ ಸರ್ವದೇಹಕರಣಂಗಳೆಲ್ಲಾ ಲಿಂಗವಹುವೆಂಬುದೀ ವಚನದ ತಾತ್ಪರ್ಯಾರ್ಥ. ೯

ವ. ಲೋಕದ ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ. ಎನಗುಳ್ಳುದೊಂದು ಮನ. ಆ ಮನವೇ ನಿಮ್ಮಲ್ಲಿ ಸಿಲುಕಿದ ಬಳಿಕ ಎನಗೆ ಭವವುಂಟೇ ಚೆನ್ನಮಲ್ಲಿಕಾರ್ಜುನಾ ?

ಟೀ. ಈ ವಚನ ಕಾಣಬಂದರ್ಥ. ೧೦

ವ. ಗೋವಿನ ಹೊಟ್ಟೆಯಲ್ಲಿ ಘೃತವಿದ್ದಡೇನೋ, ಆ ಗೋವು ದಿನದಿನಕ್ಕೆ ಪುಷ್ಟಿಯಾಗಬಲ್ಲುದೇ ? ಅದುಕಾರಣ ಆ ಗೋವ ಪೋಷಿಸಿ ಕಱಿದು ಕಾಸಿ ಘೃತವ ಮಾಡಿ, ಆ ಗೋವಿಂಗೆ ಕುಡಿಯಲೆಱೆದರೆ ಆ ಗೋವು ದಿನದಿನಕ್ಕೆ ಪುಷ್ಟಿಯಹುದು. ಅದು ಹೇಂಗೆ ಹಾಂಗೆ ತನ್ನಲ್ಲಿ ವಸ್ತು ವಿದ್ದಡೇನೋ ? ಆ ವಸ್ತುವ ಗುರುಮುಖದಿಂದ ಕರಸ್ಥಲಕ್ಕೆ ಪಡೆದು ಸತ್ಕ್ರೀಯಿಂದ ಪ್ರಾಣಕ್ಕೆ ವೇಧಿಸಿದಲ್ಲದೆ ಪ್ರಾಣಲಿಂಗವಾಗದು. ಕೂಡಲಚೆನ್ನಸಂಗಯ್ಯನಲ್ಲಿ ಇಷ್ಟಲಿಂಗವ ಸತ್ಕ್ರೀಯಿಂದ ಪ್ರಾಣಕ್ಕೆ ವೇಧಿಸಿ, ತಾನೆಂಬ ಅನಿಷ್ಟವ ತೊಲಗಿಸಿದಲ್ಲದೆ ಪ್ರಾಣಲಿಂಗಸಂಬಂಧ ವಾಗಬಾರದು.

ಟೀ. ಈ ವಚನ ಕಾಣಬಂದರ್ಥ. ೧೧

ವ. ಎಳ್ಳಿಂಗೆ ಪರಿಮಳವ ಕಟ್ಟಿದಲ್ಲದೆ ಎಣ್ಣೆಗೆ ಪರಿಮಳ ಘಟಿಸದು. ದೇಹಕ್ಕೆ ಇಷ್ಟಲಿಂಗವ ಸ್ಥಾಪಿಸಿದಲ್ಲದೆ ಪ್ರಾಣಲಿಂಗ ಸಂಬಂಧವಾಗ

ಬಾರದು. ಇದುಕಾರಣ ನಮ್ಮ ಗೊಹೇಶ್ವರಲಿಂಗದಲ್ಲಿ ಇಷ್ಟಲಿಂಗ ಸಂಬಂಧವಾದಲ್ಲದೆ ಪ್ರಾಣಲಿಂಗಸಂಬಂಧವಾಗಬಾರದು.

ಟೀ. ಈ ವಚನ ಕಾಣಬಂದರ್ಥ. ೧೨

ವ. ಆಳುದ್ದಿಹದೊಂದು ಬಾವಿ ಆಕಾಶದ ಮೇಲೆ ಹುಟ್ಟಿತ್ತು ನೋಡಾ ! ಆ ಬಾವಿಯ ನೀರನೊಂದು ಮೃಗ ಬಂದು ಕುಡಿಯಿತ್ತು. ಕುಡಿಯ ಬಂದ ಮೃಗವಾ ನೀರೊಳಗೆ ಮುಳುಗಿದರೆ ಉರಿಯ ಬಾಣದಲೆಚ್ಚು ತೆಗೆದೆ ನೋಡಾ ! ಒಂದೆ ಬಾಣದಲ್ಲಿ ಘಾಯವಿಲ್ಲದೆ ಸತ್ತ ಮೃಗವು ಮುಂದಣ ಹಜ್ಜೆಯನಿಕ್ಕಿತ್ತ ಕಂಡೆನು. ಅಂಗೈಯ ಒಳಗೊಂದು ಕಂಗಳು ಮೂಡಿ ಸಂಗದ ಸುಖವು ದಿಟವಾಯಿತ್ತು. ಲಿಂಗ ಪ್ರಾಣ ವೆಂಬುದಱ ನಿರ್ಣಯವನಿಂದು ಕಂಡೆನು ಗೊಹೇಶ್ವರಾ !

ಟೀ. ಅಂಗುಷ್ಠ ಮೊದಲಾಗಿ ಭಾಳಾಗ್ರಪರಿಯಂತರದಲ್ಲಿ ಸಂಸಾರ ವಿಷಯ ರಸ ಪರಿಪೂರ್ಣವಾಗಿರುತ್ತಿಹುದಾಗಿ ಆ ವಿಷಯರಸಕ್ಕೆ ತನುವೇ ಒಂದು ಕೂಪ ವಾಗಿ ತುಂಬಿಕೊಂಡಿರುತ್ತಿಪ್ಪ ಕಾರಣ 'ಆಳುದ್ದಿಹದೊಂದು ಬಾವಿ' ಯೆಂಬ ಶಬ್ದಕ್ಕರ್ಥ. ಆ ವಿಷಯಕೂಪವೆಂಬ ಪಂಚಭೌತಿಕ ಶರೀರ ಆತ್ಮನಲ್ಲಿಯೇ ಉದಯವಾಗಿ ತೋಱಿತ್ತೆಂಬುದೀಗ 'ಆಕಾಶದ ಮೇಲೆ ಹುಟ್ಟಿತ್ತು ನೋಡಾ' ಎಂಬ ಶಬ್ದಕ್ಕರ್ಥ. ಅಂತು ಆತ್ಮನು ತನ್ನ ಮಱವೆಯಿಂದ ತಾನೆ ದೇಹೋಹಂ ಎಂದು ದೇಹವಿಡಿದು, ಒಂದು ಜೀವನಾಗಿ, ಪಶುವೆನಿಸಿ, ಆ ದೇಹ ವಿಷಯ ರಸಂಗಳ ತೃಷ್ಣಾತುರದಿಂದ ಕುಡಿವುತ್ತಿರಲು ಅದೀಗ 'ಬಾವಿಯ ನೀರನೊಂದು ಮೃಗ ಬಂದು ಕುಡಿಯಿತ್ತೆ'ಂಬ ಶಬ್ದಕ್ಕರ್ಥ. ಆ ಜೀವನೆಂಬ ಮೃಗವು, ಆ ದೇಹಸಂಸಾರದ ದುಸ್ಸಾರವೆಂಬ ವಿಷಯರಸವನಾರೋಗಿಸಿ, ಅಲ್ಲಿಯೇ ಗತವಾಗು ತ್ತಿರಲು, ಅಂತು ಗತವಾಗಿರ್ದ ಜೀವನಲ್ಲಿ ಅಂತರ್ಗತವಾಗಿಪ್ಪ ಜ್ಞಾನಾಗ್ನಿ ಶಿವಕೃಪೆ ಯಿಂದ ಪ್ರಕಾಶಿಸಿ, ಆ ಜೀವಂಗೆ ಪ್ರಯೋಗಿಸಲು ತನ್ನ ನಿಜವನೆಚ್ಚತ್ತು ಕಂಡು, ಸಂಸಾರದಲ್ಲಿ ಅನಿಚ್ಛೆದೋಱಿ ಸಂಸಾರದ ಬಿಡುಗಡೆಯಾಯಿತ್ತು, ಅದು ಚೋದ್ಯ ವೆಂಬುದೀಗ 'ಕುಡಿಯ ಬಂದ ಮೃಗವಾ ನೀರೊಳಗೆ ಮುಳುಗಿದರೆ ಉರಿಯ ಬಾಣದಲೆಚ್ಚು ತೆಗೆದೆ ನೋಡಾ' ಎಂಬ ಶಬ್ದಕ್ಕರ್ಥ. ಆಗಮ ಶಾಸ್ತ್ರಜ್ಞಾನಂಗ ಳೆಲ್ಲವೂ ಸಂಕಲ್ಪ ಜ್ಞಾನ. ಅಂತಪ್ಪ ಸಂಕಲ್ಪಜ್ಞಾನವೇ 'ಘಾಯ' ವೆಂಬ ಶಬ್ದ ಕ್ಕರ್ಥ. ಅಂತಪ್ಪ ಸಂಕಲ್ಪಜ್ಞಾನವಿಲ್ಲದೆ ತನ್ನ ಸಮ್ಯಗ್ಜ್ಞಾನದಿಂದ ತಾನು ಶಿವಾಂಶಿಕನೆಂದಱಿದು ಜೀವಭಾವವಳಿದು ಶಿವಭಾವ ನೆಲೆಗೊಂಡಿತ್ತೆಂಬುದೀಗ

‘ ಒಂದೆ ಬಾಣದಲ್ಲಿ ಘಾಯವಿಲ್ಲದೆ ಸತ್ತ ಮೃಗವು ’ ಎಂಬ ಶಬ್ದಕ್ಕರ್ಥ. ಅಂತು ಅಂತರಂಗದಲ್ಲಿ ಶಿವಭಾವ ನೆಲೆಗೊಂಡ ಶರಣನು ತನ್ನ ನಿಜವಪ್ಪ ಶಿವಸ್ವರೂಪವ ಪ್ರತ್ಯಕ್ಷವ ಮಾಡಿಕೊಂಡು, ಕೂಡುವ ಬಾಹ್ಯಕ್ರೀಯಾಚಾರವ ಮುಂದುಗೊಂಡನೆಂಬುದೀಗ ‘ ಮುಂದಣ ಹಜ್ಜೆಯನಿಕ್ಕಿತ್ತ ಕಂಡೆ ’ ನೆಂಬ ಶಬ್ದಕ್ಕರ್ಥ. ಅಂತು ಅಜ್ಞಾನವಳಿದು ಶಿವಜ್ಞಾನಿಯಾದ ಶರಣನು ಶಿವಭಾವದಿಂದ ತನ್ನ ಶಿವಸ್ವರೂಪವ ಪ್ರತ್ಯಕ್ಷವ ಮಾಡಿಕೊಂಡು ಕೂಡುವ ಲಿಂಗಾಂಗಸಂಬಂಧದ ಬಾಹ್ಯಕ್ರೀಗೆ ಮುಂದುದೋಱಿದ ಶಿವಭಾವದಿಂದಲಾ ಕ್ಷಣವೇ ಆ ಆತ್ಮನ ಜ್ಞಾನಕಲಾದೃಕ್‌ಸ್ವರೂಪನಾಗಿಪ್ಪ ಚಿತ್‌ಕಲಾಲಿಂಗವು ಬಹಿರಂಗವನೊಳಕೊಂಡು ಕರಸ್ಥಲಕ್ಕೆ ಉದಯಿಸಿ ಬೆಳಗುತ್ತಿದ್ದಿತೆಂಬುದೀಗ ‘ ಅಂಗೈಯುವೊಳಗೊಂದು ಕಂಗಳು ಮೂಡಿ ’ ಯೆಂಬ ಶಬ್ದಕ್ಕರ್ಥ. ಅಂತು ತನ್ನ ಆತ್ಮಾಂತರ್ಗತ ಯೋಗವಾಗಿರ್ದ ಜ್ಞಾನಲಿಂಗವು ಇಷ್ಟಲಿಂಗವಾಗಿ ಅಂಗಸಂಬಂಧವಾಗಲಾಗಿ ಅಂಗ ಪ್ರಾಣಂಗಳೆಲ್ಲಾ ಲಿಂಗವಾದುದ ಪ್ರತ್ಯಕ್ಷವಾಗಿ ಕಂಡ ಶರಣನೆಂಬುದೀಗ ‘ ಸಂಗದ ಸುಖ ದಿಟವಾಯಿತ್ತು, ಲಿಂಗಪ್ರಾಣವೆಂಬುದಱ ನಿರ್ಣಯುವನಿಂದು ಕಂಡೆನು ’ ಎಂಬ ಶಬ್ದಕ್ಕರ್ಥ. ೧೩

ವ. ಇಪ್ಪತ್ತೈದು ತಲೆಯೊಳಗೆ ಮೊಲೆಯೇಳು, ಮುಖವೆಂಟು, ಹದಿನಾಲ್ಕು ಬಾಯಿ, ನೂಱಿಪ್ಪತ್ತು ಕೋಱೆದಾಡೆ ! ಹೃದಯದಲ್ಲಿ ಹುದುಗಿರ್ದ ಅಗ್ನಿಯ ತೆಗೆದು ಮುದ್ದಾಡಿಸಿ, ಧ್ವನಿಯ ಧರ್ಮವ ನುಂಗಿ, ಮನದ ಬಣ್ಣಗಳಡಗಿ, ಹೆತ್ತ ತಾಯಿ ಮಗನ ನುಂಗಿ, ಶಿಶು ತಾಯ ಬೆಸಲಾಗಿ, ಗೊಹೇಶ್ವರನೆಂಬ ನಿಲವ ಅಂಗೈಯ ಮೊಲೆ ನುಂಗಿತ್ತು !

ಟೀ. ದೇಹಕ್ಕೆ ಶಿರಸ್ಸು ಹೇಗೆ ಪ್ರಧಾನವಾಗಿಪ್ಪುದು ಹಾಗೆ ತದ್ದೇಹಕ್ಕೆ ಪಂಚವಿಂಶತಿ ತತ್ತ್ವವೇ ಪ್ರಧಾನವಾಗಿಹ ಕಾರಣ ‘ ಇಪ್ಪತ್ತೈದು ತಲೆ ’ ಯೆಂಬ ಶಬ್ದಕ್ಕರ್ಥ. ಸಪ್ತ ವ್ಯಸನಂಗಳು ವಿಷಯಂಗಳೆಂಬ ರಸವ ತುಂಬಿಕೊಂಡಿರ್ದ ಆ ದೇಹಕ್ಕೆ ಸಂಸಾರ ಸುಖವ ಕೊಟ್ಟು ಪೋಷಿಸಿಕೊಂಡಿಹ ಕಾರಣ ‘ ಮೊಲೆಯೇಳು ’ ಎಂಬ ಶಬ್ದಕ್ಕರ್ಥ. ಆ ವ್ಯಸನವಿಷಯಂಗಳ ಗ್ರಹಿಸುವುದಕ್ಕೆ ಅಷ್ಟಮದಂಗಳೇ ಮುಖವಾದ ಕಾರಣ ‘ ಮುಖವೆಂಟು ’ ಎಂಬ ಶಬ್ದಕ್ಕರ್ಥ. ಆ ಮುಖಂಗಳಿಗೆ ಚತುರ್ದಶ ಇಂದ್ರಿಯಂಗಳೇ ಬಾಯಾದ ಕಾರಣ ‘ ಹದಿನಾಲ್ಕು ಬಾಯಿ ’ ಯೆಂಬ ಶಬ್ದಕ್ಕರ್ಥ. ಆ ಚತುರ್ದಶ ಮುಖದ್ವಾರದೊಳಗೆ ಆ ವಿಷಯಂಗಳ ಮಥನಿಸಿ ಭೋಗಿಸುವ ಅಧರಂಗಳಾವಾವುವೆಂದೊಡೆ ನೂಱಿಪ್ಪತ್ತು ಕರಣ ಮಥನಂಗಳೇ ಕಾರಣವಾದ ಕಾರಣ ‘ ನೂಱಿಪ್ಪತ್ತು ಕೋಱೆದಾಡೆ ’ ಯೆಂಬ ಶಬ್ದಕ್ಕರ್ಥ. ಅಂತಪ್ಪ ಮಾಯಾಭ್ರಾಂತಿ ಜೀವನ ಹೃದಯದಲ್ಲಿ ಅಡ

ಗಿಪ್ಪ ಜ್ಞಾನಾಗ್ನಿಯು ಶಿವಕೃಪೆಯಿಂದ ಪ್ರಕಾಶಿಸಲು, ಆ ಪ್ರಕಾಶಿಸಿದ ಜ್ಞಾನಾನುಭಾವದ [1]ವಾರ್ತೆಯು[1] ವಾಗನುಭಾವದಿಂದ ನುಡಿದು ನುಡಿದು ಸವಿವೃತ್ತಿರ್ದ ಶರಣನೆಂಬುದೀಗ 'ಹೃದಯದಲ್ಲಿ ಹುದುಗಿರ್ದ ಅಗ್ನಿಯು ತೆಗೆದು ಮುದ್ದಾಡಿಸಿ' ಯೆಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನಾನುಭಾವದ ವಾರ್ತೆಯು ನುಡಿಗಳಿಂದ ಲೌಕಿಕ ವಾಗ್ವರ್ತನೆಯ ಕರ್ಮವನಳಿದ ಶರಣನೆಂಬುದೀಗ 'ಧ್ವನಿಯ್ರು ಧರ್ಮವ ನುಂಗಿ' ಯೆಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಾನುಭಾವದಿಂದ ಮನಸ್ಸಿನ ನಾನಾಗುಣಂಗಳೆಲ್ಲಾ ಅಳಿದವೆಂಬುದೀಗ 'ಮನದ ಬಣ್ಣಗಳಡಗಿ' ಯೆಂಬ ಶಬ್ದಕ್ಕರ್ಥ. ಅಂತು ಮನದ ಧರ್ಮಂಗಳಳಿದ ಶರಣನು ಅನಾದಿಯಲ್ಲಿ ಚಿಚ್ಛಕ್ತಿಯಿಂದ ಉದಯಿಸಿದನಾಗಿ ಆ ಚಿಚ್ಛಕ್ತಿಗೆ ಮಗ. ಮತ್ತೆ ಬಳಿಕ ಆ ಚಿಚ್ಛಕ್ತಿಯೇ ತನ್ಮಯವಾಗಿ ಆ ಶರಣನನವಗ್ರಹಿಸಿದ ಕಾರಣ 'ಹೆತ್ತ ತಾಯಿ ಮಗನ ನುಂಗಿ' ಯೆಂಬ ಶಬ್ದಕ್ಕರ್ಥ. ಅಂತು ಚಿತ್ತುವನವಗ್ರಹಿಸಿದ ಶರಣನೆಲ್ಲಾ ಚಿತ್‌ಸ್ವರೂಪನಾದಲ್ಲಿ, ಆ ಚಿತ್ತುವಿಗೆ ಮಾತೃಸ್ವರೂಪವಾದ ಚಿತ್ಕಲಾಲಿಂಗವು ಶರಣನ ಚಿದ್ಭಾವದಲ್ಲಿ ಉದಯಿಸಿ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬಂದಿತ್ತೆಂಬುದೀಗ 'ಶಿಶು ತಾಯ ಬೆಸಲಾಗಿ' ಯೆಂಬ ಶಬ್ದಕ್ಕರ್ಥ. ಅಂತು ಚಿದಮೃತಸ್ವರೂಪವಪ್ಪ ಚಿತ್ಕಲಾಲಿಂಗವು ಶರಣನ ಕರಸ್ಥಲದ ಶಿಲಾಮೂರ್ತಿಯೊಳಗೆ ಬಂದಡಗಿ ಅಂಗೈಯ ಸ್ತನವಾಗಿ ಇಷ್ಟಲಿಂಗವು ಪರಮಪ್ರಸಾದಾಮೃತವ ಶರಣಂಗೆ ಊಡಿಸುತ್ತಿದ್ದಿತ್ತು ಎಂಬುದೀಗ 'ಗೊಹೇಶ್ವರ ನಿಂದ ನಿಲವ ಅಂಗೈಯ ಮೊಲೆ ನುಂಗಿತ್ತು' ಎಂಬ ಶಬ್ದಕ್ಕರ್ಥ. ೧೪

ವ. ಚಂದ್ರಕಾಂತದ ಗಿರಿಗೆ ಉದಕದ ಸಂಚ. ಸೂರ್ಯಕಾಂತದ ಗಿರಿಗೆ ಅಗ್ನಿಯ ಸಂಚ. ಪರುಷದ ಗಿರಿಗೆ ರಸದ ಸಂಚ. ಬೆರಸುವ ಭೇದವಿನ್ನೆಂತೋ ? ಅಪ್ಪುವನೂ ಅಗ್ನಿಯನೂ ಪಾಕಕ್ಕೆ ತಂದು ಅಟ್ಟೆಂಬ ಭೇದವ ಗೊಹೇಶ್ವರ ಬಲ್ಲ!

ಟೀ. ಉದಕದ ಕಳೆ ಉಳ್ಳ ಶಿಲೆ ಚಂದ್ರಕಾಂತವಾಯಿತ್ತು. ಅಗ್ನಿಯ ಕಳೆ ಉಳ್ಳ ಶಿಲೆ ಸೂರ್ಯಕಾಂತವಾಯಿತ್ತು. ಸಿದ್ಧರಸದ ಕಳೆ ಉಳ್ಳ ಶಿಲೆ ಪರುಷವಾಯಿತ್ತು. ಹಾಂಗೆ ಶರಣಸಂಗಕ್ಕೆ ಲಿಂಗವೆ ಕಳೆಯಾಗಿದ್ದು, ಅಪ್ಪುವೆಂಬ ತನುವನು ಅಗ್ನಿಯೆಂಬ ಜ್ಞಾನಾಗ್ನಿಯಲ್ಲಿ ಸಮರಸ ಪಾಕವಮಾಡಿ, ಭಕ್ತಿಪಕ್ವಕೆ ತಂದು, ಶರಣನ

[1] ವರ್ತನೆಯು (ಎ)

ಲಿಂಗವವಗ್ರಹಿಸಿ, ಶರಣನ ಸರ್ವಾಂಗ ಲಿಂಗವಾಗಿ ಸರ್ವಸುಖಂಗಳ ಲಿಂಗವೇ ಭೋಗಿಸುತ್ತಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೧೫

ವ. ಚಂದ್ರಕಾಂತದ ಶಿಲೆಯಲ್ಲಿ ಜಲವಿಲ್ಲದನ್ನಕ್ಕ ಶೈತ್ಯೋದಕ ಒಸರುವ ಪರಿಯಿನ್ನೆಂತೋ ? ಸೂರ್ಯಕಾಂತದ ಶಿಲೆಯಲ್ಲಿ ಅಗ್ನಿಯಿಲ್ಲದನ್ನಕ್ಕ ಉಷ್ಣವ ತೋಱುವ ಪರಿಯಿನ್ನೆಂತೋ ? ಶರಣಂಗೆ ಭಕ್ತಿಕಾಯವಿಲ್ಲದನ್ನಕ್ಕ ಕೂಡಲಸಂಗಯ್ಯನನಱಿವ ಪರಿಯಿನ್ನೆಂತೋ ?

ಟೀ. ಒಂದೇ ಪರವಸ್ತು ಲಿಂಗಾಂಗವೆರಡಾಯಿತ್ತು. ಆ ಎರಡಾದಲ್ಲಿ ಆ ಪರವಸ್ತುವಿನ ಸಮೇತವಾಗಿಪ್ಪ ಚಿಚ್ಛಕ್ತಿಯು ಎರಡಾಯಿತ್ತು. ಅಂತಾದ ಲಿಂಗದಲ್ಲಿ ಸಮೇತವಾಗಿಪ್ಪ ಚಿತ್ತುವೆ ಶಕ್ತಿಯೆನಿಸಿತ್ತು. ಅಂಗವಾದ ಆತ್ಮನಲ್ಲಿ ಸಮೇತವಾಗಿಪ್ಪ ಚಿತ್ತುವೆ ಭಕ್ತಿಯೆನಿಸಿತ್ತು. ಅದುಕಾರಣ ಶಿವಾಂಶಿಕನಾದ ಶರಣನ ಆತ್ಮಾಂಗದಲ್ಲಿ ಸಮೇತವಾಗಿರ್ದ ಚಿತ್ತುವೇ ತನ್ನ ನಿಜಕಲಾಸ್ವರೂಪಮಪ್ಪ ಲಿಂಗವನಱಿದು ಭಕ್ತಿಮಾಡಿ ಲಿಂಗವಾಗಿರ್ಪುದು ಶರಣಂಗೆ ಸಹಜ. ಅದು ಹೇಂಗೆಂದೊಡೆ: ಚಂದ್ರಕಾಂತದ ಶಿಲೆಯಲ್ಲಿ ಸಮೇತವಾಗಿರ್ದ ಉದಕ ಹೇಂಗೆ ತೋಱಿ ಅಡಗುತ್ತಿಪ್ಪುದು ಹಾಂಗೆ, ಸೂರ್ಯಕಾಂತದ ಶಿಲೆಯಲ್ಲಿ ಸಮೇತವಾಗಿರ್ದ ಅಗ್ನಿ ಹೇಂಗೆ ತೋಱಿ ಅಡಗುತ್ತಿಪ್ಪುದು ಹಾಂಗೆಂಬುದೀ ವಚನದ ತಾತ್ಪರ್ಯಾರ್ಥ. ೧೬

ವ. ಜಲದ ಸಿಂಹಾಸನದ ಕೆಲದಲಷ್ಟಮ ಬೆಟ್ಟ, ಕುಲಗಿರಿಗಳೆರಡು ಮತ್ತಿಕ್ಕೆಲದಲಿ. ನೆಲೆಯನಱಿಯರು ಬ್ರಹ್ಮಕುಲವನಱಿಯರು, ಯೋಗ ಹೊಲಬುಗೆಟ್ಟರು ಯೋಗ ಸಿದ್ಧರೆಲ್ಲಾ ! ಈರಾಱನೊಂದೆಂದು ಹಿಡಿದಾತ ನಿಷ್ಕಲಯೋಗಿ ತಾ ಕಪಿಲಸಿದ್ಧ ಮಲ್ಲಿನಾಥಾ !

ಟೀ. ಜಲವೇ ಸ್ವರೂಪವಾಗಿ ದೇಹವೆಂಬ ಪೀಠವಾಯಿತ್ತು ಆತ್ಮಂಗೆ ಯೆಂಬುದೀಗ 'ಜಲದ ಸಿಂಹಾಸನ' ವೆಂಬ ಶಬ್ದಕ್ಕರ್ಥ. ಅಂತಪ್ಪ ದೇಹ ಧರ್ಮದಿಂ ತೋಱುವ ಅಷ್ಟಮದದ ಅಹಂಕಾರಂಗಳೆಂಟೆಂಬುದೀಗ 'ಕೆಲದಲಷ್ಟಮ ಬೆಟ್ಟ'ಂಗಳೆಂಬ ಶಬ್ದಕ್ಕರ್ಥ. ಅಂತಪ್ಪ ದೇಹದ ಜನನಕ್ಕೆ ಮೂಲಕಾರಣವಾಗಿ, ದೇಹದ ಸ್ವಜಾತಿಗಳಾಗಿ, ದೇಹವ ಬಿಡದೆ ಕಚ್ಚಿಕೊಂಡಿಹವೀಗ ಅಹಂ ಮಮತೆಗಳೆರಡೆಂಬುದೀಗ 'ಕುಲಗಿರಿಗಳೆರಡು ಮತ್ತಿಕ್ಕೆಲದಲ್ಲಿ' ಯೆಂಬ ಶಬ್ದಕ್ಕರ್ಥ. ಅಂತು ದೇಹೋಹಂ ಮಮತೆಯಿಂದ ಜೀವರಾಗಿ ಅಷ್ಟಮದದಿಂದ ಸೊಕ್ಕಿ ಮುಂದುಗಾಣದೆಯಿಪ್ಪ ದೇಹಿಗಳು ತಾವು ಪರಬ್ರಹ್ಮವೆಂಬುದಱ ನೆಲೆಗಾಣದೆ ಅಜ್ಞಾನಿಗಳಾಗಿರ್ದರೆಂಬುದೀಗ 'ನೆಲೆಯನಱಿಯರು ಬ್ರಹ್ಮ' ವೆಂಬ

ಶಬ್ದಕ್ಕರ್ಥ. ಅಂತಪ್ಪ ಪರಬ್ರಹ್ಮವು ತಾನೆ ಲಿಂಗವಾಗುತ್ತ ತಾನೆ ಆತ್ಮನೆಂಬ ಅಂಗವಾಯಿತ್ತೆಂದು ತನ್ನ ನಿಜ ಜಾತಿಯನಱಿದು ಲಿಂಗಾಂಗಸಂಯೋಗವ ಮಾಡುವ ಜ್ಞಾನಕ್ರೀಯನಱಿಯದೆ ಅಜ್ಞಾನಿಜೀವರಾಗಿರ್ದರೆಂಬುದೀಗ ‘ ಕುಲವನಱಿಯರು ಯೋಗ’ ವೆಂಬ ಶಬ್ದಕ್ಕರ್ಥ. ಅಂತು ಲಿಂಗಾಂಗ ಸಂಯೋಗವ ಮಾಡುವ ಜ್ಞಾನ ಕ್ರೀಯ ಹೊಲಬನಱಿಯದೆ ಅಷ್ಟಾಂಗಯೋಗಭ್ರಮಿತರಾಗಿ ಕೆಟ್ಟರು ಯೋಗಿಜನಂಗಳೆಂಬುದೀಗ ‘ ಹೊಲಬನಱಿಯರು ಯೋಗಸಿದ್ಧರೆಲ್ಲಂ ’ ಎಂಬ ಶಬ್ದಕ್ಕರ್ಥ. ಲಿಂಗವಾಱು ಅಂಗವಾಱೆಂಬುದೀಗ ‘ ಈರಾಱು ’ ಎಂಬ ಶಬ್ದಕ್ಕರ್ಥ. ಅಂತು ಹನ್ನೆರಡಾದುದು ಒಂದೆ ಪರಬ್ರಹ್ಮ. ಆ ಒಂದೆ ಪರಬ್ರಹ್ಮವೆ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬಂದಿತ್ತೆಂದಱಿದು, ಆ ಇಷ್ಟಲಿಂಗದ ಕ್ರೀವಿಡಿದು ಶರಣಂಗೆ ಷಡ್ವಿಧ ಲಿಂಗಸಂಬಂಧವಾಗಿ ಲಿಂಗಾಂಗವೆಂಬ ಭೇದವಳಿದು ಸರ್ವಾಂಗವೆಲ್ಲಾ ಲಿಂಗವೆಯಾಗಿಪ್ಪನು ಶರಣ. ಅಂತು ಶರಣನು ಸರ್ವಾಂಗಲಿಂಗವಾದನಾಗಿ ಶರಣ ಸಾಕಾರನಲ್ಲವೆಂಬುದೀಗ ‘ ಈರಾಱನೊಂದೆಂದು ಹಿಡಿದಾತ ನಿಷ್ಕಲಯೋಗಿ ತಾನೆ ’ ಎಂಬ ಶಬ್ದಕ್ಕರ್ಥ. ೧೭

ವ. ಅಂಗ ಲಿಂಗ, ಲಿಂಗವಂಗವೆಂದಱಿದ ಬಳಿಕ, ಅಲ್ಲಿಯೆ ಕಾಣಿರೋ !
ಕೂಡಲಚೆನ್ನಸಂಗಯ್ಯ ಲಿಂಗ ನಿರಂತರವಲ್ಲಿಯೆ ಕಾಣಿರೋ !

ಟೀ. ಲಿಂಗಾಂಗವೆರಡಾದುದು ಒಂದೆ ಲಿಂಗವೆಂದಱಿದು, ಲಿಂಗಾಂಗ ಸಂಬಂಧದ ಅಭಿನ್ನಜ್ಞಾನಕ್ರೀ ತನ್ನಲ್ಲಿ ಅಳವಟ್ಟರೆ, ಆ ಲಿಂಗವು ಬೇಱಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೧೮

ವ. ಅಱಿದಱಿದು ಅಱಿವು ಬಱುದೊಱೆವೋಯಿತ್ತು. ಕುಱುಹ ತೋಱಿದಡೆಂತೂ ನಂಬರು. ತೆಱಹಿಲ್ಲದ ಘನವ ನೆನೆದು ಗುರು ಶರಣೆಂಬುದಲ್ಲದೆ, ಮಱಹು ಬಂದುದುಯೆಂದು ಗುರು ಕುಱುಹ ತೋಱಿದನಲ್ಲದೆ, ಅಱಿಯಬಲ್ಲರೆ ಗೊಹೇಶ್ವರಲಿಂಗವು ಹೃದಯದಲ್ಲೈದಾನೆ.

ಟೀ. ಶ್ರೀಗುರು ಕರುಣಿಸಿ ಪರಬ್ರಹ್ಮವ ಸಾಕಾರವ ಮಾಡಿ ಕರಸ್ಥಲಕ್ಕೆ ತಂದುಕೊಟ್ಟ ಇಷ್ಟಲಿಂಗದಲ್ಲಿ ವಿಶ್ವಾಸಕ್ರೀಯಿಲ್ಲದೆ ಬಱಿಯಱಿವಿಂದ ಬ್ರಹ್ಮವನಱಿದು ಬ್ರಹ್ಮವಾದೆನೆಂದು ಬಱಿದೆ ಭ್ರಾಂತರಾಗಿ ಹೋದರು ಭವದತ್ತಲೆಂಬುದೀಗ ‘ ಅಱಿದಱಿದು ಅಱಿವು ಬಱುದೊಱೆ ಹೋಯಿತ್ತು ಕುಱುಹ ತೋಱಿದಡೆಂತೂ

ನಂಬರು ' ಎಂಬ ಶಬ್ದಾರ್ಥ. ಅಂತು ಅಖಂಡ ಪರಿಪೂರ್ಣಲಿಂಗವನಱಿವಿಂದ ಲಱಿದು ಆ ಪರಿಪೂರ್ಣಲಿಂಗವೇ ಗುರುರೂಪಾಯಿತ್ತೆಂದಱಿದು ಭಾವಿಸಿ, ಗುರುವಿಂಗೆ ಶರಣುವೊಗಬೇಕೆಂಬುದೀಗ ' ತೆಱಹಿಲ್ಲದ ಘನವ ನೆನೆದು, ಗುರು ಶರಣೆಂಬುದಲ್ಲದೆ ' ಯೆಂಬ ಶಬ್ದಾರ್ಥ. ಅಂತು ಶರಣುವೊಕ್ಕ ಭಕ್ತಿಗೆ ಕರುಣಿಸಿ ಗುರು ಅಂತರಂಗವಾಗಿರ್ದ ನಿರಾಕಾರಬ್ರಹ್ಮವ ಸಾಕಾರವ ಮಾಡಿ ಕರಸ್ಥಲಕ್ಕೆ ಕೊಟ್ಟು, ಒಳಹೊಱಗೆಲ್ಲಾ ಲಿಂಗವನೆ ತೋಱಿ, ತೆಱಹು ಮಱಹಿಲ್ಲದಂತೆ ಮಾಡಿದ ಶ್ರೀಗುರುವೆಂಬುದೀಗ ' ಮಱಹು ಬಂದುದುಯೆಂದು ಗುರು ಕುಱುಹ ತೋಱಿದನಲ್ಲದೆ ' ಯೆಂಬ ಶಬ್ದಾರ್ಥ. ಅಂತು ತೋಱಿದ ಇಷ್ಟಲಿಂಗದ ಕಳಾಸ್ವರೂಪವ ತನ್ನ ನಿಜವೆಂದಱಿದು ಅಭಿನ್ನಜ್ಞಾನ ಕ್ರೀಯಿಂದಲಾಚರಿಸಬಲ್ಲ ಶರಣನ ಅಂತರಂಗವೆಲ್ಲಾ ಲಿಂಗವೆಯಾಗಿ ಭೇದವಿಲ್ಲದೆಯಿಪ್ಪುದೆಂಬುದೀಗ ' ಅಱಿಯಬಲ್ಲಱೆ ಗೊಹೇಶ್ವರನೆಂಬ ಲಿಂಗವು ಹೃದಯದಲ್ಲೈದಾನೆ ' ಯೆಂಬ ಶಬ್ದಾರ್ಥ. ೧೯

ವ. ಅಱಿವಿನ ತೃಪ್ತಿಗೆ ಅನುಭಾವವೇ ಆಶ್ರಯ. ಲಿಂಗಾನುಭಾವದಿಂದ ನಿಮ್ಮ ಕಂಡೆನ್ನ ಮಱೆದೆ ಕೂಡಲಸಂಗಮದೇವಾ.

ಟೀ. ಜ್ಞಾನೋದಯವಾದ ಶರಣನ ಅಱಿವಿನ ಆಪ್ಯಾಯನವೆಲ್ಲಾ ಶಿವಾಪೇಕ್ಷೆಯಾಗಿಪ್ಪುದು. ಆ ಶಿವಾಪೇಕ್ಷೆಯಾಗಿಪ್ಪ ಅಱಿವಿಗೆ ಅನನ್ಯವಾಗಿಪ್ಪ ಲಿಂಗದ ಅನುವನಱಿದು, ಕ್ರೀಯಿಂದ ಲಿಂಗಾಂಗಸಂಯೋಗಾನುಭಾವಿಯಾಗಿ ಭಿನ್ನವಳಿದಲ್ಲಿ, ಅಱಿವಿನ ಆಪ್ಯಾಯನವಡಗಿ, ತಾನೆಲ್ಲಾ ಲಿಂಗಸ್ವರೂಪಿಯಾಗಿ ತನ್ನ ಕಾಣುತ್ತಿರ್ದನಾಗಿ ಲಿಂಗಕ್ಕೆ ಭಿನ್ನ ನಾನೆಂಬುದ ಮಱೆದು ಲಿಂಗವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೨೦

ವ. ಶರಣ ಲಿಂಗದಲ್ಲಿ ಕೂಡಲು ಮಹಾಪಥವಯ್ಯಾ! ದೃಢ ದೃಢಾಂಗ ಮಧ್ಯಸ್ಥನಾಗಿ ಕೂಡಲಸಂಗಮದೇವರ ನಾಮವತಿಸುಖವೆಂದುದು !

ಟೀ. ಶರಣ ಲಿಂಗದಲ್ಲಿ ಸಮರಸೈಕ್ಯವನೆಯ್ದುವ ಜ್ಞಾನಕ್ರಿಯಾಮಾರ್ಗವ ಹೇಳುವಡೆ ಅತಿ ಘನತೆಯನುಳ್ಳುದು. ಅದನಾರೂ ಅಱಿಯರೆಂಬುದೀಗ ' ಶರಣ ಲಿಂಗದಲ್ಲಿ ಕೂಡಲು ಮಹಾಪಥವಯ್ಯಾ ' ಯೆಂಬ ಶಬ್ದಾರ್ಥ. ಅಂತು ಶರಣ ಲಿಂಗವ ಕೂಡುವ ಭಕ್ತಿಮಾರ್ಗವೆಂತೆಂದಡೆ : ಸ್ಥಿರವಾದ ಲಿಂಗಕ್ಕೆ ಅಸ್ಥಿರವಾದ ದೇಹೇಂದ್ರಿಯ ಸುಖಂಗಳನೆಲ್ಲವನರ್ಪಿಸುತ್ತ ಶರಣನು ಲಿಂಗದೇಹಮಧ್ಯದಲ್ಲಿ ಭಕ್ತಿಸ್ವರೂಪನಾಗಿರ್ದನೆಂಬುದೀಗ ' ದೃಢ ದೃಢಾಂಗ ಮಧ್ಯಸ್ಥನಾಗಿ ' ಯೆಂಬ ಶಬ್ದಾರ್ಥ. ಅಂತು ಶರಣ ಲಿಂಗಕ್ಕೆ ದೇಹವನರ್ಪಿಸಿ, ಭಕ್ತಿಜ್ಞಾನದಿಂದ ಲಿಂಗ

ವಾಗಿ ಶಿವೋಹಂ ಶಿವೋಹಂ ಎಂಬ ಶಿವನ ಅದ್ವಯ ಸಾಮರಸ್ಯರಸವಿಡಿದು, ಶಿವ ಸುಖವ ಪಡೆದ ಶರಣನೆಂಬುದೀಗ ‘ ಮಧ್ಯಸ್ಥನಾಗಿ ಕೂಡಲಸಂಗಮದೇವನ ನಾಮ ವತಿಸುಖವೆಂದುದು ’ ಎಂಬ ಶಬ್ದಕ್ಕರ್ಥ. ೨೧

**ವ.** ಹದಿನಾಲ್ಕು ಭುವನದಲ್ಲಿ ಮನವೇದ್ಯವನಾರು ಬಲ್ಲರಯ್ಯಾ ? ದೂರ ದೂರವಾಗಿ ಮನ್ನಿಸುವರು. ದೂರ ದೂರವಾಗಿ ಸಂಭಾಷಣೆಯ ಮಾಡುವರು. ದೂರ ದೂರವೆನಲಿಲ್ಲ ಕೂಡಲಚೆನ್ನಸಂಗಯ್ಯನ !

**ಟೀ.** ಹದಿನಾಲ್ಕು ಲೋಕಂಗಳೊಳಗಿರ್ಪ ನರರು ಸುರರು ದೇವತಾದಿಗಳು ಮೊದಲಾದವರೆಲ್ಲರು ಲಿಂಗವ ಭಿನ್ನವಿಟ್ಟಱಿದು, ಲಿಂಗವ ಭಿನ್ನವಿಟ್ಟು ಪೂಜಿಸಿ, ಭಿನ್ನ ಫಲ ಪದಂಗಳ ಪಡೆದು, ಭಿನ್ನರಾಗಿ ಹೋದರು. ಲಿಂಗವು ಮನಕ್ಕನನ್ಯ ಪರಿಪೂರ್ಣವಾಗಿರ್ದುದನಱಿದು ಕೂಡಿ ಲಿಂಗವಾಗಿಪ್ಪ ಭಕ್ತಿಮಾರ್ಗವನಱಿಯ ಲಱಿಯದೆ ಹೋದರೆಂಬುದೀ ವಚನದ ತಾತ್ಪರ್ಯಾರ್ಥ. ೨೨

**ವ.** ಪ್ರಾಣದಿಂದ ಲಿಂಗ ಹಿಂಗಲಾಗದಯ್ಯಾ. ಧನದಿಂದ ಜಂಗಮ ಹಿಂಗಲಾಗದಯ್ಯಾ. ಕಾಯದಿಂದ ಪ್ರಸಾದ ಹಿಂಗಲಾಗದಯ್ಯಾ. ಇಂತೀ ತ್ರಿವಿಧವ ತ್ರಿವಿಧದಲ್ಲಿ ನೆಲೆಗೊಳಿಸಲಱಿಯದಿರ್ದಡೆ ಭಕ್ತನಲ್ಲ, ಭವಿ, ಕೂಡಲಚೆನ್ನಸಂಗಮದೇವ.

**ಟೀ.** ತನ್ನ ಪ್ರಾಣಕಳಾಸ್ವರೂಪಿ ಲಿಂಗವೆಂದು ಶ್ರೀಗುರು ಕರಸ್ಥಲಕ್ಕೆ ಕೊಟ್ಟ ಬಳಿಕ ಆ ಇಷ್ಟಲಿಂಗದ ಕಳಾಸ್ವರೂಪವ ಪ್ರಾಣಕ್ಕೆ ಭಿನ್ನವಿಡದೆ ಮನ ಗ್ರಹಿಸಿಕೊಂಡು ಹಿಂಗದಿರಬೇಕು ಶರಣಂಗೆಂಬುದೀಗ ‘ ಪ್ರಾಣದಿಂದ ಲಿಂಗ ಹಿಂಗ ಲಾಗದಯ್ಯಾ ’ ಎಂಬ ಶಬ್ದಕ್ಕರ್ಥ. ಸಕಲ ಪದಾರ್ಥಂಗಳೆಲ್ಲಾ ಜಂಗಮದ ಸೊಮ್ಮೆಂದು ಜಂಗಮಕ್ಕರ್ಪಿಸುವ ಭಾವ ತಪ್ಪದೆ ಇರಬೇಕು ಶರಣಂಗೆಂಬುದೀಗ ‘ ಧನದಿಂದ ಜಂಗಮ ಹಿಂಗಲಾಗದಯ್ಯಾ ’ ಎಂಬ ಶಬ್ದಕ್ಕರ್ಥ. ಅಂಗ ಭೋಗಂಗಳಲ್ಲಿ ಅರ್ಪಿತ ಸಾವಧಾನಂಗಳ ಮಱೆಯದೆ ಪ್ರಸಾದಭಾವ ತಪ್ಪದೆ ಇರಬೇಕು ಶರಣಂಗೆಂಬುದೀಗ ‘ ಕಾಯದಿಂದ ಪ್ರಸಾದ ಹಿಂಗಲಾಗದಯ್ಯಾ ’ ಎಂಬ ಶಬ್ದಕ್ಕರ್ಥ. ಅಂತು ಅಂಗ ಪ್ರಾಣ ಪದಾರ್ಥಂಗಳಲ್ಲಿ ಲಿಂಗ, ಜಂಗಮ, ಪ್ರಸಾದ ಸಾಹಿತ್ಯವಾಗಿರ್ದಾತನೇ ಭಕ್ತ, ಇಲ್ಲದಾತನೇ ಭವಿ ಎಂಬುದೀಗ ‘ ಇಂತೀ ತ್ರಿವಿಧವ ತ್ರಿವಿಧದಲ್ಲಿ ನೆಲೆಗೊಳಿಸಲಱಿಯದಿರ್ದಡೆ ಭಕ್ತನಲ್ಲ, ಭವಿ ’ ಯೆಂಬ ಶಬ್ದಕ್ಕರ್ಥ. ೨೩

ವ. ಪ್ರಾಣಲಿಂಗಸಂಬಂಧಿಯಾದ ಬಳಿಕ ತನುಗುಣವಿರಲಾಗದಯ್ಯಾ. ಕೈ ಸಿಂಹಾಸನವಾದ ಬಳಿಕ ಸಂದಾಗಿರಲಾಗದಯ್ಯಾ. ಕೂಡಲಚೆನ್ನ ಸಂಗಯ್ಯಾ ಈ ಅನುವನಲ್ಲಮ ಬಲ್ಲ.

ಟೀ. ಶ್ರೀಗುರು ಶಿಷ್ಯನ ಅಂಗದೊಳಗಿರ್ದ ಚಿತ್ಕಲಾಲಿಂಗವ ತಂದು, ಅಂಗ ಪ್ರಾಣಂಗಳಿಗೆ ಸಾಹಿತ್ಯವ ಮಾಡಿದಾಕ್ಷಣವೇ ಅಂಗ ಪ್ರಾಣಂಗಳೆಲ್ಲಾ ಲಿಂಗ ವಾದುವು. ಅಂತು ಲಿಂಗವಾದ ಲಿಂಗತನುವ ಮರಳಿ ಭೌತಿಕ ತನುವೆಂದು ಕಾಬ ಅಜ್ಞಾನಗುಣವಿರಲಾಗದು ಎಂಬುದೀಗ 'ಪ್ರಾಣಲಿಂಗ ಸಂಬಂಧಿಯಾದ ಬಳಿಕ ತನುಗುಣವಿರಲಾಗದಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಕರಸ್ಥಲದಲ್ಲಿ ಸಾಹಿತ್ಯ ವಾಗಿರ್ದ ಇಷ್ಟಲಿಂಗವ ಭಿನ್ನವಿಟ್ಟು ಭಾವಿಸಿ ಪೂಜಿಸಲಾಗದು. ಆ ಇಷ್ಟಲಿಂಗವೇ ತನ್ನ ನಿಜವೆಂದಱಿದು ಅಭಿನ್ನಭಾವ ಘಟಿಸಿರಬೇಕೆಂಬುದೀಗ 'ಕೈ ಸಿಂಹಾಸನ ವಾದ ಬಳಿಕ ಸಂದಾಗಿರಲಾಗದಯ್ಯಾ' ಎಂಬ ಶಬ್ದಕ್ಕರ್ಥ. ಅಂತಿಪ್ಪ ಲಿಂಗಾಂಗ ಸಂಬಂಧದ ಅಭಿನ್ನಜ್ಞಾನ ಕ್ರಿಯಾಭೇದದ ಅನುವ ಶರಣನೇ ಬಲ್ಲನೆಂಬುದೀಗ 'ಈ ಅನುವನಲ್ಲಮ ಬಲ್ಲ' ನೆಂಬ ಶಬ್ದಕ್ಕರ್ಥ. ೨೪

ವ. ಆಹ್ವಾನಿಸುವಲ್ಲಿ ಪ್ರಾಣಲಿಂಗವಿಲ್ಲ. ವಿಸರ್ಜಿಸುವಲ್ಲಿ ಲಿಂಗವಂತನಲ್ಲ. ಇದು ಕಾರಣ ಆಹ್ವಾನಿಸುವನಲ್ಲ, ವಿಸರ್ಜಿಸುವನಲ್ಲ. ಶರಣನ ಪರಿ ಬೇಱೆ. ಲಿಂಗಭೋಗೋಪಭೋಗವಲ್ಲದೆ ಅನರ್ಪಿತವ ೧ಭೋಗಿ ಸುವನಲ್ಲ೧. ಆಗಳೂ ಪ್ರಾಣಲಿಂಗ ಸಂಬಂಧದೊಳಿಪ್ಪನು. ಇದು ಕಾರಣ ಕೂಡಲಚೆನ್ನಸಂಗಯ್ಯ ನಿಮ್ಮ ಶರಣಂಗೆ ನಮೋ ನಮೋ ಎಂಬೆನು.

ಟೀ. ಆಹ್ವಾನ ವಿಸರ್ಜನ ಮಾಡುವವರ ಲಿಂಗ ಪ್ರಾಣಂಗಳಿಗೆ ಲಿಂಗ ಸಾಹಿತ್ಯವಿಲ್ಲವಾಗಿ ಅವರು ಭವಿಗಳು. ಅಂತಲ್ಲ ಶರಣನು. ತನ್ಮಾತ್ರನೇ ಅಂಗವಾಗಿ, ಅಂಗದ ಚೈತನ್ಯಪ್ರಾಣಕಳೆಯೇ ಲಿಂಗವೆಂಬ ಮರ್ಮವನಱಿದು, ಭಿನ್ನಭಾವವಳಿದು, ಅಂಗದಲ್ಲಿ ಲಿಂಗವ ಹಿಂಗದೆ ಧರಿಸಿ, ಶರಣ ಅಂಗೇಂದ್ರಿಯಂಗಳೆಲ್ಲವ ಲಿಂಗಕ್ಕರ್ಪಿ ಸಲು, ಸರ್ವಾಂಗ ಪ್ರಾಣಲಿಂಗವಾಗಿ ಶರಣ ಲಿಂಗಭೋಗೋಪಭೋಗಿಯಾಗಿ ಪ್ಪನು. ಅದುಕಾರಣ ಶರಣ ತನ್ನ ಪ್ರಾಣಲಿಂಗದ ಸಂಧಾನಭಾವದೆಚ್ಚಱುಗುಂದ ದಿಪ್ಪನು. ಅಂತಿಪ್ಪ ಶರಣಂಗೆ ಶರಣುವೊಕ್ಕು ಭಕ್ತಿಯ ಮಾಡಿದವರೆಲ್ಲಾ ಮುಕ್ತ ರೆಂಬುದೀ ವಚನದ ತಾತ್ಪರ್ಯಾರ್ಥ. ೨೫

೧ ಭೋಗಿಸಲೊಲ್ಲ (ಎ.)

ವ. ಮನ ಶುದ್ಧವಾಗಿ ಮಜ್ಜನಕ್ಕೆಱೆದಡೆ ಭಾವ ಮತ್ತೇಕಯ್ಯಾ ? ಪತ್ರೆ ಪುಷ್ಪ ರಂಗವಾಲೆಯಸಿಕ್ಕಲೇನು ಭಿತ್ತಿಯ ಚಿತ್ತಾರವೇ ? ಅವರು ಕಾಣಬೇಕು, ಇವರು ಕಾಣಬೇಕು ಎಂಬ ಭಾವಭ್ರಮಿತರು, ಅಂಗ ಹೀನರು ಮನದಂಗವನಱಿಯರು, ಲಿಂಗ ಮತ್ತೆಲ್ಲಿಯದೋ ? ಸದ ಮದವಳಿದು ನಿಜವನಱಿದಡೆ ಅದೇ ಲಿಂಗಪೂಜೆ ನೋಡಾ ! ಕೂಡಲ ಚೆನ್ನಸಂಗಯ್ಯ ಸರ್ವಸಾಹಿತ್ಯನು.

ಟೀ. ತನ್ನಂಗದ ಒಳಹೊಱಗೆ ಪರಿಪೂರ್ಣವಾಗಿಪ್ಪ ಲಿಂಗದ ನಿಜವನಱಿದು ದೇಹೋಹಂಭಾವವಳಿದು ಲಿಂಗದೊಳಗೆ ಮನವು ಅತಿರತಿಯಿಂದ ಬೆರೆದು, ಆನಂದ ಜಲ ಉಕ್ಕಿದೊಡೆ ಆ ಆನಂದಜಲವೇ ಲಿಂಗಕ್ಕೆ ಮಜ್ಜನ. ಆ ಅರ್ಪಿತವಾದ ಮನವೇ ಪುಷ್ಪವಾಗಿ ಲಿಂಗಕ್ಕೆ ಪೂಜೆ. ಅಂತಪ್ಪ ಪೂಜೆಯ ಮಾಡಿದ ಶರಣನ ಸರ್ವಾಂಗವೆಲ್ಲಾ ಲಿಂಗವೆಯಾಗಿಪ್ಪುದು. ಅಂತು ಅಂಗ ಮನ ಇಂದ್ರಿಯಂಗಳ ಲಿಂಗಕ್ಕೆ ಪೂಜೆಯ ಮಾಡಲಱಿಯದೆ, ಲಿಂಗವ ಭಿನ್ನವಿಟ್ಟು ಭಾವಿಸಿ ಕರೆದು, ಪೂಜಿಸುವ ಪೂಜಾಕ್ರಿಯೆಗಳೆಲ್ಲವೂ ಪ್ರಾಣವಿಲ್ಲದ ಭಿತ್ತಿಯ ಚಿತ್ತಾರದಂತೆ. ಅಂತಪ್ಪ ಪೂಜಕರಿಗೆ ಲಿಂಗವಿಲ್ಲೆಂಬುದೀ ವಚನದ ತಾತ್ಪರ್ಯಾರ್ಥ. ೧೬

ವ. ನಿಷ್ಠೆಯುಳ್ಳಾತಂಗೆ ನಿತ್ಯ ನೇಮದ ಹಂಗೇಕೆ ? ಸತ್ಯವುಳ್ಳಾತಂಗೆ ತತ್ತ್ವವಿಚಾರದ ಹಂಗೇಕೆ ? ಅಱಿವುಳ್ಳಾತಂಗೆ ಅಗ್ಘವಣಿಯ ಹಂಗೇಕೆ ? ಮನಶುದ್ಧವುಳ್ಳಾತಂಗೆ ಮಂತ್ರದ ಹಂಗೇಕೆ ? ಭಾವ ಶುದ್ಧವುಳ್ಳಾತಂಗೆ ಹೂವಿನ ಹಂಗೇಕೆ ? ಕೂಡಲಚೆನ್ನಸಂಗಯ್ಯ ನಿಮ್ಮನಱಿದಾತಂಗೆ ನಿಮ್ಮ ಹಂಗೇಕೆ ?

ಟೀ. ನಿತ್ಯನೇಮ ತತ್ತ್ವವಿಚಾರ ಅಷ್ಟವಿಧಾರ್ಚನೆ ಮೊದಲಾದ ಲಿಂಗದ ಪೂಜೋಪಚಾರಂಗಳಂ ಮಾಡಿ, ಲಿಂಗದಲ್ಲಿ ಫಲಪದಂಗಳ ಪಡೆವುದೀಗ ಲಿಂಗದ ಪೂಜೆಯ ಹಂಗು. ಅಂತು ಲಿಂಗವ ಭಿನ್ನವಿಟ್ಟು ಪೂಜಿಸದೆ ಲಿಂಗವು ತನಗನನ್ಯ ಪರಿಪೂರ್ಣವೆಂದಱಿದು, ಮನ ಭಾವ ಜ್ಞಾನಂಗಳೆಲ್ಲಾ ಲಿಂಗದಲ್ಲಿ ಅಭಿನ್ನತೆಯ ನೆಯ್ದಿ, ಏಕಲಿಂಗನೈಷ್ಠಿಕಾಭಾವ ಸತ್ಯವಾಗಿ ನೆಲೆಗೊಂಡು, ತಾನೆಲ್ಲಾ ಲಿಂಗವೆಯಾ ಗಿಪ್ಪ ಲಿಂಗದ ನಿಜವನಱಿದು, ಲಿಂಗವೇ ತಾನೆಂಬ ಶರಣಂಗೆ ಲಿಂಗವು ಕೊಡುವ ಕೋಡಿನ ವಿಶೇಷತೆ ಏನೂ ಇಲ್ಲದೆ ಹೋಯಿತ್ತೆಂಬುದೀ ವಚನದ ತಾತ್ಪ ರ್ಯಾರ್ಥ. ೨೭

ವ. ಅಂಗದಲ್ಲಿ ಮಾಡುವ ಸುಖ ಲಿಂಗಕ್ಕದು ಭೂಷಣವಾಯಿತ್ತು. ಕಾಡ ಕಿಚ್ಚಿನ ಕೈಯಲು ಕರಡವ ಕೊಯ್ಯಿಸುವಂತೆ ಹಿಂದೆ ಮೆದೆಯಿಲ್ಲ ಮುಂದೆ ಹುಲ್ಲಿಲ್ಲ. ಅಂಗ ಲಿಂಗವೆಂಬನ್ನಬರ ಫಲದಾಯಕ ಲಿಂಗೈಕ್ಯ ವದು ಬೇಱೆ ಗೊಹೇಶ್ವರಾ.

ಟೀ. ಅಂಗವನು ಲಿಂಗವನು ಭಿನ್ನವಿಟ್ಟು ಪೂಜಿಸುವ ಭಿನ್ನಭಾವಿಗಳೆಲ್ಲರೂ ಫಲದಾಯಕರು. ಅಂತಲ್ಲ, ಲಿಂಗೈಕ್ಯನ ಪರಿ ಬೇಱೆ. ಅದೆಂತೆಂದೊಡೆ : ಅಂಗಕ್ಕೂ ಲಿಂಗಕ್ಕೂ ಭೇದವಿಲ್ಲೆಂದಱಿದು, ಲಿಂಗಾಂಗಸಂಬಂಧಿಯಾಗಿ, ಭೇದ ವಳಿದಿಪ್ಪ ಶರಣನ ಅಂಗೇಂದ್ರಿಯಂಗಳ ಸುಖಭೋಗವೆಲ್ಲಾ ಲಿಂಗಕ್ಕೆ ಅರ್ಪಿತ ವಪ್ಪುವು. ಅಂತು ಲಿಂಗಕ್ಕೆ ಅರ್ಪಿತವಾದ ಶರಣಂಗೆ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮಂಗಳೆಲ್ಲವು ನಾಶವಪ್ಪುವು. ಅದು ಹೇಂಗೆಂದಡೆ : ಕಾಡಕಿಚ್ಚು ಕರಡವ ಸುಟ್ಟಲ್ಲಿ ಹಿಂದೆ ಮೆದೆಯಿಲ್ಲ ಮುಂದೆ ಹುಲ್ಲಿಲ್ಲದ ಹಾಂಗೆ ಲಿಂಗಾರ್ಪಿತ ದಿಂದ ಕರ್ಮಕ್ಷಯವಪ್ಪುದೆಂಬುದೀ ವಚನದ ತಾತ್ಪರ್ಯಾರ್ಥ. ೨೮

ವ. ಆತ್ಮಸಂಗವಾದವರ್ಗೆ ಬಹಿರ್ಭಾವವಿಲ್ಲ. ಇಂದ್ರಿಯಂಗಳು ಲಿಂಗ ವಾದವರ್ಗೆ ವಿಷಯಸೂತಕವಿಲ್ಲ. ಕರಣಂಗಳು ಲಿಂಗವಾದವರ್ಗೆ ಹಿಂದು ಮುಂದೆಂಬ ಸಂದೇಹವಿಲ್ಲ. ಲಿಂಗಾಲಯ ಮನವಾದವರ್ಗೆ ಇಹಪರವೆಂಬ ಸಂಶಯವಿಲ್ಲ. ಲೋಕದಂತೆ ನಡೆವರು, ಲೋಕ ದಂತೆ ನುಡಿವರು. ಮನವು ಮಹಾಲಿಂಗದಲ್ಲಿ ಪರಿಣಾಮಿಗಳು. ಅಂತಪ್ಪ ಲಿಂಗಾನುಭಾವಿಗಳ ಲೋಕದ ಪ್ರಪಂಚಿಗಳೆಂದಡೆ ಮನೋ ಮಧ್ಯದಲ್ಲಿಪ್ಪ ಜ್ಯೋತಿರ್ಲಿಂಗವು ನಗದಿಪ್ಪನೇ ಗೊಹೇಶ್ವರಾ !

ಟೀ. ಈ ವಚನ ಕಾಣಬಂದರ್ಥ. ೨೯

ವ. ನೋಡುವ ನೋಟ ನೀವೆಂದಱಿದೆ. ಕೇಳುವ ಶ್ರೋತ್ರ ನೀವೆಂದ ಱಿದೆ. ವಾಸಿಸುವ ನಾಸಿಕ ನೀವೆಂದಱಿದೆ. ರುಚಿಸುವ ಜಿಹ್ವೆ ನೀವೆಂದಱಿದೆ. ಮುಟ್ಟುವ ಸ್ಪರ್ಶನ ನೀವೆಂದಱಿದೆ. ಎನ್ನ ಕರಣಂಗಳು ನಿಮ್ಮ ಕಿರಣಂಗಳಾಗಿ ಕೂಡಲಚೆನ್ನಸಂಗಯ್ಯಾ ನಾ ನಿಮ್ಮ ಬೇಡಲಿಲ್ಲ, ನೀ ಕೂರ್ತು ಕೊಡಲಿಲ್ಲಾಗಿ.

ಟೀ. ಲಿಂಗಾಂಗಸಂಬಂಧವಾದಾಕ್ಷಣವೆ ಶರಣನ ಅಂಗ ಪ್ರಾಣ ಕರ ಣೇಂದ್ರಿಯಂಗಳೆಲ್ಲಾ ಲಿಂಗವೆಯಾಗಿ ಭಿನ್ನವಿಲ್ಲದೆ ತಾನೆಲ್ಲಾ ಲಿಂಗವಾಗಿರ್ದುದ

ತಾನೆ ಅಱಿದು ಲಿಂಗವ ಭಿನ್ನವಿಡದೆಯಿರ್ದ ಬಳಿಕ, ಬೇಡುವ ಬೇಡಿಸಿಕೊಂಬ ಲಿಂಗ ಭಕ್ತನೆಂಬ ಎರಡಿಲ್ಲದೆ ಲಿಂಗವಾಗಿರ್ದ ಶರಣನೆಂಬುದೀ ವಚನದ ತಾತ್ಪ ರ್ಯಾರ್ಥ. ೩೦

ವ. ಮುಟ್ಟಿದ ಮುನ್ನ ಗುರುವುಂಟು, ಲಿಂಗವುಂಟು, ಜಂಗಮವುಂಟು. ಮುಟ್ಟಿದ ಬಳಿಕ ಗುರುವಿಲ್ಲ, ಲಿಂಗವಿಲ್ಲ, ಜಂಗಮವಿಲ್ಲ. ಕೂಡಲ ಚೆನ್ನಸಂಗಯ್ಯನಲ್ಲಿ ಸ್ವಯವಲ್ಲದೆ ಪರವಿಲ್ಲಾ.

ಟೀ. ತ್ರಿವಿಧಲಿಂಗವ ಭಿನ್ನವಿಟ್ಟು ಪೂಜಿಸಿ ಭಾವಿಸುವವರಿಗೆ ತ್ರಿವಿಧ ಲಿಂಗವು ಭಿನ್ನವಾಗಿಪ್ಪವು. ಅಂತಲ್ಲದೆ ತ್ರಿವಿಧ ಲಿಂಗವ ತ್ರಿವಿಧ ಅಂಗಕ್ಕೆ ಸಾಹಿತ್ಯವ ಮಾಡಿ, ತ್ರಿವಿಧಲಿಂಗಾಂಗಸಂಬಂಧಿಯಾದ ಶರಣನೇ ತ್ರಿವಿಧ ಲಿಂಗಸ್ವರೂಪನಾದ ನಾಗಿ, ಅಂತಾದ ಶರಣಂಗೆ ತ್ರಿವಿಧಲಿಂಗ ಭಿನ್ನವಾಗಿಲ್ಲವೆಂಬುದೀ ವಚನದ ತಾತ್ಪ ರ್ಯಾರ್ಥ. ೩೧

ವ. ಪೃಥ್ವಿಯಪ್ಪು ತೇಜ ವಾಯುವಾಕಾಶ ನಿರಂಜನದೇವಾ! ನಿಮ್ಮ ಮಹಿ ಮೆಯನು ಪ್ರಣವಸ್ವರೂಪಂಗಲ್ಲದೆ ಅಱಿಯಲಾರಿಗೆಯೂ ಬಾರದು. ಜ್ಞಾನಜ್ಯೋತಿಯ ಧ್ಯಾನದಿಂದ ನಾಳಶುದ್ಧದ್ವಾರನಾಗಿ ಆರಾಧಿಸಿ ಕಂಡೆ ನಮ್ಮ ಕೂಡಲಸಂಗಮದೇವನಾ.

ಟೀ. ಪಂಚಭೌತಿಕಸ್ವರೂಪಾಗಿ ರಂಜಿಸುವ ರಂಜನಾಮೂರ್ತಿಯಲ್ಲದೆ ಇರ್ದ ಅಖಂಡ ಚಿತ್ಪ್ರಣವಪ್ರಕಾಶಸ್ವರೂಪೇ ಲಿಂಗವೆಂಬುದೀಗ 'ಪೃಥ್ವಿ ಅಪ್ಪು ತೇಜ ವಾಯು ಆಕಾಶ ನಿರಂಜನದೇವಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾ ಲಿಂಗದ ಘನತೆಯನು, ಚಿತ್ಪ್ರಣವ ಜ್ಞಾನವು ಅಂಗದಲ್ಲಿ ಪ್ರಕಾಶಿಸಿದ ಶರಣಂಗಲ್ಲದೆ ಅಱಿಯಲಾರಿಗೆಯೂ ಬಾರದೆಂಬುದೀಗ 'ನಿರಂಜನದೇವಾ ನಿಮ್ಮ ಮಹಿಮೆಯ ಪ್ರಣವಸ್ವರೂಪಂಗಲ್ಲದೆ ಅಱಿಯಲಾರಿಗೆಯೂ ಬಾರದೆ' ಂಬ ಶಬ್ದಕ್ಕರ್ಥ. ಅಂತಪ್ಪ ಶಿವಜ್ಞಾನ ಅಂಗದಲ್ಲಿ ಪ್ರಕಾಶವಾದ ಜ್ಞಾನಪ್ರಕಾಶದಿಂದ ಮಹಾಘನ ಲಿಂಗವ ಪ್ರತ್ಯಕ್ಷವಾಗಿ ಕಂಡು, ಲಿಂಗದ ಧ್ಯಾನ ಘಟಿಸಿತ್ತೆಂಬುದೀಗ 'ಜ್ಞಾನ ಜ್ಯೋತಿಯ ಧ್ಯಾನ' ವೆಂಬ ಶಬ್ದಕ್ಕರ್ಥ. ನಾಳವೆಂದರೆ ಮನೋದ್ವಾರ. ಆ ದ್ವಾರವೆಂದಡೆ ಅಂಗಸ್ವರೂಪು. ಅಂತಪ್ಪ ಮನದ ಅಜ್ಞಾನಂಗಳೆಲ್ಲಾ ಶಿವಧ್ಯಾನ ದಿಂದಲಳಿದು, ಕಾಯವೆಲ್ಲಾ ಜ್ಞಾನಕಾಯವಾಯಿತ್ತು ಶರಣಂಗೆಂಬುದೀಗ 'ನಾಳ ಶುದ್ಧದ್ವಾರನಾಗಿ' ಯೆಂಬ ಶಬ್ದಕ್ಕರ್ಥ. ಅಂತು ಜ್ಞಾನಕಾಯವಾದ ಅಂಗವನೇ

ಲಿಂಗಕ್ಕೆ ಅರ್ಪಿಸಿ, ಶರಣ ತಾನೆಲ್ಲಾ ಲಿಂಗಸ್ವರೂಪಿಯಾದ. ಅಂತು ತಾನು ಲಿಂಗಸ್ವರೂಪಿಯಾದುದ ತಾನೆ ಕಂಡ, ಶರಣನೆಂಬುದೀಗ ' ಆರಾಧಿಸಿ ಕಂಡೆ ನಮ್ಮ ಕೂಡಲಸಂಗಮದೇವನಾ ' ಎಂಬ ಶಬ್ದಕ್ಕರ್ಥ. ೩೨

ವ. ಗುರುಲಿಂಗ ಉದಯವಾದವರ ಉದಯವ ನೋಡಿರಯ್ಯಾ ! ಹಿಂದೆ ಕತ್ತಲೆ ಮುಂದೆ ಬೆಳಗಾಯಿತ್ತು. ಬೆಳಗು ಬೆಳುದಿಂಗಳಾಯಿತ್ತು. ಕೂಡಲಚೆನ್ನಸಂಗಯ್ಯನಲ್ಲಿ [1]ಒಲವಸದರ್ಪಣದಿಂದ[1].

ಟೀ. ಶ್ರೀಗುರುಕೃಪೆಯಿಂದ ಅಂತರಂಗದಲ್ಲಿರ್ಪ ಚಿತ್ಕಲಾಲಿಂಗವು ಬಹಿಷ್ಕರಿಸಿ ಶರಣನ ಅಂಗ ಪ್ರಾಣ ಭಾವಂಗಳಲ್ಲಿ ಲಿಂಗವು ನೆಲೆಗೊಂಡು ಸರ್ವಾಂಗವನೊಳಕೊಂಡು ಅಂಗ ಪ್ರಾಣ ಭಾವಂಗಳೆಲ್ಲಾ ಲಿಂಗವೆಯಾಗಿ ಬೆಳಗುತ್ತಿರ್ದ ಶರಣನು. ಅಂತಪ್ಪ ಶರಣನ ಉತ್ಪತ್ಯ ಲೋಕದ ದೇಹಿಗಳಂತಲ್ಲವೆಂಬುದೀಗ ' ಗುರುಲಿಂಗ ಉದಯವಾದವರ ಉದಯವ ನೋಡಿರಯ್ಯಾ ' ಎಂಬ ಶಬ್ದಕ್ಕರ್ಥ. ಅಂತು ಸರ್ವಾಂಗವೆಲ್ಲಾ ಚಿತ್ಪ್ರಭಾಲಿಂಗವೆಯಾಗಿರ್ದ ಶರಣಂಗೆ ಹಿಂದೆ ತೋರಿದ ದೇಹೋಹಂ ಎಂಬ ಅಜ್ಞಾನ ಹಿಂದಾಗಿ ಹೋಯಿತ್ತು. ಮುಂದೆ ದೇಹಿಯಾಗಿ ಹುಟ್ಟುವನಲ್ಲ ಶರಣ. ಮುಂದೆ ಚಿತ್ಪ್ರಭಾಲಿಂಗವೆಯಾಗಿಪ್ಪನೆಂಬುದೀಗ ' ಹಿಂದೆ ಕತ್ತಲೆ ಮುಂದೆ ಬೆಳಗಾಯಿತ್ತು ' ಎಂಬ ಶಬ್ದಕ್ಕರ್ಥ. ಅಂತು ಶರಣ ಚಿತ್ಪ್ರಭಾಲಿಂಗವಾದಲ್ಲಿ ಆ ಲಿಂಗದ ಚಿತ್ಪ್ರಭೆಯೆಲ್ಲಾ ಪರಮಶಾಂತಿಜ್ಞಾನಸ್ವರೂಪವಾಯಿತ್ತೆಂಬುದೀಗ ' ಬೆಳಗು ಬೆಳುದಿಂಗಳಾಯಿತ್ತು ' ಯೆಂಬ ಶಬ್ದಕ್ಕರ್ಥ. ಅಂತು ಶರಣ ಲಿಂಗವಾದ ಪರಿ ಹೇಂಗೆಂದೊಡೆ : ಆ ಲಿಂಗವು ತಾನೆ ಕರುಣಿಸಿ ಶರಣನನವಗ್ರಹಿಸಿದ ಕಾರಣವಾಯಿತ್ತೆಂಬುದೀಗ [2]ಒಲವ ಸದರ್ಪಣದಿಂದ[2] ಲೆಂಬ ಶಬ್ದಕ್ಕರ್ಥ. ೩೩

ವ. ಅರ್ಕನ ಅದ್ಭುತದಲ್ಲಿ ಕೆಟ್ಟರು ಹಲಬರು. ತಪ್ಪುಗರಾದರು ಹಲಬರು. ಬಿಂದು ಬಿಂದನೆ ಕೂಡಿ, ಲಿಂಗಲೀಯ್ಯವಾಯಿತ್ತು. ನಿಂದನು ಗೊಹೇಶ್ವರನೆನ್ನೊಳಗೆ ಭರಿತನಾಗಿ !

ಟೀ. ಅಖಂಡ ಚಿತ್ಪ್ರಕಾಶವನುಳ್ಳ ಚಿಲ್ಲಿಂಗವೀಗ ಚಿದಾದಿತ್ಯನಾದ ಕಾರಣ ' ಅರ್ಕ ' ನೆಂಬ ಶಬ್ದಕ್ಕರ್ಥ. ಅಂತಪ್ಪ ಚಿಲ್ಲಿಂಗವು ತನ್ನ ಸ್ವಲೀಲೆಯಿಂದ ಸಾಕಾರ

೧ ವಲವಶದರ್ಪಣದಿಂದ (ಎ. ರಾ.) ೨ ವಲವಶದರ್ಪಣದಿಂದ (ಎ. ರಾ.)

ವಪ್ಪ ನೆನಹುದೋಱಿ, ಅಬ್ಬರಿಸಿ ನೆಗಳ್ದು, ಅದ್ಭುತವಾದ ಚಿತ್ರಭಾಲಿಂಗಮೂರ್ತಿಯಾಯಿತ್ತು. ಅಂತು ಚಿಲ್ಲಿಂಗವು ಅಬ್ಬರಿಸಿ ಎದ್ದಲ್ಲಿ ಆ ಚಿಲ್ಲಿಂಗದ ಚಿತ್ರಭೆ ಉತ್ಕೃಷ್ಟವಾಗಲು ಆ ಉತ್ಕೃಷ್ಟವಾದ ಚಿತ್ರಭೆಯೇ ಚಿತ್ರಭಾನುಕೋಟಿಗಳಾಗಿ ಒಗೆದು ತೋಱುತ್ತಿರಲು, ಅಂತು ತೋಱಿದ ಚಿತ್ರಭಾಣುಗಳಿಗೆ ದೇಹ ಕರಣ ಭುವನಂಗಳ ಕಲ್ಪಿಸಿದನಾಕ್ಷಣವೆ ಲಿಂಗಮೂರ್ತಿ. ಅದುಕಾರಣ ಅರ್ಕನ ಅದ್ಭುತದಲ್ಲಿ ಕೆಟ್ಟರು ಹಲಬರು ' ಎಂಬ ಶಬ್ದಕ್ಕರ್ಥ. ಅಂತು ಚಿದಾತ್ಮಾಣುಗಳು ದೇಹ ಕರಣ ಭವಬಾಧೆಗೊಳಗಾಗಿ, ತಮ್ಮ ನಿಜವಪ್ಪ ಶಿವತ್ವಕ್ಕೆ ದೂರವಾಗಿ ತಪ್ಪಿದರೆಂಬುದೀಗ ' ತಪ್ಪುಗರಾದರು ಹಲಬರು ' ಎಂಬ ಶಬ್ದಕ್ಕರ್ಥ. ಅಂತು ದೇಹಿಗಳಾಗಿ ಇರ್ದಲ್ಲಿ ಶಿವಕೃಪೆಯಾಗಲು, ಶರಣನ ದೇಹದಲ್ಲಿ ಮಱೆಸಿರ್ದ ಆತ್ಮಸ್ವಯಂ ಪ್ರಕಾಶಮಪ್ಪ ಚಿದ್ಬಿಂದು ಪ್ರಕಾಶಿಸಿ, ಆ ದೇಹವೆಂಬ ಬಿಂದುವ ಕೂಡಿ, ಕಾಯ ಜ್ಞಾನಕಾಯವಾಯಿತ್ತೆಂಬುದೀಗ ' ಬಿಂದು ಬಿಂದುವನೆ ಕೂಡಿತ್ತೆ'ಂಬ ಶಬ್ದಕ್ಕರ್ಥ. ಅಂತಾದ ಚಿದಂಗದಲ್ಲಿ ಚಿತ್ಕಲಾಲಿಂಗವು ಸಂಬಂಧವಾಗಿ ದೇಹಭಾವವಳಿದು ಲಿಂಗವಾದ ಶರಣನೆಂಬುದೀಗ ' ಲಿಂಗ ಲೀಯ್ಯವಾಯಿತ್ತೆ ' ಂಬ ಶಬ್ದಕ್ಕರ್ಥ. ಅಂತು ಶರಣ ತಾನೆಲ್ಲಾ ಲಿಂಗವೆಯಾದಲ್ಲಿ ಲಿಂಗವು ಶರಣನಲ್ಲಿ ಭೇದವಿಲ್ಲದೆ ಪರಿಪೂರ್ಣವಾಗಿ ಇದ್ದಿತೆಂಬುದೀಗ ' ನಿಂದನು ಗೊಹೇಶ್ವರನೆನ್ನೊಳಗೆ ಭರಿತನಾಗಿ ' ಯೆಂಬ ಶಬ್ದಕ್ಕರ್ಥ. ೩೪

ವ. ಆಕಾಶ ಒಂದಂಡಜ. ಪೃಥ್ವಿ ಒಂದು ಪಿಂಡಜ. ಎರಡಱ ಮಧ್ಯದಲ್ಲಿ ಪಕ್ಷಿ ಮಱಿಗಳನಿಕ್ಕಿತ್ತ ಕಂಡೆ. ೧ತುಪ್ಪುಳು ಬಾರದು೧. ಅದಱಿೊಪ್ಪವನೇನೆಂದೆಂಬೆನು ಗುರುವೇ ? ಬಯಲನೆ ಉಡುಗಿತ್ತು. ನಿರ್ವಯಲನೆ ಗೂಡು ಮಾಡಿತ್ತು. ಉರಿಯನೇ ಉಂಡಿತ್ತು. ಮಧುರಸವನೇ ಹಿಂಡಿತ್ತ ಕಂಡೆ. ಪಕ್ಷಿಗೆ ಪಕ್ಕ ಒಂದಿತ್ತು. ಗಗನಕ್ಕೆ ಹಾಱಿತ್ತು. ಹಾಱಿ ಹೋಗುತ ನಮ್ಮ ಗೊಹೇಶ್ವರಲಿಂಗವ ಕೂಡಿತ್ತ ಕಂಡೆ.

ಟೀ. ಆತ್ಮನೆಂದರೆ ಆಕಾಶವೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮನು ಚಿದ್ಬ್ರಹ್ಮಾಂಡವೆಂಬ ಬ್ರಹ್ಮಾಂಶಿಕನೆಂಬುದೀಗ ' ಆಕಾಶವೊಂದಂಡಜ ' ಯೆಂಬ ಶಬ್ದಕ್ಕರ್ಥ. ಜಡಭೌತಿಕವಪ್ಪ ದೇಹವೆಂಬುದೀಗ ' ಪೃಥ್ವಿ ' ಯೆಂಬ ಶಬ್ದಕ್ಕರ್ಥ. ಅಂತು ಚಿದಂಶಿಕನಾದ ಜ್ಞಾನಾತ್ಮಂಗೆ ಅಜ್ಞಾನವಪ್ಪ ದೇಹಸಂಬಂಧವಾದಲ್ಲಿ, ಆ ಆತ್ಮನ ಅಱಿವು, ದೇಹದ ಮಱವೆ ಎರಡಱ ಕೂಟದ ಸಂಧಿಯಲ್ಲಿ ಮನವೆಂಬ ಪಕ್ಷಿ

---

೧ ತುಪ್ಪುಳುಬಾರದ ಮುನ್ನ (ಎ.)

ಹುಟ್ಟಿತೆಂಬುದೀಗ ' ಎರಡಱ ಮಧ್ಯದಲ್ಲಿ ಪಕ್ಷಿ ' ಯೆಂಬ ಶಬ್ದಕ್ಕರ್ಥ. ಅಂತಪ್ಪ ಮನದಿಂದ ಹಲವು ಕರಣೇಂದ್ರಿಯಂಗಳು ಹುಟ್ಟಿದವೆಂಬುದೀಗ ' ಪಕ್ಷಿ ಮಱಿಗಳ ನಿಕ್ಕಿತ್ತ ಕಂಡೆ ' ನೆಂಬ ಶಬ್ದಕ್ಕರ್ಥ. ಅಂತಪ್ಪ ಮನ ಉಂಟಾಗಿರ್ದ ಕುಱುಹು ದೋಱದು ಎಂಬುದೀಗ ' ತುಪ್ಪುಳು ಬಾರದು ' ಎಂಬ ಶಬ್ದಕ್ಕರ್ಥ. ಅಂತು ಕುಱುಹುದೋಱದೆಯಿಪ್ಪ ಮನವು ವಿಶ್ವಮಯವಾಗಿ ತೋಱುತ್ತಿಪ್ಪುದು ಚೋದ್ಯ ವೆಂದು ಶರಣ ಜ್ಞಾನದೃಕ್ಕಿಂದ ಕಂಡು ಆಶ್ಚರ್ಯಂಬಟ್ಟನೆಂಬುದೀಗ 'ಅದಱೊಪ್ಪ ವನೇನೆಂದೆಂಬೆನು ಗುರುವೇ ' ಎಂಬ ಶಬ್ದಕ್ಕರ್ಥ. ಮಿಥ್ಯಾದೇಹವೆಂಬುದೀಗ ಬಯ ಲೆಂಬ ಶಬ್ದಕ್ಕರ್ಥ. ಅಂತು ಮನಸ್ಸು ಹಲವು ಮಿಥ್ಯಾದೇಹಂಗಳೆಂಬ ಕಸವ ಕಳೆದುಹಾಕಿ ಬರುತ್ತಿದ್ದಿತೆಂಬುದೀಗ ' ಬಯಲನೇ ಉಡುಗಿತ್ತು ' ಎಂಬ ಶಬ್ದ ಕ್ಕರ್ಥ. ಅಂತಪ್ಪ ಮನಸ್ಸು ನಿರೂಪಪ್ಪ ಆತ್ಮನನಾಶ್ರಯವ ಮಾಡಿಕೊಂಡಿಪ್ಪು ದೆಂಬುದೀಗ ' ನಿರ್ಬಯಲನೆ ಗೂಡು ಮಾಡಿತ್ತು ' ಎಂಬ ಶಬ್ದಕ್ಕರ್ಥ. ಅಂತಪ್ಪ ಮನಸ್ಸು ತಾಪತ್ರಯಂಗಳನೆ ಅನುಭವಿಸುತ್ತಿದ್ದಿತೆಂಬುದೀಗ ' ಉರಿಯನೇ ಉಂಡಿತ್ತು ' ಎಂಬ ಶಬ್ದಕ್ಕರ್ಥ. ಆ ಮನಸ್ಸು ಸದ್ವಿವೇಕಸಾರವೆಲ್ಲವ ತೊಲಗ ನೂಕುತ್ತಿಹುದೆಂಬುದೀಗ ' ಮಧುರಸವನೆ ಹಿಂಡಿತ್ತ ಕಂಡೆ ' ನೆಂಬ ಶಬ್ದಕ್ಕರ್ಥ. ಅಂತಪ್ಪ ಮನಕ್ಕೆ ಶಿವಕೃಪೆಯಿಂದ ಭಕ್ತಿ ಜ್ಞಾನಂಗಳೆಂಬವೆರಡು ಐಕ್ಯವಾಗಿ ಹುಟ್ಟಿದವೆಂಬುದೀಗ ' ಪಕ್ಷಿಗೆ ಪಕ್ಕ ಬಂದಿತ್ತೆ ' ಎಂಬ ಶಬ್ದಕ್ಕರ್ಥ. ಆತ್ಮನೆಂಬುದೀಗ ಗಗನವೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮತತ್ತ್ವವಿಚಾರವನೆಯಿದಿತ್ತು ಮನಸ್ಸು ಜ್ಞಾನಕ್ರೀಯಿಂದಲೆಂಬುದೀಗ ' ಗಗನಕ್ಕೆ ಹಾಱಿತ್ತು ' ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮತತ್ತ್ವವಿಚಾರವಳವಟ್ಟಲ್ಲಿ, ಆ ಆತ್ಮನ ನಿಜಸ್ವರೂಪೇ ಲಿಂಗವೆಂದಱಿದು ಜ್ಞಾನಕ್ರೀಯಿಂದ ಲಿಂಗಾಂಗಸಂಬಂಧ ಘಟಿಸಿ ಅಂಗವೆಲ್ಲಾ ಲಿಂಗವೆಯಾಯಿತ್ತಾಗಿ ಆ ಲಿಂಗದ ಕೂಡೆ ಮನವು ಲಿಂಗವಾಯಿತ್ತು ಶರಣಂಗೆಂಬುದೀಗ ' ಹಾಱಿ ಹೋಗುತ ನಮ್ಮ ಗೊಹೇಶ್ವರಲಿಂಗವ ಕೂಡಿತ್ತ ಕಂಡೆ ' ನೆಂಬ ಶಬ್ದಕ್ಕರ್ಥ. ೩೫

ವ. ಕಿಚ್ಚಿನ ಕೆಂಡದಂತೆ ಹೊಱೆಯಿಲ್ಲದಿಪ್ಪೆಯಯ್ಯಾ ! ಬೆಂಕಿಯ ಬೆಳಕಿ ನಂತೆ ನೀನಿಪ್ಪೆಯಯ್ಯಾ ! ಇದುಕಾರಣ ನಿಮ್ಮ ಕಂಡ ಪರಮಜ್ಞಾನಿ ಗೊಹೇಶ್ವರಾ.

ಟೀ. ಕಾಷ್ಠದೊಳಗೆ ಅಗ್ನಿ ಭಿನ್ನವಿಲ್ಲದೆ ಪರಿಪೂರ್ಣವಾಗಿಪ್ಪಂತೆ, ಬೆಂಕಿ ಯಲ್ಲಿ ಪ್ರಕಾಶ ಭಿನ್ನವಿಲ್ಲದೆ ಪರಿಪೂರ್ಣವಾಗಿಪ್ಪಂತೆ ಶರಣನ ಆತ್ಮಾಂಗದೊಳಗೆ ಚಿತ್ಪರಮಲಿಂಗವು ಭಿನ್ನವಿಲ್ಲದೆ ಪರಿಪೂರ್ಣವಾಗಿರ್ದ ಕಾರಣ ಸಮ್ಯಗ್ ಜ್ಞಾನೋ ದಯವಾಗಿ ಶರಣ ಲಿಂಗವ ಪ್ರತ್ಯಕ್ಷವಾಗಿ ಕಂಡು ಕೂಡಿ ಲಿಂಗವಾದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೩೬

ವ. ಘನವ ಕಂಡೆ, ಅನುವ ಕಂಡೆ, ಆಯತ ಸ್ವಾಯತ ಸನ್ನಿಹಿತಸುಖವ ಕಂಡೆ. ಅಱಿದಱಿದು ಮಱಹ ಮಱೆದೆ. ಕುಱುಹಿನ ಮೋಹ ಮೊಱೆಗೆಡದೆ ಚೆನ್ನಮಲ್ಲಿಕಾರ್ಜುನಾ ನಿಮ್ಮನಱಿದು ಸೀಮೆಗೆಟ್ಟೆ.

ಟೀ. ಅಂಗ ಪ್ರಾಣಂಗಳೊಳಗೆ ಸ್ವಾಯತವಾಗಿಪ್ಪ ಚಿದ್ಘನಲಿಂಗದ ಅನುವ ಸಮ್ಯಗ್‌ಜ್ಞಾನದಿಂದ ಕಂಡು, ಅಂತರಂಗದಲ್ಲಿ ಶಿವಭಾವದಱಿವು ಘಟಿಸಿತ್ತಾಗಿ ಅಜ್ಞಾನವಳಿದು ಹೋಯಿತ್ತು. ಅಂತು ಅಜ್ಞಾನವಳಿದು ಹೋದಲ್ಲಿ ಅಂತರಂಗದ ಚಿದ್ಘನಲಿಂಗವೆ ಇಷ್ಟಲಿಂಗವಾಗಿ ಕರಸ್ಥಲಕ್ಕೆ ಬಂದುದನಱಿದು ಸದ್ಭಾವ ಘಟಿಸಿ, ಭಕ್ತಿ ರತಿಗೆಡದೆ ಕ್ರೀಯನಾಚರಿಸಿದನಾಗಿ ದೇಹವಾಸನೆಯಳಿದುಹೋಯಿತ್ತು ಶರಣಂಗೆ. ಅಂತು ಜ್ಞಾನಕ್ರೀಯಿಂದ ಅಜ್ಞಾನ ಭ್ರಾಂತಿ ಮೊದಲಾದ ನಾಮ ರೂಪು ಇಹಪರದ ಸೀಮೆಗಳೆಲ್ಲವು ಕೆಟ್ಟು ಲಿಂಗವಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೩೭

ವ. ವೇದ ಪ್ರಮಾಣವಲ್ಲ, ಶಾಸ್ತ್ರ ಪ್ರಮಾಣವಲ್ಲ, ಶಬ್ದ ಪ್ರಮಾಣವಲ್ಲ ಕಾಣಿ ಭೋ ಲಿಂಗಕ್ಕೆ ! ಅಂಗಸಂಗದ ಮಧ್ಯದಲ್ಲಿರ್ದು ಬೈಚಿಟ್ಟು ಬಳಸಿದ ಗೊಹೇಶ್ವರಾ, ನಿಮ್ಮ ಶರಣನು.

ಟೀ. ವೇದ ಶಾಸ್ತ್ರ ಶಬ್ದಾದಿ ಪ್ರಮಾಣಂಗಳು ಲಿಂಗಾಂಗಸಂಬಂಧದನುಭಾವಕ್ಕೆ ಸಾಧನವಲ್ಲ. ಮತ್ತೆಂತೆಂದೊಡೆ : ಸರ್ವಾಂಗವೊಳಗೆ ಲಿಂಗಸಂಗ ನಿಕ್ಷೇಪ ಸಂಚವ ಮಾಡಿಕೊಂಡು, ಲಿಂಗವ ಭಿನ್ನವಿಡದೆ ಶರಣ ಜ್ಞಾನಕ್ರೀಯಿಂದ ಲಿಂಗಾಂಗಸಂಗದನುಭವವ ಕೀರಲನುಭವಿಸಿದನೆಂಬುದೀ ವಚನದ ತಾತ್ಪರ್ಯಾರ್ಥ. ೩೮

ವ. ಧಾತು ಮಾತು ಪಲ್ಲಟಿಸಿದರೆ ಗಮನವಿನ್ನೆಲ್ಲಿಯದೋ ? ಧ್ಯಾನ ಮೌನವೆಂಬುದು ತನುಗುಣಸಂಬಂಧವಯ್ಯಾ ! ಸುಜ್ಞಾನಭರಿತ ಅನುಪಮಸುಖಿ ಗೊಹೇಶ್ವರಾ, ನಿಮ್ಮ ಶರಣನು.

ಟೀ. ಘಟಕರ್ಮದಿಂದ ದೇಹಧಾತು ಮಾತಿನ ಸತ್ತ್ವವ ಕೆಡಿಸಿ, ಧ್ಯಾನಿಸುವ ಕರ್ಮಯೋಗಿಗಳಿಗೆ ಶಿವಜ್ಞಾನವಿಲ್ಲವೆಂಬುದೀಗ ‘ ಧಾತು ಮಾತು ಪಲ್ಲಟಿಸಿದರೆ ಗಮನವಿನ್ನೆಲ್ಲಿಯದೋ ’ ಎಂಬ ಶಬ್ದಕ್ಕರ್ಥ. ಅಂತು ಶಿವಜ್ಞಾನವಿಲ್ಲದೆ ಧ್ಯಾನಮೌನಿಗಳಪ್ಪ ಕರ್ಮಯೋಗವೆಲ್ಲವೂ ದೇಹಧರ್ಮದ ಅಜ್ಞಾನಗುಣಸಂಬಂಧವೆಂಬುದೀಗ ‘ ಧ್ಯಾನ ಮೌನವೆಂಬುದು ತನುಗುಣಸಂಬಂಧವಯ್ಯಾ ’ ಎಂಬ

ಶಬ್ದಕ್ಕರ್ಥ. ಅಂತು ದೇಹದಂಡನೆಯ ಕರ್ಮಂಗಳಿಂದ ಸಾಧಿಸುವ ಅಷ್ಟಾಂಗ ಯೋಗಿಗಳಿಗೆ ಶಿವಯೋಗವಿಲ್ಲ. ಮತ್ತೆಂತೆಂದೊಡೆ : ಸಮ್ಯಗ್‌ಜ್ಞಾನದಿಂದ ಶಿವ ತಾನೆಂಬ ಪರಿಪೂರ್ಣಜ್ಞಾನಿಯಾಗಿ ಲಿಂಗಾಂಗಸಂಬಂಧ ಘಟಿಸಿದ ಶರಣನೇ ಅನುಪಮಸುಖಿಯೆಂಬುದೀಗ ' ಸುಜ್ಞಾನಭರಿತ ಅನುಪಮಸುಖಿ ಗೊಹೇಶ್ವರಾ, ನಿಮ್ಮ ಶರಣ ' ನೆಂಬ ಶಬ್ದಕ್ಕರ್ಥ. ३೯

ವ. ಇರುಳಿನ ಮುಖದೊಳಗೆ ಒಂದು ನವರತ್ನದ ಖಂಡಿತ ಹಾರವಡಗಿತ್ತು!
ಹಗಲಿನ ಮುಖದೊಳಗೊಂದು ನವ ಚಿತ್ರಪತ್ರದ ವೃಕ್ಷವಡಗಿತ್ತು !
ರತ್ನದ ಹಾರವ ವೃಕ್ಷಕ್ಕೆ ಆಹಾರವನಿಕ್ಕಿದರೆ ಗೊಹೇಶ್ವರನೆಂಬ ಪ್ರಾಣ
ಲಿಂಗಕ್ಕೆ ಸುಖವಾಯಿತ್ತು !

ಟೀ. ಮಱವೆಯೆಂಬುದೀಗ ' ಇರುಳೆ ' ಂಬ ಶಬ್ದಕ್ಕರ್ಥ. ಹೊಸತಾದ ಭಿನ್ನಜ್ಞಾನವೆಂಬುದೀಗ ' ನವರತ್ನದ ಖಂಡಿತಹಾರ ' ವೆಂಬ ಶಬ್ದಕ್ಕರ್ಥ. ಅಂತು ತನ್ನ ನಿಜವ ಮಱೆದು ಭಿನ್ನಜ್ಞಾನಿಯಾಗಿ ಮಱವೆಗೊಳಗಾದನೆಂಬುದೀಗ ' ಇರುಳಿನ ಮುಖದೊಳಗೊಂದು ನವರತ್ನದ ಖಂಡಿತ ಹಾರವಡಗಿತ್ತು' ಎಂಬ ಶಬ್ದಕ್ಕರ್ಥ. ಜ್ಞಾನೋದಯವೆಂಬುದೀಗ ' ಹಗಲೆ ' ಂಬ ಶಬ್ದಕ್ಕರ್ಥ. ಆರಿಗೂ ಸಾಧ್ಯವಲ್ಲದೆ ಹೊಸತಾಗಿಪ್ಪ ಚೋದ್ಯವಾದ ಚಿತ್ರ್ಕಾಶ ಪರ್ಣವನುಳ್ಳ ಬ್ರಹ್ಮವೃಕ್ಷವೆಂಬುದೀಗ ' ನವ ಚಿತ್ರಪತ್ರದ ವೃಕ್ಷ ' ವೆಂಬ ಶಬ್ದಕ್ಕರ್ಥ. ಅಂತಪ್ಪ ಬ್ರಹ್ಮವೃಕ್ಷವು ಆ ಮಱವೆಗೊಳಗಾದ ಆತ್ಮಂಗೆ ಜ್ಞಾನೋದಯವಾದಲ್ಲಿ ಸಮ್ಯಗ್‌ಜ್ಞಾನದೊಳಡಗಿ ತೋಱುತ್ತಿದ್ದಿತೆಂಬುದೀಗ ' ಹಗಲಿನ ಮುಖದೊಳಗೊಂದು ನವಚಿತ್ರಪತ್ರದ ವೃಕ್ಷವಡಗಿತ್ತು ' ಎಂಬ ಶಬ್ದಕ್ಕರ್ಥ. ಅಂತು ಸಮ್ಯಗ್‌ಜ್ಞಾನದೊಳಗೆ ಭಿನ್ನವಿಲ್ಲದೆ ತೋಱುತ್ತಿರ್ದ ಪರವಸ್ತುವಿಂಗೆ ತನ್ನಾತ್ಮಾರ್ಪಣವ ಸದ್ಭಕ್ತಿಯಿಂದರ್ಪಿಸಿ ಭಿನ್ನವಳಿದಿರ್ದ ಶರಣನ ಪ್ರಾಣಸ್ವರೂಪವಾಗಿ ಲಿಂಗವು ಶರಣನ ಅಂಗಸುಖಂಗಳ ಸುಖಿಸುತ್ತಿರ್ದನೆಂಬುದೀಗ ' ರತ್ನದ ಹಾರವ ವೃಕ್ಷಕ್ಕಾಹಾರವನಿಕ್ಕಿದರೆ ಗೊಹೇಶ್ವರನೆಂಬ ಪ್ರಾಣಲಿಂಗಕ್ಕೆ ಸುಖವಾಯಿತ್ತು ' ಎಂಬ ಶಬ್ದಕ್ಕರ್ಥ. ೪೦

ವ. ಅಂತರಂಗ ಸನ್ನಿಹಿತ, ಬಹಿರಂಗ ನಿಶ್ಚಿಂತವ್ರೋ ಅಯ್ಯ ! ತನು ತನ್ನ
ಸುಖ. ಮನ ಪರಮ ಸುಖ. ಇದು ಕಾರಣ ಕಾಯ ವಾಯುವ್ರೋ,
ಗೊಹೇಶ್ವರ ನಿರಾಳವ್ರೋ ಅಯ್ಯಾ !

ಟೀ. ದೇಹ ಕರಣಂಗಳೊಳಗೆ ಮಱೆಸಿಕೊಂಡು ಅಂತರಂಗವಾಗಿಪ್ಪ ಚಿತ್ಪರಮಲಿಂಗವ ಸಮ್ಯಗ್‌ಜ್ಞಾನದೃಕ್ಕಿಂದ ಕಂಡಱಿದು ಶಿವಭಾವ ಘಟಿಸಿತ್ತೆಂಬು

ದೀಗ ' ಅಂತರಂಗ ಸನ್ನಿಹಿತ 'ವೆಂಬ ಶಬ್ದಕ್ಕರ್ಥ. ಅಂತು ಅಂತರಂಗದಲ್ಲಿ ಶಿವಭಾವ ಘಟಿಸಿತ್ತಾಗಿ ಬಹಿರಂಗದ ಕ್ರೀಯುಳವಟ್ಟು, ಸಕಲ ದೇಹೇಂದ್ರಿಯ ಸುಖಂಗಳೆಲ್ಲವ ಲಿಂಗಕ್ಕರ್ಪಿಸಿ, ದೇಹಸಂಸಾರದಲ್ಲಿ ನಿರ್ಲೇಪಿಯಾದ ಶರಣನೆಂಬುದೀಗ ' ಬಹಿರಂಗ ನಿಶ್ಚಿಂತವೋ ಅಯ್ಯಾ ' ಎಂಬ ಶಬ್ದಕ್ಕರ್ಥ. ಅಂತು ಶರಣನ ತನುಸುಖವೆಲ್ಲಾ ಲಿಂಗದುದಾಗಿ ಲಿಂಗದ ಪರಮಾನಂದ ಸುಖವೆಲ್ಲಾ ಶರಣನ ಮನಕ್ಕಾಗಿ ಹೋಯಿತ್ತೆಂಬುದೀಗ ' ತನು ತನ್ನ ಸುಖ, ಮನ ಪರಮ ಸುಖ' ವೆಂಬ ಶಬ್ದಕ್ಕರ್ಥ. ಅಂತು ದೇಹೇಂದ್ರಿಯಂಗಳು ಶಿವಾರ್ಪಿತವಾಗಿ ದೇಹವಾಸನೆಯುಳಿದು ದಗ್ಧಪಟದಂತಿದ್ದ ಹುಸಿದೇಹವಿಡಿದಿರ್ದ ಶರಣನೆಂಬುದೀಗ ' ಇದು ಕಾರಣ ಕಾಯ ವಾಯುವೋ ' ಎಂಬ ಶಬ್ದಕ್ಕರ್ಥ. ಅಂತು ವಾಸನಾನಷ್ಟವಾದ ದೇಹವಿಡಿದುಕೊಂಡು ನಿಃಕಲಬ್ರಹ್ಮವಾಗಿರ್ದ ಶರಣನೆಂಬುದೀಗ ' ಗೊಹೇಶ್ವರ ನಿರಾಳವೋ ಅಯ್ಯಾ ' ಎಂಬ ಶಬ್ದಕ್ಕರ್ಥ. ೪೧

ವ. ಪೂರ್ವಬೀಜವಲ್ಲ. ಪೂರ್ವಪ್ರಾಣಿಯಲ್ಲ. ಪೂರ್ವಹಾದಿಯಲ್ಲ. ಪೂರ್ವಾದಿಗಳನೆಲ್ಲವನುತ್ತರಿಸಿ ಕಳೆದು ಲಿಂಗಗರ್ಭಿತನಾದ ಕೂಡಲ ಚೆನ್ನಸಂಗಾ, ನಿಮ್ಮ ಶರಣ!

ಟೀ. ಅಜ್ಞಾನಪ್ರಕೃತಿಕಾಯವ ಕೆಡಿಸಿ ಮಂತ್ರಕಾಯವ ಮಾಡಿದ ಶ್ರೀಗುರು. ವಾಯುಪ್ರಾಣಿಯ ಕಳೆದು ಲಿಂಗಪ್ರಾಣಿಯ ಮಾಡಿದ ಶ್ರೀಗುರು. ಕರ್ಮಮಾರ್ಗವ ಕೆಡಿಸಿ ಭಕ್ತಿಮಾರ್ಗವ ಕರುಣಿಸಿದನಾಗಿ ಶ್ರೀಗುರು, ಶರಣನ ಸರ್ವಾಂಗದೊಳಗೆ ಲಿಂಗವು ಪರಿಪೂರ್ಣವಾಗಿ ನೆಲೆಗೊಂಡು, ಶರಣ ಲಿಂಗಕ್ಕೆ ಅಂಗವಾಗಿ ಭಿನ್ನವಿಲ್ಲದಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೪೨

ವ. ಅಂಗದ ಮೇಲೆ ಲಿಂಗ, ಲಿಂಗದ ಮೇಲೆ ಅಂಗವಿದೇನೋ ? ಮನದ ಮೇಲೆ ಅಱಿವು, ಅಱಿವಿನ ಮೇಲೆ ಕುಱುಹು ಅದೇನೋ ? ನೀನೆಂಬಲ್ಲಿ ನಾನು, ನಾನೆಂಬಲ್ಲಿ ನೀನು. ನೀನಾನೆಂಬುದಕ್ಕೆ ತೆಱಹಿಲ್ಲ ಗೊಹೇಶ್ವರಾ !

ಟೀ. ಮಹಾಘನಲಿಂಗವು ಶರಣನ ಅಂಗದ ಮೇಲೆ ಇಷ್ಟಲಿಂಗವಾಗಿ, ಅಂಗದೊಳಗೆ ಪ್ರಾಣಲಿಂಗವಾಗಿ ಲಿಂಗಾಂಗಸಮರಸವಾಗಿಪ್ಪುದು ಚೋದ್ಯವೆಂಬುದೀಗ ' ಅಂಗದ ಮೇಲೆ ಲಿಂಗ, ಲಿಂಗದ ಮೇಲೆ ಅಂಗವಿದೇನೋ ' ಎಂಬ ಶಬ್ದಕ್ಕರ್ಥ. ಶರಣನ ಮನವೇ ಅಱಿವನೊಳಕೊಂಡು, ಆ ಅಱಿವನೆಲ್ಲಾ ಮಹಾಘನ ಲಿಂಗವೊಳಕೊಂಡು, ಆ ಅಱಿವೆಲ್ಲಾ ಮಹಾಘನಲಿಂಗವೆಯಾಗಿಪ್ಪುದು ಚೋದ್ಯ

ವೆಂಬುದೀಗ ' ಮನದ ಮೇಲೆ ಅಱಿವು. ಅಱಿವಿನ ಮೇಲೆ ಕುಱುಹು ಇದೇನೋ ' ಎಂಬ ಶಬ್ದಕ್ಕರ್ಥ. ಅಂತು ಶರಣನೆಲ್ಲಾ ಲಿಂಗವೆಯಾಗಿರ್ದನಾಗಿ, ಲಿಂಗವೆಂದಡೆಯೂ ಶರಣನೆಂದಡೆಯೂ ಲಿಂಗವೇ. ಅಂತು ಲಿಂಗಕ್ಕೂ ಶರಣಂಗೂ ಭೇದವಿಲ್ಲವೆಂಬುದೀಗ ' ನೀನೆಂಬಲ್ಲಿ ನಾನು, ನಾನೆಂಬಲ್ಲಿ ನೀನು. ನೀ ನಾನೆಂಬುದಕ್ಕೆ ತೆಱಹಿಲ್ಲವೆಂಬ ಶಬ್ದಕ್ಕರ್ಥ. ೪೩

**ವ.** ಕಾಯಾನುಭಾವಿಗಳು ಕಾಯದಲೆ ಮುಕ್ತರು. ಜೀವಾನುಭಾವಿಗಳು ಜೀವದಲೆ ಮುಕ್ತರು. ಪ್ರಾಣಾನುಭಾವಿಗಳು ಪ್ರಾಣದಲೆ ಮುಕ್ತರು. ಪವನಾನುಭಾವಿಗಳು ಪವನದಲೆ ಮುಕ್ತರು. ಇವರನೆಂತು ಸರಿಯೆಂಬೆನಯ್ಯಾ ಲಿಂಗಾನುಭಾವಿಗಳಿಗೆ ? ಸ್ವಯಂಜ್ಯೋತಿಪ್ರಕಾಶ ಲಿಂಗದಲ್ಲಿ ಸದಾಸನ್ನಿಹಿತ ಕೂಡಲಚೆನ್ನಸಂಗಾ, ನಿಮ್ಮ ಶರಣ.

**ಟೀ.** ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರಂಗಳಿಂದ ಕಾಯ ಜೀವ ಪ್ರಾಣ ಪವನಂಗಳ ಲಕ್ಷ್ಯವಿಟ್ಟು ಸಾಧಿಸುವ ಅಷ್ಟಾಂಗಯೋಗಿಗಳೆಲ್ಲರೂ ಕಾಯ ಜೀವ ಪ್ರಾಣ ಪವನಸ್ವರೂಪರೆಯಾಗಿ ಹುಟ್ಟಿ ಹೊಂದುತ್ತಿಹರು. ಅಂತಲ್ಲ ಲಿಂಗಾನುಭಾವಿಗಳು. ಮತ್ತೆಂತೆಂದೊಡೆ : ಶರಣನೆನಿಪ್ಪ ಆತ್ಮನೇ ಅಂಗವಾಗಿ, ಆ ಅಂಗದ ಪರಮಚೈತನ್ಯ ಪ್ರಕಾಶವೇ ಲಿಂಗ. ಅಂತಪ್ಪ ಸ್ವಯಂಜ್ಯೋತಿಪ್ರಕಾಶಲಿಂಗವನಱಿದು ಲಿಂಗಾಂಗಸಂಯೋಗಾನುಭಾವಿಯಾಗಿ ಲಿಂಗವೆಯಾಗಿಪ್ಪ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೪೪

**ವ.** ಜ್ಯೋತಿಯ ಬೆಳಗಿನಲ್ಲಿ ನೋಡಿ ಜ್ಯೋತಿಯ ಕಪಟವ ಕಾಬಂತೆ, ಕಣ್ಣಿಂದ ಕನ್ನಡಿಯ ನೋಡಿ ಕಂಗಳೊಳಗಣ ಕಲೆಯ ಕಾಬಂತೆ, ತನ್ನಿಂದ ತನ್ನ ನೋಡಿ ತನ್ನನಱಿಯಬೇಕು. ತನ್ನನಱಿವುದಕ್ಕೆ ದೃಷ್ಟವ ಕೈಯಲ್ಲಿ ಕೊಟ್ಟೆ. ಕಾಣದುದಕ್ಕೆ ಚಿತ್ತವ ನೆನಹಿಂಗಿತ್ತೆ. ಚಿತ್ತವು ಇಷ್ಟದಲ್ಲಿ ಅಚ್ಚೊತ್ತಿದ ಮತ್ತೆ ದೃಷ್ಟವ ಕಾಂಬುದಿನ್ನೇನು ? ಉರಿಯೊಳಗಣ ಕರ್ಪೂರ, ಅನಿಲನೊಳಗಣ ಪಾವಕ, ಶಿಲೆಯುಂಡ ಎಣ್ಣೆಗಳತೆಯುಂಟೇ ಅಯ್ಯಾ ? ಲಿಂಗವ ಮುಚ್ಚಿದ ಅಂಗಕ್ಕೆ ಜಗದ ಹಂಗಿಲ್ಲ, ಅನಂತ ಅತೀತ ನಿಷ್ಕಳಂಕ ಮಲ್ಲಿಕಾರ್ಜುನಾ !

**ಟೀ.** ಶ್ರೀಗುರುಕೃಪೆಯಿಂದ ತನ್ನ ನಿಜವಪ್ಪ ಪರಬ್ರಹ್ಮವನೆ ಇಷ್ಟಲಿಂಗವ ಮಾಡಿ ಕರಸ್ಥಲಕ್ಕೆ ಕೊಟ್ಟು, ಆ ಇಷ್ಟಲಿಂಗದ ಕಳಾಸ್ವರೂಪ ಕಂಡು ಕೂಡುವುದಕ್ಕೆ ಸುಜ್ಞಾನದಱಿವನಿತ್ತ ಕಾರಣ ಚಿತ್ತ ಲಿಂಗದಲ್ಲಿ ಸಮರಸೈಕ್ಯವನೆಯ್ದಿ ಭಿನ್ನ

ಭಾವವನಳಿದ ಶರಣನು ದೇಹಿಯಲ್ಲ. ಆ ಶರಣನು ಅಖಂಡ ಪರಿಪೂರ್ಣ ಲಿಂಗವೆಂಬುದೀ ವಚನದ ತಾತ್ಪರ್ಯಾರ್ಥ. ೪೫

ವ. ಅಂತರಂಗದೊಳಗಿರ್ದ ನಿರವಯಲಿಂಗವನು ಸಾವಯಲಿಂಗವ ಮಾಡಿ ಶ್ರೀಗುರುಸ್ವಾಮಿ ಕರಸ್ಥಲಕ್ಕೆ ತಂದುಕೊಟ್ಟ ಲಿಂಗವು ಅಂತರಂಗವ ಸಾವರಿಸಿ, ಅಂತರಂಗದ ಕರಣಂಗಳೆ ಕಿರಣಂಗಳಾಗಿ, ಆ ಬೆಳಗುವ ಚಿದಂಶಿಕವೆ ಪ್ರಾಣಲಿಂಗವು. ಆ ಮೂಲ ಚೈತನ್ಯವೇ ಭಾವಲಿಂಗವು. ಇದನರಿದು ನೋಡುವ ನೋಟ ಭಾವಪರಿಪೂರ್ಣವಾಗಿ ತಾನು ತಾನಾದಲ್ಲದೆ ಇದಿರಿಟ್ಟು ತೋರುವದಿಲ್ಲವಾಗಿ ಅಖಂಡ ಪರಿಪೂರ್ಣವಪ್ಪ ನಿಜವು ತಾನೆ ಕೂಡಲಸಂಗಮದೇವಾ!

ಟೀ. ಈ ವಚನ ಕಾಣಬಂದರ್ಥ. ೪೬

ವ. ಅಂಗದ ಕಳೆಯಲೊಂದು ಲಿಂಗವ ಕಂಡೆ. ಲಿಂಗದ ಕಳೆಯಲೊಂದು ಅಂಗವ ಕಂಡೆ. ಅಂಗಲಿಂಗಸಂದಣಿಯನರಿಸಿ ಕಂಡೆ, ನೋಡಿರೇ ! ಇಲ್ಲಿ ಐದಾನೆ ಶಿವನು ! ಒಲ್ಲಡೆ ಇರಿಸಿಕೊಳ್ಳಿರೇ ! ಕಾಯವಳಿಯದ ಮುನ್ನ ನೋಡಬಲ್ಲಡೆ ಗೊಹೇಶ್ವರಲಿಂಗಕ್ಕೆ ಬೇರೆ ಠಾವುಂಟೇ ಹೇಳಿರೇ ?

ಟೀ. ತನ್ನಾತ್ಮಾಂಗದ ಪರಮಕಳೆಯೇ ಇಷ್ಟಲಿಂಗವಾಯಿತ್ತೆಂದರಿದು ಆ ಇಷ್ಟಲಿಂಗದ ಪರಮಕಳೆಯು ಅಂಗವೇ ಆತ್ಮನೆಂದರಿದು, ಲಿಂಗಾಂಗಸಂಬಂಧದ ಭೇದವ ತನ್ನಲ್ಲಿಯೇ ಅರಿಸಿ, ಸಮ್ಯಗ್ಜ್ಞಾನದಿಂದ ಕಂಡು ಲಿಂಗವಾದ ಶರಣನು ತಾನು ಲಿಂಗವಾದ ವರ್ಮವ ಶಿವಾಪೇಕ್ಷರಾಗಿರ್ದ ಭಕ್ತಜನಂಗಳಿಗೆ ನಿರೂಪಿಸುತ್ತಿರ್ದರೆಂಬುದೀಗ ' ಅಂಗದ ಕಳೆಯಲೊಂದು ಲಿಂಗವ ಕಂಡೆ, ಲಿಂಗದ ಕಳೆಯಲೊಂದು ಅಂಗವ ಕಂಡೆ. ಅಂಗಲಿಂಗಸಂದಣಿಯನರಿಸಿ ಕಂಡೆ ನೋಡಿರೇ ' ಎಂಬ ಶಬ್ದಕ್ಕರ್ಥ. ಅಂತು ಲಿಂಗವಾದ ಶರಣನು ನಿರೂಪಿಸಿದ ಬೋಧೆ ಮತ್ತೆಂತೆಂದೊಡೆ : ದೇಹವಳಿಯದ ಮುನ್ನ ತನ್ನಂಗದೊಳಗೆ ಲಿಂಗವು ಅನನ್ಯವಾಗಿಪ್ಪುದು. ಅದ ಸಮ್ಯಗ್ಜ್ಞಾನದಿಂದ ಕಂಡರಿದು ಲಿಂಗವನಂಗದಲ್ಲಿ ಧರಿಸಿ, ಭಿನ್ನವಳಿದು ಇರಬಲ್ಲ ಶರಣನೆಲ್ಲಾ ಲಿಂಗವೆಯಾಗಿಪ್ಪನು. ಅಂತಪ್ಪ ಶರಣನಲ್ಲಿ ಅಲ್ಲದೆ ಲಿಂಗವು ಮತ್ತೆಲ್ಲಿಯೂ ಇರನೆಂದು ನಿರೂಪಿಸಿದನೆಂಬುದೀಗ ' ಇಲ್ಲಿ ಐದಾನೆ ಶಿವನು ! ಬಲ್ಲರೆ ಇರಿಸಿಕೊಳ್ಳಿರೇ ! ಕಾಯವಳಿಯದ ಮುನ್ನ ನೋಡಬಲ್ಲರೆ ಗೊಹೇಶ್ವರಲಿಂಗಕ್ಕೆ ಬೇರೆ ಠಾವುಂಟೇ ಹೇಳಿರೇ ' ಎಂಬ ಶಬ್ದಕ್ಕರ್ಥ. ೪೭

ವ. ಅಱಿವಿನ ಆಪ್ಯಾಯನಕ್ಕೆ ಅನುಭಾವವೇ ತೃಪ್ತಿ. ಅಱಿವು ನೆಱೆ ಕೂಡಿ ಆಕಾರವೇ ಪ್ರಾಣವಾಗಿ ವಿಶ್ರಮಿಸಿದ ಬಳಿಕ ಶ್ರೀಗುರು ಕೃಪೆಯ ಮಾಡಿದ ಪ್ರಾಣಲಿಂಗದ ಘನವೆಂತೆಂದೊಡೆ : ಮತ್ಸ್ಯ ನುಂಗಿದ ಮಾಣಿಕ್ಯದಂತೆ, ಮುತ್ತು ನುಂಗಿದ ನೀರಿನಂತೆ, ಕಣ್ಣಾಲಿ ನುಂಗಿದ ನೋಟದಂತೆ. ಬಯಲನೊಳಕೊಂಡ ಬ್ರಹ್ಮಾಂಡದೊಳಗಿಪ್ಪ ಸ್ವಯಾನುಭಾವಿಗಳ ಅನುಭಾವವ ತೋಱೆ ಬದುಕಿಸಾ ಕೂಡಲಸಂಗಮದೇವಾ !

ಟೀ. ಸಮ್ಯಗ್ಜ್ಞಾನೋದಯವಾದ ಶರಣನಱಿವಿಂಗೆ ಲಿಂಗದ ಬಯಕೆ ಘನವಾಗಿಹುದೆಂಬುದೀಗ ' ಅಱಿವಿನ ಆಪ್ಯಾಯನ ' ವೆಂಬ ಶಬ್ದಕ್ಕರ್ಥ. ಅಂತು ಶಿವಾಪೇಕ್ಷನಾಗಿರ್ದ ಶರಣಂಗೆ ಗುರುಕೃಪೆಯಿಂದ ಆತ್ಮಾಂತರ್ಗತವಾಗಿರ್ದ ಪರಮ ಚಿತ್ಕಲಾಲಿಂಗವು ಬಹಿಷ್ಕರಿಸಿ ಕರಸ್ಥಲಕ್ಕೆ ಬಂದು, ಸರ್ವಾಂಗವನೊಳಕೊಂಡು ಶರಣನ ಅಱಿವಿಂಗೆ ಪ್ರತ್ಯಕ್ಷವಾಗಿ, ಲಿಂಗಾಂಗಸಂಗದನುಭವ ನೆಲೆಗೊಂಡು, ಶರಣನ ಅಱಿವಿನ ಆಪ್ಯಾಯನ ಅಡಗಿತ್ತೆಂಬುದೀಗ ' ಅಱಿವಿನ ಆಪ್ಯಾಯನಕ್ಕೆ ಅನುಭಾವವೇ ತೃಪ್ತಿ ' ಯೆಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಗದನುಭವದಲ್ಲಿ ಅಱಿವಿಂಗೆ ತೃಪ್ತಿಯಾಗಿ, ಭಿನ್ನಭಾವವಳಿದು, ಅಭಿನ್ನಜ್ಞಾನಿಯಾದ ಶರಣನ ಪ್ರಾಣಾಂಗವೆಲ್ಲಾ ಲಿಂಗಸ್ವರೂಪೆಯಾಗಿಪ್ಪುದೆಂಬುದೀಗ ' ಅಱಿವು ನೆಱೆ ಕೂಡಿ ಆಕಾರವೇ ಪ್ರಾಣವಾಗಿ ' ಎಂಬ ಶಬ್ದಕ್ಕರ್ಥ. ಅಂತು ದೇಹವಿರ್ದಂತೆ ಪ್ರಾಣಲಿಂಗವಾಗಿರ್ದ ಶರಣನ ಮಹತ್ವವೆಂತಿರ್ಪುದೆಂದೊಡೆ : ಮತ್ಸ್ಯ ನುಂಗಿದ ಮಾಣಿಕ್ಯದ ಪ್ರಭೆ ಆ ಮತ್ಸ್ಯನಂಗದೊಳಗೆಲ್ಲಾ ತುಂಬಿ, ಸರ್ವೇಂದ್ರಿಯಂಗಳಲ್ಲಿ ಪ್ರಕಾಶಿಸುತ್ತಿರ್ಪಂತೆ, ಶರಣನ ಪ್ರಾಣಲಿಂಗದ ಚಿತ್ಪ್ರಭೆ ಶರಣನಂಗದೊಳಗೆ ಪರಿಪೂರ್ಣವಾಗಿ ಸರ್ವೇಂದ್ರಿಯಂಗಳಲ್ಲಿ ಪ್ರಕಾಶಿಸುತ್ತಿಹುದೆಂಬುದೀಗ ' ಶ್ರೀಗುರು ಕೃಪೆ ಮಾಡಿದ ಪ್ರಾಣಲಿಂಗದ ಘನವೆಂತೆಂದೊಡೆ : ಮತ್ಸ್ಯ ನುಂಗಿದ ಮಾಣಿಕ್ಯದಂತೆ ' ಎಂಬ ಶಬ್ದಕ್ಕರ್ಥ. ಮತ್ತೆಂತೆಂದೊಡೆ : ಉದಕವೆ ಬಲಿದು ಮುತ್ತಾಗಿ ಮರಳಿ ಉದಕವಾಗದಂತೆ, ವಾಯುಪ್ರಾಣವೇ ಲಿಂಗಪ್ರಾಣವಾದ ಶರಣನು ಮರಳಿ ವಾಯುಪ್ರಾಣಿಯಾಗನೆಂಬುದೀಗ ' ಮುತ್ತು ನುಂಗಿದ ನೀರಿನಂತೆ ' ಎಂಬ ಶಬ್ದಕ್ಕರ್ಥ. ಮತ್ತೆಂತೆಂದೊಡೆ : ಕಣ್ಣಾಲಿಯೊಳಗಿಪ್ಪ ದಿವ್ಯತೇಜವು ಸರ್ವ ಜಗತ್ತಿನ ಸ್ವರೂಪುಗಳ ಕುರೂಪುಗಳ ಕಾಣುತ್ತಿಹುದು. ತನ್ನ ರೂಪನಾರಿಗೆಯೂ ಕಾಣಿಸಿಕೊಳ್ಳದೆ ಇಹುದು. ಅದು ಹೇಂಗೆ ಹಾಂಗೆ ಶರಣ ತನ್ನ ಚಿತ್ಪ್ರಭಾಧ್ಯಕ್ಕಿಂದ ಜಗದಾತ್ಮರ ಅಂತರಂಗದ ಅಱಿವು ಮಱವೆಯ ಕಾಣುತ್ತಿಹನಲ್ಲದೆ ಶರಣನಂತರಂಗವೆಲ್ಲಾ

ಚಿತ್ರಭಾಲಿಂಗವೆಯಾಗಿಪ್ಪುದ ಜಗದಾತ್ಮರು ಅಱಿಯರೆಂಬುದೀಗ ‘ ಕಣ್ಣಾಲಿ ನುಂಗಿದ ನೋಟದಂತೆ ’ ಎಂಬ ಶಬ್ದಕ್ಕರ್ಥ. ಪ್ರಪಂಚು ಬ್ರಹ್ಮಾಂಡಂಗಳೆಲ್ಲಾ ಹುಸಿತೋಱಿಕೆ. ಆ ಹುಸಿತೋಱಿಕೆಯೆಂಬುದೇ ‘ ಬಯಲು ’ ಎಂಬ ಶಬ್ದಕ್ಕರ್ಥ. ಅಂತು ಹುಸಿತೋಱಿಕೆಯೆಂಬ ಬಯಲನೊಳಕೊಂಡಿಪ್ಪುದು ಚಿದ್ಬ್ರಹ್ಮಾಂಡ ವಾದ ಕಾರಣ ‘ ಬಯಲನೊಳಕೊಂಡ ಬ್ರಹ್ಮಾಂಡ ’ ವೆಂಬ ಶಬ್ದಕ್ಕರ್ಥ. ಅಂತಪ್ಪ ಚಿದ್ಬ್ರಹ್ಮಾಂಡವೇ ಶರಣನ ಸ್ವಯಜ್ಞಾನಪ್ರಕಾಶವಾಗಿ ಶರಣನ ಸರ್ವಾಂಗವ ನೊಳಕೊಂಡು ಬೆಳಗುತ್ತಿಪ್ಪ ಕಾರಣ ‘ ಬ್ರಹ್ಮಾಂಡದೊಳಗಿಪ್ಪ ’ ನೆಂಬ ಶಬ್ದಕ್ಕರ್ಥ. ಅಂತು ಶರಣ ತನ್ನ ಸ್ವಯಜ್ಞಾನದಿಂದ ತನ್ನ ನಿಜವೇ ಲಿಂಗವೆಂದಱಿದು ಲಿಂಗಾಂಗ ಸಂಗದನುಭಾವವಳವಟ್ಟು ಲಿಂಗವೆಯಾಗಿಪ್ಪರು ಶರಣರೆಂಬುದೀಗ ‘ ಸ್ವಯಾನು ಭಾವಿಗಳೆ ’ ಂಬ ಶಬ್ದಕ್ಕರ್ಥ. ಅಂತು ಸ್ವಯಾನುಭಾವಿಗಳಾಗಿಪ್ಪ ಶರಣರ ಅನು ಭಾವವನಱಿವುದು ಶಿವಕೃಪೆಯಾದಾತಂಗಲ್ಲದಿಲ್ಲವೆಂಬುದೀಗ ‘ ಸ್ವಯಾನುಭಾವಿ ಗಳ ಅನುಭಾವವ ತೋಱಿ ಬದುಕಿಸಾ ಕೂಡಲಸಂಗಮದೇವಾ ’ ಎಂಬ ಶಬ್ದ ಕ್ಕರ್ಥ. ೪೮

ವ. ಮೊಲೆಯಿಲ್ಲದಾವಿಂಗೆ ತಲೆ ಮೊಲೆ ಕಂಡಾ ! ಮನದಲ್ಲಿ ದಣಿಯುಣ್ಣು ಕಂಡಾ ! ತಾ ಸತ್ತು ಹಾಲ ಕುಡಿಯಬಲ್ಲರೆ ಗೊಹೇಶ್ವರ ತಾನೆ ಕಂಡಾ.

ಟೀ. ಸಂಸಾರ ವಿಷಯ ರಸವ ಧರಿಸಿಕೊಂಡಿಪ್ಪುದೆಂಬುದೀಗ ದೇಹೋಹಂ ಮಮತೆಗಳಾದ ಕಾರಣ ಅಹಂ ಮಮತೆಗಳೆಂಬುವೀಗ ‘ ಮೊಲೆ ’ ಯೆಂಬ ಶಬ್ದ ಕ್ಕರ್ಥ. ಅಂತಪ್ಪ ದೇಹೋಹಂ ಮಮತೆಗಳನಳಿದು ಶಿವಜ್ಞಾನಾತ್ಮನಾಗಿಪ್ಪುದೇ ಸುರಧೇನುವೆಂಬುದೀಗ ‘ ಮೊಲೆಯಿಲ್ಲದಾವೆ ’ ಂಬ ಶಬ್ದಕ್ಕರ್ಥ. ಅಂತು ಆತ್ಮಂಗೆ ಸುಜ್ಞಾನವೆಂಬುದೇ ತಲೆ. ಆ ತಲೆಯೆಂಬ ಸುಜ್ಞಾನವೇ ಶಿವಾಮೃತವ ಧರಿಸಿ ಕೊಂಡಿಪ್ಪ ಸ್ತನವಾದ ಕಾರಣ ‘ ತಲೆ ಮೊಲೆ ಕಂಡಾ ’ ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನವೆಂಬ ಸ್ತನವಾದ ಮುಖದಲ್ಲಿ ಶಿವೋಹಂ ಎಂಬ ಶಿವಾಮೃತ ವಿಪ್ಪುದಾಗಿ ಶಿವೋಹಂ ಎಂಬ ಅಮೃತವ ಆ ಸುಜ್ಞಾನ ಮುಖದಲ್ಲಿಯೇ ಮನವು ಗ್ರಹಿಸಿ, ಶಿವೋಹಂ ಎಂಬ ಪರಿಪೂರ್ಣಭಾವ ನೆಲೆಗೊಳಬೇಕೆಂಬುದೀಗ ‘ ಮನದಲ್ಲಿ ದಣಿಯುಣ್ಣು ಕಂಡಾ ’ ಎಂಬ ಶಬ್ದಕ್ಕರ್ಥ. ಅಂತು ಮನಕ್ಕೆ ಜ್ಞಾನಮುಖದಿಂದ ಶಿವೋಹಂ ಎಂಬಲ್ಲಿ ಜೀವೋಹಂ ಭಾವವಳಿದು ಶಿವೋಹಂ ಎಂಬ ಶಿವಾನಂದಾ ಮೃತವ ಗ್ರಹಿಸಿ ಭಿನ್ನಭಾವವಿಲ್ಲದಿರ್ದಡೆ ತಾನೆ ಶಿವನೆಂಬುದೀಗ ‘ ತಾ ಸತ್ತು ಹಾಲ ಕುಡಿಯಬಲ್ಲರೆ ಗೊಹೇಶ್ವರ ತಾನೆ ಕಂಡಾ ’ ಎಂಬ ಶಬ್ದಕ್ಕರ್ಥ. ೪೯

ವ. ಸ್ಥೂಲ ಸೂಕ್ಷ್ಮದೊಳಗೆ ಬೆಳಗು ಮಹಾಬೆಳಗಾಗಿ, ಹೊಳೆವ ಜ್ಞಾನ ಜ್ಯೋತಿದಳಗಳೆಲ್ಲವ ಮೀಱಿ ನೆಳಲ ನುಂಗಿದ ಬಿಸಿಲಿನೊಳಗೆ ಚಂದ್ರ ಮನುದಯ. ಜಲಧಿವಳಯದ ಬೆಳಸ ಹೇಳಲಾರಳವಲ್ಲ. ಆಳು ಆಳ್ದನ ನುಂಗಿ, ಈರೇಳು ಭುವನದ ದಾಂಟಿ, ಗೊಹೇಶ್ವರ ನಿಂದ ನಿಲವು ಹೊಱಗು ಒಳಗನೆ ನುಂಗಿತ್ತು.

ಟೀ. ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯಂಗಳೊಳಗಿಪ್ಪ ಆತ್ಮನಲ್ಲಿ ಜ್ಞಾನಪ್ರಕಾಶವಿಪ್ಪುದು. ಅಂತಿಪ್ಪ ಜ್ಞಾನವು ಶಿವಕೃಪೆಯಿಂದ ಪ್ರಕಾಶಿಸಿ ಶರಣನ ಬಾಹ್ಯಾಭ್ಯಂತರದೊಳಗೆ ಬೆಳಗುತ್ತಿದ್ದಿತೆಂಬುದೀಗ 'ಸ್ಥೂಲ ಸೂಕ್ಷ್ಮದೊಳಗೆ ಬೆಳಗು ಮಹಾಬೆಳಗಾಗಿ' ಎಂಬ ಶಬ್ದಕ್ಕರ್ಥ. ಅಂತು ಶರಣನ ಅಂಗದಲ್ಲಿ ಬೆಳಗುವ ಜ್ಞಾನಜ್ಯೋತಿಯ ಪ್ರಭೆ ನವಚಕ್ರಂಗಳೆಲ್ಲವನ್ನೂ ಆವಗ್ರಹಿಸಿ ಮೀಱಿ ತೋಱು ತ್ತಿದ್ದಿತೆಂಬುದೀಗ 'ಹೊಳೆವ ಜ್ಞಾನದ ಜ್ಯೋತಿದಳಗಳೆಲ್ಲವ ಮೀಱಿತ್ತು' ಎಂಬ ಶಬ್ದಕ್ಕರ್ಥ. ಅಂತಾದ ಜ್ಞಾನಪ್ರಕಾಶವೆಂಬುದೇ ಬಿಸಿಲು. ನೆಳಲೆಂದರೆ ಮನಸ್ಸು. ಅಂತಪ್ಪ ಸುಜ್ಞಾನಪ್ರಕಾಶದೊಳಗೆ ಮನದ ಮಱವೆಯಳಿದು ಹೋಯಿತ್ತೆಂಬುದೀಗ 'ನೆಳಲ ನುಂಗಿದ ಬಿಸಿಲು' ಎಂಬ ಶಬ್ದಕ್ಕರ್ಥ. ಅಂತಪ್ಪ ಸುಜ್ಞಾನಪ್ರಕಾಶ ದೊಳಗೆ ಚಿದಮೃತಸ್ವರೂಪನಪ್ಪ ಚಿತ್ಕಲಾಲಿಂಗವು ಉದಯಿಸಿ ಶರಣನ ಕರಸ್ಥಲ ದಲ್ಲಿ ಬೆಳಗುತ್ತಿದ್ದಿತೆಂಬುದೀಗ 'ಬಿಸಿಲಿನೊಳಗೆ ಚಂದ್ರಮನುದಯ' ವೆಂಬ ಶಬ್ದಕ್ಕರ್ಥ. ಜಲಧಿವಳಯವೆಂದರೆ ಅಪ್ಪುಮಯವಾದ ದೇಹ. ಅಂತಪ್ಪ ದೇಹಕ್ಕೆ ಚಿದಮೃತಲಿಂಗವು ಸಂಬಂಧವಾಯಿತ್ತಾಗಿ ಆ ಅಂಗದೊಳಹೊಱಗೆಲ್ಲಾ ಲಿಂಗವೇ ತುಂಬಿ ಸರ್ವೇಂದ್ರಿಯಂಗಳಲ್ಲಿ ಆಚಾರಾದಿ ಮಹಾಲಿಂಗಂಗಳೆಂಬ ಶಾಖೆವರಿದು ಬೆಳೆದು ಸರ್ವಾಂಗಲಿಂಗಮಯವಾಗಿರ್ದ ಶರಣನ ಲಿಂಗದ ಬೆಳಸಿನ ಘನವನಾರೂ ಉಪಮಿಸಿ ಹೇಳಬಾರದೆಂಬುದೀಗ 'ಜಲಧಿವಳಯದ ಬೆಳಸ ಹೇಳಲಾರಳವಲ್ಲ' ವೆಂಬ ಶಬ್ದಕ್ಕರ್ಥ. ಅಂತು ಸರ್ವಾಂಗವೆಲ್ಲಾ ಲಿಂಗವಾಗಿ ಭಿನ್ನವಳಿದ ಶರಣನು ತಾನೇ ಶಿವನೆಂದು ಶಿವತ್ವವ ಬೇಱಿಡದೆಯಿರ್ದನೆಂಬುದೀಗ 'ಆಳು ಆಳ್ದನ ನುಂಗಿ' ಯೆಂಬ ಶಬ್ದಕ್ಕರ್ಥ. ಅಂತು ಹದಿನಾಲ್ಕು ಲೋಕಂಗಳನೊಳಕೊಂಡಿಪ್ಪ ಮಹಾ ಲಿಂಗವನವಗ್ರಹಿಸಿ ಲಿಂಗವಾಗಿರ್ದ ಶರಣನೆಂಬುದೀಗ 'ಈರೇಳು ಭುವನವ ದಾಂಟಿ' ಯೆಂಬ ಶಬ್ದಕ್ಕರ್ಥ. ಅಂತು ಆತ್ಮಾಂಗದೊಳಗಿಹ ಚಿತ್ಪರಮಲಿಂಗವ ಕಾಣದೆ ದೇಹೋಹಂ ಎನುತಿಪ್ಪ ಜೀವಾತ್ಮವೆಂಬುದೇ ಹೊಱಗು. ಅಂತು ಹೊಱ ಗಾಗಿರ್ದ ಜೀವಾತ್ಮನು ತನ್ನಂತರಂಗದೊಳಗಿರ್ದ ಲಿಂಗವನಱಿದು ಅವಗ್ರಹಿಸಿ ಲಿಂಗವಾದನೆಂಬುದೀಗ 'ಹೊಱಗು ಒಳಗನೆ ನುಂಗಿತ್ತು' ಎಂಬ ಶಬ್ದಕ್ಕರ್ಥ. ೫೦

ವ. ವಾಮಭಾಗದಲೊಂದು ಶಿಶು ಹುಟ್ಟಿತ್ತ ಕಂಡೆನು ! ಜೋ ಜೋ ಯೆಂದು ಜೋಗುಳವಾಡಿತ್ತ ಕಂಡೆನು ! ಜೋಗುಳವಾಡಿದ ಶಿಶು ಅಲ್ಲಿಯೇ ಲಯವಾಯಿತ್ತು. ಗೊಹೇಶ್ವರನೆಂಬ ಶಬ್ದ ಅಲ್ಲಿಯೇ ಲಯವಾಯಿತ್ತು.

ಟೀ. ವಾಮಭಾಗವೆಂದರೆ ಶಕ್ತಿಭಾಗ. ಅಂತು ಶಕ್ತಿಭಾಗವಪ್ಪ ಚಿಚ್ಛಕ್ತಿ ಸ್ವರೂಪನಾದ ಶರಣನ ಅಂತರಂಗದಲ್ಲಿರ್ದ ಚಿತ್ಕಲಾಲಿಂಗವು ಉದಯಿಸಿ, ಶರಣನ ವಾಮಕರದಲ್ಲಿ ನೆಲೆಗೊಂಡು ಪ್ರಸನ್ನವಾಗಿದ್ದಿತೆಂಬುದೀಗ 'ವಾಮಭಾಗದ ಲೊಂದು ಶಿಶು ಹುಟ್ಟಿತ್ತ ಕಂಡೆನು' ಎಂಬ ಶಬ್ದಕ್ಕರ್ಥ. ಅಂತು ಉದಯಿಸಿದ ಕರಸ್ಥಲದಲ್ಲಿ ಪ್ರಸನ್ನವಾಗಿರ್ದ ಚಿತ್ಕಲಾಲಿಂಗವು ಶರಣನ ಸರ್ವಾಂಗವನವಗ್ರಹಿಸಿ ಶರಣನೆಲ್ಲಾ ಲಿಂಗವೆಯಾಗಿ ಶಿವೋಹಂ ಶಿವೋಹಂ ಎಂದು ಶಿವನ ಅದ್ವಯನಾಮ ಸ್ಮರಣೆಯ ಸ್ತುತಿಸುತ್ತಿರ್ದ ಶರಣನೆಂಬುದೀಗ 'ಜೋ ಜೋ ಎಂದು ಜೋಗುಳ ವಾಡಿತ್ತ ಕಂಡೆನು' ಎಂಬ ಶಬ್ದಕ್ಕರ್ಥ. ಅಂತು ಶರಣ ಶಿವೋಹಂ ಎಂದಲ್ಲಿ ಶರ ಣಂಗೆ ಲಿಂಗವು ಭಿನ್ನವಾಗಿ ಕಾಣಿಸದಿರ್ದನೆಂಬುದೀಗ 'ಜೋಗುಳವಾಡಿದ ಶಿಶು ಅಲ್ಲಿಯೇ ಲಯವಾಯಿತ್ತು' ಎಂಬ ಶಬ್ದಕ್ಕರ್ಥ ಅಂತು ಶರಣ ತಾನು ಲಿಂಗ ವಾದ ಬಳಿಕ ಲಿಂಗವು ತಾನೆಂಬ ನುಡಿ ಲಿಂಗಕ್ಕಿಲ್ಲವೆಂದರಿದು, ಶಿವೋಹಂ ಎಂಬ ನುಡಿಯಡಗಿ ಲಿಂಗವೆಯಾಗಿರ್ದ ಶರಣನೆಂಬುದೀಗ 'ಗೊಹೇಶ್ವರನೆಂಬ ಶಬ್ದ ವಲ್ಲಿಯೆ ಲಯವಾಯಿತ್ತು' ಎಂಬ ಶಬ್ದಕ್ಕರ್ಥ. ೫೧

ವ. ಹರಿಯ ಬಾಯ ಹಾಲು, ಉರಿಯ ಕೈಯ ಬೆಣ್ಣೆ, ಗಿರಿಯಮೇಲಣ ಶಿಶು ಹರಿದಾಡುತ್ತಿದೆ ಕರೆಯಿಂ ಭೋ ! ಸುರಪತಿಯ ಗಜವೇಱಿ ಮರಳಿ ಹೋಹನ ಕಂಡು ಕರೆಯಿಂ ಭೋ ! ಹರನ ಮಂತಣೆಯ ಶೂಲದಲ್ಲಿ ಶಿರದಲುಂಗುಟವೂರಿ ನೆರೆವುತ್ತಿರ್ದುದ ನಾನೇನೆಂಬೆ ಗೊಹೇಶ್ವರಾ !

ಟೀ. ಹರಿಯೆಂದಡೆ ಮನಸ್ಸು. ಅಂತಪ್ಪ ಮನದ ಸದ್ವಿವೇಕ ಮುಖದಲ್ಲಿ ಜ್ಞಾನಾಮೃತವಿಹುದೆಂಬುದೀಗ 'ಹರಿಯ ಬಾಯ ಹಾಲು' ಎಂಬ ಶಬ್ದಕ್ಕರ್ಥ. ಅಂತಪ್ಪ ಜ್ಞಾನಾಮೃತದ ಚಿತ್‌ಪ್ರಕಾಶವೇ 'ಉರಿ'ಯೆಂಬ ಶಬ್ದಕ್ಕರ್ಥ. ಆ ಸುಜ್ಞಾ ನಾಮೃತದಲ್ಲಿಪ್ಪ ನವನೀತವೀಗ ಸಚ್ಚಿದಾನಂದಲಿಂಗವಾದ ಕಾರಣ 'ಉರಿಯ ಕೈಯ ಬೆಣ್ಣೆ' ಯೆಂಬ ಶಬ್ದಕ್ಕರ್ಥ. ಅಂತು ಮನದ ಸದ್ವಿವೇಕಮುಖದಲ್ಲಿ ಜ್ಞಾನಾಮೃತವ ಸ್ವೀಕರಿಸಿದ ಶರಣನ ಸರ್ವಾಂಗವೆಲ್ಲಾ ಜ್ಞಾನಪ್ರಕಾಶವಾಗಿರಲು

ಅಂತಪ್ಪ ಸುಜ್ಞಾನಪ್ರಕಾಶದಿಂದ ಅಖಂಡ ಚಿಲ್ಲಿಂಗವ ಕಂಡು, ಆ ಲಿಂಗವೇ ತಾನೆಂದಱಿದು ಶಿವೋಹಂ ಎಂದನಾಗಿ, ಅಂತು ಶಿವೋಹಂ ಎಂಬ ಹಮ್ಮೀಗ 'ಗಿರಿ' ಯೆಂಬ ಶಬ್ದಕ್ಕರ್ಥ. ಅಂತು ಶಿವೋಹಂ ಎಂಬ ಜ್ಞಾನಮಾರ್ಗದಲ್ಲಿ ಚರಿಸುತ್ತಿರ್ದ ಶರಣನೆಂಬುದೀಗ ' ಗಿರಿಯ ಮೇಲಣ ಶಿಶು ಹರಿದಾಡುತ್ತಿದೆ ' ಎಂಬ ಶಬ್ದಕ್ಕರ್ಥ. ' ಸುರಪತಿ ' ಯೆಂದರೆ ಶಿವನೆಂಬುದಕ್ಕರ್ಥ. ' ಮದಗಜ ' ವೆಂದರೆ ಚಿದಹಂಕಾರವೆಂಬುದಕ್ಕರ್ಥ. ಅಂತು ಚಿದಹಂಕಾರವಿಡಿದು ಶಿವ ತಾನೆಂಬ ಶರಣನೆಂಬುದೀಗ ' ಸುರಪತಿಯ ಗಜವೇಱಿ ' ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನು ಅನಾದಿಯಲ್ಲಿ ಶಿವಾಂಶಿಕನಪ್ಪ ಚಿದಾತ್ಮನು ಜೀವಾತ್ಮನಾಗಿರ್ದು ಮರಳಿ ಶಿವತ್ವವನೆಯ್ದುತ್ತಿರ್ದನೆಂಬುದೀಗ ' ಮರಳಿ ಹೋಹ ' ನೆಂಬ ಶಬ್ದಕ್ಕರ್ಥ. ಅಂತು ಶರಣ ಮರಳಿ ಶಿವತ್ವವನೆಯ್ದುವಲ್ಲಿ ತಾನು ಶಿವನೆಂದು ತನ್ನ ಕಂಡು, ತನ್ನ ಶಿವನಾಮವ ಬಿಡದೆ ಸ್ಮರಿಸುತ್ತಿರಬೇಕೆಂದು ತನ್ನ ಅಱಿವಿಗೆ ಎಚ್ಚಱಿ ಹೇಳಿದ ಶರಣನೆಂಬುದೀಗ 'ಮರಳಿ ಹೋಹನ ಕಂಡು ಕರೆಯಿಂ ಭೋ' ಎಂಬ ಶಬ್ದಕ್ಕರ್ಥ. ಅಂತು ಶಿವನಲ್ಲಿ ಅಭಿನ್ನದೇಕೀಭಾವವೆಂಬುದೀಗ ' ಹರನ ಮಂತಣಿಯ ಶೂಲ ' ವೆಂಬ ಶಬ್ದಕ್ಕರ್ಥ. ಅಂತು ಏಕೀಭಾವ ಘಟಿಸಿಪ್ಪ ಅಭಿನ್ನಜ್ಞಾನವೆಂಬುದೀಗ 'ಶಿರಸ್ಸೆ' ಂಬ ಶಬ್ದಕ್ಕರ್ಥ. ಅಂತು ಶಿವ ತಾನೆಂಬ ಅಭಿನ್ನದೇಕೀಭಾವ ಘಟಿಸಿದ ಮಹಾಜ್ಞಾನದಲ್ಲಿ ಭಕ್ತಿಯಾಚಾರವ ನೆಲೆಗೊಳಿಸಿದ ಶರಣ. ಆ ನೆಲೆಗೊಂಡ ಕ್ರಿಯಾಚಾರವೇ ಉಂಗುಷ್ಟವೆಂಬುದೀಗ ' ಶಿರದಲುಂಗುಟವೂರಿ ' ಯೆಂಬ ಶಬ್ದಕ್ಕರ್ಥ. ಅಂತು ಶಿವೋಹಂಭಾವದ ಅಱಿವು ದಾಸೋಹಂಭಾವದಿಂದ ನಿರಹಂಭಾವವನೆಯ್ದಿ ಲಿಂಗವಾದ ಶರಣನ ಭಕ್ತಿಕೂಟವನುಪಮಿಸಿ ಹೇಳಬಾರದೆಂಬುದೀಗ ' ಶಿರದಲುಂಗುಟವೂರಿ ನೆರೆವುತ್ತಿರ್ದುದ ನಾನೇನೆಂಬೆ ' ನೆಂಬ ಶಬ್ದಕ್ಕರ್ಥ. ೫೨

ವ. ಬಂದೂ ಬಾರದು, ಹೊಂದಿಯೂ ಹೊಂದದು. ನಿಂದೂ ನಿಲ್ಲದು. ನಿಲ್ಲದ ಪರಿಯ ನೋಡಾ ! ಬಿಂದು ನಾದವ ನುಂಗಿ ಮತ್ತೊಂದು ಅಧಿಕವುಂಟೇ ? ನವಖಂಡ ಪೃಥ್ವಿಯನೊಳಕೊಂಡ ಅಗಮ್ಯ ಸನ್ಮತ ಸುಖವಿರಲು ಗೊಹೇಶ್ವರನ ಬೇಱೆ ಅಱಿಸಲುಂಟೇ ?

ಟೀ. ಅಂಗದಲ್ಲಿ ಸರ್ವಚೈತನ್ಯವಾಗಿಪ್ಪ ಪರಬ್ರಹ್ಮವು ಜ್ಞಾನಿಗಳ ಜ್ಞಾನದೃಕ್ಕಿಗೆ ಕಾಣಬಹುದಲ್ಲದೆ ಅದು ಕುಱುಹಿಂಗೆ ಬಾರದೆಂಬುದೀಗ ' ಬಂದೂ ಬಾರದೆ ' ಂಬ ಶಬ್ದಕ್ಕರ್ಥ. ಅಂತು ಪರಬ್ರಹ್ಮವು ದೇಹೇಂದ್ರಿಯಂಗಳೊಳಗೆ ಪರಿಪೂರ್ಣವಾಗಿ ಹೊಂದಿರ್ದು, ಆ ದೇಹೇಂದ್ರಿಯಂಗಳ ತಾಗು ನಿರೋಧಂಗಳ ಹೊದ್ದದೆ ಇಹುದೆಂಬುದೀಗ ' ಹೊಂದಿಯೂ ಹೊಂದದು ' ಎಂಬ ಶಬ್ದಕ್ಕರ್ಥ.

ಅಂತು ಪರಬ್ರಹ್ಮವು ಸರ್ವ ದೇಹಿಗಳಿಗೆ ತಾನೇ ಆಶ್ರಯವಾಗಿರ್ದು ತಾನು ಸುಖ ದುಃಖಂಗಳಿಗೆ ಅನಾಶ್ರಯವಾಗಿಹನೆಂಬುದೀಗ 'ನಿಂದೂ ನಿಲ್ಲದ ಪರಿಯ ನೋಡಾ' ಎಂಬ ಶಬ್ದಕ್ಕರ್ಥ. ಅಂತು ಸರ್ವ ದೇಹಿಗಳೊಳಗಿರ್ದು ಹೊಂದಿಯೂ ಹೊಂದ ದಿಪ್ಪ ಪರಿಪೂರ್ಣ ಚೈತನ್ಯಲಿಂಗವೇ ನಾದಸ್ವರೂಪು. ಆ ನಾದ ಚೈತನ್ಯಲಿಂಗವ ಜ್ಞಾನಮುಖದಿಂದ ಅವಗ್ರಹಿಸಿದ ಶರಣನೇ ಚಿದಂಗಸ್ವರೂಪನಪ್ಪ ಚಿದ್ಬಿಂದುವಾದ ಕಾರಣ 'ಬಿಂದು ನಾದವ ನುಂಗಿ' ಯೆಂಬ ಶಬ್ದಕ್ಕರ್ಥ. ಅಂತು ಅಖಂಡ ಚೈತನ್ಯಲಿಂಗವನವಗ್ರಹಿಸಿ ಶರಣನೆಲ್ಲಾ ಲಿಂಗವಾದ ಬಳಿಕ ಲಿಂಗದಿಂದ ಮೇಲೆ ಪರವಾದ ವಸ್ತುವೊಂದಿಲ್ಲವೆಂಬುದೀಗ 'ಮತ್ತೊಂದು ಅಧಿಕವುಂಟೇ' ಎಂಬ ಶಬ್ದಕ್ಕರ್ಥ. ಅಂತು ಅನಂತ ಬ್ರಹ್ಮಾಂಡಗಳನೊಳಕೊಂಡಿಪ್ಪ ಅಖಂಡ ಪರಿಪೂರ್ಣ ವಸ್ತು ತಾನೆಯಾಗಿರಲು ಬೇಱೆ ಪರಬ್ರಹ್ಮವನಱಸಲಿಲ್ಲವೆಂಬುದೀಗ 'ನವಖಂಡ ಪೃಥ್ವಿಯನೊಳಕೊಂಡ ಅಗಮ್ಯ ಸನ್ಮತ ಸುಖವಿರಲು ಗೊಹೇಶ್ವರನ ಬೇಱೆ ಅಱಸಲುಂಟೇ' ಎಂಬ ಶಬ್ದಕ್ಕರ್ಥ. ೫೩

ವ. ಪ್ರಾಣಲಿಂಗ ಪರಾಪರವೆಂದಱಿದು, ಅಣು ರೇಣು ತೃಣ ಕಾಷ್ಠದಲ್ಲಿ ಕೂಡೆ ಪರಿಪೂರ್ಣ ಸದಾಶಿವನೆಂದಱಿದು, ಅಂತು ಕ್ಷಣವೇಧಿ ಅಂತ ರಂಗವ ವೇಧಿಸಲ್ಕೆ ಅಗಣಿತ ಅಕ್ಷೇಶ್ವರನ ತಾನೆಂದಱಿದು, ಪ್ರಣವ ಪ್ರಭೆಯ ಮೇಲಣ ಪರಂಜ್ಯೋತಿ ತಾನೆಂದಱಿದ ಕಾರಣ ಗೊಹೇಶ್ವರಾ ನಿಮ್ಮ ಶರಣನುಪಮಾತೀತನು!

ಟೀ. ಅಖಂಡ ಪರಿಪೂರ್ಣ ಪ್ರಾಣಸ್ವರೂಪನಪ್ಪ ಪರವಸ್ತು ತಾನೆ ತನ್ನ ಸ್ವಲೀಲೆಯಿಂದ ಲಿಂಗಾಂಗವೆರಡಾಯಿತ್ತು. ಅಂತಾದ ಎರಡಱೊಳಗೆ ಲಿಂಗವೇ ಪರ, ಅಂಗವೇ ಅಪರ. ಇಂತಪ್ಪ ಆತ್ಮಾಂಗದ ಸ್ವರೂಪ ತಾನೆಂಬುದನಱಿದ ಶರಣ ನೆಂಬುದೀಗ 'ಪ್ರಾಣಲಿಂಗ ಪರಾಪರವೆಂದಱಿದು' ಯೆಂಬ ಶಬ್ದಕ್ಕರ್ಥ. ಅಂತು ಲಿಂಗಾಂಗವೆರಡಾದಲ್ಲಿ ಆ ಅಂಗಸ್ವರೂಪವಾದ ಆತ್ಮರುಗಳಿಗೆ ಪ್ರಾಣಸ್ವರೂಪನಾಗಿ ಕೂಡೆ ಲಿಂಗವು ಪರಿಪೂರ್ಣವಾಗಿಪ್ಪುದನಱಿದ ಶರಣನೆಂಬುದೀಗ 'ಅಣು ರೇಣು ತೃಣ ಕಾಷ್ಠದೊಳಗೆ ಪರಿಪೂರ್ಣ ಸದಾಶಿವನೆಂದಱಿದು' ಎಂಬ ಶಬ್ದಕ್ಕರ್ಥ. ಅಂತು ಶರಣ ತನ್ನ ಆತ್ಮಾಂಗದ ಪ್ರಾಣವಾಗಿಪ್ಪ ಲಿಂಗವು ಆತ್ಮಾಂತರ್ಗತವಾ ಗಿರ್ದುದ ಸಮ್ಯಗ್ಜ್ಞಾನದಿಂದಱಿದಾಕ್ಷಣವೆ ಕ್ರೀಯಿಂದಾತ್ಮಾಂಗವ ಲಿಂಗವು ವೇಧಿಸಿ, ತನ್ನಾತ್ಮನೆಲ್ಲಾ ಲಿಂಗವೆಯಾಗಿರ್ದುದನಱಿದು, ನಿತ್ಯ ಪರಿಪೂರ್ಣಮಪ್ಪ ಲಿಂಗವು ತಾನೆಯೆಂದಱಿದ ಶರಣನೆಂಬುದೀಗ 'ಅಂತು ಕ್ಷಣವೇಧಿ ಅಂತರಂಗವ ವೇಧಿಸಲ್ಕೆ ಅಗಣಿತ ಅಕ್ಷೇಶ್ವರ ತಾನೆಂದಱಿದು' ಎಂಬ ಶಬ್ದಕ್ಕರ್ಥ. ಪ್ರಣವ

ವೆಂದಡೆ ಜ್ಞಾನಸ್ವರೂಪು. ಅಂತು ಜ್ಞಾನಪ್ರಕಾಶದಿಂ ಮೇಲೆ ಅಖಂಡ ಪರಂಜ್ಯೋತಿ ಲಿಂಗವು ತಾನೆಂದಱಿದನೆಂಬುದೀಗ ‘ ಪ್ರಣವ ಪ್ರಭೆಯು ಮೇಲಣ ಪರಂಜ್ಯೋತಿ ತಾನೆಂದಱಿದ ’ ನೆಂಬ ಶಬ್ದಕ್ಕರ್ಥ. ಅಂತು ಸಮ್ಯಗ್‌ಜ್ಞಾನಪ್ರಕಾಶದಿಂದ ಅಖಂಡ ಪರಂಜ್ಯೋತಿ ಲಿಂಗವು ತಾನೆಂದಱಿದು ಲಿಂಗವೆಯಾದ ಶರಣನ ನಿಲವನುಪಮಿಸಿ ಹೇಳಬಾರದೆಂಬುದೀಗ ‘ ಪರಂಜ್ಯೋತಿ ಲಿಂಗ ತಾನೆಂದಱಿದ ಕಾರಣ, ಗೊಹೇಶ್ವರಾ ನಿಮ್ಮ ಶರಣನುಪಮಾತೀತ ’ ನೆಂಬ ಶಬ್ದಕ್ಕರ್ಥ. ೫೪

ವ. ಭಾವಿಸಿ ನೋಡಿದಡೆ ಅಂಗವಾಯಿತ್ತು. ಅಂಗ ಸಂಗವಾಗಿ ಸಂಯೋಗವ ಮಱೆದು ಲಿಂಗಸ್ವೈವೆಱಗಾದೆ ! ಲಿಂಗೈಕ್ಯ ನಿಮ್ಮನಗಲದೆ ಅಂಗರುಚಿಗಳ ಮಱೆದು ಲಿಂಗರುಚಿಗಳಲಿ ಸ್ವೈವೆಱಗಾದೆ ! ಲಿಂಗಸ್ವೈವೆಱಗಾದ ಬಳಿಕ ಚೆನ್ನಮಲ್ಲಿಕಾರ್ಜುನನ ಕೊಂದು ಸಾವ ಭಾಷೆ.

ಟೀ. ಮಹಾಘನಲಿಂಗವು ತನಗನನ್ಯ ಪರಿಪೂರ್ಣವೆಂದು ಸ್ವಾನುಭಾವದೃಕ್ಕಿನಿಂದ ಕಂಡ ಶರಣನ ತನು ಲಿಂಗಕ್ಕೆ ಅಂಗವಾಗಿ ಲಿಂಗವು ನೆಲೆಗೊಂಡಿಪ್ಪನೆಂಬುದೀಗ ‘ ಭಾವಿಸಿ ನೋಡಿದಡೆ ಅಂಗವಾಯಿತ್ತು ’ ಎಂಬ ಶಬ್ದಕ್ಕರ್ಥ. ಅಂತು ಸದ್ಭಾವದಿಂದ ಲಿಂಗಾಂಗಸಂಬಂಧವಾದಾಕ್ಷಣವೇ ಅಂಗವೆಲ್ಲಾ ಲಿಂಗವೆಯಾಗಿ ಅಂಗಲಿಂಗಸಂಯೋಗವೆಂಬ ಭಿನ್ನಭಾವವ ಮಱೆದು ಲಿಂಗವಾಗಿರ್ದ ಶರಣನೆಂಬುದೀಗ ‘ ಅಂಗ ಸಂಗವಾಗಿ ಸಂಯೋಗವ ಮಱೆದು ಲಿಂಗಸ್ವೈವೆಱಗಾದೆ’ನೆಂಬ ಶಬ್ದಕ್ಕರ್ಥ. ಅಂತು ಅಂಗವೆಲ್ಲಾ ಲಿಂಗವೆಯಾಗಿ ಅಂಗಸುಖಂಗಳ ಮಱೆದು, ಲಿಂಗಸುಖಿಯಾಗಿ ಭಿನ್ನಭಾವದೋಱದೆಯಿರ್ದ ಶರಣನೆಂಬುದೀಗ ‘ ಲಿಂಗೈಕ್ಯ ನಿಮ್ಮನಗಲದೆ ಅಂಗರುಚಿಗಳ ಮಱೆದು ಲಿಂಗರುಚಿಗಳಲ್ಲಿ ಸ್ವೈವೆಱಗಾದೆ ’ ನೆಂಬ ಶಬ್ದಕ್ಕರ್ಥ. ಅಂತು ಅಂಗಭಾವವಳಿದು ಲಿಂಗವು ತಾನಾದ ಬಳಿಕ ಅಱಿವ ಅಱುಹಿಸಿಕೊಂಬ ಎರಡಳಿದಿರ್ದುದೇ ಪ್ರತಿಜ್ಞೆಯಾಯಿತ್ತು ಶರಣಂಗೆಂಬುದೀಗ ‘ ಲಿಂಗಸ್ವೈವೆಱಗಾದ ಬಳಿಕ ಚೆನ್ನಮಲ್ಲಿಕಾರ್ಜುನನ ಕೊಂದು ಸಾವ ಭಾಷೆ ’ ಎಂಬ ಶಬ್ದಕ್ಕರ್ಥ. ೫೫

ವ. ಅಂಗ ಲಿಂಗವ ವೇಧಿಸಿ ಅಂಗ ಲಿಂಗದೊಳಗಾಯಿತ್ತು. ಮನ ಲಿಂಗವ ವೇಧಿಸಿ ಮನ ಲಿಂಗದೊಳಗಾಯಿತ್ತು. ಭಾವ ಲಿಂಗವ ವೇಧಿಸಿ ಭಾವ ಲಿಂಗದೊಳಗಾಯಿತ್ತು. ಚೆನ್ನಮಲ್ಲಿಕಾರ್ಜುನ ನಿಮ್ಮ ಒಲುಮೆಯ ಸಂಗದಲ್ಲಿರ್ದು ಸ್ವಯಲಿಂಗವಾಯಿತ್ತು.

ಟೀ. ತನು ಮನ ಭಾವವೆಂಬ ತ್ರಿವಿಧವು ತ್ರಿವಿಧಲಿಂಗಸಂಗದಿಂದ ತನು ಮನ ಭಾವಂಗಳೆಲ್ಲಾ ಲಿಂಗವೆಯಾದವು. ಮುನ್ನ ಶರಣ ತಾನು ಲಿಂಗವಾಗಿರ್ದ ಸ್ವಯವೆಂತೆಂದೊಡೆ ಅಂತೆ ಲಿಂಗವಾದ ಶರಣ ಲಿಂಗದ ಕೃಪೆಯಿಂದಲೆಂಬುದೀ ವಚನದ ತಾತ್ಪರ್ಯಾರ್ಥ. ೫೬

ವ. ಅಂಗವಿಲ್ಲಾಗಿ ಸಂಗವಿಲ್ಲಯ್ಯಾ ! ಮತ್ತೊಂದ ವಿವರಿಸಲಿಲ್ಲಾಗಿ ನಿಸ್ಸಂಗವಾಯಿತ್ತಯ್ಯಾ ! ಗೊಹೇಶ್ವರಾ ನಿಮ್ಮ ನಾಮವಿಂತುಟಯ್ಯಾ!

ಟೀ. ಅಂಗ ಲಿಂಗ ಸಂಬಂಧವಾದಾಕ್ಷಣವೆ ಅಂಗವೆಲ್ಲಾ ಲಿಂಗವೆಯಾಯಿತ್ತಾಗಿ ಅಂಗವೆಂಬುದಿಲ್ಲ, ಸಂಗವೆಂಬುದಿಲ್ಲ. ಲಿಂಗಾಂಗವೆರಡೆಂಬ ಭೇದವಿಲ್ಲದೆ ಲಿಂಗವೆಯಾಗಿರ್ದ ಶರಣ ಶಿವೋಹಂ ಶಿವೋಹಂ ಎನುತ್ತ, ಶಿವನ ಅದ್ವಯ ನಾಮ ಸ್ಮರಣೆಯ ಸ್ಮರಿಸುತ್ತಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೫೭

ವ. ಹೊಱಗಿದ್ದಾನೆಂದು ನಾನು ಮಱೆದು ಮಾತನಾಡಿದೆ. ಅಱಿಯಲೀಯದೆ ಎನ್ನ ಅಂತರಂಗದಲ್ಲಿದಾನೆ ತೆಱಹಿಲ್ಲದಭವನು ಪರಿಪೂರ್ಣನಾಗಿ ನುಡಿಗೆಡೆಗುಡದೆ ! ಆತನ ಬಯಲಿಂಗೆ ಬೇಟಗೊಂಡೆನವ್ವಾ ! ನಾನೇನ ಮಾಡುವೆನೆಲೆ ತಾಯೆ? ಮಱೆದಡೆಚ್ಚಱಿಸುವ ಕುಱುಹಿಲ್ಲದ ಗಂಡನು ತನ್ನನಱಿದಡೊಳ್ಳಿದನವ್ವಾ, ನಮ್ಮ ಶಂಭು ಜಕ್ಕೇಶ್ವರನು !

ಟೀ. ಅಂಗದೊಳಹೊಱಗೆ ಪರಿಪೂರ್ಣನಾಗಿ ಭಿನ್ನವಿಲ್ಲದಿಪ್ಪ ಮಹಾಘನ ಲಿಂಗವ ಭಿನ್ನವಿಟ್ಟು ಕೂಡೆನೆಂಬುದೆ ಅಜ್ಞಾನ. ಅಂತಪ್ಪ ಅಜ್ಞಾನ ಭ್ರಾಂತಳಿದು ಶಿವಕೃಪೆಯಿಂದ ಶಿವಜ್ಞಾನಿಯಾಗಿ ಅಂಗಕ್ಕೂ ಲಿಂಗಕ್ಕೂ ಭಿನ್ನವಿಲ್ಲೆಂದಱಿದ ಶರಣನೆಲ್ಲಾ ಲಿಂಗವೆಯಾಗಿಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೫೮

ವ. ಪ್ರಾಣ ಲಿಂಗವೆಂದಱಿದ ಬಳಿಕ ಪ್ರಾಣ ಪ್ರಸಾದವಾಯಿತ್ತು. ಲಿಂಗ ಪ್ರಾಣವೆಂದಱಿದ ಬಳಿಕ ಅಂಗದಾಸೆ ಹಿಂಗಿತ್ತು. ಲಿಂಗಸೋಂಕಿನ ಸಂಗಿಗೆ ಕಂಗಳೇ ಕರುವಾಗಿರ್ದವಯ್ಯಾ ಚೆನ್ನಮಲ್ಲಿಕಾರ್ಜುನನ ಹಿಂಗದೆ ಅನುಮಿಷನಾಗಿಹ ಶರಣಂಗೆ.

ಟೀ. ಆತ್ಮನೇ ಅಂಗ, ಪ್ರಾಣವೇ ಲಿಂಗವೆಂದಱಿದು, ಲಿಂಗಾಂಗಸಂಬಂಧಿಯಾದ ಶರಣನ ವಾಯುಪ್ರಾಣವೆಲ್ಲಾ ಲಿಂಗವೆಯಾಯಿತ್ತೆಂಬುದೀಗ ‘ ಪ್ರಾಣ ಲಿಂಗವೆಂದಱಿದ ಬಳಿಕ ಪ್ರಾಣ ಪ್ರಸಾದವಾಯಿತ್ತು ’ ಎಂಬ ಶಬ್ದಕ್ಕರ್ಥ. ಅಂತು

ಲಿಂಗಾಂಗಸಂಬಂಧಿಯಾದ ಶರಣನು ತನ್ನ ಸರ್ವಾಂಗಕ್ಕೆ ಲಿಂಗವೇ ಪ್ರಾಣವೆಂದಱಿದು ತನ್ನ ಅಂಗವೆಂಬ ಆಸೆ ಹಿಂಗಿತ್ತು ಶರಣಂಗೆಂಬುದೀಗ 'ಲಿಂಗ ಪ್ರಾಣವೆಂದಱಿದ ಬಳಿಕ ಅಂಗದಾಸೆ ಹಿಂಗಿತ್ತು' ಎಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಗದಿಂದ ಸರ್ವಾಂಗಲಿಂಗವಾಗಿ ಭಿನ್ನವಿಲ್ಲದಿರ್ದುದ ಅಭಿನ್ನಜ್ಞಾನದೃಕ್ಕಿಂದ ಅನುಮಿಷನಾಗಿ ನೋಡುತ್ತಿಹ ಶರಣಂಗೆ ನೋಡುವ ಕೇಳುವ ವಾಸಿಸುವ ಇಂದ್ರಿಯಂಗಳೆಲ್ಲಾ ಲಿಂಗವೆಯಾಗಿರ್ದವೆಂಬುದೀಗ 'ಲಿಂಗಸೋಂಕಿನ ಸಂಗಿಗೆ ಕಂಗಳೇ ಕರುವಾಗಿರ್ದವಯ್ಯಾ. ಚೆನ್ನಮಲ್ಲಿಕಾರ್ಜುನ ಹಿಂಗದೆ ಅನುಮಿಷನಾಗಿಹ ಶರಣಂಗೆ' ಎಂಬ ಶಬ್ದಕ್ಕರ್ಥ. ೫೯

ವ. ಪ್ರಾಣಲಿಂಗಪ್ರಸಾದ ಎಲ್ಲಾ ಎಡೆಯಲ್ಲಿಯೂ ಉಂಟು. ಲಿಂಗಪ್ರಾಣಪ್ರಸಾದವಪೂರ್ವ ನೋಡಾ ! ಪ್ರಾಣಲಿಂಗಪ್ರಸಾದ ದೇಹಧರ್ಮ. ಲಿಂಗಪ್ರಾಣಪ್ರಸಾದಿ ಲಿಂಗಭೋಗೋಪಭೋಗಿ ಕೂಡಲಚೆನ್ನಸಂಗಾ ನಿಮ್ಮ ಶರಣ.

ಟೀ. ಪ್ರಾಣ ಮುಂತಾಗಿ ಪದಾರ್ಥಂಗಳನಱಿದು ಭೋಗಿಸಿ ಹಿಂಗದೆ ಲಿಂಗಕ್ಕರ್ಪಿಸಿ ಪ್ರಸಾದಿಯಾಗಿಪ್ಪ ದೇಹಧರ್ಮಿಗಳು ಅನಂತರುಂಟು. ಲಿಂಗ ಮುಂತಾಗಿ ಪದಾರ್ಥಂಗಳ ಲಿಂಗವೆ ಅಱಿದು ಲಿಂಗವೆ ಭೋಗಿಸಿ, ಲಿಂಗದೊಳಗೆ ಪ್ರಾಣಭಿನ್ನವಳಿದು ಪ್ರಸಾದಿಯಾಗಿಪ್ಪ ಶರಣನೇ ಲಿಂಗಭೋಗೋಪಭೋಗಿ. ಅಂತಪ್ಪ ಶರಣನಪೂರ್ವವೆಂಬುದೀ ವಚನದ ತಾತ್ಪರ್ಯಾರ್ಥ. ೬೦

ವ. ಆಚಾರವನಾಚಾರವಾಯಿತ್ತು. ಸೀಮೆ ನಿಸ್ಸೀಮೆಯಾಯಿತ್ತು. ಪ್ರಾಣಸಂಚ ತಪ್ಪಿ ಲಿಂಗಸಂಚವಾಯಿತ್ತು. ಎಲ್ಲಿ ಶಬ್ದವಲ್ಲಿಯೆ ಲಿಂಗಸ್ವಾಯತವಾಯಿತ್ತು. ಎಲ್ಲಿ ಸೋಂಕಲ್ಲಿಯೆ ಲಿಂಗಸ್ವಾಯತವಾಯಿತ್ತು. ಎಲ್ಲಿ ರೂಪಲ್ಲಿಯೇ ಲಿಂಗಸ್ವಾಯತವಾಯಿತ್ತು. ಎಲ್ಲಿ ರುಚಿ ಅಲ್ಲಿಯೇ ಲಿಂಗಸ್ವಾಯತವಾಯಿತ್ತು. ಎಲ್ಲಿ ಗಂಧ ಅಲ್ಲಿಯೇ ಲಿಂಗಸ್ವಾಯತವಾಯಿತ್ತು. ಕೂಡಲಸಂಗಮದೇವರ ಕರುಣರಸಾಬ್ಧಿ ಕಡೆಗೋಡಿವರಿಯಿತ್ತಯ್ಯಾ ಎನ್ನ ಮೇಲೆ !

ಟೀ. ಲೌಕಿಕಾಚಾರದ ಸೀಮೆ ಸಂಬಂಧವೆಲ್ಲವೂ ಅಳಿದು, ಲಿಂಗಾಚಾರ ವಳವಟ್ಟು, ಅಂಗ ಪ್ರಾಣ ಇಂದ್ರಿಯಂಗಳೆಲ್ಲಾ ಲಿಂಗವೆಯಾದ ಕಾರಣ, ಕೇಳಿದ ಶಬ್ದ, ಮುಟ್ಟಿದ ಸ್ಪರ್ಶನ, ನೋಡಿದ ರೂಪು, ಸವಿದ ರುಚಿ, ವಾಸಿಸಿದ ಗಂಧ

ಮೊದಲಾದವೆಲ್ಲಾ ಲಿಂಗವೆಯಾದುವು ಗುರುಕೃಪೆಯಾದ ಶರಣಂಗೆಂಬುದೀ ವಚನದ ತಾತ್ಪರ್ಯಾರ್ಥ. ೬೧

ವ. ಲಿಂಗಮಧ್ಯದೊಳಗೆ ಜಗವಿರ್ದಡೇನೋ ? ಜಗವ ಹೊಱಗಿಕ್ಕಿ ಲಿಂಗವನೊಳಗಿಟ್ಟುಕೊಂಡ ಶರಣನ ಘನಕ್ಕೆ ಶರಣೆಂಬೆ. ಆ ಮಹಾ ಘನವಾಯತಕ್ಕೊಳಗು, ಪ್ರಳಯಕ್ಕೆ ಹೊಱಗು ಕೂಡಲಚೆನ್ನ ಸಂಗಯ್ಯಾ.

ಟೀ. ಮಾಯಾದೇಹ ತೋಱಿಕೆಯ ಜಗತ್ ಪ್ರಪಂಚೆಲ್ಲವೂ ತನ್ನಿಂದನ್ಯ ವಪ್ಪ ಬಾಹ್ಯವೆಂದಱಿದು ಕಳೆದು, ಜಗವನೊಳಕೊಂಡಿಪ್ಪ ಮಹಾಘನಲಿಂಗವೇ ತನ್ನ ನಿಜವೆಂದಱಿದು, ಆ ಮಹಾಘನಪರಿಪೂರ್ಣಲಿಂಗವ ತನ್ನಱಿವಿನೊಳ ಗಿಂಬಿಟ್ಟುಕೊಂಡ ಶರಣನ ಘನದಱಿವನುಪಮಿಸಬಾರದು. ಆ ಶರಣನು ಆ ಮಹಾಘನಲಿಂಗದೊಳಗೆ ಕೂಡಿ ಲಿಂಗವೆಯಾಗಿರ್ದ ಕಾರಣ ಆ ಶರಣಂಗೆ ಜನನ ಮರಣಂಗಳೆಂಬವಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೬೨

ವ. ಲಿಂಗವೇ ಪ್ರಾಣ, ಪ್ರಾಣವೇ ಲಿಂಗವಾಯಿತ್ತು. ಆ ಲಿಂಗವೇ ಲಿಂಗಾಂಗವಾಯಿತ್ತು. ಗೊಹೇಶ್ವರ ಲಿಂಗದಲ್ಲಿ ಸರ್ವಾಂಗ ಪ್ರಾಣ ಲಿಂಗಸ್ವಾಯತವಾಯಿತ್ತು ಕಾಣಾ ಚೆನ್ನಬಸವಣ್ಣಾ !

ಟೀ. ಮಹಾಘನಲಿಂಗವು ತಾನೇ ಪ್ರಾಣಸ್ವರೂಪವಾಗಿ ಅಂಗವೆನಿಸಿ, ಆ ಅಂಗಕ್ಕೆ ಲಿಂಗವು ತಾನೆ ಸಂಬಂಧವಾಗಿ, ಆ ಪ್ರಾಣಾಂಗವೆಲ್ಲಾ ಮರಳಿ ಲಿಂಗವು ತಾನೆಯಾಗಿಪ್ಪನು. ಅಂತು ಆ ಮಹಾಘನಲಿಂಗವು ತಾನೆ ಲಿಂಗಾಂಗವೆರಡಾಗಿ ಅಂಗಸ್ವರೂಪನಾದ ಶರಣನ ಸರ್ವಾಂಗದಲ್ಲಿ ಪ್ರಾಣಲಿಂಗವು ಸ್ವಾಯತವಾಗಿ ಲಿಂಗವೆಯಾಗಿಪ್ಪನು ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೬೩

ವ. ಲಿಂಗಾನುಭಾವಿಗೆ ಅಂಗಾಶ್ರಯವಿಲ್ಲ. ಬಂದುದೇ ಪರಿಣಾಮ, ನಿಂದುದೇ ನಿವಾಸ. ಅದು ಇದು ಎಂಬುದಿಲ್ಲ ಕೂಡಲಚೆನ್ನಸಂಗನ ಶರಣಂಗೆ.

ಟೀ. ಲಿಂಗಾಂಗಸಂಗದಿಂದ ಲಿಂಗವಾಗಿ, ಲಿಂಗಾಂಗಸುಖವನನುಭವಿಸು ತ್ತಿಪ್ಪ ಲಿಂಗಶರಣನ ದೇಹ ಲಿಂಗದೇಹವಾಯಿತ್ತಾಗಿ ಆ ಶರಣನ ದೇಹ ಉಳಿದ ಜಡಭೌತಿಕದೇಹದೊಳಗಲ್ಲ. ಆ ಶರಣನು ದೇಹವಿಡಿದಿರ್ದಲ್ಲಿಯೂ ಭವದುಃಖ

ವಿಲ್ಲ. ಆ ದೇಹವಿಡಿದಿರ್ದಲ್ಲಿಯೂ ಪರಮ ಪರಿಣಾಮಿಯಾಗಿಪ್ಪನಾಗಿ ಆ ಶರಣ ನೆಲ್ಲಿರ್ದಡೆಯೂ ಅದೇ ತನಗೆ ನಿಜನಿವಾಸಸ್ಥಲ. ಆ ಶರಣಂಗೆ ಇಹಪರವಿಲ್ಲ ವೆಂಬುದೀ ವಚನದ ತಾತ್ಪರ್ಯಾರ್ಥ. ೬೪

ವ. ಎನ್ನ ಮನ ನಿಮ್ಮಲ್ಲಿ ನಟ್ಟು ತೆಗೆಯಬಾರದ ಬೆಱಗು ನೋಡಯ್ಯಾ ? ಇಹವೆಂಬುದನಱಿಯೆ, ಪರವೆಂಬುದನಱಿಯೆ. ಪರಮಾನಂದ ದಲಿರ್ದೆ ನೋಡಯ್ಯಾ ! ಪರಮನ ನೆನಹೇ ನೆನಹಾಗಿ, ಪರಮಸುಖ ದಲ್ಲಿ ಸುಖಿಸುತ್ತಿರ್ದೆ ನೋಡಯ್ಯಾ ! ಅಪ್ರತಿಮ ಕೂಡಲಚೆನ್ನ ಸಂಗಯ್ಯಾ ಎನ್ನ ಬೆಱಗಿನ ಭೇದವ ನೀನೇ ಬಲ್ಲೆಯಯ್ಯಾ !

ಟೀ. ಶರಣ ತನ್ನಂತರಂಗದೊಳಹೊಱಗೆ ಪರಿಪೂರ್ಣವಾಗಿಪ್ಪ ಅಖಂಡ ಚಿತ್ ಪರಮಲಿಂಗವ ಶರಣನ ಮನವಱಿದು ಭಕ್ತಿರತಿಯಿಂದ ಬೆರೆದು ಭೇದವಳಿದು ಶರಣನೆಲ್ಲಾ ಲಿಂಗವೆಯಾಗಿ, ಲಿಂಗಸುಖವ ಸುಖಿಸುತ್ತಿಹನು ತಾನೆಲ್ಲಾ ಲಿಂಗವೆಂಬ ನೆನಹ ಮಱೆಯದೆ. ಅಂತು ಶರಣ ಲಿಂಗವಾಗಿಪ್ಪುದ ಲಿಂಗವೆ ಬಲ್ಲನಲ್ಲದೆ ಮತ್ತಾರೂ ಅಱಿಯರು. ಅಂತು ಲಿಂಗವಾಗಿಪ್ಪ ಶರಣನಿದ್ದುದೇ ಕೈಲಾಸವಾದ ಕಾರಣ ಆ ಶರಣನಿಹಪರವೆಂಬುದನಱಿಯನೆಂಬುದೀ ವಚನದ ತಾತ್ಪರ್ಯಾರ್ಥ. ೬೫

ವ. ಅಱಿದೆನೆಂದಡೆ ಅಱಿಯಬಾರದು ನೋಡಾ ! ಘನಕ್ಕೆ ಘನ ತಾನೆ ನೋಡಾ ! ಚೆನ್ನಮಲ್ಲಿಕಾರ್ಜುನನ ನಿರ್ಣಯವಿಲ್ಲದೆ ಸೋತೆನು.

ಟೀ. ಅಖಂಡ ಪರಿಪೂರ್ಣನಪ್ಪ ಮಹಾಘನಲಿಂಗವ ಭಿನ್ನವಿಟ್ಟು ಅಱಿದೆ ನೆಂದಡೆ ಅಱಿಯಬಾರದು. ಅಂತಪ್ಪ ಮಹಾಘನಲಿಂಗವು ತಾನೆಂದಱಿದಿರಬಲ್ಲಡೆ ಆ ಮಹಾಘನಲಿಂಗವು ತಾನೆಯಾಗಿಪ್ಪನು. ಅಂತು ಮಹಾಘನ ಪರಿಪೂರ್ಣ ಲಿಂಗವ ತನ್ನಿಂದನ್ಯವಾಗಿ ಲಕ್ಷ್ಯವಿಡದೆ, ಅಭಿನ್ನಜ್ಞಾನದಿಂದ ಲಿಂಗವ ಬೆರೆದು ಲಿಂಗವಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೬೬

ವ. ಕೇಶಪಾಶಂಗೆಡಲಿ, ಸಾಸಿರಂ ಮುಖದಲ್ಲಿ ದೇಶವಿದ್ದೇಶವಾಗಿಪ್ಪ ಹದನಾ ! ಸಾಸಿರಂ ಮುಖದಲ್ಲಿ ಬ್ರಹ್ಮಲೋಕದ ಮಂತ್ರ, ನಾನು ನೀನಾದೆನ್ನೈ ಯೋಗಿನಾಥಾ!

ಟೀ. ಅಜ್ಞಾನಪಾಶವೆಂಬುದೀಗ 'ಕೇಶಪಾಶ' ವೆಂಬ ಶಬ್ದಕ್ಕರ್ಥ. ಅಂತಪ್ಪ ಅಜ್ಞಾನಪಾಶ ಸಮ್ಯಗ್‌ಜ್ಞಾನೋದಯವಾದಲ್ಲಿ ಅಳಿದುಹೋಯಿತ್ತೆಂಬು

ದೀಗ ‘ **ಕೇಶಪಾಶಂಗೆಡಲಿ** ’ ಎಂಬ ಶಬ್ದಕ್ಕರ್ಥ. ಅಂತು ಸಮ್ಯಗ್‌ಜ್ಞಾನೋದಯವಾದ ಶರಣನ ತನುಕರಣಂಗಳೆಲ್ಲಾ ಜ್ಞಾನಸ್ವರೂಪವಾಗಿರ್ದವೆಂಬುದೀಗ ‘ಸಾಸಿರಂ ಮುಖದಲ್ಲಿ ದೇಶವಿದ್ದೇಶವಾಗಿಪ್ಪ ಹದನಾ’ ಎಂಬ ಶಬ್ದಕ್ಕರ್ಥ. ಅಂತು ಶರಣನ ತನು ಕರಣಂಗಳೆಲ್ಲಾ ಜ್ಞಾನಸ್ವರೂಪುಗಳಾಗಿ ಶಿವೋಹಂ ಶಿವೋಹಂ ಎನುತ್ತಿರ್ದನೆಂಬುದೀಗ ‘ ಸಾಸಿರಂ ಮುಖದಲ್ಲಿ ಬ್ರಹ್ಮಲೋಕದ ಮಂತ್ರ ’ ವೆಂಬ ಶಬ್ದಕ್ಕರ್ಥ. ಅಂತು ಶರಣನ ಸರ್ವಕರಣಂಗಳೆಲ್ಲಾ ಶಿವೋಹಂ ಎನುತ್ತ ಜ್ಞಾನ ಕ್ರೀಯಿಂದ ಶರಣ ಲಿಂಗವೆಯಾದನೆಂಬುದೀಗ ‘ ಆನು ನೀನಾದೆನ್ನೈ ಯೋಗಿನಾಥಾ ’ ಎಂಬ ಶಬ್ದಕ್ಕರ್ಥ. ೬೭

ವ. ತುಂಬಿದುದು ತುಳುಕದು ನೋಡಾ ! ನಂಬಿದುದು ಸಂದೇಹಿಸದು ನೋಡಾ ! ಒಲಿದುದು ಓಸರಿಸದು ನೋಡಾ ! ನೆಱೆಯಱಿದುದು ಮಱೆಯದು ನೋಡಾ ! ಚೆನ್ನಮಲ್ಲಿಕಾರ್ಜುನಯ್ಯಾ, ನೀನೊಲಿದ ಶರಣಂಗೆ ನಿಸ್ಸೀಮಸುಖವಯ್ಯಾ !

ಟೀ. ಲಿಂಗಾಂಗಸಂಬಂಧಿಯಾದ ಶರಣನ ಸರ್ವಾಂಗದಲ್ಲಿ ಲಿಂಗವು ಪರಿಪೂರ್ಣವಾಗಿ ಭಿನ್ನವಳಿದಿರ್ದ ಶರಣಂಗೆ ಲಿಂಗವ ಬೇಱಿಟ್ಟು ಕೂಡಿಹೆನೆಂಬ ಖಂಡಿತಭಾವ ಸಂಚಾರವಿಲ್ಲವೆಂಬುದೀಗ ‘ ತುಂಬಿದುದು ತುಳುಕದು ನೋಡಾ ’ ಎಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಬಂಧಿಯಾದಾಕ್ಷಣವೆ ತಾನೆಲ್ಲಾ ಲಿಂಗವೆಯಾದೆನೆಂಬ ವಿಶ್ವಾಸ ಘಟಿಸಿದ ಶರಣಂಗೆ ಸಂದೇಹಭಾವವಿಲ್ಲವೆಂಬುದೀಗ ‘ ನಂಬಿದುದು ಸಂದೇಹಿಸದು ನೋಡಾ ’ ಎಂಬ ಶಬ್ದಕ್ಕರ್ಥ. ಅಂತು ಅಖಂಡ ಪರಿಪೂರ್ಣಲಿಂಗವು ತಾನೆಯಾಗಿರ್ದುದನಱಿದು ಲಿಂಗಸುಖಾನಂದವ ಮೆಚ್ಚಿದ ಶರಣಂಗೆ ಒಲುಮೆ ಹಿಂಗದು ಎಂಬುದೀಗ ‘ ಒಲಿದುದು ಓಸರಿಸದು ನೋಡಾ ’ ಎಂಬ ಶಬ್ದಕ್ಕರ್ಥ. ಅಂತು ತಾನೆಲ್ಲಾ ಮಹಾಘನಲಿಂಗವೆಯಾಗಿ, ತನ್ನ ಕಂಡು ಮೆಚ್ಚಿಪ್ಪ ಶರಣನ ಮಹಾಜ್ಞಾನದಱಿವಿಂಗೆ ಮಱವೆಯಿಲ್ಲವೆಂಬುದೀಗ ‘ ನೆಱೆಯಱಿದುದು ಮಱೆಯದು ನೋಡಾ ’ ಎಂಬ ಶಬ್ದಕ್ಕರ್ಥ. ಅಂತು ಶಿವಕೃಪೆಯಿಂದ ಇಹಪರಂಗಳ ಸೀಮೆಯ ದಾಂಟಿ, ಮಹಾಘನಲಿಂಗಸುಖವ ಪಡೆದ ಶರಣನೆಂಬುದೀಗ ‘ ಚೆನ್ನಮಲ್ಲಿಕಾರ್ಜುನಯ್ಯಾ, ನೀನೊಲಿದ ಶರಣಂಗೆ ನಿಸ್ಸೀಮ ಸುಖವಯ್ಯಾ ’ ಎಂಬ ಶಬ್ದಕ್ಕರ್ಥ. ೬೮

ವ. **ಕೂಟಸಂಯೋಗಿಯಾ ಯೋಗಕ್ಕೆ ನಾ ಹೋಗೆ, ಕೂಟ ಸಿಲುಕಿತು ಮನದ ಮಧ್ಯದಲ್ಲಿ. ನೋಟವಾಲೋಕದಾ ಬೇಂಟೆಯಾಡುವ ಹೊಲನ, ಲೀಯಕ್ಕೆ ಭಕ್ತಿಯಿದು ಯೋಗಿನಾಥಾ !**

ಟೀ. ಆತ್ಮಾಂಗದಲ್ಲಿ ಯೋಗವಾಗಿಪ್ಪ ಪರಮಚಿತ್ಕಲಾಲಿಂಗವನಱಿದು ಕೂಡೆನೆಂಬ ಮನವಾಗಿ, ಜ್ಞಾನದಿಂದ ತಿಳಿದು ನೋಡಲು, ತನ್ನ ಮನೋಮಧ್ಯದಲ್ಲಿಯೇ ಪರಮ ಚಿತ್‌ಕಲಾಲಿಂಗವು ತನಗನನ್ಯವಾಗಿಪ್ಪುದ ಕಂಡ ಶರಣನೆಂಬುದೀಗ ' ಕೂಟ ಸಂಯೋಗಿಯಾ ಯೋಗಕ್ಕೆ ನಾ ಹೋಗೆ, ಕೂಟ ಸಿಲುಕಿತು ಮನದ ಮಧ್ಯದಲ್ಲಿ ' ಎಂಬ ಶಬ್ದಕ್ಕರ್ಥ. ಅಂತು ತನಗನನ್ಯ ಪರಿಪೂರ್ಣವಾಗಿಪ್ಪ ಮಹಾಘನಲಿಂಗವ ಜ್ಞಾನದೃಕ್ಕಿಂದ ನೋಡಿ ಕಂಡು ಕೂಡುವ ತೂರ್ಯಾವಸ್ಥೆಯಲ್ಲಿಪ್ಪ ಆತ್ಮಾಂಗವೆಂಬುದೀಗ ' ನೋಟವಾಲೋಕದಾ ಬೇಂಟೆಯಾಡುವ ಹೊಲನೆ ' ಎಂಬ ಶಬ್ದಕ್ಕರ್ಥ. ಅಂತು ಮಹಾಘನಲಿಂಗವ ಜ್ಞಾನದೃಕ್ಕಿಂದ ಕಂಡು ಕೂಡುವ ತೂರ್ಯಾವಸ್ಥೆಯಾಗಿರ್ದ ಜ್ಞಾನಾತ್ಮನೆಂಬ ಅಂಗವು ಲಿಂಗದಲ್ಲಿ ಕೂಡುವ ಕೂಟಕ್ಕೆ ಭಕ್ತಿಯೇ ಕಾರಣವೆಂದು ಕ್ರೀಯಿಂದ ಲಿಂಗವಾದ ಶರಣನೆಂಬುದೀಗ ' ಲೀಯಕ್ಕೆ ಭಕ್ತಿಯಿದು ಯೋಗಿನಾಥಾ ' ಎಂಬ ಶಬ್ದಕ್ಕರ್ಥ. ೬೯

ವ. ನೀರು ನೀರೇಯಾಗಿ, ನೀರು ಮುತ್ತಾನಾಗಿ, ಲೀಯಕ್ಕೆ ಮತ್ತೆ ತಾ ನೀರೆಯಾಗಿ, ಆರೂಢದಕ್ಷರದ ಮರುಜೇವಣಿಯ ಹಿಂಡೆ, ನೀರು ವಜ್ರವೆಯಕ್ಕು ಯೋಗಿನಾಥಾ.

ಟೀ. 'ನೀರೆಂ'ದಡೆ ಮನಸ್ಸೆಂಬುದಕ್ಕರ್ಥ. ಆ ಮನಸ್ಸಿಗೆ ಸದ್ವಿವೇಕ ದೋಱಲು, ಆ ತೋಱಿದ ಸದ್ವಿವೇಕವೇ ಜಲವೆಂಬುದೀಗ 'ನೀರು ನೀರೇಯಾಗಿ' ಎಂಬ ಶಬ್ದಕ್ಕರ್ಥ. ಅಂತು ಮನಸ್ಸಿಗೆ ಸದ್ವಿವೇಕಜ್ಞಾನವಾದ ಶರಣನೆಲ್ಲಾ ಸದ್ವಿವೇಕಜಲವೆಯಾಗಿರ್ದನೆಂಬುದೀಗ ' ನೀರು ಮುತ್ತಾನಾಗಿ ' ಎಂಬ ಶಬ್ದಕ್ಕರ್ಥ. ಅಂತು ಸದ್ವಿವೇಕಜ್ಞಾನಸ್ವರೂಪನಾದ ಶರಣನಂಗವು ಲಿಂಗಸಂಯೋಗವಾಗಿ ಏಕರಸವಾಯಿತ್ತೆಂಬುದೀಗ ' ಲೀಯಕ್ಕೆ ಮತ್ತೆ ತಾ ನೀರೆಯಾಗಿ ' ಎಂಬ ಶಬ್ದಕ್ಕರ್ಥ. ಅಂತು ಅಂಗ ಲಿಂಗ ಸಂಯೋಗದಲ್ಲಿ ಏಕರಸವಾದ ಶರಣನು ಅಭಿನ್ನಜ್ಞಾನಿಯಾಗಿ ಶಿವೋಽಹಂ ಶಿವೋಽಹಂ ಎಂಬ ಮಂತ್ರಸಾರವ ಸ್ವೀಕರಿಸಿ ಶರಣನು ಅವಿರಳವಸ್ತುವಾದನೆಂಬುದೀಗ ' ಆರೂಢದಕ್ಷರದ ಮರುಜೇವಣಿಯ ಹಿಂಡೆ ನೀರು ವಜ್ರವೆಯಕ್ಕು ಯೋಗಿನಾಥಾ ' ಎಂಬ ಶಬ್ದಕ್ಕರ್ಥ. ೭೦

ವ. ಕಾನನದ ಕಾನನದ ಕಂಗೆಡದ ಭೇದವನು, ಸ್ವಾನುಭೂತ್ಯೈಕ್ಯದಲಿ ದೀಕ್ಷೆಯಾಗಿ, ಮೇಲಾದ ದೀಕ್ಷೆಯೂ ತಾನೆರಡುವೊಂದಾದ, ಆನಂದವನು ಕಂಡೆ ಯೋಗಿನಾಥಾ !

ಟೀ. ಕಾನನವೆಂದರೆ ದೇಹಾರಣ್ಯ. ಅಂತಪ್ಪ ದೇಹಾರಣ್ಯವೆಲ್ಲಾ ಅಜ್ಞಾನದ ಅಂಧಕಾರಣ್ಯವಾಗಿಪ್ಪುದೆಂಬುದೀಗ ' ಕಾನನದ ಕಾನನದ ' ಎಂಬ ಶಬ್ದಕ್ಕರ್ಥ. ಅಂತಪ್ಪ ದೇಹಾರಣ್ಯದ ಅಜ್ಞಾನಾಂಧಕಾರವು ಮನದ ಕಣ್ಣಿಂಗೆ ಕವಿದು ತನ್ನ ನಿಜವ ಕಾಣಲೆಡೆಗುಡದೆಂಬುದೀಗ ' ಕಂಗೆಡದ ಭೇದವನು ' ಎಂಬ ಶಬ್ದಕ್ಕರ್ಥ. ಅಂತು ಮನದ ಕಣ್ಣಿಂಗೆ ಕಾಣಿಸಿಕೊಳ್ಳದೆ ದೇಹದ ಅಂತರಂಗದಲ್ಲಿರ್ದ ಪರಮಚಿತ್ಕಲಾಲಿಂಗವ ಸ್ವಾನುಭಾವವನಿತ್ತು ಸದ್ಗುರು ಅರುಹಿ ಕೊಟ್ಟನೆಂಬುದೀಗ ' ಸ್ವಾನುಭೂತ್ಯೈಕ್ಯದಲಿ ದೀಕ್ಷೆಯಾಗಿ ' ಎಂಬ ಶಬ್ದಕ್ಕರ್ಥ. ಅಂತು ಅಂತರಂಗದಲ್ಲಿ ಅರುಹಿ ಕೊಟ್ಟ ಪರಮಚಿತ್ಕಲಾಲಿಂಗವನೆ ಒಹಿಷ್ಕರಿಸಿ ತಂದು ಇಷ್ಟಲಿಂಗವ ಮಾಡಿ ಅಂಗಕ್ಕೆ ಸಾಹಿತ್ಯವ ಮಾಡಿದ ಶ್ರೀಗುರುವೆಂಬುದೀಗ ' ಮೇಲಾದ ದೀಕ್ಷೆಯೂ ' ಎಂಬ ಶಬ್ದಕ್ಕರ್ಥ. ಅಂತು ಅಂಗದ ಮೇಲೆ ಲಿಂಗಸಾಹಿತ್ಯವಾದಾಕ್ಷಣವೇ ಅಂಗವೆಲ್ಲಾ ಲಿಂಗವೆಯಾಗಿ ಭಿನ್ನವಿಲ್ಲದೆ ಲಿಂಗಸುಖಾನಂದವ ಪಡೆದ ಶರಣನೆಂಬುದೀಗ ' ತಾನೆರಡುವೊಂದಾದ ಆನಂದವನು ಕಂಡೆ ಯೋಗಿನಾಥಾ ' ಎಂಬ ಶಬ್ದಕ್ಕರ್ಥ. ೭೧

ವ. ಭಕ್ತಿ ಮುಕ್ತ್ಯಂಗನೆಯ ಚಿತ್ತಗಳ ಸಮತೆಯನು, ಬಿತ್ತರಿಸದೇ ನಾನು
ಕಂಡು ಕಂಡು, ಮತ್ತೆ ಮನಸಿನ ಜಲವು ಹತ್ತೆಸಾರದ ಮುನ್ನ,
ತತ್ತ್ವಮಸಿಯಾದೆನ್ನೆ ಯೋಗಿನಾಥಾ !

ಟೀ. ಒಂದೇ ಪರವಸ್ತು ಲಿಂಗಾಂಗವೆರಡಾದಲ್ಲಿ ಆ ಪರವಸ್ತುವಿನ ಸಮೇತವಾಗಿರ್ದ ಚಿಚ್ಛಕ್ತಿಯೂ ಶಕ್ತಿ ಭಕ್ತಿಗಳೆಂದೆರಡಾಯಿತ್ತು. ಅಂತು ಲಿಂಗದಲ್ಲಿ ಶಕ್ತಿಯೆನಿಸಿತ್ತು. ಅಂಗದಲ್ಲಿ ಭಕ್ತಿಯೆನಿಸಿತ್ತು. ಅಂತಾದ ಲಿಂಗದ ಶಕ್ತಿಯೇ ಮುಕ್ತ್ಯಂಗನೆಯೆನಿಸಿ ಶರಣನೆಂಬ ಅಂಗದ ಭಕ್ತ್ಯಂಗನೆಗೆ ಒಲಿದು, ಶಕ್ತಿ ಭಕ್ತಿಗಳೆರಡೂ ಒಂದಾಗಿ ತಾನೇ ಜ್ಞಾನಕ್ರೀಗಳೆನಿಸಿ, ಶರಣನಂಗದಲ್ಲಿ ಪ್ರಭಾವಿಸಿ ಕಾಣಿಸುತ್ತಿರ್ದನೆಂಬುದೀಗ ' ಭಕ್ತಿ ಮುಕ್ತ್ಯಂಗನೆಯ ಚಿತ್ತಗಳ ಸಮತೆಯನು ಕಂಡು ಕಂಡು ' ಎಂಬ ಶಬ್ದಕ್ಕರ್ಥ. ಅಂತು ಜ್ಞಾನ ಕ್ರೀ ಸಮ್ಮತವಾಗಿ ತನ್ನಂಗದಲ್ಲಿ ನೆಲೆಗೊಂಡ ಶರಣನು ವಾಗದ್ವೈತಿಯಾಗದೆ ಮರಳಿ ಮನದ ವಿಕಾರ ಎಡೆಗೊಳದ ಮೊದಲೇ ಜ್ಞಾನಕ್ರಿಯಾಂಗದಲ್ಲಿ ನೆಲೆಗೊಂಡು ತೋರಿದಾಕ್ಷಣವೇ ಲಿಂಗಾಂಗ ಸಂಬಂಧಿಯಾಗಿ ಲಿಂಗವಾದ ಶರಣನೆಂಬುದೀಗ ' ಬಿತ್ತರಿಸದೇ ನಾನು ಕಂಡು ಕಂಡು, ಮತ್ತೆ ಮನಸಿನ ಜಲವು ಹತ್ತೆಸಾರದ ಮುನ್ನ, ತತ್ತ್ವಮಸಿಯಾದೆನ್ನೆ ಯೋಗಿನಾಥಾ ' ಎಂಬ ಶಬ್ದಕ್ಕರ್ಥ. ೭೨

ವ. ಮಂಗಳದ ಸದ್ಭಕ್ತಿ ಲಿಂಗ ನೀನಾಗಿರಲು, ಕಂಗಳೆರಡೂ ಅದಕೆ ಉಭಯಾರ್ಥವೈ. ಲಿಂಗ ನಿನ್ನಯ ದೀಕ್ಷೆ ಸ್ವಾನುಭಾವದಲಾಗೆ, ಲಿಂಗ ನಿನ್ನಯ ಮನವು ಯೋಗಿನಾಥಾ!

ಟೀ. ಮಂಗಳವೆಂದರೆ ಮದುವೆಯೆಂಬ ಶಬ್ದಕ್ಕರ್ಥ. ಅಂತು ತನ್ನ ನಿಜವಪ್ಪ ಲಿಂಗವು ಶರಣನಂಗಕ್ಕೆ ಸಂಯೋಗವಪ್ಪ ಶುಭಕಾಲವೀಗ ಮದುವೆಯೆನಿಸಿತ್ತು. ಅಂತು ಮದುವೆಯಾಗಿ ಲಿಂಗಾಂಗವೆರಡೂ ಕೂಡಿದ ಕೂಟವೇ ಭಕ್ತಿಯೆನಿಸಿತ್ತು ಎಂಬುದೀಗ ‘ ಮಂಗಳದ ಸದ್ಭಕ್ತಿಲಿಂಗ ನೀನಾಗಿರಲು ’ ಎಂಬ ಶಬ್ದಕ್ಕರ್ಥ. ಅಂತು ಸದ್ಭಕ್ತನು ತಾನೆಲ್ಲಾ ಲಿಂಗವೆಯಾಗಿಪ್ಪ ತನ್ನ ಲಿಂಗಸ್ವರೂಪವ ಇಷ್ಟಪ್ರಾಣವೆಂದು ಉಭಯಾರ್ಥವಿಟ್ಟು, ಮನ ಭಾವವೆಂಬೆರಡು ಕಣ್ಣಿಂದ ಹಿಂಗದೆ ನೋಡುತ್ತಿಹನೆಂಬುದೀಗ ‘ ಕಂಗಳೆರಡೂ ಅದಕ್ಕೆ ಉಭಯಾರ್ಥವೈ ’ ಎಂಬ ಶಬ್ದಕ್ಕರ್ಥ. ಅಂತು ಭಕ್ತನೆಲ್ಲಾ ಲಿಂಗವೆಯಾಗಿ ಲಿಂಗವ ನೋಡುತ್ತಿಪ್ಪ ಲಿಂಗಭಾವ ಘಟಿಸಿದ ಪರಿ ಎಂತೆಂದೊಡೆ : ಆ ಭಕ್ತಂಗೆ ಮಹಾಘನಲಿಂಗವ ಸ್ವಾನುಭಾವದಿಂದಱಹಿಕೊಟ್ಟು ಶ್ರೀಗುರು ಅಂಗಕ್ಕೆ ಸಾಹಿತ್ಯವ ಮಾಡಿ ಸರ್ವಾಂಗವೆಲ್ಲಾ ಲಿಂಗವೆಯಾದ ಕಾರಣ, ಭಕ್ತನ ಮನ ಭಾವಂಗಳೆಲ್ಲಾ ಲಿಂಗದೃಕ್ಕಾಗಿರ್ದವೆಂಬುದೀಗ ‘ ಲಿಂಗ ನಿನ್ನಯ ದೀಕ್ಷೆ ಸ್ವಾನುಭಾವದಲಾಗೆ, ಲಿಂಗ ನಿನ್ನಯ ಮನವು ಯೋಗಿನಾಥಾ ’ ಎಂಬ ಶಬ್ದಕ್ಕರ್ಥ. ೭೩

ವ. ನಚ್ಚು ಬಿಚ್ಚದೆ ಮನದಲಚ್ಚೊತ್ತಿದಂತಿದ್ದಿತ್ತು. ಲಿಂಗವೆನ್ನದು, ಜಂಗಮವೆನ್ನದು. ಅದು ತಾನಾಗಿ ತಾನೆ ಭರಿತನು ಕೂಡಲಚೆನ್ನಸಂಗನ ಶರಣನು.

ಟೀ. ಮಹಾಘನವಸ್ತು ತಾನೆ ತನ್ನ ಸ್ವಲೀಲೆಯಿಂದ ಲಿಂಗಾಂಗವೆರಡಾಯಿತ್ತು. ಅಂತಾದ ಲಿಂಗಾಂಗವೆರಡೂ ಬಿಚ್ಚಿ ಬೇಱಾಗದೆ ಎರಡೂ ಕೂಡಿ ಶರಣರೂಪಾಯಿತ್ತು. ಅಂತಾದ ಕಾರಣ ಶರಣನ ಅಂಗ ಮನಂಗಳಲ್ಲಿ ಲಿಂಗವು ಭಿನ್ನವಿಲ್ಲದೆ ಪ್ರಕಾಶಿಸುತ್ತಿಪ್ಪುದು. ಅಂತು ಮನಕ್ಕೆ ಭಿನ್ನವಿಲ್ಲದೆ ಬೆಳಗುತ್ತಿಪ್ಪ ಲಿಂಗವ ಶರಣನ ಮನವಱಿದು, ಭಿನ್ನಭಾವವಳಿದು, ತನುಮನವೆಲ್ಲಾ ಲಿಂಗವೆಯಾಗಿರ್ದ ಶರಣನು. ಅಂತು ಲಿಂಗವೆಯಾಗಿರ್ದ ಶರಣಂಗೆ ಅಱಿವುದು ಮನ, ಅಱುಹಿಸಿಕೊಂಬುದು ಲಿಂಗವೆಂದು ಎರಡಿಟ್ಟು ನೆನೆಯಲಿಲ್ಲದೆ ಹೋಯಿತ್ತು. ಅಂತು ಮಹಾಘನವಸ್ತು ತಾನೇ ಶರಣನೆಂಬ ಅಂಗವಾಗಿ, ಆ ಅಂಗದೊಳಗೆ ಲಿಂಗವು ಪರಿಪೂರ್ಣವಾಗಿ ಭಿನ್ನವಿಲ್ಲದೆ ಬೆಳಗಿ ತೋಱುತ್ತ ಶರಣನೆಲ್ಲಾ ಲಿಂಗವೆಯಾಗಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೭೪

ವ. ಅಕಾಯಮುಖದಲ್ಲಿ ಕಾಯ ಪ್ರತಿಬಿಂಬಿಸುವುದು. ಸಕಾಯ ಮುಖದಲ್ಲಿ ಅಕಾಯ ಪ್ರತಿಬಿಂಬಿಸುವುದು. ಸೋಂಕಿಲ್ಲದೆ ಸೊಗ ಸಿಲ್ಲದೆ ಹೂಣೆ ಹೋಗುವನು ಅನುಭಾವ ಸಕಾಯನಾಗಿ,

ಶ್ರುತಿ : ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ

ಎಂದುದಾಗಿ ಕೂಡಲಚೆನ್ನಸಂಗಾ, ನಿಮ್ಮ ಘನತೆಯ ಶರಣನೇ ಬಲ್ಲ.

ಟೀ. ಅಕಾಯಸ್ವರೂಪನಾಗಿಪ್ಪ ಆತ್ಮನ ಅಹಂಕಾರವೃತ್ತಿಯಿಂದ ದೇಹ ಕರಣಂಗಳಾದವೆಂಬುದೀಗ 'ಅಕಾಯಮುಖದಲ್ಲಿ ಕಾಯ ಪ್ರತಿಬಿಂಬಿಸುವುದು' ಎಂಬ ಶಬ್ದಕ್ಕರ್ಥ. ಅಂತು ದೇಹವಿಡಿದಿರ್ದ ಆತ್ಮನ ಸ್ವದೇಹದಲ್ಲಿ ಅಕಾಯ ಸ್ವರೂಪನಪ್ಪ ಪರಮ ಚಿತ್ಕಲಾಲಿಂಗವು ಉದಯಿಸಿ ಇಷ್ಟಲಿಂಗವಾಗಿ ಅಂಗ ದಲ್ಲಿ ಸ್ವಾಯತವಾಯಿತ್ತು ಶರಣಂಗೆಂಬುದೀಗ 'ಸಕಾಯ ಮುಖದಲ್ಲಿ ಅಕಾಯ ಪ್ರತಿಬಿಂಬಿಸುವುದೆ' ಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಬಂಧಿ ಯಾದ ಶರಣಂಗೆ ದೇಹವಾಸನಾಗುಣಧರ್ಮ ಕರ್ಮಂಗಳಿಲ್ಲ. ಆ ಶರಣಂಗೆ ದೇಹಮೋಹವಿಲ್ಲ. ಲಿಂಗದಲ್ಲಿ ಸಮರಸೈಕ್ಯವನೈದಿ, ಲಿಂಗವಾಗಿ, ಲಿಂಗಸುಖವ ನನುಭವಿಸುತ್ತ, ಮುನ್ನಿನ ಚಿತ್ಕಲಾಲಿಂಗಸ್ವರೂಪನೆಯಾಗಿಪ್ಪ ಶರಣನೆಂಬುದೀಗ 'ಸೋಂಕಿಲ್ಲದೆ ಸೊಗಸಿಲ್ಲದೆ ಹೂಣೆ ಹೋಗುವನು ಅನುಭಾವ ಸಕಾಯನಾಗಿ' ಎಂಬ ಶಬ್ದಕ್ಕರ್ಥ. ಅಂತು ತಾನೆಲ್ಲಾ ಲಿಂಗವೆಯಾಗಿ ಚರಿಸುತ್ತಿಪ್ಪ ಶರಣನೇ ಚರಲಿಂಗ. ಆ ಶರಣನ ಕರಸ್ಥಲದಲ್ಲಿ ಅಚರವಾಗಿಪ್ಪ ಮಹಾಘನಲಿಂಗವೇ ಸ್ಥಾವರ. ಅಂತಿಪ್ಪ ಚರಕ್ಕೂ ಸ್ಥಾವರಕ್ಕೂ ಭೇದವಿಲ್ಲ. ಅಂತು ಭೇದವಿಲ್ಲದೆ ಯಿರ್ದ ಲಿಂಗದ ಘನವ, ಲಿಂಗವಾಗಿರ್ದ ಶರಣನೇ ಬಲ್ಲನಲ್ಲದೆ ಉಳಿದ ವೇದಾಂತ ಸಿದ್ಧಾಂತ ಮೊದಲಾದ ಮತಾದಿಗಳಾರೂ ಅಱಿಯರೆಂಬುದೀಗ 'ಸ್ಥಾವರಂ ಜಂಗಮಶ್ಚೈವ ದ್ವಿವಿಧಂ ಲಿಂಗಮುಚ್ಯತೇ ಎಂದುದಾಗಿ ಕೂಡಲಚೆನ್ನಸಂಗಾ, ನಿಮ್ಮ ಶರಣನೇ ಬಲ್ಲ' ನೆಂಬ ಶಬ್ದಕ್ಕರ್ಥ. ೭೫

ವ. ಲಿಂಗದೊಳಗಣ ಬೀಜ ಜಂಗಮದಲುತ್ಪತ್ತಿ. ಕಾಯಗುಣವಿಲ್ಲಾಗಿ ಸಂಸಾರಭಯವಿಲ್ಲ. ಅಂತರಂಗಶುದ್ಧಾತ್ಮನಾಗಿ ನಿಸ್ಸಂಗಿ ಜಂಗಮ ಕೂಡಲಚೆನ್ನಸಂಗಮದೇವ.

ಟೀ. ಜ್ಞಾನಕಲಾಸ್ವರೂಪನಾಗಿಪ್ಪ ಶರಣನೇ ಜಂಗಮ. ಅಂತಪ್ಪ ಜಂಗ ಮವು ತನ್ನ ಚಿತ್‌ಪ್ರಣವಚೈತನ್ಯಕಲೆಯನು ತನ್ನ ಭಾವದ ಮುಖದಲ್ಲಿಯೇ

ಉದ್ಭವವ ಮಾಡಿ, ಇಷ್ಟಲಿಂಗವಾಗಿ ಪಿಡಿದು, ತನ್ನ ನಿಜವನು ನೋಡಿ ಸುಖಿಸುತ್ತಿಪ್ಪ ಕಾರಣ 'ಲಿಂಗದೊಳಗಣ ಬೀಜ ಜಂಗಮುದಲುತ್ಪತ್ತಿ' ಎಂಬ ಶಬ್ದಕ್ಕರ್ಥ. ಅಂತು ಅಂತರಂಗ ಬಹಿರಂಗವೆಲ್ಲಾ ಲಿಂಗವೆಯಾಗಿಪ್ಪ ಕಾರಣ, ಜಂಗಮಕ್ಕೆ ದೇಹ ವಾಸನಾ ಗುಣಧರ್ಮ ಕರ್ಮ ಸಂಸಾರ ಭವ ಭಯಂಗಳೇನೂ ಇಲ್ಲದೆ ದೇಹ ಸಂಸಾರಸಂಗದಲ್ಲಿರ್ದು ನಿಸ್ಸಂಗಿಯಾಗಿಪ್ಪನು ಜಂಗಮವೆಂಬುದೀಗ 'ಕಾಯ ಗುಣವಿಲ್ಲಾಗಿ ಸಂಸಾರಭಯವಿಲ್ಲ. ಅಂತರಂಗ ಶುದ್ಧಾತ್ಮನಾಗಿ ನಿಸ್ಸಂಗಿ ಜಂಗಮ' ವೆಂಬ ಶಬ್ದಕ್ಕರ್ಥ. ೭೬

ವ. ಲಿಂಗವೇ ಪ್ರಾಣವಾಯಿತ್ತಾಗಿ ಆಚಾರವಿಲ್ಲಯ್ಯಾ! ಪ್ರಸಾದಕಾಯ ವಾಯಿತ್ತಾಗಿ ಸತ್ತ್ವರಜ ತಮ ಕ್ರೋಧವಿಲ್ಲವಯ್ಯಾ! ಜಂಗಮಮುಖ ಲಿಂಗವಾದ ಕಾರಣ ಲಿಂಗದಲನುಭವಿಸಿ ನೋಡುತ್ತಿರ್ದೆನಯ್ಯಾ! ಭಕ್ತಕಾಯ ಮಮಕಾಯವೆಂದಿಪ್ಪನಾಗಿ ಕೂಡಲಚೆನ್ನಸಂಗಯ್ಯನಲ್ಲಿ ಸುಖಿಯಾದೆನು.

ಟೀ. ಸಮ್ಯಗ್‌ಜ್ಞಾನದಿಂದ ಗುರುಕರುಣವುಂ ಪಡೆದು, ವಾಯುಪ್ರಾಣ ವಳಿದು ಲಿಂಗವೇ ಪ್ರಾಣವಾಯಿತ್ತಾಗಿ ಶರಣಂಗೆ ಲಿಂಗವ ಭಿನ್ನವಿಟ್ಟು ಮಾಡುವ ಭಿನ್ನಕ್ರಿಯಾಚಾರವಿಲ್ಲದೆ ಹೋಯಿತ್ತೆಂಬುದೀಗ 'ಲಿಂಗವೇ ಪ್ರಾಣವಾದ ಬಳಿಕ ಆಚಾರವಿಲ್ಲಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಪಂಚಭೌತಿಕ ಕಾಯವಳಿದು ಲಿಂಗಕಾಯವಾದ ಶರಣಂಗೆ ಉತ್ಪತ್ತಿ ಸ್ಥಿತಿ ಲಯವಿಲ್ಲ. ಕಾಮಕ್ರೋಧಂಗಳೇನೂ ಇಲ್ಲವೆಂಬುದೀಗ 'ಪ್ರಸಾದಕಾಯವಾಯಿತ್ತಾಗಿ ಸತ್ತ್ವರಜ ತಮ ಕ್ರೋಧವಿಲ್ಲ ವಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಅಂಗಪ್ರಾಣಂಗಳೆಲ್ಲಾ ಲಿಂಗವಾದುದು ಜ್ಞಾನಮುಖದಿಂದ. ಅಂತಪ್ಪ ಜ್ಞಾನವೇ ಜಂಗಮ. ಅಂತು ಜ್ಞಾನವಪ್ಪ ಜಂಗಮ ಮುಖದಿಂದ ಶರಣ ಲಿಂಗವಾಗಿ, ಲಿಂಗಸುಖವನನುಭವಿಸುತ್ತಿಪ್ಪುದ ಜ್ಞಾನ ದಿಂದಲೇ ಕಾಣುತ್ತಿರ್ದ ಶರಣನೆಂಬುದೀಗ 'ಜಂಗಮಮುಖ ಲಿಂಗವಾದ ಕಾರಣ ಲಿಂಗದಲನುಭವಿಸಿ ನೋಡುತ್ತಿರ್ದೆನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಭಕ್ತ ನಂಗವೇ ಲಿಂಗದಂಗವಾದ ಕಾರಣ ಲಿಂಗಾಂಗಸಂಯೋಗ ಘಟಿಸಿ, ಶರಣ ಲಿಂಗ ಸುಖಿಯಾದನೆಂಬುದೀಗ 'ಭಕ್ತಕಾಯ ಮಮಕಾಯವೆಂದಿಪ್ಪನಾಗಿ ಕೂಡಲಚೆನ್ನ ಸಂಗಯ್ಯನಲ್ಲಿ ಸುಖಿಯಾದೆನು' ಎಂಬ ಶಬ್ದಕ್ಕರ್ಥ. ೭೭

ವ. ಅಂಗ ಮನ ಪ್ರಾಣ ತ್ರಿಸ್ಥಾನಸಂಗವಾಗಿ, ಮನಕ್ರೀಯುಳಿದು, ಸಾರ ಉಳಿದು ¹ನಿಂದ¹ ಅತಿರಥ ಸಮರಥರ ನುಡಿಗಡಣ ಸಂಭಾಷಣೆ

೧ ನಿಂದುದು (ಎ. ರಾ.)

ಯಿಂದ ಹೃದಯ ಕಣ್ದೆಱೆದು, ಜಂಗಮದಲ್ಲಿ ಅಱಿದ, ಲಿಂಗದಲ್ಲಿ ಮಱೆದ ಕೂಡಲಚೆನ್ನಸಂಗ ತಾನಾಗಿ.

ಟೀ. ಮಹಾನುಭಾವರ ನುಡಿಗಡಣದ ಸಂಭಾಷಣೆಯಿಂದ ಹೃದಯದಲ್ಲಿ ಜ್ಞಾನೋದಯವಾಯಿತ್ತೆಂಬುದೀಗ ' ಅತಿರಥ ಸಮರಥರ ನುಡಿಗಡಣ ಸಂಭಾಷಣೆಯಿಂದ ಹೃದಯ ಕಂದೆಱೆದು ' ಎಂಬ ಶಬ್ದಕ್ಕರ್ಥ. ಅಂತಾದ ಜ್ಞಾನೋದಯದಿಂದ ತನು ಮನ ಪ್ರಾಣಂಗಳಿಗೆ ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳು ಸಾಹಿತ್ಯವೆಂಬುದೀಗ ' ಅಂಗ ಮನ ಪ್ರಾಣ ತ್ರಿಸ್ಥಾನಸಂಗವಾಗಿ ' ಎಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಬಂಧವಾದ ಅಂಗ ಮನ ಪ್ರಾಣಂಗಳೆಲ್ಲಾ ಲಿಂಗವೆಯಾದುವೆಂಬುದೀಗ ' ಮನಕ್ರೀಯಳಿದು ಸಾರ ಉಳಿದು [೧]ನಿಂದು[೧] ' ಎಂಬ ಶಬ್ದಕ್ಕರ್ಥ. ಅಂತು ತಾನೆಲ್ಲಾ ಮಹಾಘನಲಿಂಗವೆಯಾಗಿಪ್ಪುದ ಕಂಡು ಅಱಿವುತ್ತಿರ್ಪ ಸಮ್ಯಗ್‌ಜ್ಞಾನವೇ ಜಂಗಮವೆಂಬುದೀಗ ' ಜಂಗಮದಲ್ಲಿ ಅಱಿದ ' ಎಂಬ ಶಬ್ದಕ್ಕರ್ಥ. ಅಂತು ತಾನೆ ಲಿಂಗವಾದ ಶರಣನು ತಾನು ಲಿಂಗವೆಂಬ ಹಮ್ಮ ಮಱೆದು ಲಿಂಗವೆಯಾಗಿರ್ದ ಶರಣನೆಂಬುದೀಗ ' ಲಿಂಗದಲ್ಲಿ ಮಱೆದ ಕೂಡಲಚೆನ್ನಸಂಗ ತಾನಾಗಿ ' ಎಂಬ ಶಬ್ದಕ್ಕರ್ಥ. ೭೮

ವ. ಅಂಗದಲಾಯತ ಲಿಂಗಸಾಹಿತ್ಯವಾಗಿರ್ದೆ ನಾನು. ಪರಮಸುಖ ಪರಿಣಾಮದೊಳಿರ್ದೆ ನಾನು. ಸ್ಥಾವರ ಜಂಗಮವುಭಯವೊಂದಾಗಿ ಬೇಱೆ ಭಿನ್ನಭಾವವ ವಿಚಾರಿಸಲಿಲ್ಲ ಕೂಡಲಚೆನ್ನಸಂಗಯ್ಯನಲ್ಲಿ ಸ್ವಯವಾಗಿರ್ದ ಸಹಜಾ !

ಟೀ. ಚಿತ್‌ಸ್ವರೂಪನಾದ ಶರಣನ ಅಂತರಂಗದಲ್ಲಿರ್ದ ಸತ್ಸ್ವರೂಪವಾದ ಲಿಂಗವು ಬಹಿರಂಗಕ್ಕೆ ಸಾಹಿತ್ಯವಾದಲ್ಲಿ ಶರಣನೆಲ್ಲಾ ಲಿಂಗವೆಯಾಗಿ ಲಿಂಗದ ಮಹಾನಂದದ ಸುಖದಲ್ಲಿ ಪರಿಣಾಮಿಯಾಗಿರ್ದು ಲಿಂಗವು ತಾನೆಯೆಂಬ ಮಹದಱಿವನುಳ್ಳ ಜ್ಞಾನಸ್ವರೂಪವೇ ಜಂಗಮ. ಅಂತು ಜ್ಞಾನಸ್ವರೂಪವಾಗಿಪ್ಪ ಶರಣನಲ್ಲಿ ಲಿಂಗವು ಸ್ವಾಯತವಾಗಿ, ಶರಣನೆಲ್ಲಾ ಲಿಂಗವೆಯಾಗಿ ಭೇದವಿಲ್ಲದಿಪ್ಪುದು ಸಹಜ. ಅಂತಿಪ್ಪ ಶರಣನು ಲಿಂಗವ ಬೇಱಿಟ್ಟು ನೆನೆಯಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೭೯

೧ ನಿಂದುದು (ಎ. ರಾ.)

ವ. ತೆರೆಯ ಮಱೆಯ ಕುಱುಹೆಂಬದೇನೋ ? ಒಳಗೆ ಲಿಂಗದ ಅನು ವಿಡಿದ ಬಳಿಕ ಪೂಜಿಸುವನಾರೋ ? ಪೂಜಿಸಿಕೊಂಬ ದೇವನಾರೋ? ಹಿಂದು ಮುಂದು, ಮುಂದು ಹಿಂದಾಯಿತ್ತು ! ಗೊಹೇಶ್ವರಾ, ನಾನು ನೀನು, ನೀನು ನಾನಾದ ಬಳಿಕ ಮತ್ತೇನುಂಟು ಹೇಳಾ ?

ಟೀ. ದೇಹವೆಂಬ ಜವನಿಕೆಯ ಮಱೆಯಲಿಪ್ಪುದು ದೃಶ್ಯವಪ್ಪ ಜೀವಾತ್ಮನು. ಅಂತಪ್ಪ ಜೀವಾತ್ಮನೇ ಲಿಂಗದ ಅಂಗವೆಂದಱಿದು, ಆ ಲಿಂಗಾಂಗವೆರಡೂ ಒಂದೇ ವಸ್ತುವೆಂಬ ಅನುವ ತನ್ನೊಳಗೆ ತಾನೆ ತಿಳಿದು, ಲಿಂಗಾಂಗ ಸಂಬಂಧ ಘಟಿಸಿದ ಬಳಿಕ ಶರಣನೆಂಬ ಅಂಗವೆಲ್ಲಾ ಲಿಂಗವಾಗಿ, ಲಿಂಗವೆಲ್ಲಾ ಅಂಗವಾಗಿ, ಅಂಗ ಲಿಂಗವೆಂಬ ಭೇದವಿಲ್ಲದೆ ಶರಣನೆಲ್ಲಾ ಲಿಂಗವೆಯಾಗಿರ್ದಲ್ಲಿ ಪೂಜಿಸುವನು ಪೂಜಿಸಿಕೊಂಬವನು ಎರಡೂ ಲಿಂಗವೆಯೆಂಬುದೀ ವಚನದ ತಾತ್ಪರ್ಯಾರ್ಥ. ೮೦

ವ. ನೆನೆ ನೆನೆಯೆಂದೊಡೆ ಏನ ನೆನೆವೆನಯ್ಯಾ ? ಎನ್ನ ಕಾಯವೇ ಕೈಲಾಸ ವಾಯಿತ್ತು ! ಮನ ಲಿಂಗವಾಯಿತ್ತು ! ತನು ಸೆಜ್ಜೆಯಾಯಿತ್ತು ! ನೆನೆವರೆ ದೇವರುಂಟೇ ? ನೋಡುವರೆ ಭಕ್ತರುಂಟೇ ? ಗೊಹೇಶ್ವರ ಲಿಂಗ ಲೀಯವಾಯಿತ್ತು !

ಟೀ. ಜ್ಞಾನಸ್ವರೂಪನಾದ ಶರಣನು ಲಿಂಗಾಂಗಸಂಬಂಧಿಯಾದಾಕ್ಷಣವೇ ಅಱಿವ ಅಱುಹಿಸಿಕೊಂಬವೆರಡಿಲ್ಲದೆ ಅಱಿವ ಮನವೆಲ್ಲಾ ಲಿಂಗವೆಯಾಗಿ, ಶರಣನ ಆತ್ಮಾಂಗವೇ ಲಿಂಗದ ಸೆಜ್ಜೆಗೃಹವಾಗಿ, ಕಾಯವೇ ಕೈಲಾಸವಾಗಿ, ನೆನೆವ ನೆನಹಿಸಿಕೊಂಬ ದೇವ ಭಕ್ತನೆಂಬೆರಡಿಲ್ಲದೆ ಶರಣನೆಲ್ಲಾ ಲಿಂಗವೆಯಾಗಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೮೧

ವ. ಗಿಡುವಿನ ಮೇಲಣ ತುಂಬಿ ಕೂಡೆ ವಿಕಸಿತವಾಯಿತ್ತು ತುಂಬಿ ನೋಡಾ ! ಆತುಮ ತುಂಬಿ ತುಂಬಿ, ಪರಮಾತುಮ ತುಂಬಿ ತುಂಬಿ ನೋಡಾ ! ಗೊಹೇಶ್ವರನೆಂಬ ಲಿಂಗಕ್ಕೆ ಎಱಗಿ ನಿಬ್ಬೆಱಗಾಯಿತ್ತು ತುಂಬಿ ನೋಡಾ !

ಟೀ. ಗಿಡುವೆಂದರೆ ತನುವಿಗೆ ಪೆಸರು. ಅಂತಪ್ಪ ತನುವಿನ ಮೇಲೆ ಇಷ್ಟ ಲಿಂಗಸ್ವಾಯತವಾದ ಶರಣನ ಸರ್ವಾಂಗದೊಳಗೆಲ್ಲಾ ಆ ಲಿಂಗವು ತುಂಬಿ, ಅಭಿನ್ನ ಜ್ಞಾನ ವಿಕಸಿತವಾಯಿತ್ತೆಂಬುದೀಗ 'ಗಿಡುವಿನ ಮೇಲಣ ತುಂಬಿ ಕೂಡೆ ವಿಕಸಿತ ವಾಯಿತ್ತು ತುಂಬಿ ನೋಡಾ' ಎಂಬ ಶಬ್ದಕ್ಕರ್ಥ. ಅಂತು ಅಂಗದೊಳಹೊಱಗೆಲ್ಲಾ

ಲಿಂಗವೆ ತುಂಬಿ, ಭಿನ್ನವಳಿದು ಅಭಿನ್ನಜ್ಞಾನಿಯಾದ ಶರಣನ ಆತ್ಮತ್ರಯಂಗಳೆಲ್ಲಾ ಅಖಂಡ ಪರಿಪೂರ್ಣ ಲಿಂಗವೆಯಾಯಿತ್ತೆಂಬುದೀಗ 'ಆತುಮ ತುಂಬಿ ತುಂಬಿ, ಪರಮಾತುಮ ತುಂಬಿ ತುಂಬಿ ನೋಡಾ' ಎಂಬ ಶಬ್ದಕ್ಕರ್ಥ. ಅಂತು ಶರಣನೆಲ್ಲಾ ಅಖಂಡ ಪರಿಪೂರ್ಣ ಲಿಂಗವೆಯಾಗಿ ಶಿವೋಹಂ ಎನುತಿರ್ದನಾಗಿ, ಶಿವೋಹಂ ಎಂಬ ಅಱಿವಿನ ಮಹದಹಂಕಾರವ ದಾಸೋಹಂಭಾವದಿಂದಲಳಿದು, ನಿರಹಂಭಾವದಿಂದ ಮಹಾಘನಪರಿಪೂರ್ಣ ಲಿಂಗವೆಯಾಗಿರ್ದ ಶರಣನೆಂಬುದೀಗ 'ಗೊಹೇಶ್ವರನೆಂಬ ಲಿಂಗಕ್ಕೆ ಎಱಗಿ ನಿಬ್ಬೆಱಗಾಯಿತ್ತು ತುಂಬಿ ನೋಡಾ' ಎಂಬ ಶಬ್ದಕ್ಕರ್ಥ. ೮೨

**ವ.** ದೇಹವೆಂಬ ಅರಮನೆಯಲ್ಲಿ ಮಹಾಘನಲಿಂಗವೆಂಬರಸು ಮನವೆಂಬ ಸಿಂಹಾಸನದ ಮೇಲೆ ಮೂರ್ತಿಗೊಂಡು, ಅಂತಃಕರಣಂಗಳೆಂಬ ಪರಿಚಾರಕರ ಕೈಯಿಂದ ಪಂಚೇಂದ್ರಿಯಂಗಳೆಂಬ ಪರಿವಾಣದಿಂದ ಶಬ್ದ ಸ್ಪರ್ಶ ರೂಪು ರಸ ಗಂಧಂಗಳೆಂಬ ಪದಾರ್ಥಂಗಳನು ಎಡೆಮಾಡಿಸಿಕೊಂಡು ಸವಿಯುತ್ತ, ಆನಂದವೇ ಮೂರ್ತಿಯಾಗಿರ್ದ ಕಾಣಾ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ !

**ಟೀ.** ಮಹಾಘನಲಿಂಗವು ತನ್ನ ಸ್ವಲೀಲೆಯಿಂದ ತಾನೇ ಲಿಂಗಾಂಗವೆರಡೆನಿಸಿದಲ್ಲಿ, ಅಂಗವೇ ಆತ್ಮನಾಗಿ, ಲಿಂಗವೇ ಪ್ರಾಣವಾಗಿ, ಆ ಲಿಂಗಾಂಗವೆರಡೂ ಕೂಡಿ ಶರಣನಾದನಾಗಿ, ಆ ಶರಣನೆಂಬ ಆತ್ಮಾಂಗದ ಪ್ರಾಣಸ್ವರೂಪನಾಗಿಪ್ಪ ಮಹಾಘನಲಿಂಗವು ಶರಣನ ಮನವೆಂಬ ಪೀಠದಲ್ಲಿ ಮೂರ್ತಿಗೊಂಡು, ದೇಹವೇ ದೇಗುಲವಾಗಿ, ಕರಣೇಂದ್ರಿಯಂಗಳೆಲ್ಲಾ ಸೇವಕರಾಗಿ, ಪಂಚವಿಷಯಂಗಳೇ ಪದಾರ್ಥಂಗಳಾಗಿ ಸವಿಯುತ್ತ, ಮಹಾಘನಲಿಂಗವು ಸಗುಣ ನಿರ್ಗುಣಾನಂದವೆರಡೂ ಆಚರಿಸುತ್ತಿಹನೆಂಬುದೀ ವಚನದ ತಾತ್ಪರ್ಯಾರ್ಥ. ೮೩

**ವ.** ಕಾಲೇ ಕಂಬಂಗಳಾದವೆನ್ನ, ದೇಹವೇ ದೇಗುಲವಾಯಿತ್ತಯ್ಯಾ !
ಎನ್ನ ನಾಲಗೆಯೇ ಘಂಟೆ, ಶಿರ ಸುವರ್ಣದ ಕಳಶ, ಇದೇನಯ್ಯಾ ?
ಸ್ವರವೇ ಲಿಂಗಕ್ಕೆ ಸಿಂಹಾಸನವಾಗಿರ್ದಿತ್ತಯ್ಯಾ ! ಗೊಹೇಶ್ವರಾ,
ನಿಮ್ಮ ಪ್ರಾಣಲಿಂಗಪ್ರತಿಷ್ಠೆ ಪಲ್ಲಟವಾಗದಂತಿಪ್ಪೆನಯ್ಯಾ !

**ಟೀ.** ಲಿಂಗಾಂಗಸಂಬಂಧಿಯಾದ ಶರಣನ ಪ್ರಾಣವೇ ಲಿಂಗವಾಯಿತ್ತಾಗಿ, ಆ ಪ್ರಾಣಲಿಂಗಕ್ಕೆ ವಾಯುವೆಂಬ ಮನಸ್ಸೇ ಪೀಠವಾಗಿ, ಕಾಲೇ ಕಂಭವಾಗಿ, ದೇಹವೇ ದೇಗುಲವಾಗಿ, ಶಿರವೇ ಸುವರ್ಣದ ಕಳಶವಾಗಿ, ಕರಣೇಂದ್ರಿಯಂಗ

ಳೆಲ್ಲಾ ಸೇವಕರಾಗಿ ಆ ಪ್ರಾಣಲಿಂಗಾರ್ಚನೆಯನೀ ಪರಿಯಲಿ ಮಾಡುತ್ತಿರ್ಪ ಶರಣ. ಅಂತು ತನ್ನ ಪ್ರಾಣವೇ ಲಿಂಗವಾಗಿರ್ದ ಶರಣ ಮರಳಿ ಜೀವನಾಗದಿರ್ದ ನೆಂಬುದೀ ವಚನದ ತಾತ್ಪರ್ಯಾರ್ಥ. ೮೪

ವ. ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ. ಆಕಾಶಗಂಗೆಯಲ್ಲಿ ಮಜ್ಜನ. ಹೂವಿಲ್ಲದ ಪರಿಮಳದ ಪೂಜೆ. ಹೃದಯದಲ್ಲಿ ಶಿವ ಶಿವಾ ಎಂಬ ಮಂತ್ರ. ಇದು ಅದ್ವೈತ ಕಾಣಾ ಗೊಹೇಶ್ವರಾ !

ಟೀ. ಆತ್ಮಾಂಗದ ಪ್ರಾಣಕಳಾಲಿಂಗವು ಕಾಯವೆಂಬ ಸೆಜ್ಜೆಗೃಹದಲ್ಲಿ ಇಪ್ಪುದೆಂಬುದೀಗ ' ಪ್ರಾಣಲಿಂಗಕ್ಕೆ ಕಾಯವೇ ಸೆಜ್ಜೆ ' ಎಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮನೆಂಬುದೀಗ ' ಆಕಾಶ ' ವೆಂಬ ಶಬ್ದಕ್ಕರ್ಥ. ಆ ಆತ್ಮನು ತನ್ನ ಪ್ರಾಣಕಳಾಲಿಂಗವ ತಂದು, ಜ್ಞಾನಕ್ರೀಯಿಂದ ಸಂಯೋಗ ಘಟಿಸಿ, ಆ ಆತ್ಮಾಂಗ ದಲ್ಲಿ ಆನಂದಜಲ ತೋರಲು, ಆ ತೋರಿದ ಆತ್ಮಾನಂದ ಜಲವೇ ಲಿಂಗಕ್ಕೆ ಅಭಿಷೇಕವಾಯಿತ್ತೆಂಬುದೀಗ ' ಆಕಾಶಗಂಗೆಯಲ್ಲಿ ಮಜ್ಜನ ' ಎಂಬ ಶಬ್ದಕ್ಕರ್ಥ. ಅಂತು ಲಿಂಗಾಂಗ ಸಂಯೋಗ ಘಟಿಸಿದಲ್ಲಿ ಏಕರಸವಾಗಿ ಭಿನ್ನವಳಿದು, ಅಭಿನ್ನ ಜ್ಞಾನ ಸದ್ವಾಸನೆ ತೋರಲು, ಆ ತೋರಿದ ಅಭಿನ್ನಜ್ಞಾನಸದ್ವಾಸನೆಯೇ ಆ ಪ್ರಾಣಲಿಂಗಕ್ಕೆ ಪರಿಪೂರ್ಣವಾದ ಪೂಜೆಯೆಂಬುದೀಗ ' ಹೂವಿಲ್ಲದ ಪರಿಮಳದ ಪೂಜೆ ' ಯೆಂಬ ಶಬ್ದಕ್ಕರ್ಥ. ಅಂತು ಭಿನ್ನವಳಿದು ಲಿಂಗವೆಯಾದ ಶರಣನು ಅಭಿನ್ನಜ್ಞಾನದಿಂದ ಶಿವೋಹಂ ಶಿವೋಹಂ ಎನುತಿರ್ದನೆಂಬುದೀಗ ' ಹೃದಯದಲ್ಲಿ ಶಿವ ಶಿವಾ ಎಂಬ ಮಂತ್ರ ' ವೆಂಬ ಶಬ್ದಕ್ಕರ್ಥ. ಅಂತು ಅಂಗಲಿಂಗವೆಂಬೆರ ಡಿಲ್ಲದೆ ಶರಣನೆಲ್ಲಾ ಮಹಾಘನಲಿಂಗವೆಯಾಗಿರ್ದನೆಂಬುದೀಗ ' ಇದು ಅದ್ವೈತ ಕಾಣಾ ' ಎಂಬ ಶಬ್ದಕ್ಕರ್ಥ. ೮೫

ವ ಪೂರಾಯದ ಘಾಯ ತಾಗಿ ನೊಂದೆನೆಂದರಿಯೆನಯ್ಯಾ ! ಸತ್ತೆ ನೆಂದರಿಯೆನಯ್ಯಾ ! ಅದೇನೆಂದರಿಯೆನಯ್ಯಾ ! ಕಾಯ ಪಲ್ಲಟ ವಾಯಿತ್ತು, ಗೊಹೇಶ್ವರಲಿಂಗ ಸ್ವಾಯತವಾಯಿತ್ತಾಗಿ.

ಟೀ. ಶರಣನ ಅಂಗದಲ್ಲಿ ಅಖಂಡ ಚಿತ್‌ಪ್ರಭಾಲಿಂಗವು ಉದಯವಾದಾ ಕ್ಷಣವೇ ಲಿಂಗದ ಚಿತ್‌ಪ್ರಭಾಕಿರಣಶಸ್ತ್ರಂಗಳಿಂದ ಶರಣನೆಂಬಂಗಭಾವವಳಿದು, ಶರಣನೆಲ್ಲಾ ಅಖಂಡ ಪರಿಪೂರ್ಣ ಲಿಂಗವೆಯಾದನಾಗಿ, ಅಂತು ಲಿಂಗವಾದ ಶರ ಣನು ತಾನು ಹಿಂದೆ ತನುವಿಡಿದು ಬಂದ ಜನನ ಮರಣದ ಬಾಧೆಗಳೆಲ್ಲವ

ಮಱೆದು, ಅವನೇನೆಂದಱಿಯದೆ ಮಹಾಘನಲಿಂಗವಾಗಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೮೬

ವ. ಮನದ ಕಾಲತ್ತಲು, ತನುವಿನ ಕಾಲಿತ್ತಲು. ಅನುಭಾವದನುವ ನೆನೆಯುತ್ತ ನೆನೆಯುತ್ತ ಗಮನಗೆಟ್ಟಿತ್ತು. ಲಿಂಗಮುಖದಲಾದ ಸೂಚನೆಯ ಸುಖವ ಕಂಡು ಗಮನಗೆಟ್ಟಿತ್ತು. ಅನುವಾಯಿತ್ತು ಅನುವಾಯಿತ್ತು. ಅಲ್ಲಿಯೇ ತಲ್ಲೀಯವಾಯಿತ್ತು ಗೊಹೇಶ್ವರನೆಂಬ ಲಿಂಗೈಕ್ಯಂಗೆ.

ಟೀ. ಅಂತರಂಗದಲ್ಲಿ ಶರಣನ ಮನದಱಿವು ಲಿಂಗಾಂಗ ಸಂಯೋಗಾನುಭಾವದ ಅನುಸಂಧಾನದ ನೆನಹೆಯಾಗಿದ್ದಿತ್ತು. ಬಾಹ್ಯದಲ್ಲಿ ತನುವಿನ ಚರಿತ್ರವೆಲ್ಲಾ ಕ್ರಿಯಾಚಾರಿತ್ರವಾಗಿದ್ದಿತ್ತೆಂಬುದೀಗ 'ಮನದ ಕಾಲತ್ತಲು, ತನುವಿನ ಕಾಲಿತ್ತಲು' ಎಂಬ ಶಬ್ದಕ್ಕರ್ಥ. ಅಂತು ಶರಣ ತನ್ನ ನಿಜವಪ್ಪ ಮಹಾಘನಲಿಂಗದತ್ತಲು ಅಭಿಮುಖವಾಗಿ ಲಿಂಗವ ನೆನೆಯುತ್ತ ಜ್ಞಾನಕ್ರೀಯನಾಚರಿಸುತ್ತಿಪ್ಪ ಶರಣನತ್ತಲು ಮಹಾಘನಲಿಂಗವು ಅಭಿಮುಖವಾಗಿ ಮನಕ್ಕೆ ಸಂಧಾನವಾಗಲು ಆ ಕ್ಷಣವೇ ಸನ್ನಿಧಾನಸುಖದೊಳಗೆ ಮನದ ಬಯಕೆಯಳಿದು ಹೋಯಿತ್ತೆಂಬುದೀಗ 'ಅನುಭಾವದನುವ ನೆನೆಯುತ್ತ ನೆನೆಯುತ್ತ ಗಮನಗೆಟ್ಟಿತ್ತು. ಲಿಂಗಮುಖದಲಾದ ಸೂಚನೆಯ ಸುಖವ ಕಂಡು ಗಮನಗೆಟ್ಟಿತ್ತು' ಎಂಬ ಶಬ್ದಕ್ಕರ್ಥ. ಅನುವೆಂದರೆ ಪರಬ್ರಹ್ಮವಪ್ಪ ಲಿಂಗವು. ಅಂತು ಲಿಂಗವು ಶರಣನ ಅಂಗವನೊಳಕೊಂಡು ಅಂಗ ಲಿಂಗವೇಕಾಗಿ ಲಿಂಗವೆಯಾದ ಶರಣನೆಂಬುದೀಗ 'ಅನುವಾಯಿತ್ತು ಅನುವಾಯಿತ್ತು. ಅಲ್ಲಿಯೇ ತಲ್ಲೀಯವಾಯಿತ್ತು ಗೊಹೇಶ್ವರನೆಂಬ ಲಿಂಗೈಕ್ಯಂಗೆ' ಎಂಬ ಶಬ್ದಕ್ಕರ್ಥ. ೮೭

ವ. ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗವೆಂದೆಂಬರು. ಆದಿ ಅನಾದಿ ಸಂದಣಿ ಸ್ವಯವಾಯಿತ್ತು, ಪ್ರಣವ ಪ್ರಜ್ವಲಿತ ಕುಳವಳಿದಡೆ ಪ್ರಾಣಲಿಂಗ ಕೂಡಲಚೆನ್ನಸಂಗಾ ನಿಮ್ಮ ಶರಣಂಗೆ.

ಟೀ. ಸ್ತ್ರೀಲಿಂಗವೆಂದೊಡೆ ದೇಹ. ಪುಲ್ಲಿಂಗವೆಂದೊಡೆ ಆತ್ಮನು. ನಪುಂಸಕಲಿಂಗವೆಂದೊಡೆ ಮನಸ್ಸೆಂಬ ಶಬ್ದಕ್ಕರ್ಥ. ಅಂತಪ್ಪ ಸ್ತ್ರೀಲಿಂಗ ಪುಲ್ಲಿಂಗ ನಪುಂಸಕಲಿಂಗವೆಂದಡೆಯೂ ಆದಿ ಅನಾದಿಸಂದಣಿಯೆಂದಡೆಯೂ ಒಂದೇ ಅರ್ಥ. ಅದೆಂತೆಂದೊಡೆ : ಆದಿಯೆಂದೊಡೆ ದೇಹ. ಅನಾದಿಯೆಂದೊಡೆ ಆತ್ಮನು. ಸಂದಣಿಯೆಂದೊಡೆ ಮನಕರಣಂಗಳು. ಅಂತಪ್ಪ ದೇಹ ಆತ್ಮ ಮನಕರಣಂಗಳೆಲ್ಲಾ ತನ್ನ ಮುನ್ನಿನ ಸ್ವಯವಪ್ಪ ಲಿಂಗವಾದ ಪರಿಯೆಂತೆಂದೊಡೆ : ಪ್ರಣವಪ್ರಕಾಶವೆಂಬ

ಜ್ಞಾನಪ್ರಕಾಶದಿಂದಲಾಯಿತ್ತು. ಅಂತು ಜ್ಞಾನಪ್ರಕಾಶದಿಂದ ಲಿಂಗವಾದಲ್ಲಿ ಆ ಲಿಂಗವು ಆನೆಂಬುದೊಂದಱಿವಡಗಿ ನಿಂದರೆ ಆ ಮಹಾಘನಪ್ರಾಣಲಿಂಗವೆಯಾಗಿಪ್ಪ ಶರಣನೆಂಬುದೀಗ ' ಪ್ರಣವ ಪ್ರಜ್ವಲಿತ ಕುಳವಳಿದಡೆ ಪ್ರಾಣಲಿಂಗ ನಿಮ್ಮ ಶರಣಂಗೆ ' ಎಂಬ ಶಬ್ದಕ್ಕರ್ಥ. ೮೮

ವ. ಅಂಗದ ಮೇಲೆ ಲಿಂಗವಱಿತು, ಲಿಂಗದ ಮೇಲೆ ಅಂಗವಱಿತು, ಭಾವ ತುಂಬಿ ಪರಿಣಾಮವಱಿತು, ನಾಮವಿಲ್ಲದ ದೇವರಿಗೆ ನೇಮವೆಲ್ಲಿಯದೋ ಗುಹೇಶ್ವರಾ ?

ಟೀ. ಮಹಾಘನಲಿಂಗವೆ ಇಷ್ಟಲಿಂಗವಾಗಿ ಶರಣನ ಅಂಗವನೊಳಕೊಂಡು ಆ ಅಂಗದೊಳಗೆಲ್ಲಾ ಲಿಂಗವೆ ಪರಿಪೂರ್ಣವಾಗಿ, ಅಂಗ ಲಿಂಗವೆಂಬ ಭೇದವಳಿದು ಅಂಗ ಮನ ಭಾವವೆಲ್ಲಾ ಅಖಂಡ ಪರಿಪೂರ್ಣ ಲಿಂಗವೆಯಾಗಿ, ಲಿಂಗಾನಂದ ಸುಖದ ಪರಿಣಾಮವೆ ನೆಲೆಗೊಂಡು ಶಿವೋಹಂ ಎನುತಿರ್ದನಾಗಿ, ಆ ಶರಣ ಶಿವೋಹಂ ಎಂಬ ಮಹದಹಂಕಾರದ ಅಱಿವಡಗಿ ನಿಂದಲ್ಲಿ, ದೇವ ಭಕ್ತನೆಂಬ ನಾಮ ಸೀಮೆ, ನೇಮ ವ್ರತಂಗಳೆಂಬ ಭಿನ್ನಕ್ರೀಗಳೇನೂ ಇಲ್ಲದೆ ಮಹಾಘನ ಲಿಂಗವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೮೯

ವ. ನೆನಹು ಸತ್ತಿತ್ತು. ಭ್ರಾಂತು ಬೆಂದಿತ್ತು. ಅಱಿವು ಅಱತಿತ್ತು. ಕುಱುಹುಗೆಟ್ಟಿತ್ತು. ಗತಿಯನಱಿಸಲುಂಟೇ ? ಮತಿಯನಱಿಸಲುಂಟೇ? ಅಂಗವೆಲ್ಲಾ ನಷ್ಟವಾಗಿ ಲಿಂಗ ಲೀಯವಾಯಿತ್ತು. ಕಂಗಳಂಗದ ಕಳೆಯ ಬೆಳಗಿನ ಭಂಗ ಹಿಂಗಿತ್ತು ಗುಹೇಶ್ವರಾ !

ಟೀ. ಕಂಗಳೆಂದರೆ ಜ್ಞಾನದೃಕ್ಕು. ಅಂತಪ್ಪ ಜ್ಞಾನವುಳ್ಳ ಆತ್ಮಾಂಗವೇ ಶರಣ. ಅಂತು ಜ್ಞಾನಾತ್ಮನಾಗಿರ್ದ ಶರಣನು ತನ್ನ ನಿಜವಪ್ಪ ಲಿಂಗದ ಕಳಾಬೆಳಗ ಲಕ್ಷ್ಯವಿಟ್ಟು ನೆನೆವುದು, ಅಱಿವುದು, ಭಾವಿಸುವುದು, ಕ್ರೀಯ ಮಾಡುವುದು ಎಲ್ಲವೂ ಶರಣನೆಂಬ ಆತ್ಮಾಂಗಕ್ಕೆ ಬಾಧೆ. ಅಂತು ಬಾಧೆಬಡುತ್ತ ಶಿವಾಪೇಕ್ಷನಾಗಿರ್ದ ಶರಣನ ಆತ್ಮಾಂಗವು ಲಿಂಗದೊಳಗೆ ಸಮರಸೈಕ್ಯವಾಗಿ, ಅಂಗವೆಲ್ಲಾ ಲಿಂಗವಾದಲ್ಲಿ, ಶರಣಂಗೆ ಲಿಂಗವ ಲಕ್ಷ್ಯವಿಟ್ಟು ನೆನೆಯಬೇಕು, ಅಱಿಯಬೇಕು, ಭಾವಿಸಬೇಕು, ಕ್ರೀವಿಡಿದು ಕೂಡಬೇಕು ಎಂಬ ಅವಸ್ಥೆಗಳು ಮೊದಲಾದ ಭವಬಾಧೆಗಳೆಲ್ಲವೂ ನಷ್ಟವಾಗಿ, ನಿಶ್ಚಿಂತಸುಖದಲ್ಲಿ ಲಿಂಗವೆಯಾಗಿರ್ದ ಶರ ಶರಣನು. ಅಂತಪ್ಪ ಶರಣನ ನಡೆ ನುಡಿ ಚಾರಿತ್ರ ಎಂತಾದಡೆಯೂ ಅಂತಿಂತೆನಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೯೦

ವ. ಸಮುದ್ರ ಘನವೆಂಬೆನೇ ? ಧರೆಯ ಮೇಲಡಗಿತ್ತು. ಧರೆ ಘನವೆಂಬೆನೇ ? ನಾಗೇಂದ್ರನ ಫಣಾಮಣಿಯ ಮೇಲಡಗಿತ್ತು. ನಾಗೇಂದ್ರ ಘನವೆಂಬೆನೇ ? ಪಾರ್ವತಿಯ ಕಿರುಕುಣಿಕೆಯ ಮುದ್ರೆಯಾಯಿತ್ತು. ಪಾರ್ವತಿ ಘನವೆಂಬೆನೇ ? ಪರಮೇಶ್ವರನ ಅರ್ಧಾಂಗಿಯಾದಳು. ಅಂತಹ ಪರಮೇಶ್ವರ ಘನವೆಂಬೆನೇ ? ನಮ್ಮ ಕೂಡಲಸಂಗನ ಶರಣರ ಮನದ ಕೊನೆಯ ಮೊನೆಯ ಮೇಲಡಗಿದನಾಗಿ ನಮ್ಮ ಶರಣರೇ ಘನವೆಂಬೆ !

ಟೀ. ಈ ವಚನ ಕಾಣಬಂದರ್ಥ. ೯೧

ಪ್ರಾಣಲಿಂಗಿಸ್ಥಲ ಸಂಪೂರ್ಣ.

**ಅಂತು ಸ್ಥಲ ೧೩ಕ್ಕಂ ಶ್ಲೋಕ ೧೧೭ಕ್ಕಂ ವಚನ ೫೨೮ಕ್ಕಂ**

**ಮಂಗಳಂ**

**ಶ್ರೀ**



# ೧೪ ಶರಣಸ್ಥಲ

*

ಸೂತ್ರ. ಅಂತು ಸರ್ವಕಾರಣವಾದ ಅಖಂಡ ಚಿಚ್ಚೈತನ್ಯಲಿಂಗವೇ ಪ್ರಾಣಸ್ವರೂಪಾಗಿರ್ದ ಪ್ರಾಣಲಿಂಗಿಯ ಜ್ಞಾನದೃಷ್ಟಿಗೆ ತೋಱುವ ತೋಱಿಕೆಯೆಲ್ಲಾ ಲಿಂಗಮಯವಾಗಿ ಕಾಣುತ್ತಿರಲು ಸರ್ವವು ಲಿಂಗಮಯವಾಗಿ ಕಾಂಬ ಚಿದ್‌ದೃಕ್ಕನುಳ್ಳ ಶರಣನೇ ಚಿತ್‌ಸ್ವರೂಪು. ಆ ಚಿತ್‌ಸ್ವರೂಪವೇ ಲಿಂಗದ ಅಭಿನ್ನ ಚಿಚ್ಛಕ್ತಿ. ಅಂತು ಲಿಂಗದ ಅಭಿನ್ನ ಚಿಚ್ಛಕ್ತಿಸ್ವರೂಪವೇ ಶರಣನಾದ ಕಾರಣ ಶರಣನೇ ಸತಿ, ಲಿಂಗವೇ ಪತಿಯೆನಿಸಿತ್ತು. ಆ ಪತಿಯೆನಿಸಿದ ಚಿದ್‌ಘನಲಿಂಗಕ್ಕೆಯೂ, ಆ ಸತಿಯೆನಿಸಿದ ಚಿತ್‌ಸ್ವರೂಪಾದ ಶರಣಂಗೆಯೂ ಎಂದೆಂದೂ ವಿಯೋಗವಿಲ್ಲ. ಅದು ಹೇಂಗೆಂದೊಡೆ : ಚಿನ್ನ ಚಿನ್ನದ ಬಣ್ಣದಂತೆ, ರತ್ನ ರತ್ನದ ಕಾಂತಿಯಂತೆ ಇಪ್ಪುದಾಗಿ, ಅಂತಿಪ್ಪ ಚಿದ್‌ಘನಲಿಂಗದ ಚಿತ್‌ಪ್ರಭಾಶಕ್ತಿಯೂ ಆ ಲಿಂಗವ ಕೂಡಿಕೊಂಡೇ ಶರಣರೂಪಾಯಿತ್ತಾಗಿ, ಆ ಶರಣನಂಗದ ಸರ್ವೇಂದ್ರಿಯ ಸುಖಂಗಳನೆಲ್ಲಾ ಲಿಂಗವೆ ಭೋಗಿಸುತ್ತಿಪ್ಪನು. ಅಂತು ಭೋಗಿಸುತ್ತಿಪ್ಪ ಲಿಂಗದ ಅಭಿನ್ನದಱಿವಾಗಿಪ್ಪನಾಗಿ ಶರಣ ತಾನೆಲ್ಲಾ ಲಿಂಗವೆಂದು, ಆ ಲಿಂಗಾನಂದಸುಖವೆಲ್ಲಾ ತನ್ನದಾಗಿ ಭೋಗಿಸುತ್ತಿಪ್ಪ ಶರಣ. ಅಂತು ಅಭಿನ್ನಜ್ಞಾನದಿಂದ ಲಿಂಗವು ತಾನಾಗಿ ಎರಡಿಲ್ಲದೆ ಅದ್ವಯಜ್ಞಾನಾನಂದದಿಂದಲಿಪ್ಪುದೇ ಆನಂದಭಕ್ತಿ. ಅಂತಪ್ಪ ಅದ್ವಯಾನಂದ ಭಕ್ತಿಸ್ವರೂಪನೇ ಶರಣನಾದ ಕಾರಣ ಶರಣಸ್ಥಲವೆಂದು ಹೇಳಲಾದುದು.

**ಶರಣಸ್ಥಲಕ್ಕೆ ಶ್ಲೋಕ :**

ಪತಿರ್ಲಿಂಗಂ ಸತೀ ಚಾಹಮಿತಿಯುಕ್ತಂ ಸದಾ ತಥಾ
ಪಂಚೇಂದ್ರಿಯಸುಖಂ ನಾಸ್ತಿ ಶರಣಸ್ಥಲಮುತ್ತಮಂ

ಟೀ. ಲಿಂಗವೇ ಪತಿ, ತಾನೆ ಸತಿಯೆಂಬ ಭಾವದಲ್ಲಿ ಆಚರಿಸಿ, ಪಂಚೇಂದ್ರಿಯಂಗಳ ಸುಖವ ತಾನು ಬಯಸದೆ ಇದ್ದಡೆ ಅದು ಶರಣಸ್ಥಲವು. ೧

ಶರಣಸ್ಥಲಕ್ಕೆ ವಚನ :

**ವ.** ಆದಿಯಲ್ಲಿ ಶಿವಬೀಜವಾದವರಿಗಲ್ಲದೆ ವೇದ್ಯವಾಗದು ಶಿವಜ್ಞಾನ, ಶಿವಭಕ್ತಿ. ಲಿಂಗಸ್ಥಲವಳವಡದು, ಜಂಗಮಸ್ಥಲವಳವಡದು, ಪಾದೋದಕ ಪ್ರಸಾದಸ್ಥಲವಳವಡದು ನರಕದಲ್ಲಿ ಬೀಳುವ ಕರ್ಮಿಗಳಿಗೆ. ಕೂಡಲಸಂಗನ ಶರಣರ ಅನುಭಾವ ಭವದುಃಖಿಗಳಿಗಳವಡದು.

ಟೀ. ತಾನು ಶಿವಾಂಶಿಕನೆಂದಱಿದು, ತನ್ನ ನಿಜವ ತಿಳಿದು ಆಚರಿಸಬಲ್ಲ ಶರಣರಿಗೆ ಶಿವಜ್ಞಾನ ಶಿವಭಕ್ತಿಯಳವಟ್ಟು, ಲಿಂಗಾಂಗಸಂಬಂಧ ಘಟಿಸಿ, ಆ ಶರಣನು ಲಿಂಗವೆಯಾಗಿಪ್ಪನಲ್ಲದೆ, ದ್ವೈತಭಾವದಿಂದ ಎಂದೂ ಮಲಮಾಯಾದಿ ಕರ್ಮಯುಕ್ತನಪ್ಪ ಜೀವ ತಾನೆಂಬ ಕರ್ಮಕಾಂಡಿಗಳಿಗೆ ಭವ ಕರ್ಮ ನರಕ ತಪ್ಪದೆಂಬುದೀ ವಚನದ ತಾತ್ಪರ್ಯಾರ್ಥ. ೧

**ವ.** ಉಂಬ ಬಟ್ಟಲು ಬೇಱೆ ಕಂಚಲ್ಲ. ನೋಡುವ ದರ್ಪಣ ಬೇಱೆ ಕಂಚಲ್ಲ. ಭಾಂಡವೊಂದೇ, ಭಾಜನವೊಂದೇ. ಬೆಳಗೆ ಕನ್ನಡಿಯೆನಿಸಿತ್ತಯ್ಯಾ ! ಅಱಿದೊಡೆ ಶರಣ. ಮಱೆದೊಡೆ ಮಾನವ. ಮಱೆಯದೆ ಪೂಜಿಸು ನಮ್ಮ ಕೂಡಲಸಂಗಮದೇವನ.

ಟೀ. ಈ ವಚನ ಕಾಣಬಂದರ್ಥ. ೨

**ವ.** ಪೂಜಿಸುವನ್ನಕ್ಕರ ಫಲದಾಯಕ ಕಂಡಾ ! ಸಹಜಸಂಬಂಧದನು ಹುಟ್ಟದನ್ನಕ್ಕ ಎರಡೆಂದೆನಿಸುವುದು. ಗಮನ ನಿರ್ಗಮನವಾಗದನ್ನಕ್ಕ, ಆಸೆಯಾಮಿಷಂಗಳಳಿಯದನ್ನಕ್ಕ ಭಕ್ತಿ ಮತ್ತೆಲ್ಲಿಯದೋ ? ಘಟದೊಳಗೆ ದಿಟವಾಗಿರ್ದ ಪಂಚಭೂತವಳಿಯದನ್ನಕ್ಕ ಕೂಡಲಚೆನ್ನಸಂಗಯ್ಯನಲ್ಲಿ ಶರಣನೆನಿಸಿಕೊಳಲೆಂತು ಬಹುದು ?

ಟೀ. ಒಂದೆ ಪರಬ್ರಹ್ಮವು ಲಿಂಗಾಂಗವೆರಡಾದಲ್ಲಿ ಅಂಗವಾದ ಆತ್ಮನು ತಾನೆಂದು ತನ್ನ ನಿಜವ ತಿಳಿದು, ಲಿಂಗಾಂಗವೆರಡಕ್ಕೆ ಭೇದವಿಲ್ಲೆಂದಱಿದು, ಲಿಂಗದಿಂದೊಗೆದ ಪಂಚಭೌತಿಕದೇಹ ಕರಣೇಂದ್ರಿಯಂಗಳನೆಲ್ಲವ ಲಿಂಗಕ್ಕರ್ಪಿಸಿ, ಲಿಂಗಾಂಗಸಂಬಂಧದ ಭಕ್ತಿಯೋಗವ ಬಲ್ಲಡೆ ಲಿಂಗವಪ್ಪನೆಂಬುದೀಗ ‘ ಸಹಜ

ಸಂಬಂಧದ ಅನು ' ವೆಂಬ ಶಬ್ದಕ್ಕರ್ಥ. ಅಂತಪ್ಪ ಭಕ್ತಿಯೋಗವನಱಿವ ಸಮ್ಯಗ್‌ಜ್ಞಾನೋದಯವಿಲ್ಲದೆ ಲಿಂಗವ ಭಿನ್ನವಿಟ್ಟು ಪೂಜಿಸಿ, ಲಿಂಗದಲ್ಲಿ ಫಲ ಪದವ ಬಯಸುವ ಆಸೆಯುಳ್ಳವರು ಭವಕ್ಕೆ ಬರುತ್ತಿಪ್ಪವರಾಗಿ, ಅವರು ಶರಣ ಪಥಕ್ಕೆ ಸಲ್ಲರೆಂಬುದೀ ವಚನದ ತಾತ್ಪರ್ಯಾರ್ಥ. ೩

ವ. ರೂಪನೆ ಕಂಡು, ನಿರೂಪನೆ ಕಾಣರು. ತನುವನೆ ಕಂಡು, ಅನುವನೆ ಕಾಣರು. ಆಚಾರವನೆ ಕಂಡು, ವಿಚಾರವನೆ ಕಾಣರು. ಗೊಹೇಶ್ವರಾ, ನಿಮ್ಮ ಕುಱುಹನೆ ಕಂಡು ಕೂಡಲಱಿಯದೆ ಕೆಟ್ಟರು.

ಟೀ. ಇಷ್ಟಲಿಂಗದ ರೂಪನೆ ಕಂಡು ಪೂಜಿಸುತ್ತಿಪ್ಪರಲ್ಲದೆ ಆ ರೂಪಿನೊಳಗೆ ನಿರೂಪಾಗಿಪ್ಪ ಪರಮಚಿತ್ಕಲಾವಸ್ತುವ ಕಾಣರು ಜ್ಞಾನದೃಕ್ಕಿಲ್ಲದ ಕಾರಣವೆಂಬುದೀಗ ' ರೂಪನೆ ಕಂಡು, ನಿರೂಪನೆ ಕಾಣರು ' ಎಂಬ ಶಬ್ದಕ್ಕರ್ಥ. ತನ್ನನು ತನುರೂಪಾಗಿ ಕಾಣುತ್ತಿಹರಲ್ಲದೆ ತಾನು ಪರಬ್ರಹ್ಮಾಂಶಿಕನೆಂದು ತನ್ನ ಕಾಬ ಜ್ಞಾನ ತನಗಿಲ್ಲವೆಂಬುದೀಗ ' ತನುವನೆ ಕಂಡು, ಅನುವನೆ ಕಾಣರು ' ಎಂಬ ಶಬ್ದಕ್ಕರ್ಥ. ಅಂತು ಲಿಂಗಾಂಗವೆರಡಱ ಸ್ವರೂಪವನಱಿವ ಜ್ಞಾನವಿಚಾರವಿಲ್ಲದೆ ಬಾಹ್ಯಕ್ರಿಯನೆ ಆಚರಿಸಿ ಕೆಟ್ಟರು ಕೆಲಬರು ಎಂಬುದೀಗ ' ಆಚಾರವನೆ ಕಂಡು, ವಿಚಾರವನೆ ಕಾಣರು ' ಎಂಬ ಶಬ್ದಕ್ಕರ್ಥ. ವೇದಾಂತಜ್ಞಾನದಿಂದ ಕೆಲಬರು ಬ್ರಹ್ಮವ ಕುಱುಹಿಟ್ಟರಲ್ಲದೆ ಆ ಕುಱುಹಿಟ್ಟ ಪರಬ್ರಹ್ಮವ ಕೂಡುವ ಭಕ್ತಿಯೋಗವನಱಿಯದೆ ಕೆಟ್ಟರು ವೇದಾಂತಜ್ಞಾನಿಗಳೆಂಬುದೀಗ ' ಗೊಹೇಶ್ವರಾ, ನಿಮ್ಮ ಕುಱುಹನೆ ಕಂಡು ಕೂಡಲಱಿಯದೆ ಕೆಟ್ಟರು ' ಎಂಬ ಶಬ್ದಕ್ಕರ್ಥ. ೪

ವ. ಹರಿದಱಸಿಹೆನೆಂದಡೆ ಮನವಿಕಾರ. ಸುಳಿದಱಸಿಹೆನೆಂದಡೆ ಪವನವಿಕಾರ. ನಿಂದಱಸಿಹೆನೆಂದಡೆ ದೇಹವಿಕಾರ. ಒಳಗಱಸಿಹೆನೆಂದಡೆ ಜ್ಞಾನವಿಕಾರ. ಅಱಸಲಿಲ್ಲದೆ ಬೆರಸಬಲ್ಲಡೆ ಆತನೇ ಶರಣ ಗೊಹೇಶ್ವರಾ !

ಟೀ. ಫಲ ಪದ ಮುಕ್ತಿಗಳ ಬಯಸಿ ಹಲವು ತೀರ್ಥಕ್ಷೇತ್ರಂಗಳ ತಿರುಗುವುದೆಲ್ಲಾ ಮನವಿಕಾರವೆಂಬುದೀಗ ' ಹರಿದಱಸಿಹೆನೆಂದಡೆ ಮನವಿಕಾರ ' ವೆಂಬ ಶಬ್ದಕ್ಕರ್ಥ. ಕುಂಭಕ ಪೂರಕದಿಂದ ವಾಯುವ ಹತ್ತಿಸಿ ಇಳುಹುತ್ತ ವಾಯುಮುಖದಿಂದ ಯೋಗವ ಸಾಧಿಸುವ ಯೋಗವೆಲ್ಲವೂ ವಾಯುವಿಕಾರವೆಂಬುದೀಗ ' ಸುಳಿದಱಸಿಹೆನೆಂದಡೆ ಪವನವಿಕಾರ ' ವೆಂಬ ಶಬ್ದಕ್ಕರ್ಥ. ದೇಹೇಂದ್ರಿಯಂಗಳ ನಿಗ್ರಹವ ಮಾಡಿ ಬಂಧನಕಿಕ್ಕಿ ನಿಲಿಸಿ ತಪೋಮುಖದಿಂದ ಮೋಕ್ಷವ ಸಾಧಿಸಿಹೆ

ನೆಂಬುದೆಲ್ಲಾ ದೇಹವಿಕಾರವೆಂಬುದೀಗ 'ನಿಂದಱಿಸಿಹೆನೆಂದಡೆ ದೇಹವಿಕಾರ' ವೆಂಬ ಶಬ್ದಕ್ಕರ್ಥ. ತನ್ನಾತ್ಮವಿಚಾರವ ವಿಚಾರಿಸುವ ಜ್ಞಾನವೆಲ್ಲವೂ ಜ್ಞಾನವಿಕಾರವೆಂಬುದೀಗ 'ಒಳಗಱಿಸಿಹೆನೆಂದಡೆ ಜ್ಞಾನವಿಕಾರ' ವೆಂಬ ಶಬ್ದಕ್ಕರ್ಥ. ಅಂತು ಲಿಂಗವ ಭಿನ್ನವಿಟ್ಟು ಅಱಿಸುವ ಭಿನ್ನಜ್ಞಾನದ ವಿಕಾರ ಭಾವನೆಗಳೇನೂ ಇಲ್ಲದೆ ತನ್ನಂಗದೊಳಹೊಱಗೆ ಅನನ್ಯಪರಿಪೂರ್ಣವಾಗಿಪ್ಪ ಅಖಂಡ ಚಿಚ್ಚೈತನ್ಯಲಿಂಗವ ತನಗನ್ಯವಿಡದೆ ಅಱಿದು ಬೆರೆದು ಭಿನ್ನದೋಱದೆ ಲಿಂಗವೆಯಾಗಿಪ್ಪ ಭಕ್ತಿಯೋಗವ ಬಲ್ಲಾತನೇ ಶರಣನೆಂಬುದೀಗ 'ಅಱಿಸಲಿಲ್ಲದೆ ಬೆರಸಬಲ್ಲಡೆ ಆತನೇ ಶರಣ' ನೆಂಬ ಶಬ್ದಕ್ಕರ್ಥ. ೫

**ವ.** ಭವವಿರಹಿತಂಗೆ ಭಕ್ತಿಯ ಮಾಡುವವರು ನೀವು ಕೇಳಿರಣ್ಣಾ ! ಭವಬಾಧೆಯೊಳಗೆ ನೀವಿರ್ದು ಅಭವನ ಭಕ್ತಿಯ ಮಾಡುವ ಪರಿಯಿನ್ನೆಂತೋ ? ತಾನಭವನಾದಲ್ಲದೆ ಸಹಜಭಕ್ತಿಯ ಮಾಡಬಾರದು ಗೂಹೇಶ್ವರಾ !

**ಟೀ.** ಎಂದೆಂದೂ ಮಲಮಾಯಾದಿಯುಕ್ತರಾಗಿ ಭವಭವಕ್ಕೆ ಬರುತ್ತಿಹ ಜೀವ ತಾನೆಂದು ದ್ವೈತಭಾವದಿಂದ ಲಿಂಗವ ಭಿನ್ನವಿಟ್ಟು ಪೂಜಿಸಿದವರೆಲ್ಲರೂ ಭವಕ್ಕೆ ಬರುತ್ತಿಹರು. ಅಂತು ಭವಕ್ಕೆ ಬರುತ್ತಿಹ ಜೀವರು ಮಾಡಿದ ಪೂಜೆ ಶಿವಂಗೆ ಭಕ್ತಿಯಲ್ಲ. ಮತ್ತೆಂತೆಂದಡೆ : ಶಿವ ತಾನೆ ಪೂಜ್ಯ ಪೂಜಕನಾಗಿರಬೇಕೆಂದು ಲಿಂಗಾಂಗವೆರಡಾದಲ್ಲಿ, ಅಂಗವಾದ ಶಿವಾತ್ಮನು ತಾನೆಂದು ತನ್ನ ನಿಜವನಱಿದು ಭಿನ್ನಭಾವವಿಲ್ಲದೆ, ಮಾಡುವ ಮಾಡಿಸಿಕೊಂಬವೆರಡೂ ಶಿವನೆಂದು ಅಭಿನ್ನಭಾವ ಘಟಿಸಿ ಮಾಡುವ ಭಕ್ತಿಯೇ ಶಿವಂಗೆ ಅರ್ಪಿತವಾಗಿ, ಆ ಭಕ್ತ ಶಿವನಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೬

**ವ.** ಶಿವ ಶಕ್ತಿ ಸಂಪುಟವೆಂಬುದೆಂತು ಹೇಳಿರಣ್ಣಾ ? ಶಿವನೇ ಚೈತನ್ಯಾತ್ಮಕನು. ಶಕ್ತಿಯೇ ಚಿತ್ತು. ಇಂತೀ ಚೈತನ್ಯಾತ್ಮನೇ ಚಿತ್‌ಸ್ವರೂಪನೆಂದು ಅಱಿಯಬಲ್ಲರೆ ಆತನೇ ಶರಣ ಗೂಹೇಶ್ವರಾ.

**ಟೀ.** ಶಿವ ಶಕ್ತಿಗಳೆಂಬ ಭಿನ್ನ ಪ್ರಕೃತಿಪುರುಷಂಗಳ ನಿವೃತ್ತಿಮಾಡಿ ಶಿವನೆಂಬುದೇ ಚೈತನ್ಯಾತ್ಮಕನೆಂದಱಿದು, ಆ ಚೈತನ್ಯಾತ್ಮಕನ ಚಿತ್‌ಪ್ರಭಾಸಾಮರ್ಥ್ಯವೇ ಶಕ್ತಿ. ಅಂತು ಶಿವಚೈತನ್ಯವು ತನ್ನ ಚಿತ್‌ಪ್ರಭಾವತೆಯಿಂದ ಶರಣರೂಪಾದ. ಅಂತಾದ ಶರಣ ತಾನೆಂದು ತನ್ನ ನಿಜವನಱಿಯಬಲ್ಲಾತನೇ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೭

ವ. ಅಂತರಂಗದಲ್ಲಿ ಭವಿಯನೊಳಕೊಂಡು, ಬಹಿರಂಗದಲ್ಲಿ ಭಕ್ತಿಯನೊಳಕೊಂಡು, ಆತ್ಮಸಂಗದಲ್ಲಿ ಪ್ರಸಾದವನೊಳಕೊಂಡಿಪ್ಪ ಭಕ್ತರನಾರನೂ ಕಾಣೆನಯ್ಯಾ ನಾನು ! ಇಷ್ಟಲಿಂಗೈಕ್ಯರ ಕಾಣೆನಯ್ಯಾ ನಾನು ! ಅಂತರಂಗದಲ್ಲಿ ಸುಳಿದಾಡುವ ತನುಗುಣಾದಿಗಳ ಮನಗುಣಾದಿಗಳ ಪ್ರಾಣಗುಣಾದಿಗಳ ಕಳೆದಲ್ಲಿ ಶರಣರಹರೇ ? ತನು ಮನ ಧನವ ಕೊಟ್ಟಲ್ಲಿ ಭಕ್ತರಹರೇ ? ಉಂಬವರ ಕಂಡು ಕೈನೀಡಿದರೆ ಪ್ರಸಾದಿಗಳಹರೇ ? ಅಂತರಂಗ ಬಹಿರಂಗ ಆತ್ಮಸಂಗ ಈ ತ್ರಿವಿಧದ ಭೇದವ ಗೊಹೇಶ್ವರಾ, ನಿಮ್ಮ ಶರಣ ಬಲ್ಲ.

ಟೀ. ಭವಿಯೆಂದರೆ ಪರಶಿವಲಿಂಗವು. ಅಂತಪ್ಪ ಪರಶಿವಲಿಂಗವ ಅಂತರಂಗದಱಿವಿಂದ ಅಱಿದು ಗ್ರಹಿಸಿ ಹಿಂಗದಿರಬೇಕೆಂಬುದೀಗ ' ಅಂತರಂಗದಲ್ಲಿ ಭವಿಯನೊಳಕೊಂಡು ' ಎಂಬ ಶಬ್ದಕ್ಕರ್ಥ. ಅಂತು ತನ್ನ ಅಂತರಂಗದಱಿವಿನೊಳಗೆ ಪರಿಪೂರ್ಣವಾಗಿ ಬೆಳಗುತ್ತಿರ್ದ ಪರಮಲಿಂಗವ ಇಷ್ಟಲಿಂಗವಾಗಿ ಬಹಿರಂಗಕ್ಕೆ ಸಾಹಿತ್ಯವ ಮಾಡಿಕೊಂಡು, ಭಿನ್ನಭಾವವಿಲ್ಲದೆ ಭಕ್ತಿಯಿಂದ ಕ್ರೀಯನಾಚರಿಸಬೇಕೆಂಬುದೀಗ ' ಬಹಿರಂಗದಲ್ಲಿ ಭಕ್ತಿಯನೊಳಕೊಂಡು ' ಎಂಬ ಶಬ್ದಕ್ಕರ್ಥ. ಅಂತು ಜ್ಞಾನಕ್ರೀಯಿಂದ ಅಂತರಂಗಬಹಿರಂಗವೆಲ್ಲಾ ಲಿಂಗವೆಯಾಗಿ, ಅಂಗಭಾವವಳಿದು, ಆತ್ಮಂಗೆ ಆ ಲಿಂಗಸಂಯೋಗ ಘಟಿಸಿ, ಆತ್ಮನೆಲ್ಲಾ ಪರಶಿವಲಿಂಗವೆಯಾಗಿ ಲಿಂಗಾನಂದಸುಖಪ್ರಸಾದವ ಸುಖಿಸುತ್ತಿಹನು. ಅಂತು ಸುಖಿಸುತ್ತಿಹ ಭಕ್ತನಪೂರ್ವವೆಂಬುದೀಗ ' ಆತ್ಮಸಂಗದಲ್ಲಿ ಪ್ರಸಾದವನೊಳಕೊಂಡಿಪ್ಪ ಭಕ್ತರ ಕಾಣೆನಯ್ಯಾ ನಾನು ' ಎಂಬ ಶಬ್ದಕ್ಕರ್ಥ. ಅಂತು ಜ್ಞಾನಕ್ರೀಯಿಂದ ಇಷ್ಟಲಿಂಗವಿಡಿದು, ಲಿಂಗಾಂಗಸಂಯೋಗಿಯಾಗಿ, ಅಂಗಭಾವವಳಿದು ಲಿಂಗವೆಯಾಗಿಪ್ಪ ಶರಣನಪೂರ್ವವೆಂಬುದೀಗ ' ಇಷ್ಟಲಿಂಗೈಕ್ಯರ ಕಾಣೆನಯ್ಯಾ ನಾನು ' ಎಂಬ ಶಬ್ದಕ್ಕರ್ಥ. ಅಂತು ಅಂಗ ಕರಣೇಂದ್ರಿಯಂಗಳೆಲ್ಲಾ ಲಿಂಗವೆಯಾಗಿಪ್ಪ ಜ್ಞಾನಕ್ರೀಯನಱಿಯದೆ ಬಱಿದೆ ಮನ ಕರಣೇಂದ್ರಿಯಂಗಳ ಬಿಟ್ಟೆರ್ದೆನೆಂಬಾತ ಶರಣನಲ್ಲ. ತನುಮನಧನಂಗಳ ಗುರುಲಿಂಗಜಂಗಮಕ್ಕೆ ಕೊಟ್ಟು ನಾನು ಭಕ್ತನೆಂಬಾತ ಭಕ್ತನಲ್ಲ. ಪ್ರಸಾದವನುಂಬ ಪ್ರಸಾದಿಗಳ ಕಂಡು ಕಾಲೋಚಿತದಲ್ಲಿ ಪ್ರಸಾದಕ್ಕೆ ಕೈಯ ನೀಡಿಕೊಂಬಾತ ಪ್ರಸಾದಿಯಲ್ಲ. ಅದುಕಾರಣ ಅಂತು ಅಂತರಂಗದಱಿವಿಂದ ಬಹಿರಂಗದ ಕ್ರೀಯಿಂದ ಆತ್ಮನು ಲಿಂಗವಾಗಿಪ್ಪುದ ಶರಣರೇ ಬಲ್ಲರಲ್ಲದೆ ಮತ್ತಾರೂ ಅಱಿಯರೆಂಬುದೀ ವಚನದ ತಾತ್ಪರ್ಯಾರ್ಥ. ೮

**ವ.** ಸತ್ಯವಿದೆ, ಸಮಾಧಾನವಿದೆ, ಮನಕ್ಕೆ ಬಾರದಿದೇನಯ್ಯಾ ? ಸರ್ವ ಸನ್ಮತವೆಂಬ ಸುಖವಿದೆ, ಮನಕ್ಕೆ ಸೋಂಕದಿದೇನಯ್ಯಾ ? ಆನೆಂಬು ದೊಂದು ಘನವಿದೆ, ಮನಕ್ಕೆ ತೋಱದಿದೇನಯ್ಯಾ ? ಕೂಡಲ ಸಂಗಮದೇವ ಭ್ರಮೆಯೋ !

**ಟೀ.** ಸತ್ತು ಚಿತ್ತಾನಂದವಪ್ಪ ನಿತ್ಯವಸ್ತು ಅಂಗದೊಳಹೊಱಗೆ ಪರಿಪೂರ್ಣವಾಗಿರ್ದು ಮನವ ವೇಧಿಸದೆ, ಮನವ ಸೋಂಕದೆ, ಮನಕ್ಕೆ ಕಾಣಿಸಿಕೊಳ್ಳದೆ ಇಪ್ಪುದು ಅದೇಕೆಯೆಂದಡೆ : ಮನದಱಿವು ದೇಹದ ಭ್ರಾಂತಿಯಲ್ಲಿ ಭ್ರಮೆಗೊಂಡಿಪ್ಪ ಕಾರಣವೆಂಬುದೀ ವಚನದ ತಾತ್ಪರ್ಯಾರ್ಥ. ೯

**ವ.** ತೆಱನನಱಿವುದಪೂರ್ವ. ಅಱಿದು ಮಱೆವುದಪೂರ್ವ. ಕೂಡೆ ಶರಣೆಂಬುದಪೂರ್ವ. ಕೂಡಲಸಂಗಮದೇವನ ಭಕ್ತಿಯಭಿಮಾನಿಯ ಜವ್ವನದಂತೆ !

**ಟೀ.** ದೇಹಿಯಾಗಿರ್ದಲ್ಲಿ ಜ್ಞಾನೋದಯವಾಗಿ ತಾನು ಶಿವನೆಂದು ತನ್ನ ನಿಜವನಱಿವುದು ಅಪೂರ್ವವೆಂಬುದೀಗ ‘ ತೆಱನನಱಿವುದಪೂರ್ವ ’ ವೆಂಬ ಶಬ್ದಕ್ಕರ್ಥ. ಅಂತು ತಾನು ಶಿವನೆಂದು ತನ್ನ ನಿಜವನಱಿದಲ್ಲಿ ಶಿವಭಾವ ನೆಲೆಗೊಂಡು ದೇಹಸಂಸಾರದಹಂ ಮಮತೆಗಳ ಮಱೆವುದಪೂರ್ವವೆಂಬುದೀಗ ‘ ಅಱಿದು ಮಱೆವುದಪೂರ್ವ ’ ವೆಂಬ ಶಬ್ದಕ್ಕರ್ಥ. ಅಂತು ತಾನು ಶಿವನೆಂದಱಿದು, ದೇಹೋಹಂ ಮಮತೆಯ ಮಱೆದು ಶಿವಜ್ಞಾನವಾಗಿರ್ದಾಗವೇ ಶಿವಂಗೆ ದಾಸೋಹಿಯಾಗಿ ಭಕ್ತಿಯ ಮಾಡುವುದಪೂರ್ವವೆಂಬುದೀಗ ‘ಕೂಡೆ ಶರಣೆಂಬುದಪೂರ್ವ ’ ವೆಂಬ ಶಬ್ದಕ್ಕರ್ಥ. ಅಂತಪ್ಪ ಭಕ್ತನ ಕಾಯವೇ ಶಿವನ ಕಾಯವಾಗಿ, ಆ ಭಕ್ತನ ಕಾಯಸುಖಂಗಳನೆಲ್ಲವ ಶಿವನೇ ಸುಖಿಸುತ್ತಿಹನು. ಅದು ಹೇಂಗೆಂದಡೆ: ಪತಿವ್ರತಾಂಗನೆಯ ಜವ್ವನದ ಮೀಸಲಾಂಗದ ಸುಖವನೆಲ್ಲವನೂ ಪತಿಯೇ ಭೋಗಿಸುವಂತೆ ಎಂಬುದೀಗ ‘ ಕೂಡಲಸಂಗಮದೇವನ ಭಕ್ತಿಯಭಿಮಾನಿಯ ಜವ್ವನದಂತೆ ’ ಎಂಬ ಶಬ್ದಕ್ಕರ್ಥ. ೧೦

**ವ.** ನೋಡುವುದ ನೋಡಲಱಿಯದೆ ಕೆಟ್ಟಿತೀ ಜಗವೆಲ್ಲಾ ! ನೋಡುವುದ ನೋಡಬಲ್ಲರೆ ಕೂಡಲಿಲ್ಲ ಅಗಲಲಿಲ್ಲ. ನಿಮ್ಮ ನೋಟದ ಕೂಟದ ಅಗಲದ ಸುಖವನು ಗುಹೇಶ್ವರಾ, ನಿಮ್ಮ ಶರಣರೆ ಬಲ್ಲರು.

ಟೀ. ಜ್ಞಾನೋದಯದಿಂದ ಬ್ರಹ್ಮವನಾಲೋಕಿಸುತ್ತಿಪ್ಪರು. ಆ ನೋಡುವ ತಾನೆಲ್ಲಾ ಪರಬ್ರಹ್ಮವೆಂಬುದ ತಿಳಿದು ನೋಡಲಱಿಯದೆ, ಬ್ರಹ್ಮವ ಭಿನ್ನವಿಟ್ಟು, ನೋಡೆನೆಂದು ಜಗವೆಲ್ಲಾ ಕೆಟ್ಟುಹೋದರೆಂಬುದೀಗ 'ನೋಡುವುದ ನೋಡಲಱಿಯದೆ ಕೆಟ್ಟಿತೀ ಜಗವೆಲ್ಲಾ' ಎಂಬ ಶಬ್ದಕ್ಕರ್ಥ. ಅಂತು ಜ್ಞಾನದೃಕ್ಕಿಂದ ನೋಡುವಾತನೆಲ್ಲಾ ಬ್ರಹ್ಮವಾಗಿ ತನ್ನ ತಾ ಕಾಣಬಲ್ಲಡೆ, ತಾನೆಲ್ಲಾ ಪರಬ್ರಹ್ಮವೆಯಾಗಿಪ್ಪನಾಗಿ ಬ್ರಹ್ಮವ ಭಿನ್ನವಿಟ್ಟು ಕೂಡಲಿಲ್ಲ ಅಗಲಲಿಲ್ಲವೆಂಬುದೀಗ 'ನೋಡುವುದ ನೋಡಬಲ್ಲಡೆ ಕೂಡಲಿಲ್ಲ ಅಗಲಲಿಲ್ಲ' ವೆಂಬ ಶಬ್ದಕ್ಕರ್ಥ. ಅಂತು ಜ್ಞಾನದಿಂದ ತನ್ನನೆ ನೋಡಿ ಕಂಡು, ತಾನೆ ಬ್ರಹ್ಮವೆಂದು ತನ್ನ ನಿಜವನಱಿದ ಅಱಿವ ಮಱಿದು ವಿಯೋಗಿಯಾಗದೆ ಬ್ರಹ್ಮವೆಯಾಗಿಪ್ಪ ಭಕ್ತಿಯೋಗವ ಶರಣನೆ ಬಲ್ಲನಲ್ಲದೆ ಮತ್ತಾರೂ ಅಱಿಯರೆಂಬುದೀಗ 'ನಿಮ್ಮ ನೋಟದ ಕೂಟದ ಅಗಲದ ಸುಖವನು ಗುಹೇಶ್ವರಾ ನಿಮ್ಮ ಶರಣರೆ ಬಲ್ಲರು' ಎಂಬ ಶಬ್ದಕ್ಕರ್ಥ. ೧೧

ವ. ಕುಲಮದವಳಿಯದನ್ನಕ್ಕ ಶರಣನಾಗಲೇಕೆ ? ವಿಧಿವಶ ಬಿಡದನ್ನಕ್ಕ ಭಕ್ತಿ ಏಕೆ ? ಹಮ್ಮಿನ ಸೊಮ್ಮಿನ ಸಂಬಂಧವ ಬಿಟ್ಟು ಕಿಂಕರರ ಕಿಂಕರನಾಗಿರಬೇಕು. ಹೆಪ್ಪನೆಱಿದ ಹಾಲು ಕೆಟ್ಟು ತುಪ್ಪವಪ್ಪಂತೆ ಇಪ್ಪರು ಕೂಡಲ ಸಂಗಮದೇವಾ, ನಿಮ್ಮ ಶರಣರು.

ಟೀ. ಗುರುಕರುಣದಲ್ಲಿ ಪುನರ್ಜಾತನಾದ ಭಕ್ತನು ಕುಲಮದ ಮೊದಲಾದ ಅಷ್ಟಮದಂಗಳ ಬಿಡಬೇಕು. ಕಾಲಭಯ ಭಕ್ತಂಗಿಲ್ಲವೆಂಬ ನಿಶ್ಚಯವಿರಬೇಕು. ತನು ಮನ ಧನ ತನ್ನವೆಂಬ ಅಹಂ ಮಮತೆಗಳಿಲ್ಲದೆ ಎಲ್ಲವೂ ಶಿವಸೊಮ್ಮೆಂದು ಶಿವಗಣಂಗಳಿಗೆ ಕೊಟ್ಟು ಶಿವಶರಣರ ಆಳಿನಾಳೆಂದಿಪ್ಪ ಭಕ್ತಿಯನೆ ಬಿಡದಿರಬೇಕು. ಅಂತಪ್ಪ ಜ್ಞಾನಕ್ರಿಯೆಯುಳವಟ್ಟಡೆ ಆ ಶರಣನೇ ಲಿಂಗವಾಗಿಪ್ಪನು; ಮರಳಿ ಮಾನವನಾಗನು. ಅದು ಹೇಂಗೆಂದಡೆ : ಹೆಪ್ಪನೆಱಿದ ಹಾಲು ಕೆಟ್ಟು ತುಪ್ಪವಾದ ಬಳಿಕ ಮರಳಿ ಹಾಲಾಗದ ಹಾಂಗೆ ಎಂಬುದೀ ವಚನದ ತಾತ್ಪರ್ಯಾರ್ಥ. ೧೨

ವ. ಮಣ್ಣ ಮಡಕೆ ಮಣ್ಣಾಗದು ಕ್ರೀಯುಳಿದು. ಬೆಣ್ಣೆ ಕರಗಿ ತುಪ್ಪವಾಗಿ ಮರಳಿ ಬೆಣ್ಣೆಯಾಗದು ಕ್ರೀಯುಳಿದು. [1]ಕಬ್ಬುನ ಹೊನ್ನಾಗಿ[1] ಹೊನ್ನು ಕಬ್ಬುನವಾಗದು ಕ್ರೀಯುಳಿದು. ಮುತ್ತು ನೀರಲ್ಲಿ ಹುಟ್ಟಿ ಮತ್ತೆ ನೀರಾಗದು ಕ್ರೀಯುಳಿದು. ಕೂಡಲಸಂಗನ ಶರಣರು ಮರಳಿ ಮಾನವರಾಗರು ಕ್ರೀಯುಳಿದು.

೧ ಇದು ಹು. ಪ್ರತಿಯಲ್ಲಿಲ್ಲ

ಟೀ. ಈ ವಚನ ಕಾಣಬಂದರ್ಥ. ೧೩

ವ. ಪರತತ್ತ್ವದ ನಿಜಸಂಯುಕ್ತರ, ಆನು ನೀನೆನ್ನದಿಹ ಶಬ್ದಸುಖಿಗಳ ತೋಱಾ ಎನಗೆ ! ಮಹಾನುಭಾವರ ತೋಱಾ ಎನಗೆ ! ಲಿಂಗವೇ, ಲಿಂಗೈಕ್ಯರ, ಲಿಂಗಸುಖಿಗಳ, ಲಿಂಗಗೂಡಾಗಿಪ್ಪವರ, ಲಿಂಗಾಭಿಮಾನಿಗಳ ತೋಱಾ ಎನಗೆ ! ಅಹೋರಾತ್ರಿ ನಿಮ್ಮ ಶರಣರ ಸೇವೆಯಲ್ಲಿರಿಸು ಕೂಡಲಸಂಗಮದೇವಾ.

ಟೀ. ಈ ವಚನ ಕಾಣಬಂದರ್ಥ. ೧೪

ವ. ಮರಮರಮಥನದಿಂದ ಅಗ್ನಿಹುಟ್ಟಿ ಮರನೆಲ್ಲವ ಸುಡದಿಪ್ಪುದೇ ಅಯ್ಯಾ ? ಮಹಾನುಭಾವರ ಸಂಗದಿಂದ ಜ್ಞಾನಾಗ್ನಿ ಹುಟ್ಟಿ, ಎನ್ನ ಮನದ ಅವಗುಣಂಗಳ ಸುಡದಿಪ್ಪುದೇ ಅಯ್ಯಾ ? ಇದು ಕಾರಣ ಮಹಾನುಭಾವಿಗಳ ತೋಱಿಸು ಕೂಡಲಸಂಗಮದೇವಾ.

ಟೀ. ಈ ವಚನ ಕಾಣಬಂದರ್ಥ. ೧೫

ವ. ಅನುಭಾವವಿಲ್ಲದ ಭಕ್ತಿ ಅನುವಿಂಗೆ ಬಾರದು. ಅನುಭಾವವಿಲ್ಲದ ಲಿಂಗ ಸಮರಸಸುಖವನೀಯದು. ಅನುಭಾವವಿಲ್ಲದ ಪ್ರಸಾದ ಪರಿಣಾಮವ ಕೊಡದು. ಅನುಭಾವವಿಲ್ಲದೆ ಅಱಿಯಬಾರದು. ತನ್ನಲ್ಲಿ ತಾ ಸನ್ನಹಿತವುಳ್ಳಡೆ ಶಿವಶರಣರ ಸಂಗವೇತಕ್ಕೆ ಎನಲುಂಟೇ ? ಕೂಡಲಸಂಗಮದೇವಯ್ಯಾ, ನಿಮ್ಮ ಅನುಭಾವವ ಮಾತಿನ ಮಥನವೆನಬಹುದೇ ?

ಟೀ. ತನ್ನ ನಿಜವೇ ಲಿಂಗವೆಂದಱಿದು, ಲಿಂಗಭಕ್ತಿಯ ಮಾಡಿ ಲಿಂಗವೆಯಾಗಿರ್ದನೆಂಬಾತಂಗೆ ಲಿಂಗಾನುಭಾವಿಗಳ ಅನುಭಾವದ ಕೇಳಿಕೆಯ ಬಿಡದೆ ಕೇಳುತ್ತಿರ್ದಲ್ಲದೆ ಲಿಂಗದ ನಿಜಸುಖವನನುಭವಿಸುವ ಅನುವಿನ ಭಕ್ತಿಜ್ಞಾನಸಾಧ್ಯವಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೧೬

ವ. ಕೆಱೆ ಹಳ್ಳ ಬಾವಿಗಳು ಮೈದೆಗೆದರೆ ಗುಳ್ಳೆ ಗೊರಜೆ ಚಿಪ್ಪುಗಳ ಕಾಣಬಹುದು. ವಾರುಧಿ ಮೈದೆಗೆದರೆ ರತ್ನಗಳ ಕಾಣಬಹುದು. ಕೂಡಲಸಂಗನ ಶರಣರು ಮನದೆಱೆದು ಮಾತನಾಡಿದರೆ ಲಿಂಗವೇ ಕಾಣಬಹುದು.

ಟೀ. ಈ ವಚನ ಕಾಣಬಂದರ್ಥ. ೧೭

ವ. ಪರತತ್ತ್ವದೊಳಗೆ ಇರಬಲ್ಲರೆ ಉಣಲಾಗದು, ಉಣದಿರಲಾಗದು. ಎಲ್ಲರ ಸಂಗತವಾಗದು, ಬೇಱೆ ಮತ್ತೊಬ್ಬನೇ ಇರಲಾಗದು. ತಾಯಿ ಸತ್ತ ಅಱುದಿಂಗಳಿಗೆ ತಾನು ಹುಟ್ಟಿದ ಮೂಲ ಗೊಹೇಶ್ವರಾ !

ಟೀ. ಜ್ಞಾನಿಯಾಗಿ ಬ್ರಹ್ಮವನಱಿದು ಬ್ರಹ್ಮವಾದೆನೆಂಬಾತನು ದೇಹೇಂದ್ರಿಯ ವಿಷಯಪದಾರ್ಥಂಗಳ ಲಿಂಗಾರ್ಪಿತವಿಲ್ಲದೆ ಭುಂಜಿಸಲಾಗದು. ಅಂತು ವಿಷಯಪದಾರ್ಥಂಗಳೆಲ್ಲವನು ಲಿಂಗಾರ್ಪಿತವ ಮಾಡಿ, ಪ್ರಸಾದಿಯಾಗಿ ಭುಂಜಿಸಬೇಕೆಂಬುದೀಗ 'ಪರತತ್ತ್ವದೊಳಗೆ ಇರಬಲ್ಲಡೆ ಉಣಲಾಗದು, ಉಣದಿರಲಾಗದು' ಎಂಬ ಶಬ್ದಕ್ಕರ್ಥ. ಅಂತು ದೇಹೇಂದ್ರಿಯ ಕರಣಂಗಳ ಸಂಗವ ಬಿಟ್ಟು, ಆ ದೇಹೇಂದ್ರಿಯ ಕರಣಂಗಳೆಲ್ಲವನೂ ಲಿಂಗಕ್ಕೆ ಅರ್ಪಿಸಿ ಆತ್ಮನು ಲಿಂಗಸಂಯೋಗಿಯಾಗಿರಬೇಕೆಂಬುದೀಗ ' ಎಲ್ಲರ ಸಂಗತವಾಗದು, ಬೇಱೆ ಮತ್ತೊಬ್ಬನೇ ಇರಲಾಗದು ' ಎಂಬ ಶಬ್ದಕ್ಕರ್ಥ. ಅಂತು ಮಾಯೆಯಿಂದ ಜನಿಸಿದ ಮಾಯಾದೇಹ ಕರಣಂಗಳೆಲ್ಲವೂ ಲಿಂಗಾರ್ಪಿತವಾಗಿ ಆ ಮಾಯಾದೇಹವಾಸನೆಯುಳಿದು ಹೋದಲ್ಲಿ ಮಾಯೆಯುಳಿದು ಹೋಯಿತ್ತು. ಅಂತು ಮಾಯೆಯುಳಿದು ಹೋದ ಶರಣನೆಲ್ಲಾ ಬಚ್ಚಬಱಿಯ ಜ್ಞಾನಸ್ವರೂಪನೆಯಾಗಿ, ತನ್ನ ಮುನ್ನಿನಂತೆ ಮಹಾಘನಲಿಂಗವೆಯಾಗಿಪ್ಪನೆಂಬುದೀಗ ' ತಾಯಿ ಸತ್ತ ಅಱುದಿಂಗಳಿಗೆ ತಾನು ಹುಟ್ಟಿದ ಮೂಲ ಗೊಹೇಶ್ವರಾ ' ಎಂಬ ಶಬ್ದಕ್ಕರ್ಥ. ೧೮

ವ. ಬ್ರಹ್ಮಂಗೆ ವಾಕ್ಪರುಷ. ವಿಷ್ಣುವಿಂಗೆ ನಯನಪರುಷ. ರುದ್ರಂಗೆ ಹಸ್ತ ಪರುಷ. ನಮ್ಮ ಕೂಡಲಸಂಗನ ಶರಣರಿಗೆ ಪಾದವೇ ಪರುಷ.

ಟೀ. ಬ್ರಹ್ಮನು ಜಗಸೃಷ್ಟಿಯಾಗಬೇಕೆಂದು ನುಡಿದಲ್ಲಿ ಜಗ ಸೃಷ್ಟಿಯಹುದೆಂಬುದೀಗ ' ಬ್ರಹ್ಮಂಗೆ ವಾಕ್ಪರುಷ ' ವೆಂಬ ಶಬ್ದಕ್ಕರ್ಥ. ವಿಷ್ಣು ಜಗವ ನೋಡಿ ರಕ್ಷಿಸುತ್ತಿಹನೆಂಬುದೀಗ ' ವಿಷ್ಣುವಿಂಗೆ ನಯನಪರುಷ ' ವೆಂಬ ಶಬ್ದಕ್ಕರ್ಥ. ರುದ್ರನ ಹಸ್ತದಿಂದ ಜಗತ್‌ಸಂಹಾರವಹುದೆಂಬುದೀಗ ' ರುದ್ರಂಗೆ ಹಸ್ತಪರುಷ ' ವೆಂಬ ಶಬ್ದಕ್ಕರ್ಥ. ಇಂತೀ ತ್ರಿಮೂರ್ತಿಗಳಂತಲ್ಲ ಶರಣರ ಪಾದವು. ಶರಣುವೊಕ್ಕ ಭಕ್ತಜನಂಗಳಿಗೆ ಉತ್ಪತ್ತಿ ಸ್ಥಿತಿ ಲಯಂಗಳ ಕಳೆದು ನಿತ್ಯವಪ್ಪ ಶಿವಪದವ ಕೊಡುತ್ತಿಹುದೆಂಬುದೀಗ ' ನಮ್ಮ ಕೂಡಲಸಂಗನ ಶರಣರಿಗೆ ಪಾದವೇ ಪರುಷ ' ವೆಂಬ ಶಬ್ದಕ್ಕರ್ಥ. ೧೯

**ವ.** ಐದು [೧]ಮನವ[೧] ಕುಟ್ಟಿ ಒಂದು [೧]ಮನವ[೧] ಮಾಡು ಕಂಡಾ ಮದವಳಿಗೆ. ಇದು ನಮ್ಮ ಬಾಳುವೆ ಮದವಳಿಗೆ. ಇದು ನಮ್ಮ ವಿಸ್ತಾರ ಮದವಳಿಗೆ. ಮದವಳಿದು ನಿಜವುಳಿದ ಬಳಿಕ ಅದು ಸತ್ಯ ಕಾಣಾ ಕೂಡಲಸಂಗಮದೇವಾ !

**ಟೀ.** ಅಯ್ದು ಮುಖವಾಗಿ ಹರಿವ ಮನವ ಜ್ಞಾನಕ್ರೀಯಿಂದ ಮಥನಿಸಿ ಮಥನಿಸಿ, ಲಿಂಗದೊಳಗೊಂದುಗೂಡಿ, ಅಷ್ಟತನುವಿನ ಮದಂಗಳಳಿದಡೆ ಆತ್ಮನು ತನ್ನ ಮುನ್ನಿನ ನಿಜವಪ್ಪ ಸತ್ತು ಚಿತ್ತಾನಂದ ನಿತ್ಯಪರಿಪೂರ್ಣ ಲಿಂಗವೆಯಾಗಿ ಬಾಳುವನೆಂಬುದೀ ವಚನದ ತಾತ್ಪರ್ಯಾರ್ಥ. ೨೦

**ವ.** ನಿಮ್ಮಲ್ಲಿ ನೀವು ತಿಳಿದು ನೋಡಿರೇ. ಅನ್ಯವಿಲ್ಲ ಕಾಣಿರಣ್ಣಾ. ಅಱಿವು ನಿಮ್ಮಲ್ಲಿ ತದ್ಗತವಾಗಿ ಅದೆ. ಅನ್ಯಭಾವವ ನೆನೆಯದೆ [೨]ತನ್ನಲ್ಲಿ[೨] ತಾನಱಿಯಲು ಬಲ್ಲಡೆ ತನ್ನಲ್ಲಿ ತನ್ಮಯನು ಗುಹೇಶ್ವರಾ.

**ಟೀ.** ಲಿಂಗವು ತನಗೆ ಅನ್ಯವೆಂದು ಲಿಂಗವ ಭಿನ್ನವಿಟ್ಟು ಭಾವಿಸಿ ಕ್ರೀಯನಾಚರಿಸದೆ ತನ್ನ ಚೈತನ್ಯಜ್ಞಾನವೇ ಲಿಂಗಸ್ವರೂಪವೆಂದು ತನ್ನ ತಾನಱಿದು ಅನನ್ಯಭಾವಿಯಾಗಿ ಲಿಂಗವ ಭಾವಿಸಬಲ್ಲಡೆ ತಾನೆಲ್ಲಾ ಲಿಂಗವೆಯಾಗಿಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೨೧

**ವ.** ತನ್ನುವ ಮಱೆದು ದೇವರ ಕಂಡೆನೆಂಬ ಕಾರಣ ಹರಿ ಸುರ ಬ್ರಹ್ಮಾದಿಗಳೆಲ್ಲರು ತಲೆ ಕೆಳಗಾಗಿ ಹೋದರು ! ಆ ದೇವರ ಮಱೆದು ತನ್ನುವನಱಿದುದುಂಟಾದರೆ ತಾನೆ ದಿಟವೆಂದನಂಬಿಗ ಚೌಡಯ್ಯ.

**ಟೀ.** ಅಜ್ಞಾನಭಾವದಿಂದ ಭಿನ್ನಜೀವರಾಗಿ ಲಿಂಗವ ಭಿನ್ನವಿಟ್ಟು ಪೂಜಿಸಿ ಭವಕ್ಕೆ ಹೋದರು ಹರಿ ಸುರ ಬ್ರಹ್ಮಾದಿಗಳೆಲ್ಲರು. ಲಿಂಗವ ಭಿನ್ನವಿಟ್ಟು ಅಱಿಯದೆ ಲಿಂಗವು ತಾನೆಂದಱಿದು ಲಿಂಗವ ಅನನ್ಯಭಾವದಿಂದ ಭಾವಿಸಬಲ್ಲಡೆ ತಾನು ಲಿಂಗವಪ್ಪುದು ತಪ್ಪದೆಂಬುದೀ ವಚನದ ತಾತ್ಪರ್ಯಾರ್ಥ. ೨೨

**ವ.** ತನ್ನುವ ಹುಸಿಮಾಡಿ ಇನ್ನೊಂದು ದಿಟಮಾಡುವ ಅಣ್ಣಂಗೆ ನಂಬುಗೆ ಇನ್ನಾವುದಯ್ಯಾ ? ತನ್ನೊಳಗಿರ್ದ ಘನವ ತಾ ತಿಳಿಯಲಱಿಯದೆ

೧ ಮಾನವ (ಎ. ರಾ.)　೨ ತನ್ನೊಳಗೆ (ಎ. ರಾ.)

ಪರಬ್ರಹ್ಮಕ್ಕೆ ತಲೆಯಿಕ್ಕಿ ತೆಗೆದೆನೆಂಬ ಅಣ್ಣ ಗಾವಿಲನೆಂದನಂಬಿಗ ಚೌಡಯ್ಯ.

ಟೀ. ತನ್ನ ಜೀವಾತ್ಮನೆ ಅಂಗ, ಆ ಅಂಗದ ಚೈತನ್ಯವೇ ಮಹಾಲಿಂಗ. ಅಂತಿಪ್ಪ ಲಿಂಗಾಂಗವೆರಡೂ ಒಂದೇ ವಸ್ತುವೆಂದು ಲಿಂಗಾಂಗಸಂಬಂಧದ ಭೇದವ ತಿಳಿದು ಲಿಂಗವಾಗಲಱಿಯದೆ, ಹುಸಿಜೀವ ತಾನೆಂದು ಸತ್ತುಚಿತ್ತಾನಂದವುಳ್ಳುದೇ ಪರಬ್ರಹ್ಮವೆಂದು ಭೇದವ ಮಾಡಿ, ಬ್ರಹ್ಮದ ಪರಿಪೂರ್ಣತ್ವವನಱಿಯದೆ ಅವಿಶ್ವಾಸಿಗಳಾಗಿ ಬ್ರಹ್ಮಜ್ಞಾನದಿಂದ ಸಾಧಿಸಿಹೆನೆಂಬವರೆಲ್ಲರೂ ಬಱಿಯ [೧]ಭಾಷ್ಕಳ[೧]ರೆಂಬುದೀ ವಚನದ ತಾತ್ಪರ್ಯಾರ್ಥ. ೨೩

ವ. ಸಾವ ಜೀವ ಬಿಂದುವಿನ ಸಂಚ. ಸಾಯದ ಜೀವ ಪ್ರಾಣದ ಸಂಚ. ಸಾವ ಜೀವದ, ಸಾಯದ ಪ್ರಾಣದ, ಎರಡಱ ಭೇದವನಱಿಯದಿರ್ದಡೆ ಲಾಂಛನಧಾರಿ. ಸಾವ ಜೀವದ, ಸಾಯದ ಪ್ರಾಣದ, ಈ ಎರಡಱ ಭೇದವ ಭೇದಿಸಿ, ಅಱಿವು ಕಣ್ದೆಱೆದ ಪ್ರಾಣಲಿಂಗಸಂಬಂಧವಂತಿರಲಿ, ಮತ್ತೆಯೂ ಪ್ರಾಣಲಿಂಗಸಂಬಂಧವೇ ಬೇಕು. ಇಂತೀ ಉಭಯಸಂಬಂಧವಳಿದ ಸಂಬಂಧ ನಿಜವಾಯಿತ್ತು ಕೂಡಲಚೆನ್ನಸಂಗಾ, ನಿಮ್ಮ ಶರಣಂಗೆ.

ಟೀ. ಬಿಂದುವೆಂದಡೆ ದೇಹ. ಅಂತು ಶಿವಾಂಶಿಕನಾದ ಆತ್ಮನು ದೇಹಸಂಬಂಧದಿಂದ ಜೀವನಾಗಿ ಸತ್ತು ಹುಟ್ಟುತ್ತಿಹನೆಂಬುದೀಗ ‘ ಸಾವ ಜೀವ ಬಿಂದುವಿನ ಸಂಚ ’ ವೆಂಬ ಶಬ್ದಕ್ಕರ್ಥ. ಅಂತಿಪ್ಪ ಜೀವಾತ್ಮನೆ ಅಂಗವಾಗಿ ಆ ಅಂಗದಲ್ಲಿ ಪ್ರಾಣಸ್ವರೂಪನಾಗಿ ಚಿತ್‌ಪರಮಚೈತನ್ಯಲಿಂಗವಿರ್ದು, ಆ ದೇಹಕರಣಂಗಳ ಅನಿತ್ಯವ ಹೊದ್ದದೆಯಿಹನೆಂಬುದೀಗ ‘ ಸಾಯದ ಜೀವ ಪ್ರಾಣನ ಸಂಚ ’ ವೆಂಬ ಶಬ್ದಕ್ಕರ್ಥ. ಅಂತು ದೇಹಸಂಬಂಧದಿಂದ ಸತ್ತು ಹುಟ್ಟುತ್ತಿಹ ಜೀವಾತ್ಮನೇ ಅಂಗಸ್ವರೂಪೆಂದು, ಆ ಅಂಗದ ಚೈತನ್ಯಪ್ರಾಣಸ್ವರೂಪೇ ನಿತ್ಯವಪ್ಪ ಲಿಂಗವೆಂದು ತಿಳಿದು, ಲಿಂಗಾಂಗಸಂಯೋಗಿಗಳಾಗಲಱಿಯದಿರ್ದವರೆಲ್ಲರೂ ವೇಷಧಾರಿಗಳೆಂಬುದೀಗ ‘ ಸಾವ ಜೀವದ, ಸಾಯದ ಪ್ರಾಣದ, ಎರಡಱ ಭೇದವನಱಿಯದಿರ್ದಡೆ ಲಾಂಛನಧಾರಿ ’ ಯೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಾಂಗವೆರಡನೂ ಸಮ್ಯಗ್ಜ್ಞಾನೋದಯವಾಗಿ ಅಱಿದು ಕಂಡು ಲಿಂಗಾಂಗಸಂಯೋಗವಾದಡೆ ಆತ್ಮ ಪ್ರಾಣ

೧ ಭಾಸ್ತಳ (ಹು. ರಾ.)

ಲಿಂಗಸಂಬಂಧಿ. ಅಂತು ಪ್ರಾಣಲಿಂಗಸಂಬಂಧವಾದಲ್ಲಿ ಅಂಗ ಲಿಂಗವೆಂಬ ಭೇದ ವಳಿದು ಅಂಗವೆಲ್ಲಾ ಲಿಂಗವೆಯಾಗಿಪ್ಪುದೇ ನಿಜಸಂಬಂಧ. ಅಂತಪ್ಪ ನಿಜ ಸಂಬಂಧವು ಶಿವಶರಣಂಗಲ್ಲದಿಲ್ಲವೆಂಬುದೀಗ ‘ ಸಾವ ಜೀವದ, ಸಾಯದ ಪ್ರಾಣದ, ಎರಡಱ ಭೇದವ ಭೇದಿಸಿ ಅಱಿವು ಕಣ್ದೆಱೆದ ಪ್ರಾಣಲಿಂಗಸಂಬಂಧವಂತಿರಲಿ, ಮತ್ತೆಯೂ ಪ್ರಾಣಲಿಂಗಸಂಬಂಧವೇ ಬೇಕು. ಇಂತೀ ಉಭಯದ ಸಂಬಂಧ ವಳಿದ ಸಂಬಂಧ ನಿಜವಾಯಿತ್ತು ಕೂಡಲಚೆನ್ನಸಂಗಾ, ನಿಮ್ಮ ಶರಣಂಗೆ ’ ಎಂಬ ಶಬ್ದಕ್ಕರ್ಥ. ೨೪

ವ. ಏಕೋವರ್ಣ ಷಡುವರ್ಣವೆಂಬೆನೇ ಪ್ರಭುವೇ ? ಎನ್ನ ದೃಷ್ಟಿ ಕಾಣದು. ಅಂಗವನು ಲಿಂಗವನು ಸಂಗವ ಮಾಡಿ ತೋಱಿಡಡೆ ಕೂಡಲಚೆನ್ನಸಂಗಾ, ನೀನೆಂಬೆ.

ಟೀ. ಏಕಾಕ್ಷರಸ್ವರೂಪನು ಷಡಕ್ಷರಸ್ವರೂಪನೆಂದು | ಸಾಕಾರವಾಗಿ ತೋಱುವ ಭಿನ್ನಲಕ್ಷಣಂಗಳ ಲಕ್ಷಿಸಿ, ಭಾವಿಸಿ ನೋಡದು ಶರಣನ ಸಮ್ಯಗ್‌ಜ್ಞಾನ ದೃಕ್ಕು. ಮತ್ತೆಂತೆಂದಡೆ : ಒಂದೇ ಮಹಾಘನವಸ್ತು ತಾನೇ ಲಿಂಗಾಂಗವೆರಡಾಗಿರ್ದುದ ಗುರುಕರುಣದಿಂದ ಭೇದಿಸಿ, ಅಱಿದು, ಲಿಂಗಾಂಗಸಂಬಂಧಿಯಾದ ಶರಣ ತಾನೇ ಮಹಾಘನಲಿಂಗವೆಂಬುದೀ ವಚನದ ತಾತ್ಪರ್ಯಾರ್ಥ. ೨೫

ವ. ಗ್ರಹ ಬಂದು ಆವರಿಸಲೊಡನೆ ತನ್ನ ಮಱಹಿಸುವುದು. ಮತ್ತೊಂದಕ್ಕೆ ಇಂಬುಗೊಡಲೀಯದಯ್ಯಾ ! ಕೂಡಲಸಂಗಮದೇವನಱಿವು ತನು ಪಮವಾಗಲೊಡನೆ ಬೆವಹಾರದೊಳಗಿರಲೀಯದಯ್ಯಾ !

ಟೀ. ಗ್ರಹ ಬಂದು ಆವರ್ತಿಸಿದ ಮನುಜನ ವರ್ತನ ಗುಣಧರ್ಮವೆಲ್ಲವು ಮಱೆದು ಆ ಗ್ರಹದ ಸ್ವಧರ್ಮವರ್ತನಾಗುಣವೆಯಾಗಿಪ್ಪಂತೆ, ಅಖಂಡ ಚಿಚ್ಚೈತನ್ಯ ಲಿಂಗದ ಚಿತ್ತುವಿಗೆ ಕೃಪೆದೋಱೆ ಆತ್ಮನ ಅಂತರಂಗವಾಗಿರ್ದ ಲಿಂಗವು ಬಹಿಷ್ಕರಿಸಿ ಸರ್ವಾಂಗವನಾವರ್ತಿಸಲು ಜೀವಾತ್ಮನ ವರ್ತನಾಗುಣಧರ್ಮವಳಿದು ಲಿಂಗದ ಸತ್‌ಕ್ರಿಯಾಚಾರಿತ್ರವೆಯಾಗಿ ಲಿಂಗವು ತಾನೆಯಾಗಿಪ್ಪನಾಗಿ ಶರಣ ಮರಳಿ ಮಾನವನಾಗನೆಂಬುದೀ ವಚನದ ತಾತ್ಪರ್ಯಾರ್ಥ. ೨೬

ವ. [1]ಸಿನೆಂಬಂಜೆಯರಿಬ್ಬರಿಗೊಬ್ಬ ಮಗ ಹುಟ್ಟಿ ಅವನೆನ್ನ ರಿಣಕ್ಕೆ ಒಡೆಯನಾದ. ಅವನೆನ್ನ ಧನಕ್ಕೆ ಒಡೆಯನಾದ. ಆನು ಘಳಿಸಿದ ಒಮ್ಮ

೧ ಸಿನ (ಹು.)

ನಕ್ಕೆ ಅಗಲದೆ ಮೋಹಿತನಾದ ಕೂಡಲಸಂಗಮದೇವನಂತಪ್ಪ ಮಗ ಹುಟ್ಟಿ !

ಟೀ. ಅಖಂಡ ಚಿತ್‌ಪ್ರಭಾಶಕ್ತಿಯುಸುಕ್ತನಾದ ಪರವಸ್ತು. ಅಂತಪ್ಪ ಪರಶಿವನು ಚಿಚ್ಛಕ್ತಿಯು ಎಂಬ ಇಬ್ಬರಿಗೆಯೂ ಎಂದೆಂದೂ ಹುಟ್ಟು ಹೊಂದುಗಳಿಲ್ಲವಾಗಿ, ಅಂತು ಹುಟ್ಟು ಹೊಂದುಗಳೆಂಬವೆರಡೂ ಎಂದೂ ಅವರಿಗೆ ಹುಟ್ಟಲಿಲ್ಲದೆ ಬಂಜೆಯಾಗಿರ್ದರೆಂಬುದೀಗ ಸಿಸೆಬಂಜೆಯರಿಬ್ಬರೆಂಬ ಶಬ್ದಕ್ಕರ್ಥ. ಅಂತಪ್ಪ ಪರವಸ್ತು ತಾನೇ ಕೃಪೆಯಿಂದ ಆತ್ಮನ ಅಂತರಂಗದಲ್ಲಿ ತನ್ನ ಚಿಚ್ಛಕ್ತಿಯ ಪ್ರಭಾವಿಸಿ ಬಹಿರಂಗದಲ್ಲಿ ತಾನೇ ಗುರುವಾಗಿ ಬಂದು ಉಪದೇಶಿಸಲು ಚಿಲ್ಲಿಂಗ ಉದಯಿಸಿ ಇಷ್ಟಲಿಂಗವಾಗಿ ಶರಣನ ಕರಸ್ಥಲಕ್ಕೆ ಬಂದಿತ್ತೆಂಬುದೀಗ 'ಇವರಿಗೊಬ್ಬ ಮಗ ಹುಟ್ಟಿ' ಎಂಬ ಶಬ್ದಕ್ಕರ್ಥ. ಅಂತು ಶಿವಶಕ್ತಿಗಳಿಬ್ಬರಿಂದ ಉದಯಿಸಿದ ಇಷ್ಟಲಿಂಗವು ಜೀವನ ಸಂಚಿತ ಪ್ರಾರಬ್ಧ ಆಗಾಮಿ ಎಂಬ ಕರ್ಮಲಿಖಿತದ ಸಾಲವ ತೀರಿಸಿ ಕಳೆದು ಶರಣಂಗೆ ಪತಿಯಾಗಿ, ಶರಣನ ತನು ಮನ ಧನಂಗಳೆಲ್ಲಕ್ಕೆಯೂ ಲಿಂಗವೇ ಕರ್ತನಾಗಿರ್ದನೆಂಬುದೀಗ 'ಅವನೆನ್ನ ರಿಣಕ್ಕೆ ಒಡೆಯನಾದ, ಅವನೆನ್ನ ಧನಕ್ಕೆ ಒಡೆಯನಾದ' ನೆಂಬ ಶಬ್ದಕ್ಕರ್ಥ. ಅಂತು ಶರಣ ತಾನು ಸತಿಯಾಗಿ ಲಿಂಗವೇ ಪತಿಯಾಗಿ ಬೆರೆದು ಬೇರಿಲ್ಲದಿಪ್ಪ ಏಕೋಭಾವದ ಮನದ ಗುರುಭಕ್ತಿಯಿಂದ ಪಡೆದ ಕಾರಣ, ಆ ಶರಣನ ಮನ ಕರಣಂಗಳು ಮೊದಲಾದ ಸರ್ವಾಂಗವೆಲ್ಲವೂ ಲಿಂಗಕ್ಕೆ ಪ್ರೀತಿಯಾಗಿ, ಶರಣನ ಅಂಗಸುಖಂಗಳನೆಲ್ಲವ ಇಷ್ಟಲಿಂಗವೇ ಒಳಕೊಂಡು, ಲಿಂಗವೇ ಭೋಗಿಸುತ್ತಿಹನೆಂಬುದೀಗ 'ಆನು ಘಳಿಸಿದ ಒಮ್ಮನಕ್ಕೆ ಅಗಲದೆ ಮೋಹಿಸುವನಾದ ಕೂಡಲಸಂಗಮದೇವನಂತಪ್ಪ ಮಗ ಹುಟ್ಟಿ' ಎಂಬ ಶಬ್ದಕ್ಕರ್ಥ. ೨೭

ವ. ಲಿಂಗವೆಂದಱಿದಡೆ ಹಿಂದಿಲ್ಲ. ಜಂಗಮವೆಂದಱಿದಡೆ ಮುಂದಿಲ್ಲ. ಇದು ತಾನೆ ಶಿವಾಚಾರ. ಇದೇ ಶಿವಪೊಡಕು. 'ಆತ್ಮಾನಾಂ ಪ್ರಕೃತಿಸ್ಸ್ವಭಾವಃ' ಎಂದುದಾಗಿ ಮುಟ್ಟಬಾರದ ಠಾವ ಮುಱಿಗೊಂಡಿಪ್ಪನು ಮಮ ಕರ್ತ ಕೂಡಲಚೆನ್ನಸಂಗಮದೇವ !

ಟೀ. ಜ್ಞಾನೋದಯವಾಗಿ ಅಂಗದೊಳಿಪ್ಪ ಚಿತ್‌ಕಲಾಲಿಂಗವನಱಿದು ಲಿಂಗಾಂಗ [1]ಸಂಗಿಯಾಗಿ[1] ಇರಬಲ್ಲಡೆ ಹಿಂದಣ ಸಂಚಿತಕರ್ಮನಾಸ್ತಿಯಹುದೆಂಬು

೧ ಸಂಯೋಗಿಯಾಗಿ (ಎ.)

ದೀಗ 'ಲಿಂಗವೆಂದಱಿದಡೆ ಹಿಂದಿಲ್ಲ' ವೆಂಬ ಶಬ್ದಕ್ಕರ್ಥ. ಅಂತಿಪ್ಪ ಲಿಂಗಾಂಗದ ಪರಮಚೈತನ್ಯಜ್ಞಾನವೆಲ್ಲಾ ಜಂಗಮವೆಂದಱಿದು, ತನು ಮನ ಧನಂಗಳು ಮೊದಲಾದ ಪದಾರ್ಥಂಗಳೆಲ್ಲಾ ಜಂಗಮದ ಸೊಮ್ಮೆಂದಱಿದರ್ಪಿಸಿ ಭೇದವಳಿದಿರಬಲ್ಲ ಶರಣಂಗೆ ಮುಂದಣ ಉತ್ಪತ್ತಿ ಸ್ಥಿತಿ ಲಯವಿಲ್ಲವೆಂಬುದೀಗ 'ಜಂಗಮವೆಂದಱಿದಡೆ ಮುಂದಿಲ್ಲ' ವೆಂಬ ಶಬ್ದಕ್ಕರ್ಥ. ಅಂತು ಲಿಂಗಜಂಗಮವುವನಱಿದು, ಭಿನ್ನಭಾವವಳಿದು ಭಕ್ತಿಮಾಡುತ್ತಿಪ್ಪ ಸದ್ಭಕ್ತಿ ತಾನೆ ಶಿವನ ಚಾರಿತ್ರ. ಅಂತಪ್ಪ ಭಕ್ತನ ಅಂಗದೊಳಗೆಲ್ಲಾ ಶಿವನು ಪರಿಪೂರ್ಣನಾಗಿ ಭಿನ್ನವಿಲ್ಲದೆ ಕೂಡಿಪ್ಪನೆಂಬುದೀಗ 'ಇದು ತಾನೆ ಶಿವಾಚಾರ, ಶಿವದೊಡಕು' ಎಂಬ ಶಬ್ದಕ್ಕರ್ಥ. ಅಂತಪ್ಪ ಭಕ್ತಿಜ್ಞಾನವಿಲ್ಲದೆ ಪ್ರಕೃತಿಭಾವವಿಡಿದು ಜೀವನಾಗಿರ್ದು ಬ್ರಹ್ಮವನಱಿದು ಕೂಡಿಹೆನೆಂದರೆ ಬ್ರಹ್ಮವು ವಾಙ್ಮನಕ್ಕೆ ಅಗೋಚರವೆಂಬುದೀಗ 'ಆತ್ಮಾನಾಂ ಪ್ರಕೃತಿಃಸ್ವಭಾವಯೇತ್' ಎಂದುದಾಗಿ ಮುಟ್ಟಬಾರದ ಠಾವ ಮಱೆಗೊಂಡಿಪ್ಪನು ಮವು ಕರ್ತ ಕೂಡಲಚೆನ್ನಸಂಗಮದೇವ' ನೆಂಬ ಶಬ್ದಕ್ಕರ್ಥ. ೬೮

ವ. ಕ್ರಿಯಾಲಿಂಗದ ಲಿಂಗಿಗಳೆಲ್ಲರೂ ಕ್ರೀಯುಳಿದ ಭಕ್ತರೆಂಬರಯ್ಯಾ! ಕ್ರೀಯುಳಿದ ಭಕ್ತಂಗೆ ಲಿಂಗವುಂಟೇ? ಕ್ರೀಯುಳಿದ ಭಕ್ತಂಗೆ ಜಂಗಮವುಂಟೇ? ಕ್ರೀಯುಳಿದ ಭಕ್ತಂಗೆ ಪ್ರಸಾದವುಂಟೇ? ಕ್ರೀಯುಳಿದ ನಿಃಕ್ರೀಯಲ್ಲಿ ನಿಂದ ಕೂಡಲಚೆನ್ನಸಂಗಮದೇವಾ, ನಿಮ್ಮ ಶರಣಾ.

ಟೀ. ಮಲಮಾಯಾದಿ ಕರ್ಮಯುಕ್ತವಾದ ಜೀವ ತಾನೆಂದು ಲಿಂಗ ಜಂಗಮ ಪ್ರಸಾದವ ಭಿನ್ನವಿಟ್ಟು ಪೂಜಿಸುವುದೆಲ್ಲವೂ ಭವಹೇತುವಾದ ಕರ್ಮಕ್ರೀ. ಅಂತಪ್ಪ ಕರ್ಮಕ್ರೀಯನಾಚರಿಸುತ್ತಿರ್ದು ನಿಃಕರ್ಮಿಯಪ್ಪ ಭಕ್ತನೆಂದು ನುಡಿಯಲಾಗದು. ಮತ್ತಂತೆಂದಡೆ: ಗುರುಮುಖದಿಂದ ಲಿಂಗಾಂಗಸಂಬಂಧವಾದಾಕ್ಷಣವೆ ಅಂಗಪ್ರಾಣಂಗಳೆಲ್ಲಾ ಲಿಂಗವೆಯಾಗಿ ಭಿನ್ನಭಾವವಳಿದು ಮಾಡುವ ಮಾಡಿಸಿಕೊಂಬವೆರಡೂ ಲಿಂಗವೆಯಾಗಿ, ಮಾಡುತ್ತಿಪ್ಪ ಸದ್ಭಕ್ತಂಗೆ ಲಿಂಗ ಜಂಗಮ ಪ್ರಸಾದ ಭಿನ್ನವಿಲ್ಲವಾಗಿ ಭವಹೇತುವಪ್ಪ ಕರ್ಮಕ್ರೀಯುಳಿದು ನಿಃಕರ್ಮಿಯಪ್ಪ ಲಿಂಗವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೬೯

ವ. ಅಂಗದ ಮೇಲೆ ಲಿಂಗವ ಕಟ್ಟಿ ಸುಳಿವಾತ ಜಂಗಮವಲ್ಲ. ಆ ಜಂಗಮಕ್ಕೆ ಮಾಡುವಾತ ಭಕ್ತನಲ್ಲ. ಈ ಉಭಯ ಕುಳವಳಿದಾತ ಜಂಗಮ ಆ ಜಂಗಮಕ್ಕೆ ಮಾಡುವಾತ ಭಕ್ತ. ಇದುಕಾರಣ ಕೂಡಲಚೆನ್ನಸಂಗಯ್ಯನಲ್ಲಿ ಉಭಯ ಕುಳವಳಿದ ಭಕ್ತ ಜಂಗಮವ ಪೂರ್ವ.

ಟೀ. ಜೀವಭಾವ ಹಿಂಗದೆ ಅಂಗವನೂ ಲಿಂಗವನೂ ಭಿನ್ನವಿಟ್ಟು ಅಂಗದ ಮೇಲೆ ಲಿಂಗವ ಧರಿಸಿ ಲಾಂಛನಧಾರಿಯಾಗಿ ಚರಿಸುವ ಭಿನ್ನಜ್ಞಾನಿಗಳು ಜಂಗಮವಲ್ಲ. ಅಂತು ಜೀವಭಾವವಳಿಯದೆ ಲಾಂಛನಧಾರಿಯಾಗಿರ್ದ ಜಂಗಮದ ಭಿನ್ನಜ್ಞಾನಬೋಧೆವಿಡಿದು ಜೀವ ತಾನೆಂದು ಭಿನ್ನಕ್ರೀಯನಾಚರಿಸುವಾತ ಭಕ್ತನಲ್ಲ. ಮತ್ತೆಂತೆಂದಡೆ : ಅಂಗಲಿಂಗವೆರಡೂ ಒಂದೇ ವಸ್ತುವೆಂದು ಅಱಿದು ಲಿಂಗಾಂಗ ಸಂಯೋಗಿಯಾಗಿ, ಭಿನ್ನಭಾವವಳಿದು ಲಿಂಗವೆಯಾಗಿ ಆಚರಿಸುವ ಅಭಿನ್ನಜ್ಞಾನಿಯೀಗ ಜಂಗಮ. ಅಂತಪ್ಪ ಜಂಗಮವ ಅಭಿನ್ನಜ್ಞಾನಕ್ರೀವಿಡಿದು, ಮಾಡುವ ಮಾಡಿಸಿಕೊಂಬವೆರಡೂ ಒಂದೇ ವಸ್ತುವೆಂದಱಿದು ಭಿನ್ನಭಾವವಳಿದು ಮಾಡುವಾತನೆ ಭಕ್ತ. ಅಂತಪ್ಪ ಸದ್ಭಕ್ತ ಜಂಗಮವಪೂರ್ವವೆಂಬುದೀ ವಚನದ ತಾತ್ಪರ್ಯಾರ್ಥ. ೩೦

ವ. ಶರಣಭರಿತ ಲಿಂಗ ಎಲ್ಲಾ ಎಡೆಯಲ್ಲಿಯೂ ಉಂಟು. ಲಿಂಗಭರಿತ ಶರಣನಪೂರ್ವ ನೋಡಾ ! ಗಮನವುಳ್ಳ ಜಂಗಮವೆಲ್ಲಾ ಎಡೆಯಲ್ಲಿಯೂ ಉಂಟು. ನಿರ್ಗಮನಿ ಜಂಗಮವಪೂರ್ವ ನೋಡಾ ! ಸುಚೈತನ್ಯಲಿಂಗಕ್ಕೆ ನಿಜಚೈತನ್ಯ ಜಂಗಮಸಾಹಿತ್ಯನೋಡಾ ! ಈ ಲಿಂಗಜಂಗಮದ ಸಕೀಲ ಸಂಬಂಧದಲ್ಲಿ ಪರಿಣಾಮಿ ಕೂಡಲ ಚೆನ್ನಸಂಗಾ, ನಿಮ್ಮ ಶರಣ.

ಟೀ. ಅಂಗಭಾವ ಮುಂದುಗೊಂಡು ಲಿಂಗವ ಭಿನ್ನವಿಟ್ಟು ಅಱಿದು ಪೂಜಿಸುವರ ಕೈಯಲ್ಲಿ ಲಿಂಗವಿರ್ದು ಪೂಜೆಗೊಂಡು ಫಲಪದವ ಕೊಡುತ್ತಿಹನು. ಅಂತು ಪೂಜೆಗೊಂಡು ಫಲಪದವ ಕೊಡುತ್ತಿಹ ಲಿಂಗ ಎಲ್ಲಾ ಎಡೆಯಲ್ಲಿಯೂ ಇರುತ್ತಿಹನೆಂಬುದೀಗ 'ಶರಣಭರಿತ ಲಿಂಗ ಎಲ್ಲಾ ಎಡೆಯಲ್ಲಿಯೂ ಉಂಟು' ಎಂಬ ಶಬ್ದಕ್ಕರ್ಥ. ಮಹಾಘನಲಿಂಗವೇ ಅಂಗವನೊಳಕೊಂಡು ಅಂಗಭಾವವಳಿದು ಸರ್ವಾಂಗವೆಲ್ಲಾ ಲಿಂಗವೆಯಾಗಿಪ್ಪ ಲಿಂಗಶರಣನಪೂರ್ವವೆಂಬುದೀಗ 'ಲಿಂಗಭರಿತ ಶರಣನಪೂರ್ವ ನೋಡಾ' ಎಂಬ ಶಬ್ದಕ್ಕರ್ಥ. ಮಹಾಘನಲಿಂಗವ ತನ್ನಿಂದನ್ಯವಿಟ್ಟು ಅಱಿದು ಲಿಂಗಪದವ ಸಾಧಿಸುತ್ತಿಹ ಭಿನ್ನಜ್ಞಾನಚರಿತ್ರವನುಳ್ಳ ಜಂಗಮ ಎಲ್ಲಾ ಎಡೆಯಲ್ಲಿಯೂ ಉಂಟು ಎಂಬುದೀಗ 'ಗಮನವುಳ್ಳ ಜಂಗಮ ಎಲ್ಲಾ ಎಡೆಯಲ್ಲಿಯೂ ಉಂಟು' ಎಂಬ ಶಬ್ದಕ್ಕರ್ಥ. ಸಮ್ಯಗ್ಜ್ಞಾನದಿಂದ ಮಹಾಘನವಸ್ತು ತಾನೆಂದಱಿದು ಭಿನ್ನವಿಟ್ಟಱಿದಱಿವಿನ ಗಮನವಿಲ್ಲದೆ ಮಹಾಘನವಸ್ತುವೇ ತಾನಾಗಿ ಇರಬಲ್ಲ ಜಂಗಮವಪೂರ್ವವೆಂಬುದೀಗ 'ನಿರ್ಗಮನಿ ಜಂಗಮವಪೂರ್ವ ನೋಡಾ' ಎಂಬ ಶಬ್ದಕ್ಕರ್ಥ. ಇಂತು ತನ್ನ ನಿಜವನಱಿವ

ಸುಜ್ಞಾನವೇ ಲಿಂಗ. ಆ ಸುಜ್ಞಾನಕ್ಕೆ ಭಿನ್ನವಿಲ್ಲದೆ ಇಪ್ಪ ತನ್ನ ನಿಜಸ್ವರೂಪೇ ಜಂಗಮವೆಂಬುದೀಗ 'ಸುಚೈತನ್ಯಲಿಂಗಕ್ಕೆ ನಿಜಚೈತನ್ಯ ಜಂಗಮ ಸಾಹಿತ್ಯ ನೋಡಾ' ಎಂಬ ಶಬ್ದಕ್ಕರ್ಥ. ಅಂತು ಶರಣ ತನ್ನ ಅಱಿವಿಂದ ತನ್ನ ನಿಜವ ಭಿನ್ನವಿಡದೆ ಅಱಿದು ತಾನೆಲ್ಲಾ ಪರವಸ್ತುವೆಯಾಗಿ ಪರಮ ಪರಿಣಾಮದಲ್ಲಿಪ್ಪನು ಶರಣನೆಂಬುದೀಗ 'ಈ ಲಿಂಗಜಂಗಮದ ಸಕೀಲ ಸಂಬಂಧದಲ್ಲಿ ಪರಿಣಾಮಿ ಕೂಡಲಚೆನ್ನಸಂಗಾ, ನಿಮ್ಮ ಶರಣ' ನೆಂಬ ಶಬ್ದಕ್ಕರ್ಥ. ೩೧

ವ. ಆಱು ಪರಿಯಲ್ಲಿ ಹೆಸರಿಟ್ಟುಕೊಂಡವರ ನೋಡ ಬಂದೆ! ಆರೂಢವಿಲ್ಲದೆ ಲಿಂಗಾರ್ಚನೆಯ ಮಾಡುವರನೆನಬಂದೆ! ಆರೂಢಲಿಂಗಾರ್ಚನೆಯ ಮಾಡಿ ಪ್ರಸಿದ್ಧಪ್ರಸಾದವ ಗ್ರಹಿಸಲಱಿಯದವರಿಗೆ ರೂಢಿಯಲ್ಲಿ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆನಬಂದೆ.

ಟೀ. ಷಡ್ವಿಧ ಲಿಂಗಾಂಗಸಂಯೋಗವನಱಿಯದೆ ಬಱಿದೆ ಷಡುಸ್ಥಲಜ್ಞರೆಂದು ಹೆಸರಿಟ್ಟುಕೊಂಡು ನುಡಿವವರನು ಬೇಱಿಟ್ಟು ಲಿಂಗವು ನೋಡುತ್ತಿಹನೆಂಬುದೀಗ 'ಆಱು ಪರಿಯಲ್ಲಿ ಹೆಸರಿಟ್ಟುಕೊಂಡವರ ನೋಡಬಂದೆ' ನೆಂಬ ಶಬ್ದಕ್ಕರ್ಥ. ಅಂತು ಅಂಗಲಿಂಗ ಸಂಗ ಹತ್ತದೆ, ಲಿಂಗವ ಭಿನ್ನವಿಟ್ಟು ಪೂಜಿಸುತ್ತಿಪ್ಪವರು ಭವಹೇತುಗಳೆಂದು ಜಱಿದು ನುಡಿದು ಕಳೆವುತ್ತಿಹನು ಲಿಂಗವೆಂಬುದೀಗ 'ಆರೂಢವಿಲ್ಲದೆ ಲಿಂಗಾರ್ಚನೆಯ ಮಾಡುವರನೆನಬಂದೆ' ಎಂಬ ಶಬ್ದಕ್ಕರ್ಥ. ಅಂತಪ್ಪ ಅಂಗಲಿಂಗ ಸಂಗ ಹತ್ತಿ ಅಂಗಕರಣಂಗಳೆಲ್ಲವ ಲಿಂಗಕ್ಕರ್ಪಿಸಿದುದೇ ಲಿಂಗಾರ್ಚನೆ. ಅಂತಪ್ಪ ಲಿಂಗಾರ್ಚನೆಯ ಮಾಡಿ ಜಂಗಮಪ್ರಸಾದವೇ ಪರವೆಂದಱಿದು ಭುಂಜಿಸಲಱಿಯದವರಿಗೆ ತ್ರಿಭುವನದಲ್ಲಿಯೂ ಲಿಂಗಪದ ಸಿದ್ಧಿಸಲಿಲ್ಲವೆಂಬುದೀಗ 'ಆರೂಢ ಲಿಂಗಾರ್ಚನೆಯ ಮಾಡಿ ಪ್ರಸಿದ್ಧಪ್ರಸಾದವನವಗ್ರಹಿಸಲರಿಯದವರಿಗೆ ರೂಢಿಯಲ್ಲಿ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆನಬಂದೆ' ನೆಂಬ ಶಬ್ದಕ್ಕರ್ಥ. ೩೨

ವ. ಲಿಂಗ ಲಿಂಗವೆಂಬವಂಗೆ ಲಿಂಗವಿಲ್ಲ. ಜಂಗಮ ಜಂಗಮವೆಂಬವಂಗೆ ಜಂಗಮವಿಲ್ಲ. ಪ್ರಸಾದ ಪ್ರಸಾದವೆಂಬವಂಗೆ ಪ್ರಸಾದವಿಲ್ಲ. ಲಿಂಗವೆನ್ನದವಂಗೆ ಲಿಂಗವುಂಟು. ಜಂಗಮವೆನ್ನದವಂಗೆ ಜಂಗಮವುಂಟು. ಪ್ರಸಾದವೆನ್ನದವಂಗೆ ಪ್ರಸಾದವುಂಟು. ಈ ತ್ರಿವಿಧಸ್ಥಲವನಱಿಯಬಲ್ಲಡೆ ಕೂಡಲಚೆನ್ನಸಂಗಯ್ಯ ತಾನೆ ಉಂಟು.

ಟೀ. ಲಿಂಗಜಂಗಮಪ್ರಸಾದವೇ ಪರಶಿವನು. ಅಂತಪ್ಪ ಪರಶಿವನ ತನ್ನಿಂದನ್ಯವಿಟ್ಟಱಿದು ಭಜಿಸುವ ಭಿನ್ನಜ್ಞಾನಿಗಳಿಗೆ ಶಿವತ್ವವೆಂದೂ ಇಲ್ಲ. ಮತ್ತೆಂತೆಂದಡೆ : ತನ್ನ ನಿಜದ ನಿಲವೆ ಪರಶಿವನೆಂದಱಿದು ಶಿವನ ಭಿನ್ನವಿಟ್ಟು ನೆನೆಯದೆ ಅಭಿನ್ನಜ್ಞಾನಿಯಾಗಿ ಭಕ್ತಿಯ ಮಾಡುತ್ತಿಪ್ಪ ಶರಣಂಗೆ ಶಿವತ್ವವುಂಟೆಂಬುದೀ ವಚನದ ತಾತ್ಪರ್ಯಾರ್ಥ. ೩೩

ವ. ಅಂಗದುದಯ ಲಿಂಗದ ಸುಖವು. ಲಿಂಗದುದಯ ಅಂಗದ ಸುಖವು. ಎರಡಿಲ್ಲದ ಘನವನೇನೆಂಬೆನಯ್ಯಾ ! ಮಿಕ್ಕು ಮೀಱಿ ನಿಂದ ನಿಲವನೇನೆಂಬೆನಯ್ಯಾ ! ಕೂಡಲಚೆನ್ನಸಂಗನ ಶರಣನನೇನೆಂಬೆನಯ್ಯಾ !

ಟೀ. ಮಹಾಲಿಂಗದಿಂದುದಯಿಸಿದ ಆತ್ಮನೆಂಬ ಅಂಗದಲ್ಲಿ ಮಹಾಲಿಂಗವು ಪ್ರಾಣನ ಚೈತನ್ಯವಾಗಿರ್ದು ಆ ಅಂಗದ ಸುಖಂಗಳನೆಲ್ಲವ ಸುಖಿಸುತ್ತಿಹನು. ಅಂತು ಅಂಗದೊಳಗಿರ್ದ ಲಿಂಗವು ಬಹಿಷ್ಕರಿಸಿ ಲಿಂಗಾಂಗಸಂಬಂಧವಾದಲ್ಲಿ ಆ ಲಿಂಗದ ಸುಖವೆಲ್ಲಾ ಅಂಗಕ್ಕೈಯಾಗಿ, ಅಂಗಲಿಂಗವೆಂಬ ಭೇದವಳಿದು. ಮಹಾಘನಲಿಂಗವೆಯಾಗಿಪ್ಪ ಶರಣ. ಅಂತಪ್ಪ ಶರಣನನುಪಮಿಸಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೩೪

ವ. ಸುಖವಾವುದು ? ಸುಖಿಯಾವುದು ? ಸುಖದನುಭಾವವಾವುದು ? ಸುಖ ಲಿಂಗ, ಸುಖಿ ಶರಣ, ಸುಖದನುಭವ ಸುಸಂಗ, ಕೂಡಲಚೆನ್ನಸಂಗಾ, ಪರವಿಲ್ಲಾಗಿ.

ಟೀ. ಸುಖಸ್ವರೂಪವೇ ಲಿಂಗ. ಆ ಲಿಂಗಸುಖವ ಸುಖಿಸುವಾತನೀಗ ಶರಣ. ಈ ಉಭಯಸಂಗದನುಭವವೇ ಅಱಿವು. ಈ ತ್ರಿವಿಧವಾದುದೂ ಒಂದೇ ಪರವಸ್ತುವಲ್ಲದೆ ಬೇಱಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೩೫

ವ. ಮನೆಯ ಗಂಡನ ಮನೆವಾರ್ತೆಯನೇನ ಹೇಳುವೆನವ್ವಾ ! ಅಂಗವಿದ್ಯೆಯನೊಲ್ಲ. ಕಂಗಳೊಳಗಣ ಕಸವ ಕಳೆದಲ್ಲದೆ ನೋಡಲೀಯ. ಕೈದೊಳೆದಲ್ಲದೆ ಮುಟ್ಟಲೀಯ. ಕಾಲುದೊಳೆದಲ್ಲದೆ ಹೊದ್ದಲೀಯ. ಇಂತೀ ಸರ್ವಾಂಗ ತಲೆದೊಳೆದ ಕಾರಣ ಕೂಡಲಸಂಗಮದೇವನೆನ್ನ ಕೂಡಿಕೊಂಡನವ್ವಾ !

ಟೀ. ಶರಣನೆಂಬ ಸತಿಗೆ ಪತಿಯಾಗಿರ್ದ ಲಿಂಗವೇ ಶರಣನ ತನುಮನಕ್ಕೆ ಕರ್ತುರ್. ಅಂತಪ್ಪ ಲಿಂಗದ ಜ್ಞಾನಕ್ರಿಯಾಚಾರಿತ್ರವ ಹೇಳುವಡೆ ಆಶ್ಚರ್ಯ ವೆಂಬುದೀಗ 'ಮನೆಯ ಗಂಡನ ಮನೆವಾರ್ತೆಯನೀನ ಹೇಳುವೆನವ್ವಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗದ ಜ್ಞಾನಕ್ರಿಯಾಚಾರಿತ್ರವೆಂತೆಂದಡೆ : ದೇಹಭಾವದ ಅಜ್ಞಾನ ಹಿಂಗದೆ ಭಿನ್ನಜ್ಞಾನಿಯಾಗಿರ್ದಡೆ ಲಿಂಗ ಒಲ್ಲನೆಂಬುದೀಗ 'ಅಂಗವಿದ್ಯೆ ಯನೊಲ್ಲ' ನೆಂಬ ಶಬ್ದಕ್ಕರ್ಥ. ಅಂತು ಲಿಂಗವ ಭಿನ್ನವಿಟ್ಟು ಕಾಣುತ್ತಿಪ್ಪ ಅಜ್ಞಾನವೀಗ ಜ್ಞಾನದೃಕ್ಕಿನೊಳಗಣ ಕಸವೆಂದಱಿದು ಕಳೆದು, ಅಭಿನ್ನಜ್ಞಾನಿಯಾ ದಲ್ಲದೆ ಲಿಂಗವು ಕಾಣಿಸಿಕೊಳ್ಳನೆಂಬುದೀಗ 'ಕಂಗಳೊಳಗಣ ಕಸವ ಕಳೆದಲ್ಲದೆ ನೋಡಲೀಯ' ನೆಂಬ ಶಬ್ದಕ್ಕರ್ಥ. ಹಸ್ತವೆಂದಡೆ ಭಾವ. ಅಂತು ಲಿಂಗವ ಭಿನ್ನವಿಟ್ಟು ಭಾವಿಸುವ ಭಾವದ ಭಿನ್ನಸೂತಕವ ಸದ್ವಿವೇಕಜಲದಿಂದ ತೊಳೆದು ಕಳೆದು, ಅಭಿನ್ನಭಾವಿಯಾದಲ್ಲದೆ ಲಿಂಗವು ಕೈವಶವಾಗದೆಂಬುದೀಗ 'ಕೈದೊಳೆ ದಲ್ಲದೆ ಮುಟ್ಟಲೀಯ' ನೆಂಬ ಶಬ್ದಕ್ಕರ್ಥ. ಪಾದವೆಂದರೆ ಕ್ರಿಯಾಚಾರ. ಅಂತು ಲಿಂಗವ ಭಿನ್ನವಿಟ್ಟು ಆಚರಿಸುವ ಭಿನ್ನಕ್ರಿಯಾಕರ್ಮಸೂತಕವ ಸದ್ವಿವೇಕಜಲದಿಂ ತೊಳೆದು ಕಳೆದು, ಅಭಿನ್ನಕ್ರೀಯನಾಚರಿಸಿದಲ್ಲದೆ ಲಿಂಗವು ತನ್ನೊಳಗೆ ಬೆರೆಯ ಲೀಯನೆಂಬುದೀಗ 'ಕಾಲು ತೊಳೆದಲ್ಲದೆ ಹೊದ್ದಲೀಯ' ನೆಂಬ ಶಬ್ದಕ್ಕರ್ಥ. ಇಂತೀ ಭಿನ್ನಜ್ಞಾನ ಭಿನ್ನಭಾವ ಭಿನ್ನಕ್ರೀಗಳೆಂಬ ಅಂಗಭಾವದ ಅಜ್ಞಾನವೆಲ್ಲ ವನೂ ಸಮ್ಯಗ್‌ಜ್ಞಾನಜಲದಿಂ ತೊಳೆದು ಕಳೆದು, ಅಭಿನ್ನಜ್ಞಾನ ಭಾವ ಕ್ರೀಯುಳ ವಟ್ಟ ಕಾರಣ ಶರಣನಲ್ಲಿ ಲಿಂಗವು ಭಿನ್ನವಿಲ್ಲದೆ ಬೆರೆದು ಶರಣನೆಲ್ಲಾ ಲಿಂಗವೆ ಯಾಗಿರ್ದನೆಂಬುದೀಗ 'ಇಂತೀ ಸರ್ವಾಂಗ ತಲೆದೊಳೆದ ಕಾರಣ ಕೂಡಲ ಸಂಗಮದೇವನೆನ್ನ ಕೂಡಿಕೊಂಡನವ್ವಾ' ಎಂಬ ಶಬ್ದಕ್ಕರ್ಥ. ೩೬

ವ. ಅಳಿಯನ ಕಂಡಡೆ ನಾಚೆಂಬೆ ಮಗಳೇ! ಅಳಿಯನ ಕಂಡಡೆ ತೊಲ ಗೆಂಬೆ ಮಗಳೇ! ನಾಚುವರೆ ಮಱೆಯಿಲ್ಲ, ತೊಲಗುವಡಿಂಬಿಲ್ಲ. ಇಬ್ಬರಿಗೊಬ್ಬ ಗಂಡನಾದ ಬಳಿಕ ಇನ್ನೆಲ್ಲಿಯ ಮಱೆ ಮಗಳೇ? ಕೂಡಲಸಂಗಯ್ಯನಂತಪ್ಪ ಗಂಡನಾದ ಬಳಿಕ ಇನ್ನೆಲ್ಲಿಯ ಮಱೆ ಮಗಳೇ?

ಟೀ. ಶರಣನ ಜ್ಞಾನಕ್ರೀಗಳೆಂಬುವೀಗ ಜ್ಞಾನಶಕ್ತಿ ಕ್ರಿಯಾಶಕ್ತಿಯರು. ಇಂತಪ್ಪ ಶಕ್ತಿಯರಿಬ್ಬರೊಳಗೆ ಜ್ಞಾನಶಕ್ತಿಯ ಮಗಳು ಕ್ರಿಯಾಶಕ್ತಿ. ಅಂತಪ್ಪ ಕ್ರಿಯಾಶಕ್ತಿಗೆ ವಲ್ಲಭನಾಗಿ ನಿತ್ಯವಸ್ತು ತಾನೆ ಇಷ್ಟಲಿಂಗವಾದನಾಗಿ, ಆ ಇಷ್ಟ ಲಿಂಗವು ಜ್ಞಾನಶಕ್ತಿಗೆ ಅಳಿಯನೆನಿಸಿದನು. ಅಂತೆನಿಸಿದ ಇಷ್ಟಲಿಂಗವು ಕ್ರಿಯಾ

ಶಕ್ತಿಯಲ್ಲಿ ಕೂಡಿರಲು, ಆ ಕ್ರಿಯಾಶಕ್ತಿಯೂ ತನ್ನ ಮಾತೃಸ್ಥಾನವಾದ ಜ್ಞಾನಶಕ್ತಿಯಿಂದ ಇಷ್ಟಲಿಂಗದಭಿನ್ನಭಾವವೆಂತೆಂದು ವಿಚಾರಿಸುತ್ತಿರ್ದು, ಆ ವಿಚಾರಿಸುವ ಜ್ಞಾನಕ್ಕೆ ಎಡೆದೆಱಹಿಲ್ಲದೆ ಅಭಿನ್ನವಾಗಿಪ್ಪ ಇಷ್ಟಲಿಂಗದ ಘನವನಱಿದು ಜ್ಞಾನಶಕ್ತಿಯು ಕ್ರಿಯಾಶಕ್ತಿಯು ಕೂಡೆ, ಎನಗೆ ನಿನಗೆ ಇಬ್ಬರಿಗೆಯೂ ಲಿಂಗವೊಬ್ಬನೇ ಗಂಡನಾಗಿ ಭಿನ್ನಜ್ಞಾನದ ಮಱೆಯಳಿದನೆಂದು ಜ್ಞಾನಶಕ್ತಿ ಕ್ರಿಯಾಶಕ್ತಿಗೆ ಅಱುಹಿಕೊಡಲು ಆ ಅಱುಹಿಕೊಟ್ಟ ಅಭಿನ್ನಜ್ಞಾನಕ್ರೀಯಿಂದ ಲಿಂಗವೆಯಾದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೩೭

ವ. ಬಿತ್ತೆತ್ತ ಮುಂತಾಗಿ ಬಿತ್ತಿದಡೇನೋ ? ಬೀಜ ನಿರಾಳದ ಬೆಳಸು ! ಶರಣಚಾರಿತ್ರವೆಂತಿರ್ದಡೇನೋ ? ರೇಕಣ್ಣಪ್ರಿಯ ನಾಗಿನಾಥನ ಶರಣರ ಅವರಿವರೆಂದರೆ ನಾಯಕ ನರಕ.

ಟೀ. ಬೀಜವನೆತ್ತ ಮುಂತಾಗಿಯೂ ಭೂಮಿಯ ಮೇಲೆ ಬಿತ್ತಿದಡೆಯೂ ಆ ಬೀಜವ ಬೆಳಸು ಆಕಾಶದತ್ತ ಮುಂತಾಗಿ ಬೆಳೆವಂತೆ ಲಿಂಗಶರಣ ದೇಹವಿಡಿದು ಎಂತು ಚರಿಸಿದಡೆಯೂ ಲಿಂಗಮುಂತಾಗಿಯೇ ಚರಿಸುತ್ತಿಪ್ಪನು. ಅಂತು ಲಿಂಗಮುಂತಾಗಿಯೇ ಚರಿಸಿ ಲಿಂಗವೆಯಾಗಿಪ್ಪ ಶರಣನ ಕುಲ ಚಾರಿತ್ರವನಂತಿಂತೆಂದು ನುಡಿದವರಿಗೆ ನಾಯಕ ನರಕ ತಪ್ಪದೆಂಬುದೀ ವಚನದ ತಾತ್ಪರ್ಯಾರ್ಥ. ೩೮

ವ. ಕಾಯವಿಲ್ಲದ ಸಂಸಾರ ಚೋದ್ಯ ! ಕಾಯದೊಳಗೆ ನಿರಾಳ ಚೋದ್ಯ ! ನಿರಾಳದೊಳಗೊಂದು ಕೂಡಲಚೆನ್ನಸಂಗಯ್ಯನೆಂಬ ಶರಣ ಸಮ್ಯಕ್ ಚೋದ್ಯ ! ಮಹಾಚೋದ್ಯ !!

ಟೀ. ನಿರ್ದೇಹಿಯಾಗಿರ್ದ ನಿಃಕಲಲಿಂಗವು ತಾನೆ ಪತಿಯಾಗಿ ಶರಣನೆಂಬ ಸತಿಯ ಕೂಡಿಕೊಂಡು ಸಂಸಾರಿಯಾಗಿಪ್ಪುದು ಚೋದ್ಯವೆಂಬುದೀಗ ‘ ಕಾಯವಿಲ್ಲದ ಸಂಸಾರ ಚೋದ್ಯ ’ ವೆಂಬ ಶಬ್ದಕ್ಕರ್ಥ. ಅಂತು ನಿಃಕಲಲಿಂಗವು ಶರಣನಂಗದೊಳಗೆಲ್ಲಾ ಪರಿಪೂರ್ಣವಾಗಿ ನೆಲೆಗೊಂಡು ಬೆಳಗುತ್ತಿರ್ಪನಾಗಿ, ಅಂತು ಬೆಳಗುತ್ತಿಪ್ಪುದು ಚೋದ್ಯವೆಂಬುದೀಗ ‘ ಕಾಯದೊಳಗೆ ನಿರಾಳ ಚೋದ್ಯ ’ ವೆಂಬ ಶಬ್ದಕ್ಕರ್ಥ. ಅಂತು ಶರಣನಂಗದೊಳಗೆ ಬೆಳಗುತ್ತಿರ್ದ ನಿಃಕಲಲಿಂಗವು ಸಾಕಾರವಾಗಿ ಶರಣನ ಕರಸ್ಥಲಕ್ಕೆ ಬಂದು ಶರಣಂಗೆ ಪ್ರತ್ಯಕ್ಷವಾದುದು ಅತಿ ಚೋದ್ಯವೆಂಬುದೀಗ ‘ ನಿರಾಳದೊಳಗೊಂದು ಶರಣ ಸಮ್ಯಕ್ ಚೋದ್ಯ, ಮಹಾಚೋದ್ಯ ’ ವೆಂಬ ಶಬ್ದಕ್ಕರ್ಥ. ೩೯

ವ. ಇಷ್ಟಲಿಂಗವೊಂದು ಪ್ರಾಣಲಿಂಗವೊಂದೆಂಬ ಮಿಟ್ಟಿಯ ಭಂಡರ ಮಾತ ಕೇಳಲಾಗದು. ಅಂಗದೊಳಗೊಬ್ಬ ಗಂಡ, ಮನೆಯೊಳಗೊಬ್ಬ ಗಂಡ, ಹಿತ್ತಿಲೊಳಗೊಬ್ಬ ಗಂಡನೆಂಬ ಸತಿಯರ ಲೋಕದ ಮಾನವರು ಮೆಟ್ಟಿ ಮೂಗ ಕೊಯ್ಯದೆ ಮಾಣ್ಬರೇ ಅಯ್ಯಾ ? ಲಿಂಗತ್ರಯವೆಂದು ತೋಱಿದವರಾರು ? ' ಲಿಂಗಮೇಕಂ ಪರಂ ನಾಸ್ತಿ ' ಎಂದು ಸದ್ಗುರುಸ್ವಾಮಿ ಅಱುಹಿದನಾಗಿ ಷಟ್ತ್ರಿಂಶತ್ತತ್ತ್ವಕ್ಕೆ ಆಲಯವಹಂಥಾ ಮಹಾಘನಲಿಂಗದ ಬೆಳಗು ಕರಸ್ಥಲದಲ್ಲಿ ಮನಸ್ಥಲದಲ್ಲಿ ವೇದ್ಯವಾದ ಬಳಿಕ ಸರ್ವಾಂಗಲಿಂಗ ಕೂಡಲಚೆನ್ನಸಂಗಯ್ಯಾ ನಿಮ್ಮ ಶರಣಂಗೆ.

ಟೀ. ಈ ವಚನ ಕಾಣಬಂದರ್ಥ. ೪೦

ವ. ಎನ್ನ ಸರ್ವಾಂಗದಲ್ಲಿ ಲಿಂಗವೈದಾನೆ ! ಐದಾನೆ !! ಮನವಱಿಯದೆ ಕೆಟ್ಟೆ ಕೆಟ್ಟೆ. ಎನ್ನ ಅಂತರಂಗ ಬಹಿರಂಗವೆಂದೆನ್ನದೆ ಲಿಂಗವೈದಾನೆ ! ಐದಾನೆ !! ಮನವಱಿಯದೆ ಕೆಟ್ಟೆ ಕೆಟ್ಟೆ. ಮನವು ಅವಿಶ್ವಾಸದಿಂದ ಗ್ರಹಿಸಲೊಲ್ಲದೆ ಕೆಟ್ಟೆ ಕೆಟ್ಟೆನಯ್ಯಾ ! ಇನ್ನು ಎನ್ನ ಮನವು ವಿಶ್ವಾಸದಿಂದವಗ್ರಹಿಸಿದಡೆ ಸತ್ಯನಹೆ, ನಿತ್ಯನಹೆ, ಮುಕ್ತನಹೆ ಉರಿಲಿಂಗಪೆದ್ದಿಪ್ರಿಯ ವಿಶ್ವೇಶ ರಾ.

ಟೀ. ಶ್ರೀಗುರುಸ್ವಾಮಿ ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳ ತನುತ್ರಯಂಗಳಿಗೆ ಸಾಹಿತ್ಯವ ಮಾಡಿದಾಕ್ಷಣವೆ ಸರ್ವಾಂಗವೆಲ್ಲಾ ಲಿಂಗವೆಯಾಯಿತ್ತು. ಅಂತು ಸರ್ವಾಂಗವೆಲ್ಲಾ ಲಿಂಗವೆಯಾಯಿತ್ತೆಂಬ ವಿಶ್ವಾಸ ಘಟಿಸಿದ ಶರಣನು ನಿತ್ಯ ಪರಿಪೂರ್ಣವಪ್ಪ ಲಿಂಗವೆಯಹನು. ಅಂತು ಸರ್ವಾಂಗ ಲಿಂಗವಾಯಿತ್ತೆಂಬ ವಿಶ್ವಾಸಭಾವ ಮನಕ್ಕೆ ಘಟಿಸದೆ ಅವಿಶ್ವಾಸಿಯಾದವರು ಮರಳಿ ಭವಬಂಧನಕ್ಕೆ ಈಡಾಗಿ ಕೆಟ್ಟುಹೋಹರೆಂಬುದೀ ವಚನದ ತಾತ್ಪರ್ಯಾರ್ಥ. ೪೧

ವ. ಕರಸ್ಥಲದ ಲಿಂಗ ಮನಸ್ಥಲಕ್ಕೆ ವೇದ್ಯವಾಗಿ, ಮನಸ್ಥಲದ ಲಿಂಗವೆನ್ನ ಸರ್ವಾಂಗದಲ್ಲಿ ವೇದ್ಯವಾದ ಬಳಿಕ ಇನ್ನು ಭಿನ್ನಭಾವಕ್ಕೆ ತೆಱಹುಂಟೇ ? ಗೊಹೇಶ್ವರನೆಂಬ ಲಿಂಗವ ಬೆರಸಿ ಸಮರಸವಾದ ಬಳಿಕ ಎರಡೆಂಬುದಿಲ್ಲ ನೋಡಾ ಚೆನ್ನಬಸವಣ್ಣಾ !

ಟೀ. ಈ ವಚನ ಕಾಣಬಂದರ್ಥ. ೪೨

**ವ.** ಇಂದು ಸಾವ ಹೆಂಡತಿಗೆ ನಾಳೆ ಸಾವ ಗಂಡ ನೋಡವ್ವಾ ! ಘಳಿಗೆ ಘಳಿಗೆಗೆ ಮಗ ಹುಟ್ಟಿ, ಕೈಬಾಯಿಗೆ ಬಂದಿತ್ತವ್ವಾ ! ಅಱಿವು ಕುಱು ಹನು ಮಱವೆ ನುಂಗಿತ್ತು. ಗೊಹೇಶ್ವರನುಳಿದನವ್ವಾ !

**ಟೀ.** ಜ್ಞಾನೋದಯವಾಗಲು ದೇಹಪ್ರಕೃತಿಯಳಿವುದು. ದೇಹಪ್ರಕೃತಿ ಯಳಿಯಲೊಡನೆ ಜೀವಭಾವವಳಿವುದು. ಅಂತು ತನು ಜೀವರೆಂಬವರೀಗ ಗಂಡ ಹೆಂಡಿರೆಂಬ ಶಬ್ದಕ್ಕರ್ಥ. ಅಂತು ಜ್ಞಾನೋದಯದಿಂದ ತನುಜೀವರ ಅಜ್ಞಾನ ಭಾವವಳಿದು ಜ್ಞಾನಸ್ವರೂಪಾದ ಶರಣನ ಜ್ಞಾನಮುಖದಿಂದ ಚಿತ್‌ಪರಮಲಿಂಗ ಉದಯಿಸಿ ಕರಸ್ಥಲಕ್ಕೆ ಇಷ್ಟಲಿಂಗವಾಗಿ, ಜಿಹ್ವೆಗೆ ಶಿವಮಂತ್ರವಾಯಿತ್ತೆಂಬುದೀಗ 'ಘಳಿಗೆ ಘಳಿಗೆಗೆ ಮಗ ಹುಟ್ಟಿ ಕೈಗೆ ಬಾಯಿಗೆ ಬಂದಿತ್ತವ್ವಾ' ಎಂಬ ಶಬ್ದಕ್ಕರ್ಥ. ಅಂತು ಶರಣನ ಅಂತರಂಗವಾಗಿರ್ದ ಚಿತ್‌ಪರಮಲಿಂಗವು ಬಹಿಷ್ಕರಿಸಿ ಲಿಂಗಾಂಗ ಸಂಬಂಧವಾದಲ್ಲಿ, ಅಂಗವೆಲ್ಲಾ ಲಿಂಗವೆಯಾಗಿ, ಅಂಗ ಲಿಂಗವೆಂಬ ಭಿನ್ನ ಭಾವವ ಮಱೆದು ಶರಣನೆಲ್ಲಾ ಲಿಂಗವೆಯಾಗಿರ್ದನೆಂಬುದೀಗ 'ಅಱಿವು ಕುಱುಹನು ಮಱವೆ ನುಂಗಿತ್ತು. ಗೊಹೇಶ್ವರನುಳಿದನವ್ವಾ' ಎಂಬ ಶಬ್ದಕ್ಕರ್ಥ. ೪೩

**ವ.** ನೀರು ನೀರನೆ ಕಡೆದು ನೀರೊಳಗೆ ಉತ್ಪತ್ಯ ನಿರಾಲಂಬ ರೂಪವು. ಆರಣ್ಯದೊಳಗೆ ಮತ್ತೆ ಓರಂತೆ ಇರ್ದಡೆ ಕಾರಣವ ಹೇಳುವೆನು ಭಕ್ತಿರೂಪಾ. ಮೂಱು ತಾನೇಯಾಗಿ ಆಱಱಲಿ ಅನುಕರಿಸಿ ಆಱಾ ಱನೆ ಮೀಱಿ ಗುರುಕರುಣದಾ ತೋಱುವಾ ಶಿವಭಕ್ತಿ ಮೀಱಿಪ ವೈರಾಗ್ಯ, ನೀರು ನಿರ್ಮಲ ವಜ್ರ ಕಪಿಲಸಿದ್ಧಮಲ್ಲಿಕಾರ್ಜುನಾ.

**ಟೀ.** ಸದ್ವಿವೇಕವೆಂಬ ಜಲದಿಂದ ಮನವೆಂಬ ಜಲವ ಮಥನಿಸಲು ಮನ ವೆಲ್ಲಾ ಸದ್ವಿವೇಕಜ್ಞಾನಜಲವೆಯಾಗಲು, ಅಂತಪ್ಪ ಜ್ಞಾನಜಲದೊಳಗೆ ನಿರಾಕಾರ ವಸ್ತು ಸಾಕಾರವಾಗಿ ಉದಯಿಸಿ ಶರಣನ ಕರಸ್ಥಲಕ್ಕೆ ಬಂದನೆಂಬುದೀಗ 'ನೀರು ನೀರನೆ ಕಡೆದು ನೀರೊಳಗೆ ಉತ್ಪತ್ಯ ನಿರಾಲಂಬರೂಪವು' ಎಂಬ ಶಬ್ದಕ್ಕರ್ಥ. ಅಂತು ಉದಯಿಸಿದ ಇಷ್ಟಲಿಂಗದ ಕ್ರೀಯನು ಒಲಿದು ಓರಂತೆ ಮಾಡುತ್ತ, ದೇಹಾರಣ್ಯವಿಡಿದು ದೇಹಿಯಾಗಿರ್ದನು ಲಿಂಗಶರಣನೆಂಬುದೀಗ 'ಆರಣ್ಯದೊಳಗೆ ಮತ್ತೆ ಓರಂತೆ ಇರ್ದ' ನೆಂಬ ಶಬ್ದಕ್ಕರ್ಥ. ಅಂತಿರ್ದ ಶರಣನ ಭಕ್ತಿಕಾರಣಾರ್ಥ ವೆಂತೆಂದಡೆ : ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳು ತನ್ನ ನಿಜಸ್ವರೂಪ ವೆಂಬ ಅಭಿನ್ನಭಾವ ಘಟಿಸಿ, ಆ ಮೂಱು ಲಿಂಗವೆ ಷಡ್ವಿಧಲಿಂಗವಾಗಿ, ಷಡ್ವಿಧ ಭಕ್ತಿಯಿಂದ ಅನುಕರಿಸಿದ ಶರಣನೆಂಬುದೀಗ 'ಕಾರಣವ ಹೇಳುವೆನು ಭಕ್ತಿರೂಪಾ

ಮೂಱು ತಾನೇಯಾಗಿ, ಆಱಱಲಿ ಅನುಕರಿಸಿ ' ಎಂಬ ಶಬ್ದಕ್ಕರ್ಥ. ಅಂತು ಷಡ್ವಿಧ ಭಕ್ತಿಯಿಂದ ಮೂವತ್ತಾಱು ತತ್ತ್ವಂಗಳ ಮೇಲಿಪ್ಪ ಮಹಾಘನಲಿಂಗ ತತ್ತ್ವವನನುಕರಿಸಿ ಲಿಂಗವೆಯಾಗಿಪ್ಪ ಶಿವಭಕ್ತಿ ಘಟಿಸಿತ್ತು ಗುರುಕರುಣದಿಂದ ಲೆಂಬುದೀಗ ' ಆಱಾಱನೆ ಮೀಱಿ ತೋಱಿಪ್ಪ ಗುರುಕರುಣದಾ ತೋಱುವಾ ಶಿವಭಕ್ತಿ ' ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಭಕ್ತಿಯೀಗವೆ ಸಕಲ ದೇವತಾ ಪದಂಗಳನೆಲ್ಲವ ತೃಣೀಕರಿಸಿದ ಪರಮ ವೈರಾಗ್ಯವೆಂಬುದೀಗ 'ಮೀಱಿಪ್ಪ ವೈರಾಗ್ಯ' ವೆಂಬ ಶಬ್ದಕ್ಕರ್ಥ. ಅಂತು ಶಿವಭಕ್ತಿಯಿಂದ ಶರಣನ ಮನೋಜಲವೆಲ್ಲಾ ನಿರ್ಮಲವಪ್ಪ ಅವಿರಳವಸ್ತುವಾಯಿತ್ತೆಂಬುದೀಗ ' ನೀರು ನಿರ್ಮಲ ವಜ್ರ ' ವೆಂಬ ಶಬ್ದಕ್ಕರ್ಥ. ೪೪

ವ. ಲಿಂಗ ಕರದೊಳಗಿರಲು ಅಂಗೈಸಲೇಕನ್ಯಸಂಗಕ್ಕೆ ಒಳಗಾಗಿ ಲಿಂಗ ವುಂಟೇ ? ಸಂಗವೆಲ್ಲವು ಲಿಂಗಸಂಗವಾಗಿಪ್ಪವರ ಲಿಂಗ ನೀನೆಂಬೆನ್ನೆ ಯೋಗಿನಾಥಾ.

ಟೀ. ಅಂತರಂಗದಲ್ಲಿ ಬೆಳಗುತ್ತಿರ್ದ ಚಿದ್‌ಘನಲಿಂಗವೆ ಬಹಿರಂಗವನೊಳ ಕೊಂಡು ಇಷ್ಟಲಿಂಗವಾಗಿ ಶರಣನ ಕರಸ್ಥಲದಲ್ಲಿ ಭಿನ್ನವಿಲ್ಲದೆ ಬೆಳಗುತ್ತಿಪ್ಪನು. ಅಂತು ಒಳಹೊಱಗೆನ್ನದೆ ಪರಿಪೂರ್ಣನಾಗಿ ಲಿಂಗಾಂಗಸಂಯೋಗಿಯಾದ ಶರಣ ನೆಲ್ಲಾ ಲಿಂಗವೆಯಾಗಿಪ್ಪನು. ಅಂತಿಲ್ಲದೆ ಲಿಂಗವ ಅನ್ಯವಿಟ್ಟು ಭಾವಿಸಿ ಕೂಡೆ ನೆಂಬ ಭಿನ್ನಭಾವಿಗಳಿಗೆ ಲಿಂಗಸಂಗವೆಂದೂ ಇಲ್ಲವೆಂಬುದೀ ವಚನದ ತಾತ್ಪ ರ್ಯಾರ್ಥ. ೪೫

ವ. ಆದಿಯಾಧಾರವುಳ್ಳನ್ನಕ್ಕರ ಉಪಚಾರವೆರಡೂ ಒಂದಾದರೆ ಶಿವಾ ಚಾರ ಆ ಶಿವಾಚಾರ ಸ್ವಯವಾದರೆ ಬ್ರಹ್ಮಾಚಾರ. ಗೊಹೇಶ್ವರ ನನಱಿದಡೆ ಅನಾಚಾರ.

ಟೀ. ಆದಿಯೆಂದರೆ ಲಿಂಗ. ಆಧಾರವೆಂದರೆ ಅಂಗಸ್ವರೂಪನಪ್ಪ ಭಕ್ತ. ಅಂತು ಅಂಗ ಲಿಂಗ ಭಕ್ತನೆಂದೆರಡಿಟ್ಟು ಮಾಡುವ ಪೂಜೆಯೆಲ್ಲವೂ ಉಪಚಾರ ವಾಗಿ ಫಲಪದವುಂಟೆಂಬುದೀಗ ' ಆದಿಯಾಧಾರವುಳ್ಳನ್ನಕ್ಕರ ಉಪಚಾರ ' ವೆಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಾಂಗವೆರಡೂ ಒಂದೇ ವಸ್ತುವೆಂದಱಿದು ಭಿನ್ನಭಾವ ವಳಿದು ಮಾಡುವ ಭಕ್ತಿಯೇ ಭವವಿರಹಿತವಾದ ಶಿವಕ್ರೀಯೆಂಬುದೀಗ ' ಎರಡೂ ಒಂದಾದರೆ ಶಿವಾಚಾರ ' ವೆಂಬ ಶಬ್ದಕ್ಕರ್ಥ. ಅಂತು ಲಿಂಗಾಂಗವೆಂಬ ಭೇದ ವಳಿದು ಶರಣನೆಲ್ಲಾ ಲಿಂಗವೆಯಾಗಿ ಲಿಂಗವೂ ತಾನೇ ಎನುತ್ತಲಿಪ್ಪುದು ಚಿದ

ಹಂಕಾರ. ಅಂತಪ್ಪ ಚಿತ್ತುವಿನ ಅಹಂಕಾರವಳಿದು ನಿಜಸದ್‌ಭಕ್ತಿಯುಳವಟ್ಟಡೆ ಅದು ತಾನೆ ಪರಬ್ರಹ್ಮದ ನಿಜಚಿತ್ತುವಿನ ಚಾರಿತ್ರವೆಂಬುದೀಗ ' ಶಿವಾಚಾರ ಸ್ವಯ ವಾದರೆ ಬ್ರಹ್ಮಾಚಾರ ' ವೆಂಬ ಶಬ್ದಕ್ಕರ್ಥ. ಈ ಪರಿಯಲ್ಲಿ ತನ್ನ ಶಿವತ್ವದ ನೆಲೆ ಯನೆಲ್ಲವ ನೆಱೆಯಱಿದ ಶರಣ ಮಾಡಿದ ಪೂಜಾಕ್ರೀಗಳೆಲ್ಲಾ ನಿಃಕ್ರೀಗಳಾಗಿ ಶರಣ ಮಹಾಘನಲಿಂಗವೆಯಾಗಿಪ್ಪನೆಂಬುದೀಗ ' ಗೊಹೇಶ್ವರನನಱಿದಡೆ ಅನಾ ಚಾರ ' ವೆಂಬ ಶಬ್ದಕ್ಕರ್ಥ. ೪೬

ವ. ಸ್ಥಲವಿಡಿದು ಸರ್ವದಲಾಯತವಾಗಿ, ಸಹಜವಿಡಿದು ನಿಜವಳವಟ್ಟಲ್ಲಿ ಇದದೆಂದೆನಲುಂಟೇ? ಭಾವವಳಿದು ನಿರ್ಭಾವ ಉಳಿದಲ್ಲಿ ಇದದೆಂದೆನ ಲುಂಟೇ ಕದಂಬ ಕಳಾಸ ಕೂಡಲಚೆನ್ನಸಂಗಾ, ಸರ್ವಾಂಗಲಿಂಗ ಮಯವಾಗಿರ್ದಲ್ಲಿ ?

ಟೀ. ಅಂಗಸ್ಥಲವನೂ ಲಿಂಗಸ್ಥಲವನೂ ಸಂಬಂಧವ ಮಾಡಿ ಬಿಡದೆ ಯಿಪ್ಪ ಅಭಿನ್ನಜ್ಞಾನ ಕ್ರಿಯಾಚಾರ ಆಯತವಾಗಿ ಭಿನ್ನಭಾವವಳಿದು ಸಹಜಭಕ್ತಿ ನೆಲೆಗೊಂಡ ಶರಣನ ಅಂಗಪ್ರಾಣಂಗಳೆಲ್ಲಾ ಲಿಂಗವೆಯಾಗಿ ಭಿನ್ನವಿಲ್ಲದೆಯಿರ್ದ ನಿಜ ಶರಣನು ಲಿಂಗವ ಭಿನ್ನವಿಟ್ಟು ನುಡಿದು ಹೇಳಬಾರದೆಂಬುದೀ ವಚನದ ತಾತ್ಪ ರ್ಯಾರ್ಥ. ೪೭

ವ. ಲಿಂಗವೆಂದಲ್ಲಿಯೇ ತಪ್ಪಿತ್ತು. ಜಂಗಮವೆಂದಲ್ಲಿಯೇ ತಪ್ಪಿತ್ತು. ಪ್ರಸಾದವೆಂದಲ್ಲಿಯೇ ತಪ್ಪಿತ್ತು. ಈ ತ್ರಿವಿಧದ ಸಂಚದ ನಿಕ್ಷೇಪವ ಬಲ್ಲರೆ, ಈ ಲೋಕದೊಳಗಿರ್ದರೇನು ? ಆ ಲೋಕಕ್ಕೆ ಹೋದ ರೇನು ? ಹದಿನಾಲ್ಕು ಲೋಕದೊಳಗಿರ್ದ ನಿಸ್ಸಾರಮಂ ಬಿಟ್ಟು, ಲಿಂಗಸಾರಾಯಮೋಹಿಯಾಗಿ ಕೂಡಲಚೆನ್ನಸಂಗಯ್ಯನಲ್ಲಿ ನಿರ್ಲೇಪ ನಾದ ಶರಣ.

ಟೀ. ಸತ್ತು ಚಿತ್ತಾನಂದಸ್ವರೂಪವೇ ಲಿಂಗ ಜಂಗಮ ಪ್ರಸಾದ. ಅಂತಪ್ಪ ಲಿಂಗ ಜಂಗಮ ಪ್ರಸಾದವೇ ತನ್ನ ನಿಜವೆಂದಱಿದು, ಭಿನ್ನಭಾವವಿಲ್ಲದೆ ತನು ಮನ ಧನವೆಲ್ಲವನೂ ಆ ಲಿಂಗಜಂಗಮಕ್ಕೆ ಅರ್ಪಿಸಿ, ಆ ಲಿಂಗಜಂಗಮದ ಅಖಂಡ ಪರಿ ಪೂರ್ಣ ಆನಂದದ ಸುಖವನೇ ಅವಿರಳ ಜ್ಞಾನದಿಂದ ಮಚ್ಚಿ ಬಿಡದೆಯಿಪ್ಪ ಶರ ಣಂಗೆ ಜನನ ಮರಣಂಗಳಿಲ್ಲ. ಆ ಶರಣ ದೇಹಸಂಸಾರದೊಳಗಿರ್ದು ನಿರ್ಲೇಪಿ.

ಆ ಶರಣಂಗೆ ಮರ್ತ್ಯ ಕೈಲಾಸವೆಂಬುದಿಲ್ಲ, ಎಲ್ಲವೂ ಸರಿಯೆಂಬುದೀ ವಚನದ ತಾತ್ಪರ್ಯಾರ್ಥ. ೪೮

ವ. ಕಾಮಿಸದೆ ನೆನೆದಡೆ ಕಲ್ಪಿತವಿಲ್ಲದ ಪುರುಷ ಬಂದನೆನಗೆ ನೋಡವ್ವಾ! ಕಲ್ಪಿತವಿಲ್ಲದೆ ನೆನೆದಡೆ ಭಾವಿಸಲಿಲ್ಲದ ಸುಖವು ದೊರಕಿತ್ತು ನೋಡಾ! ಗೊಹೇಶ್ವರನೆಂಬ ಲಿಂಗವನರಿದ ಬಳಿಕ ನಾ ನೀನೆಂಬುದಿಲ್ಲ ನೋಡಾ !

ಟೀ. ಭಿನ್ನಜ್ಞಾನದಿಂದ ಪರವಸ್ತುವ ಭಿನ್ನವಿಟ್ಟು ನೋಡಿ, ಕಾಮಿಸದೆ ಅಭಿನ್ನದಿಂದಱಿಯಲು ಕಲ್ಪನೆಗೆ ಬಾರದ ಶಿವಸಂಬಂಧವಾಯಿತ್ತು ಆ ಶರಣಂಗೆ ಅನನ್ಯವಾಗಿ ಎಂಬುದೀಗ ‘ ಕಾಮಿಸದೆ ನೆನೆದಡೆ ಕಲ್ಪಿತವಿಲ್ಲದ ಪುರುಷ ಬಂದನೆನಗೆ ನೋಡವ್ವಾ ’ ಎಂಬ ಶಬ್ದಕ್ಕರ್ಥ. ಅಂತು ಅಭಿನ್ನವಾಗಿಪ್ಪ ಶಿವಸಂಬಂಧವ ಭಿನ್ನವಿಟ್ಟು ಕಲ್ಪನೆಗೆ ತಾರದೆ, ಅಭಿನ್ನಜ್ಞಾನದಿಂದಲಱಿಯಲು, ಭಿನ್ನಭಾವಕ್ಕೆ ಅಗೋಚರವಾಗಿರ್ದ ಅಗಣಿತ ಶಿವಸುಖವು ದೊರಕಿತ್ತು ಶರಣಂಗೆಂಬುದೀಗ ‘ ಕಲ್ಪಿತವಿಲ್ಲದೆ ನೆನೆದಡೆ ಭಾವಿಸಲಿಲ್ಲದ ಸುಖವು ದೊರಕಿತ್ತು ನೋಡಾ ’ ಎಂಬ ಶಬ್ದಕ್ಕರ್ಥ. ಅಂತು ಅಭಿನ್ನಜ್ಞಾನದಿಂದ ಶಿವತತ್ತ್ವವನಱಿದು, ಶರಣ ತಾನೆ ಶಿವನಾಗಿ ಭಿನ್ನವಿಲ್ಲದಿರ್ದನೆಂಬುದೀಗ ‘ ಗೊಹೇಶ್ವರನೆಂಬ ಲಿಂಗವನಱಿದ ಬಳಿಕ ನೀ ನಾನೆಂಬುದಿಲ್ಲ ನೋಡಾ ’ ಎಂಬ ಶಬ್ದಕ್ಕರ್ಥ. ೪೯

ವ. ನಡೆ ನುಡಿ ಚೈತನ್ಯವುಳ್ಳನ್ನಬರ ಒಡಲ ಗುಣಂಗಳಾರಿಗೆಯೂ ಬಿಡವು ನೋಡಾ. ನೋಡುವ ನಯನ, ಕೇಳುವ ಶ್ರೋತ್ರ, ವಾಸಿಸುವ ಘ್ರಾಣಕ್ಕೆ ಗಂಧಾದಿಗಳು ತಾಗಿದವೆನಬೇಡ. ನೋಡುತ್ತ ನಡೆವುತ್ತ ಕೇಳುತ್ತ ಲಿಂಗಾರ್ಪಿತವ ಮಾಡುವ ಲಿಂಗಭೋಗೋಪಭೋಗಿಗೆ ಸರ್ವಾಂಗಶುದ್ಧವೆಂಬುದು ಇದೆ ಕಂಡಯ್ಯಾ ! ಕಾಯತ್ರಯಂಗಳ, ಜೀವತ್ರಯಂಗಳ, ಭಾವತ್ರಯಂಗಳನೊಂದು ಮಾಡಿ, ಸುಖ ದುಃಖ ಸಗುಣ ನಿರ್ಗುಣವೆಂಬುಭಯವ ಲಿಂಗದಲ್ಲಿ ಏಕವ ಮಾಡಿ, ಅಹುದಲ್ಲ ಬೇಕುಬೇಡ ಎಂಬ ಸಂದು ಸಂಶಯವ ಕಳೆದಿಪ್ಪುದು ಕೂಡಲ ಚೆನ್ನಸಂಗಯ್ಯನಲ್ಲಿ ಆದಿಪುರಾತನರು ಮಾಡಿದ ಪಥವು.

ಟೀ. ಈ ವಚನ ಕಾಣಬಂದರ್ಥ. ೫೦

ವ. ಆಸುರವಾದುದು ಬೀಸರವಾಯಿತ್ತು. ಒಲ್ಲೆನೊಲ್ಲೆ ನೀ ಕೊಡುವ ವರವ. ನಾ ಬೇಡಿತ್ತು ನಿನ್ನ ಮುಖದಲಿಲ್ಲ ಗೊಹೇಶ್ವರಾ !

ಟೀ. ಫಲಪದವ ಬೇಡಿ ಪೂಜಿಸುವ ಪೂಜೆಯೆಲ್ಲವೂ ಲಿಂಗಕ್ಕೆ ಉಬ್ಬಸವಾಗಿ ಅದು ಆಸುರದ ಕರ್ಮವೆನಿಸುವುದು. ಅಂತು ಆಸುರಕರ್ಮವೆನಿಸುವ ಕಾಮ್ಯಾರ್ಥಭಕ್ತಿಯಿಂದ ಲಿಂಗದಲ್ಲಿ ಫಲಪದಂಗಳ ಪಡೆದು ಭವಕ್ಕೆ ತಿರುಗಿ ಬರುತ್ತಿಹರೆಂಬುದೀಗ 'ಆಸುರವಾದುದು ಬೀಸರವಾಯಿತ್ತು' ಎಂಬ ಶಬ್ದಕ್ಕರ್ಥ. ಅಂತು ಲಿಂಗವು ತನ್ನಿಂದನ್ಯವಾಗಿ ಕೊಡುತ್ತಿಪ್ಪ ವರಂಗಳೆಲ್ಲಾ ಭವಹೇತುಗಳೆಂದಱಿದು, ಶರಣನವನೇನನೂ ಬಯಸದೆ ಶರಣ ತಾನೆ ಲಿಂಗವಾಗಿಪ್ಪ ವರವ ಲಿಂಗವ ಬೇಡಲು ಲಿಂಗವು ತನ್ನ ಲಿಂಗಪದವ ಬೇಱಿಟ್ಟು ಕೋಯೆಂದು ಕೊಡಲಿಲ್ಲವಾಗಿ, ಲಿಂಗಪದವನಱಿದು ಬಯಸಿ ಭಾವಿಸಿದ ಶರಣಂಗೆ ಲಿಂಗವು ಅನನ್ಯವಾಗಿಪ್ಪನೆಂಬುದೀಗ 'ಒಲ್ಲೆನೊಲ್ಲೆ ನೀ ಕೊಡುವ ವರವ. ನಾ ಬೇಡಿತ್ತು ನಿನ್ನ ಮುಖದಲಿಲ್ಲ ಗೊಹೇಶ್ವರಾ' ಎಂಬ ಶಬ್ದಕ್ಕರ್ಥ. ೫೧

ವ. ಆದಿ ಆಱಱ ಭೇದ ತನುಗುಣವು ಮೂವತ್ತಾಱ ಮೀಱಿ, ತೋಱಿದುದ ತೋಱಿ, ಮತ್ತೆ ಆರೂಢವಾದರೆ ಮೇಲೆ ನಿನ್ನಿಚ್ಛೆ ಕಾಣಾ ರಾಮನಾಥಾ!

ಟೀ. ಅಂಗತತ್ತ್ವ ಮೂವತ್ತಾಱನೊಳಕೊಂಡು ಕುಱುಹುದೋಱದೆಯಿರ್ದ ಮಹಾಘನಲಿಂಗವ ಗುರು ಕರುಣದಿಂದ ತೋಱಿಸಲು, ಆ ತೋಱಿಸಿದ ಮಹಾಘನಲಿಂಗದ ಮುಖವಾಱು ಲಿಂಗವಾದ ಭೇದವನಱಿದು, ಆ ಆಱು ಲಿಂಗಕ್ಕೆ ಆಱಂಗವನರ್ಪಿಸಿ, ಅಂಗಲಿಂಗವೆಂಬ ಭೇದವಳಿದು, ಶರಣನೆಲ್ಲಾ ಲಿಂಗವೆಯಾಗಿ ಲಿಂಗಪದದಲ್ಲಿ ನಿಂದ ಶರಣನು ತನ್ನ ಸ್ವಯಿಚ್ಛೆಯಿಂದ ಎಂತು ನಡೆವ ಚಾರಿತ್ರವೆಲ್ಲಾ ಸತ್ಕ್ರಿಯಾಚಾರಿತ್ರವೆಂಬುದೀ ವಚನದ ತಾತ್ಪರ್ಯಾರ್ಥ. ೫೨

ವ. ಎನ್ನಲ್ಲಿ ನಾನು ನಿಜವಾಗಿ ನಿಮ್ಮನಱಿದೆನೆಂದರೆ ಅದು ನಿಮ್ಮ ಮತಕ್ಕೆ ಬಪ್ಪುದೆ ? ಎನ್ನ ನಾನು ಮಱೆದು ನಿಮ್ಮನಱಿದಡೆ ಅದು ನಿಮ್ಮ ರೂಪೆಂಬೆ. ಎನ್ನ ನಿನ್ನೊಳು ಮಱೆದಲ್ಲಿ ಕನ್ನಡಿಯೊಳಗಣ ಪ್ರತಿಬಿಂಬದಂತೆ ಭಿನ್ನವಿಲ್ಲದಿರ್ದೆ ಕಾಣಾ ಗೊಹೇಶ್ವರಾ !

ಟೀ. ತಾನು ಶಿವನೆಂದು ತನ್ನ ನಿಜವ ತಿಳಿದು, ಶಿವನು ತಾನೆಂದಡೆ ಶಿವನು ತಾನಾಗಲಱಿಯ. ಮತ್ತೆಂತೆಂದಡೆ : ಅಱಿವುದೇ ಅಂಗ, ಅಱುಹಿಸಿಕೊಂಬುದೇ

ಲಿಂಗ. ಅಂತಪ್ಪ ಲಿಂಗಾಂಗವೆರಡಕ್ಕೆ ಭೇದವಿಲ್ಲೆಂದಱಿದು ಲಿಂಗಾಂಗಸಂಯೋಗಿಯಾಗಿ, ಭೇದವ ಮಱೆದು ಶರಣನೆಲ್ಲಾ ಲಿಂಗವೆಯಾಗಿ, ತನ್ನ ಕಾಣುತ್ತಿರ್ಪ ಅಭಿನ್ನದಱಿವು ಘಟಿಸಿದ ಶರಣನೇ ಲಿಂಗಸ್ವರೂಪನು. ಅಂತು ಅಂಗಭಾವವ ಮಱೆದು ಲಿಂಗಸ್ವರೂಪಾಗಿರ್ದ ಶರಣನ ಪರಿಯೆಂತೆಂದಡೆ : ದರ್ಪಣದೊಳಗಣ ಪ್ರತಿಬಿಂಬವು ಆ ದರ್ಪಣಕ್ಕೆ ಭಿನ್ನವಿಲ್ಲದಿಪ್ಪಂತೆ ಲಿಂಗದೊಳಗೆ ಶರಣ ಭಿನ್ನವಿಲ್ಲದಿರ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೫೩

ವ. ಆದಿಯ ಶರಣನ ಮದುವೆಯ ಮಾಡಲು ಯುಗ ಜುಗದವರೆಲ್ಲಾ ನಿಬ್ಬಣ ಹೋದರು. ಹೋದ ನಿಬ್ಬಣಿಗರು ಮರಳರು. ಮದುವಣಿಗನ ಶುದ್ಧಿಯನಱಿಯಲು ಬಾರದು. ಹಂದರವಳಿಯದು, ಹಸೆ ಮುನ್ನ ಉಡುಗದು, ಬಂದ ಬಂದವರೆಲ್ಲಾ ಮಿಂದುಂಡು ಹೋದರು. ಇದಱಂತುವನಱಿದಡೆ ನಿಜವಿಲ್ಲ. ಗೊಹೇಶ್ವರನೆಂಬ ಶಬ್ದವನೊಳಕೊಂಡ ಮಹಂತ ಬಯಲು.

ಟೀ. ಆದಿಯೆಂದರೆ ಸಮ್ಯಗ್ಜ್ಞಾನ. ಅಂತು ಸಮ್ಯಗ್ಜ್ಞಾನೋದಯವಾದ ಶರಣಸತಿಗೂ ಮಹಾಲಿಂಗವೆಂಬ ಪುರುಷಂಗೂ ವಿವಾಹವೆಂಬ ಸಮರಸಸಂಗವ ಮಾಡುತ್ತಿರಲು ಆ ಶರಣನ ಆತ್ಮನ ಕೂಡೆ ಅನಂತಕಾಲದಲಿರ್ದ ಸಕಲ ಕರಣಂಗಳೆಲ್ಲವೂ ಲಿಂಗಸಂಗಿಗಳಾಗಿ ಹೋದರು ಎಂಬುದೀಗ 'ಆದಿಯ ಶರಣನ ಮದುವೆಯ ಮಾಡಲು ಯುಗಜುಗದವರೆಲ್ಲಾ ನಿಬ್ಬಣಹೋದರು' ಎಂಬ ಶಬ್ದಕ್ಕರ್ಥ. ಅಂತು ಶರಣನ ಅಂಗ ಕರಣಂಗಳೆಲ್ಲಾ ಲಿಂಗದೊಳಗೆ ಬೆರೆದು ಲಿಂಗವೆಯಾಗಿ ಹೋದ ಕಾರಣ ಮರಳಿ ಕರಣಧರ್ಮದ ಜ್ಞಾನಗುಣಂಗಳು ಶರಣನಲ್ಲಿ ತೋಱಲಿಲ್ಲವೆಂಬುದೀಗ 'ಹೋದ ನಿಬ್ಬಣಿಗರು ಮರಳರು' ಎಂಬ ಶಬ್ದಕ್ಕರ್ಥ. ಅಂತು ಲಿಂಗಸಂಗದಿಂದ ಅಂಗಕರಣಂಗಳು ಮೊದಲಾಗಿ ತಾನೆಲ್ಲಾ ಮಹಾಘನ ಲಿಂಗವಾದ ಶರಣಂಗೆ ಶಿವೋಹಂಭಾವ ಘಟಿಸಿ, ಲಿಂಗವ ಭಿನ್ನವಿಟ್ಟು ಅಱಿಯಲಿಲ್ಲದೆ ಹೋಯಿತ್ತೆಂಬುದೀಗ 'ಮದುವಣಿಗನ ಶುದ್ಧಿಯನಱಿಯಲು ಬಾರದು' ಎಂಬ ಶಬ್ದಕ್ಕರ್ಥ. ಅಂತು ಶರಣನೆಲ್ಲಾ ಶಿವನಾಗಿ ಶಿವೋಹಂ ಎನುತಿರ್ದಲ್ಲಿ, ಆ ಶಿವೋಹಂ ಎಂಬ ಅಱಿವಿನ ಉಲುಹಡಗಿ ನಿಶ್ಶಬ್ದಬ್ರಹ್ಮವಾಗಿರ್ದಡೆ, ಆ ಶರಣ ತಾನೆ ನಿಃಕಲವಸ್ತುವೆಂಬುದೀಗ 'ಶಬ್ದವನೊಳಕೊಂಡ ಮಹಂತ ಬಯಲು' ಎಂಬ ಶಬ್ದಕ್ಕರ್ಥ. ಅಂತು ಲಿಂಗವೆಯಾಗಿಪ್ಪ, ಲಿಂಗಾಂಗಸಂಬಂಧದ ಮಾರ್ಗವನಱಿಯದೆಯಿರ್ದ ಜೀವರ ಪರಿಯೆಂತೆಂದಡೆ : ಭೂಮಿಯೆಂಬ ಹಸೆ, ಆಕಾಶವೆಂಬ ಹಂದರ. ಈ ಎರಡೂ ಅಳಿಯದ ಮುನ್ನವೆ ದೇಹಿಗಳೆಲ್ಲರೂ ಸಂಸಾರ

ಸಾಗರದಲ್ಲಿ ಮಿಂದುಂಡು, ಪ್ರಾರಬ್ಧಕರ್ಮಂಗಳನನುಭವಿಸುತ್ತ ಬಂದು ಬಂದು ಹೋಗುತ್ತಿರ್ದರೆಂಬುದೀಗ ‘ ಹಂದರವಳಿಯದು, ಹಸೆ ಮುನ್ನಲುಡುಗದು, ಬಂದ ಬಂದವರೆಲ್ಲಾ ಮಿಂದುಂಡು ಹೋದರು ’ ಎಂಬ ಶಬ್ದಕ್ಕರ್ಥ. ಅಂತು ಹುಸಿ ದೇಹಸಂಸಾರವೆ ದಿಟವೆಂದು ಹಿಡಿದು ಭವಸಾಗರದೊಳಗೆ ಮುಳುಗಾಡುತ್ತಿಪ್ಪರು ಜೀವರು ಅಜ್ಞಾನದಿಂದ. ಅಂತಪ್ಪ ಅಜ್ಞಾನವಳಿದು ಸುಜ್ಞಾನೋದಯವಾಗಿ ತನ್ನ ನಿಜವನಱಿದಂದಿಗೆ ಸಂಸಾರ ತೋರಿಕೆಯೆಲ್ಲವೂ ಹುಸಿಯಾಗಿಹುದೆಂಬುದೀಗ ‘ ಇದಱಂತುವನಱಿದಡೆ ನಿಜವಿಲ್ಲ ’ ವೆಂಬ ಶಬ್ದಕ್ಕರ್ಥ. ೫೪

ವ. ಅಂಗವ ಲಿಂಗಮುಖದಲ್ಲಿ ಅರ್ಪಿಸಿ ಅಂಗವನಂಗವಾಯಿತ್ತು. ಮನವನಱಿದು ಲಿಂಗಕ್ಕರ್ಪಿಸಿ ಮನ ಲೀಯವಾಯಿತ್ತು. ಅಂಗಭಾವ ಮನಭಾವವಳಿದ ಕಾರಣ ಕಾಯವಕಾಯವಾಯಿತ್ತು. ಎನ್ನ ಅಕಾಯದ ಸುಖಭೋಗವ ಲಿಂಗವೆ ಭೋಗಿಸುವನಾಗಿ ಶರಣಸತಿ ಲಿಂಗಪತಿಯಾದೆನು. ಇದು ಕಾರಣ ಚೆನ್ನಮಲ್ಲಿಕಾರ್ಜುನನೆಂಬ ಗಂಡನನೊಳಹೊಕ್ಕು ಬೆರಸಿದೆನು.

ಟೀ. ಈ ವಚನ ಕಾಣಬಂದರ್ಥ. ೫೫

ವ. ಆರಾದರೂ ನಿಮ್ಮ ನೆನೆವರಯ್ಯಾ, ನಾ ನಿಮ್ಮ ನೆನೆವವನಲ್ಲಯ್ಯಾ. ಅದೇನು ಕಾರಣವೆಂದರೆ : ಎನ್ನ ನೆನೆವ ಮನ ನೀವೆಯಾದಿರಾಗಿ. ಆರಾದರೂ ನಿಮ್ಮ ಪೂಜಿಸುವರಯ್ಯಾ, ನಾ ನಿಮ್ಮ ಪೂಜಿಸುವವನಲ್ಲ. ಅದೇನುಕಾರಣವೆಂದರೆ : ಎನ್ನ ತನುವಿಗೆ ಪೂಜೆ ನೀವೆಯಾದಿರಾಗಿ. ಆರಾದರೂ ನಿಮಗೆ ಅರ್ಪಿಸುವರಯ್ಯಾ, ನಾ ನಿಮಗರ್ಪಿಸುವನಲ್ಲ. ಅದೇನುಕಾರಣವೆಂದರೆ : ಎನ್ನ ಸರ್ವಾಂಗವೆಲ್ಲವೂ ನಿಮಗರ್ಪಿತವಾಯಿತ್ತಾಗಿ. ಇದು ಕಾರಣ ಭಕ್ತದೇಹಿಕದೇವ, ದೇವದೇಹಿಕ ಭಕ್ತನೆಂಬ ಶ್ರುತಿಯನಱಿದು, ನಿಮ್ಮ ಮುಟ್ಟಿ ನಾನು ಅಭಿನ್ನನಾದೆ ಕಾಣಾ ಕೂಡಲಚೆನ್ನಸಂಗಮದೇವಾ !

ಟೀ. ಅಂಗಲಿಂಗಸಂಗದಿಂದ ಅಂಗಭಾವವಳಿದು ಶರಣನೆಲ್ಲಾ ಲಿಂಗವೆಯಾದ ಒಳಿಕ ಮಾಡುವ ಮಾಡಿಸಿಕೊಂಬುವೆರಡಿಲ್ಲದೆ ಲಿಂಗವು ತನಗೆ ತಾನರ್ಪಿಸಿ ಪೂಜಿಸಿಕೊಳುತ್ತಿಹ ಶರಣನೆಲ್ಲಾ ಲಿಂಗವೆಯಾಗಿ ಎಂಬುದೀ ವಚನದ ತಾತ್ಪರ್ಯಾರ್ಥ. ೫೬

**ವ.** ಕಂಗಳ ತುರಿಯುವ ಕರಸ್ಥಲ ನುಂಗಿ, ಕರಸ್ಥಲದ ಧೃಷ್ಟಿವ ಕಂಗಳು ನುಂಗಿ, ಇಂತೀ ಉಭಯ ಕುಳವಡಗಿ ಅದ್ವೈತವಾದ ಶರಣಂಗೆ ಆಹ್ವಾನವಿಲ್ಲ, ವಿಸರ್ಜನವಿಲ್ಲ. ಹಿಂದೆಂಬುದಿಲ್ಲ, ಮುಂದೆಂಬುದಿಲ್ಲ. ಒಳಗೆಂಬುದಿಲ್ಲ, ಹೊಱಗೆಂಬುದಿಲ್ಲ. ಕೀಳೆಂಬುದಿಲ್ಲ, ಮೇಲೆಂಬುದಿಲ್ಲ. ಕೂಡಲಚೆನ್ನಸಂಗಮದೇವಯ್ಯ, ನಿಮ್ಮ ಶರಣನೆತ್ತೆತ್ತ ನೋಡಿದಡೂ ಅತ್ತತ್ತ ನೀವೇ ಕಂಡಯ್ಯಾ !

**ಟೀ.** ಭಾವ ಮನ ದೃಕ್ಕಿಂದ ಉದಯಿಸಿದ ಜ್ಞಾನಲಿಂಗವೇ ಶರಣನ ಕರಸ್ಥಲದೊಳಡಗಿತ್ತು. ಆ ಕರಸ್ಥಲದ ಚಿಲ್ಲಿಂಗವ ಶರಣನ ಜ್ಞಾನದೃಕ್ಕು ಅವಗ್ರಹಿಸಿ, ಅಂಗಲಿಂಗವೆಂಬ ಭೇದವಳಿದು ಲಿಂಗವೆಯಾದ ಶರಣಂಗೆ ಲಿಂಗವ ಭಿನ್ನವಿಟ್ಟು ಕರೆಯಲಿಲ್ಲ, ಕಳುಹಲಿಲ್ಲ. ಆ ಶರಣಸಂಗದೊಳ ಹೊಱಗೆ, ಹಿಂದೆ ಮುಂದೆ, ಕೆಳಗೂ ಮೇಲೂ ಶರಣನೆತ್ತೆತ್ತ ನೋಡಿದಡೆಯೂ ಲಿಂಗವೇ ಪರಿಪೂರ್ಣನಾಗಿಹನೆಂಬುದೀ ವಚನದ ತಾತ್ಪರ್ಯಾರ್ಥ. ೫೭

**ವ.** ಮಣ್ಣಿಲ್ಲದ ಹಾಳ ಮೇಲೆ ಕಣ್ಣಿಲ್ಲದಾತನೊಂದು ಮಣಿಯ ಕಂಡ ! ಕೈಯಿಲ್ಲದಾತ ಪವಣಿಸಿದ ! ಕೊರಳಿಲ್ಲದಾತ ಕಟ್ಟಿಕೊಂಡ ! ಅಂಗವಿಲ್ಲದ ಸಿಂಗಾರಕ್ಕೆ ಭಂಗವುಂಟೇ ಗೊಹೇಶ್ವರಾ ?

**ಟೀ.** ಮಣ್ಣೆಂದಡೆ ದೇಹಕ್ಕೆ ಹೆಸರು. ಅಂತಪ್ಪ ದೇಹಧರ್ಮಂಗಳನೆಲ್ಲ ವನೂ ತನ್ನಿಂದನ್ಯವೆಂದು ಅವ ನೇತಿ ಮಾಡಿ ಅಱಿದಱಿವೀಗ ' ಮಣ್ಣಿಲ್ಲದ ಹಾಳ ಮೇಲೆ ' ಯೆಂಬ ಶಬ್ದಕ್ಕರ್ಥ. ಅಂತು ಅಱಿದಱಿವಿನಲ್ಲಿ ಭಿನ್ನಜ್ಞಾನದೃಕ್ಕಿಲ್ಲದೆ ಅಭಿನ್ನಜ್ಞಾನದಿಂದ ಚಿತ್‌ಪ್ರಭಾಲಿಂಗವ ಕಂಡ ಶರಣನೆಂಬುದೀಗ ' ಮಣ್ಣಿಲ್ಲದ ಹಾಳ ಮೇಲೆ ಕಣ್ಣಿಲ್ಲದಾತನೊಂದು ಮಣಿಯ ಕಂಡ ' ನೆಂಬ ಶಬ್ದಕ್ಕರ್ಥ. ಅಂತಪ್ಪ ಚಿತ್‌ಪ್ರಭಾವಸ್ತುವ ಭಿನ್ನಭಾವಹಸ್ತವಿಲ್ಲದ ಅಭಿನ್ನಭಾವ ಹಸ್ತದಿಂದ ಪಿಡಿದು, ಮಹಾನುಭವಸೂತ್ರದಿಂದ ಶಿವಲಿಂಗವನಳವಡಿಸಿಕೊಂಡ ಶರಣನೆಂಬುದೀಗ ' ಕೈಯಿಲ್ಲದಾತ ಪವಣಿಸಿದ ' ನೆಂಬ ಶಬ್ದಕ್ಕರ್ಥ. ಅಂತು ಅವಿರಳಭಾವದಿಂದ ಅಂಗಲಿಂಗವೆಂಬ ಖಂಡಿತವನಳಿದು ಶಿವತತ್ತ್ವವನಳವಡಿಸಿಕೊಂಡು ಲಿಂಗವೆಯಾಗಿರ್ದ ಶರಣನೆಂಬುದೀಗ ' ಕೊರಳಿಲ್ಲದಾತ ಕಟ್ಟಿಕೊಂಡ ' ನೆಂಬ ಶಬ್ದಕ್ಕರ್ಥ. ಅಂತು ಅಂಗಭಾವವಳಿದು ತಾನೆಲ್ಲಾ ಲಿಂಗವೆಯಾಗಿರ್ದ ಶರಣಂಗೆ ಹುಟ್ಟು ಹೊಂದಿನ ಭಂಗವಿಲ್ಲೆಂಬುದೀಗ ' ಅಂಗವಿಲ್ಲದ ಶೃಂಗಾರಕ್ಕೆ ಭಂಗವುಂಟೇ ' ಎಂಬ ಶಬ್ದಕ್ಕರ್ಥ. ೫೮

ವ. ಮನದೊಳಗೆ ಘನ ವೇದ್ಯವಾಗಿ, ಘನದೊಳಗೆ ಮನ ವೇದ್ಯವಾದ ಬಳಿಕ ಪುಣ್ಯವಿಲ್ಲ. ಪಾಪವಿಲ್ಲ. ಸುಖವಿಲ್ಲ, ದುಃಖವಿಲ್ಲ. ಕಾಲವಿಲ್ಲ, ಕರ್ಮವಿಲ್ಲ. ಜನನವಿಲ್ಲ, ಮರಣವಿಲ್ಲ. ಗೊಹೇಶ್ವರಾ ನಿಮ್ಮ ಶರಣನು ಘನಮಹಿಮನು [೧]ನೋಡಾ[೧] !

ಟೀ. ಈ ವಚನ ಕಾಣಬಂದರ್ಥ. ೫೯

ವ. ಏನೆಂದೆನಲಿಲ್ಲದ ಅಖಂಡ ಪರಿಪೂರ್ಣ ಪರಮಾನಂದ ಪರಬ್ರಹ್ಮವು ತಾನೆಂಬಜೀವಿನ ಬಲದಹಂಕಾರವಿಲ್ಲವಾಗಿ ಅದ್ವೈತಿಯಲ್ಲ. ಉಭಯ ವಿಟ್ಟೆಣಿಸುವ ಗಜಿಬಜೆಯಲ್ಲಿ ಸಿಲುಕನಾಗಿ ದ್ವೈತಿಯಲ್ಲ. ಇಂತೀ ದ್ವೈತಾದ್ವೈತವೆಂಬ ಉಭಯನಾಮ ನಷ್ಟವಾದ ಅಭೇದ್ಯಮಹಿಮನ ಕಪಿಲಸಿದ್ಧಮಲ್ಲಿಕಾರ್ಜುನಾ, ನಿಮ್ಮ ಶರಣರೆ ಬಲ್ಲರು.

ಟೀ. ಈ ವಚನ ಕಾಣಬಂದರ್ಥ. ೬೦

ವ. ಬಟ್ಟೆಗೊಂಡು ಹೋಗುತ್ತೊಂದ ಉಡ ಕೊಟ್ಟು ಹೋದರೆಮ್ಮವರು. ಎಲ್ಲಿಯದು ಲಿಂಗ ? ಎಲ್ಲಿಯದು ಜಂಗಮ ? ಎಲ್ಲಿಯದು ಪ್ರಸಾದವಯ್ಯಾ ? ಅಲ್ಲದವರೊಡನಾಡಿ ಎಲ್ಲರೂ ಮುಂದುಗೆಟ್ಟರಯ್ಯಾ ! ಆ ನಿಮ್ಮ ನಂಬಿ ಬಯಲಾದೆ ಗೊಹೇಶ್ವರಾ !

ಟೀ. ಜ್ಞಾನಕ್ರಿಯೆಯಲ್ಲಿ ಆಚರಿಸುವ ಶ್ರೀಗುರು ತನ್ನ ತಚ್ಛಿಷ್ಯನ ಅಂಗಕ್ಕೆ ಲಿಂಗಕ್ರಿಯಾಜ್ಞಾನವನಳವಡಿಸಿಕೊಟ್ಟನೆಂಬುದೀಗ ‘ಬಟ್ಟೆಗೊಂಡು ಹೋಗುತ್ತೊಂದ ಉಡ ಕೊಟ್ಟು ಹೋದರೆಮ್ಮವರು’ ಎಂಬ ಶಬ್ದಕ್ಕರ್ಥ. ಅಂತು ಲಿಂಗ ಜಂಗಮ ಪ್ರಸಾದ ಕ್ರೀ ಶರಣನ ಅಂಗಕ್ಕೆ ಸಂಬಂಧವಾದುದು ಗುರುಕರುಣದಿಂದಲಾಯಿತ್ತಲ್ಲದೆ ಎಲ್ಲರಿಗೆಲ್ಲಿಯದೋ ಎಂಬುದೀಗ ‘ಎಲ್ಲಿಯದು ಲಿಂಗ ? ಎಲ್ಲಿಯದು ಜಂಗಮ ? ಎಲ್ಲಿಯದು ಪ್ರಸಾದ ?’ ವೆಂಬ ಶಬ್ದಕ್ಕರ್ಥ. ಅಂತು ಭವಬಂಧನಕ್ಕೆ ಒಳಗಲ್ಲದೆ ಇರ್ದ ಲಿಂಗ ಜಂಗಮ ಪ್ರಸಾದಂಗಳ ಒಡನಾಡಿದವರೆಲ್ಲರೂ ಗಣೇಶ್ವರರಾಗಿ ಮುಂದಣ ಹುಟ್ಟು ಹೊಂದುಗೆಟ್ಟರೆಂಬುದೀಗ ‘ಅಲ್ಲದವರೊಡನಾಡಿ ಎಲ್ಲರೂ ಮುಂದುಗೆಟ್ಟರಯ್ಯಾ’ ಎಂಬ ಶಬ್ದಕ್ಕರ್ಥ. ಅಂತು ಶರಣ ಲಿಂಗ ಜಂಗಮ ಪ್ರಸಾದವ ತನ್ನ ನಿಜವೆಂಬ ವಿಶ್ವಾಸದಿಂದ ತನು ಮನ ಧನವ

೧ ನೋಡಯ್ಯಾ (ಎ.)

ನರ್ಪಿಸಿ, ಅಂಗವಳಿದು ಲಿಂಗವಾಗಿರ್ದ ಶರಣನೆಂಬುದೀಗ ' ಆ ನಿಮ್ಮ ನಂಬಿ ಬಯಲಾದೆ ' ನೆಂಬ ಶಬ್ದಕ್ಕರ್ಥ. ೬೧

**ವ.** ತನುವೆಂಬ ಏರಿಗೆ ಮನವೆಂಬ ಕಟ್ಟೆಯ ಮಾಡಿ, ಬಲಿದು ಷಡ್ವಿಧ ಭಕ್ತಿಯೆಂಬ ಸೋಪಾನದಿಂದ ಪರಮಾನಂದ ಜಲವ ತುಂಬಿ ಕೆಱೆಯ ಕಟ್ಟಬಲ್ಲವರನಾರನೂ ಕಾಣೆ ! ನಾನು ಕಟ್ಟಿದ ಕೆಱೆ ಸ್ಥಿರ ವಾಯಿತ್ತು ಗೊಹೇಶ್ವರಾ, ನಿಮ್ಮಾಣೆ !

**ಟೀ.** ಶಿವಜ್ಞಾನಿ ಶರಣನು ತನ್ನ ತನುವನೇ ಏರಿಯ ಮಾಡಿ, ಮನವನೇ ಕಲ್ಲ ಕಟ್ಟೆಯ ಮಾಡಿ, ಬಲಿದು, ಷಡ್ವಿಧಭಕ್ತಿಯೆಂಬ ಸೋಪಾನವಿಡಿದು, ಶಿವಸುಖಾ ನಂದ ಜಲವ ತಮ್ಮಾತ್ಮಾಂಗದೊಳು ತುಂಬಿ, ಭಿನ್ನವಳಿದು ಏಕರಸವಾಗಿ ನಿತ್ಯವಪ್ಪ ಶಿವಪದವ ಪಡೆದರು ಶರಣರು. ಅಂತು ಶಿವಪದವ ಪಡೆದು ಸುಖಿಸಬಲ್ಲರು ಶರಣರಲ್ಲದೆ ಉಳಿದ ಮತಾದಿಗಳಾರೂ ಅಱಿಯರೆಂಬುದೀಗ ಈ ವಚನದ ತಾತ್ಪ ರ್ಯಾರ್ಥ. ೬೨

**ವ.** ಜ್ಞಾನ ತನ್ನೊಳಗೆ, ಅಜ್ಞಾನ ತನ್ನೊಳಗೆ. ಎರಡುವನಱಿಯದ ಸಹಜ ಸುಜ್ಞಾನಿ ಲಿಂಗವಶಗತನಾಗಿರ್ದಲ್ಲಿ ಪರಿಣಾಮಿ ಕೂಡಲಚೆನ್ನಸಂಗಾ, ನಿಮ್ಮ ಶರಣ.

**ಟೀ.** ತನ್ನ ಅಱಿವಿಂಗೆ ಮಱವೆಯೂ ತನ್ನಲ್ಲಿಯೆ ತೋಱಿ ದೇಹಿಯಾದ ರಾಗಿ ಆತ್ಮರು ಅಱಿವು ಮಱವೆ ಎರಡೂ ಕೂಡಿ ಯುಕ್ತರಾಗಿಹರೆಂಬುದೀಗ 'ಜ್ಞಾನ ತನ್ನೊಳಗೆ, ಅಜ್ಞಾನ ತನ್ನೊಳಗೆ ' ಎಂಬ ಶಬ್ದಕ್ಕರ್ಥ. ಅಂತಿಪ್ಪ ದೇಹಿಗಳೊಳಗೆ ಸುಜ್ಞಾನೋದಯವಾದ ಶರಣನು ಅಱಿವು ಮಱವೆಗಳೆಂಬೆರಡಿಲ್ಲದೆ ತಾನೆಲ್ಲಾ ಬಱಿಯ ಜ್ಞಾನಸ್ವರೂಪನಾಗಿರ್ದನೆಂಬುದೀಗ ' ಎರಡುವನಱಿಯದ ಸಹಜ ಸುಜ್ಞಾನಿ ' ಎಂಬ ಶಬ್ದಕ್ಕರ್ಥ. ಅಂತು ಸುಜ್ಞಾನಿಯಾಗಿ ತನ್ನ ನಿಜವೇ ಪರಶಿವ ನೆಂದಱಿದು, ಆ ಪರಶಿವಲಿಂಗಕ್ಕೆ ತನ್ನ ಆತ್ಮಾಂಗವ ಸಂಬಂಧವ ಮಾಡಿ, ಭಿನ್ನ ವಳಿದು ಲಿಂಗವೆಯಾಗಿ ಪರಮಪರಿಣಾಮಿಯಾಗಿರ್ದ ಶರಣನೆಂಬುದೀಗ 'ಸುಜ್ಞಾನಿ ಲಿಂಗವಶಗತನಾಗಿರ್ದಲ್ಲಿ ಪರಿಣಾಮಿ ಕೂಡಲಚೆನ್ನಸಂಗಮದೇವ, ನಿಮ್ಮ ಶರಣ ' ನೆಂಬ ಶಬ್ದಕ್ಕರ್ಥ. ೬೩

**ವ.** ಇವನೊಬ್ಬನೇ ಗರುವನು, ಇವನೊಬ್ಬನೇ ಚೆಲುವನು, ಇವನೊಬ್ಬನೇ ಧನಪತಿ ಕೇಳು ಕೆಳದಿ ! ಇವಂಗೆ ಹಿರಿಯರಿಲ್ಲ, ಎನಗೆ ಒಡೆಯರಿಲ್ಲ.

ಇಂತಪ್ಪ ನಲ್ಲನು ಲೇಸು [1]ಕಾಣಿರೆಲಗೆ[1]! ನಾವೆಲ್ಲರೊಂದಾಗಿ ಹಿಡಿದು ಬಿಡದಿರೆ ಬಿಡಿಸುವವರಿಲ್ಲ, ಲೇಸು, ಉರಿಲಿಂಗದೇವನ !

ಟೀ. ಈ ವಚನ ಕಾಣಬಂದರ್ಥ. ೬೪

ವ. ಅತಿಶಯವನತಿಗಳೆದು ನಿರತಿಶಯಸುಖದೊಳಗೆ ಪರಮಸುಖಿಯಾಗಿಪ್ಪವರಾರು ಹೇಳಾ ? ನಿಜದ ನಿರ್ಣಯವನಱಿದು, ಭಜನೆ ಭಾವನೆಯಳಿದು, ತ್ರಿಜಗಪತಿಯಾಗಿಪ್ಪವರಾರು ಹೇಳಾ ? ಕೋಡಗದ ಗಮನದೊಳಗೆ ಮನವಿರಹಿತನಾಗಿ ಗಮನಗೆಡದಿಪ್ಪರಿನ್ನಾರು ಹೇಳಾ ? ಹಗೆಯಲ್ಲಿ ಹೊಕ್ಕು ಹಗೆಯಳಿದು ಸುಖಿಯಾಗಿ ತನಗೆ ತಾ ಕೆಳೆಯಪ್ಪರಾರು ಹೇಳಾ ? ಒಳಹೊಱಗು ಸರ್ವಾಂಗಲಿಂಗವಾಗಿರಬಲ್ಲ ಪರಮಾರ್ಥರಾರು ಹೇಳಾ ? ಕಲಿದೇವರದೇವ, ನಿಮ್ಮ ಶರಣ ಚೆನ್ನಬಸವಣ್ಣನ ನಿಲವನಱಿದು ಶರಣೆಂದು ಸುಖಿಯಾದೆನು !

ಟೀ. ಅತಿಶಯವೆಂದರೆ ಸ್ಥೂಲಸ್ವರೂಪಾದ ಚತುರ್ವಿಧ ಪದಂಗಳು. ನಿರತಿಶಯವೆಂದರೆ ತನ್ನ ನಿಜಸ್ವಭಾವದಲ್ಲಿ ನಿತ್ಯವಾಗಿಪ್ಪ ಶಿವಪದವು ಅಂತು ಅನಿತ್ಯವಾಗಿರ್ದ ಚತುರ್ವಿಧ ಪದವನೊಲ್ಲದೆ ತನ್ನ ನಿತ್ಯದ ಶಿವಪದವ ಅಂತರಂಗದಲಱಿದು ಸುಖಿಸುತ್ತಿಪ್ಪ ಇರವು ಸುಜ್ಞಾನಿಯಾದ ಶರಣಂಗಲ್ಲದೆ ಮತ್ತಾರಿಗೂ ಇಲ್ಲವೆಂಬುದೀಗ ‘ ಅತಿಶಯವನತಿಗಳೆದು ನಿರತಿಶಯ ಸುಖದೊಳಗೆ ಪರಮಸುಖಿಯಾಗಿಪ್ಪವರಾರು ಹೇಳಾ ’ ಎಂಬ ಶಬ್ದಕ್ಕರ್ಥ. ಅಂತು ಲಿಂಗವ ಭಿನ್ನವಿಟ್ಟು ಭಾವಿಸಿ ಪೂಜಿಸಿ ಫಲಪದಂಗಳ ಪಡೆಯಲೊಲ್ಲದೆ, ಶಿವ ತಾನೆಂದು ತನ್ನ ನಿಜವನಱಿದು ಶಿವನಾಗಿಪ್ಪ ಶಿವಭಾವ ಶರಣಂಗಲ್ಲದೆ ಮತ್ತಾರಿಗೂ ಇಲ್ಲವೆಂಬುದೀಗ ‘ ನಿಜದ ನಿರ್ಣಯವನಱಿದು, ಭಜನೆ ಭಾವನೆಯಳಿದು, ತ್ರಿಜಗಪತಿಯಾಗಿಪ್ಪವರಾರು ಹೇಳಾ ’ ಎಂಬ ಶಬ್ದಕ್ಕರ್ಥ. ಕೋಡಗದ ಗಮನವೆಂದರೆ ಮರ್ಕಟಜ್ಞಾನವಪ್ಪ ಷಟ್‌ಸ್ಥಲಜ್ಞಾನ. ಅಂತಪ್ಪ ಷಟ್‌ಸ್ಥಲಜ್ಞಾನಕ್ರೀಯಿಂದ ತನು ಮನ ಕರಣಂಗಳೆಲ್ಲವ ಲಿಂಗಕ್ಕರ್ಪಿಸಿ, ಅಂಗಕರಣಂಗಳೆಲ್ಲಾ ಲಿಂಗವೆಯಾಗಿ, ಶಿವಜ್ಞಾನ ಕ್ರೀಯ ಮಱೆಯದೆ ಆಚರಿಸುತ್ತಿಪ್ಪುದು ಶರಣಂಗಲ್ಲದೆ ಮತ್ತಾರಿಗೂ ಇಲ್ಲವೆಂಬುದೀಗ ‘ ಕೋಡಗದ ಗಮನದೊಳಗೆ ಮನವಿರಹಿತನಾಗಿ ಗಮನಗೆಡದಿಪ್ಪರಿನ್ನಾರು ಹೇಳಾ ’ ಎಂಬ ಶಬ್ದಕ್ಕರ್ಥ. ಶರಣಂಗೆ ಹಗೆಯಾಗಿಪ್ಪವು ಅಜ್ಞಾನ ಮಾಯಾ ದೇಹಕರಣಂಗಳು. ಆ ಅಜ್ಞಾನ ಮಾಯಾ ದೇಹ ಕರಣಂಗಳಿಗೆ ಹಗೆಯಾಗಿಪ್ಪನು

೧ ಕಾಣಲಿಗೆ ( ಎ. ಹು. )

ಚಿತ್ಪ್ರಭಾಲಿಂಗವು. ಅಂತಪ್ಪ ಚಿತ್ಪ್ರಭಾಲಿಂಗದ ಒಳಹೊಕ್ಕು ಶರಣನು ಅಜ್ಞಾನ ಮಾಯಾ ದೇಹಕರಣಂಗಳೆಲ್ಲವನಳಿದು ನಿತ್ಯಸುಖಿಯಾಗಿಪ್ಪನೆಂಬುದೀಗ ' ಹಗೆಯಲ್ಲಿ ಹೊಕ್ಕು ಹಗೆಯುಳಿದು ಸುಖಿಯಾಗಿ ' ಎಂಬ ಶಬ್ದಕ್ಕರ್ಥ. ಅಂತು ಅಂಗಭಾವವಳಿದು ತಾನೆಲ್ಲಾ ಲಿಂಗವೆಯಾಗಿ ಲಿಂಗವನರ್ಚಿಸುತ್ತಿಪ್ಪುದು ಶರಣಂಗಲ್ಲದಿಲ್ಲವೆಂಬುದೀಗ 'ತನಗೆ ತಾ ಕೆಳೆಯಪ್ಪರಾರು ಹೇಳಾ' ಎಂಬ ಶಬ್ದಕ್ಕರ್ಥ. ಅಂತು ಜ್ಞಾನ ಕ್ರೀಯಿಂದ ಒಳಹೊಱಗು ಸರ್ವಾಂಗಲಿಂಗವಾಗಿ ಲಿಂಗದ ಘನ ಸುಖವ ಸುಖಿಸುವನು ಶರಣನಲ್ಲದೆ ಮತ್ತಾರಿಗೂ ಇಲ್ಲವೆಂದಱಿದು ಶರಣನ ಪಾದಕ್ಕೆ ಶರಣುವೊಕ್ಕರೆಲ್ಲರೂ ಮುಕ್ತರಪ್ಪರೆಂಬುದೀಗ ' ಒಳಹೊಱಗು ಸರ್ವಾಂಗ ಲಿಂಗವಾಗಿ ಇರಬಲ್ಲ ಪರಮಾರ್ಥರಾರು ಹೇಳಾ ಕಲಿದೇವರದೇವ ನಿಮ್ಮ ಶರಣ ಚೆನ್ನಬಸವಣ್ಣನ ನಿಲವನಱಿದು ಶರಣೆಂದು ಸುಖಿಯಾದೆ ' ನೆಂಬ ಶಬ್ದಕ್ಕರ್ಥ. ೬೫

ವ. ಭಜಿಸಲಿಲ್ಲದ ಗತಿ ಮತಿ ಫಲದಾಯಕ ವಿರಹಿತನಾಗಿ, ಉಂಟೆಂಬ ಕುಳವಿಲ್ಲ, ಇಲ್ಲೆಂಬ ನಿಸ್ಸಂಸಾರಿಯಲ್ಲ, ಕೂಡಲಚೆನ್ನಸಂಗಾ, ನಿಮ್ಮ ಶರಣ ಲಿಂಗೈಕ್ಯನಾಗಿ.

೬೬. ಲಿಂಗವ ಭಿನ್ನವಿಟ್ಟು ಭಜಿಸಿ ಫಲಪದವ ಪಡೆಯಲಿಲ್ಲದ ಅಭಿನ್ನ ಜ್ಞಾನ ಕ್ರೀಯನಾಚರಿಸುತ್ತಿಹ ಶರಣನೆಂಬುದೀಗ ' ಭಜಿಸಲಿಲ್ಲದ ಗತಿ ಮತಿ ಫಲ ದಾಯಕ ವಿರಹಿತನಾಗಿ ' ಯೆಂಬ ಶಬ್ದಕ್ಕರ್ಥ. ಅಂತು ಲಿಂಗವು [1]ತನಗೊಂದುಂಟೆಂದು[1] ಭಿನ್ನವಿಟ್ಟು ಮಾಡುವ ಭಕ್ತಿಕುಳವೂ ಇಲ್ಲ, ಲಿಂಗವಿಲ್ಲದೆ ಅಜ್ಞಾನಿಯಾಗಿಪ್ಪ ಭವಿಯೂ ಅಲ್ಲ. ಲಿಂಗಾಂಗ ಸಮರಸೈಕ್ಯವಾಗಿ ಭಿನ್ನವಳಿದು ಲಿಂಗವೆಯಾಗಿಪ್ಪನು ಶರಣನೆಂಬುದೀಗ ' ಉಂಟೆಂಬ ಕುಳವಿಲ್ಲ, ಇಲ್ಲೆಂಬ ನಿಸ್ಸಂಸಾರಿಯಲ್ಲ ನಿಮ್ಮ ಶರಣ ಲಿಂಗೈಕ್ಯನಾಗಿ ' ಎಂಬ ಶಬ್ದಕ್ಕರ್ಥ. ೬೬

ವ. ಬಸುಱೆ ಬಾಯಾಗಿ, ಬಾಯೆ ಬಸುಱಾಗಿಪ್ಪುದ ತೊಡೆದ. ಕಣ್ಣೆ ತಲೆಯಾಗಿ, ತಲೆಯೇ ಕಣ್ಣಾಗಿ ಇರಿಸಿದ. ಕಾಲೆ ಕೈಯಾಗಿ, ಕೈಯೆ ಕಾಲಾಗಿ ನಡೆಸಿದ. ನೆಳಲ ಸುಟ್ಟು ಸೀರೆಯನುಡುಗೊಱೆಯನೆನಗೆ ಕೊಟ್ಟನು. ಮಥನವಿಲ್ಲದ ಸಂಗಸುಖವನೆನಗೆ ತೋಱಿದನು. ಕೂಡಲಸಂಗಮದೇವ, ಪ್ರಭುವಿನ ಶ್ರೀಪಾದಕ್ಕೆ ಶರಣೆನುತಿರ್ದೆನು.

೧ ತನಗೆಂದುಂಟೆಂದು (ಎ.)

ಟೀ. ಹೊಟ್ಟೆಗೆ ಬಾಯಿಗೆ ಭೇದವಿಲ್ಲದೆ ಅನ್ನವನುಂಡುಂಡು ಒಡಲನೆ ಹೊರೆವುತ್ತಿಹ ಜೀವಭಾವವನಳಿದು ಲಿಂಗಪ್ರಾಣಿಯೆನಿಸಿ ಪ್ರಸಾದಕಾಯವ ಮಾಡಿದ ಶ್ರೀಗುರುವೆಂಬುದೀಗ 'ಬಸುಱೆ ಬಾಯಾಗಿ, ಬಾಯೆ ಬಸುಱಾಗಿಪ್ಪುದ ತೊಡೆದ' ನೆಂಬ ಶಬ್ದಕ್ಕರ್ಥ. ಕಣ್ಣೆಂದರೆ ಜ್ಞಾನದೃಕ್ಕು, ತಲೆಯೆಂದರೆ ಜ್ಞೇಯ ಸ್ವರೂಪಮಪ್ಪ ಲಿಂಗವು. ಅಂತು ಶರಣನ ಜ್ಞಾನದೃಕ್ಕೆಲ್ಲಾ ಮಹಾಘನಲಿಂಗವೆಯಾಗಿ, ಆ ಮಹಾಘನಲಿಂಗವೆಲ್ಲಾ ಜ್ಞಾನದೃಕ್ಕೆಯಾಗಿಪ್ಪ ಅವಿರಳಲಿಂಗಾಂಗ ಸಂಬಂಧವ ಮಾಡಿದ ಶ್ರೀಗುರುವೆಂಬುದೀಗ 'ಕಣ್ಣೆ ತಲೆಯಾಗಿ, ತಲೆಯೆ ಕಣ್ಣಾಗಿ ಇರಿಸಿದ' ನೆಂಬ ಶಬ್ದಕ್ಕರ್ಥ. ಕಾಲೆಂದರೆ ಕ್ರಿಯಾಚಾರ, ಕೈಯೆಂದರೆ ಸದ್ಭಾವ ಹಸ್ತ. ಅಂತಪ್ಪ ಕ್ರಿಯೆಯೆಲ್ಲಾ ಸದ್ಭಾವವೆಯಾಗಿ, ಸದ್ಭಾವವೆಲ್ಲಾ ಕ್ರಿಯೆಯಾಗಿ ಭಿನ್ನವಿಲ್ಲದೆ ಆಚರಿಸುವಂತೆ ಮಾಡಿದ ಶ್ರೀಗುರುವೆಂಬುದೀಗ 'ಕಾಲೆ ಕೈಯಾಗಿ, ಕೈಯೆ ಕಾಲಾಗಿ ನಡೆಸಿದ' ನೆಂಬ ಶಬ್ದಕ್ಕರ್ಥ. ನೆಳಲೆಂದರೆ ಮನಸ್ಸು. ಅಂತಪ್ಪ ಮನದ ಅಜ್ಞಾನಗುಣವ ದಹಿಸಿದುದೇ ಜ್ಞಾನಾಗ್ನಿ. ಅಂತಪ್ಪ ಜ್ಞಾನ ಪ್ರಕಾಶವನೆ ಶರಣನ ಸರ್ವಾಂಗಕ್ಕೆ ಅಂಬರವ ಮಾಡಿ ಉಡಿಸಿದ ಶ್ರೀಗುರುವೆಂಬುದೀಗ 'ನೆಳಲ ಸುಟ್ಟು ಸೀರೆಯನುಡುಗೊಱೆಯನೆನಗೆ ಕೊಟ್ಟ' ನೆಂಬ ಶಬ್ದಕ್ಕರ್ಥ. ಅಂತು ಭಿನ್ನಸಂಗದಿಂದ ಮಥನವಿಲ್ಲದೆ ತಾನೆ ಅಭಿನ್ನನಾಗಿಪ್ಪ ಮಹಾಘನಲಿಂಗದ ಸಂಗಸುಖವನಱುಹಿ ತೋಱಿದನು ಶ್ರೀಗುರುವೆಂದು ಗುರುವಿನ ಪಾದಕ್ಕೆ ನಮಸ್ಕಾರವ ಮಾಡುತ್ತಿರ್ದ ಶರಣನೆಂಬುದೀಗ 'ಮಥನವಿಲ್ಲದ ಸಂಗ ಸುಖವನೆನಗೆ ತೋಱಿದ ಪ್ರಭುವಿನ ಪಾದಕ್ಕೆ ಶರಣೆನುತಿರ್ದೆನು' ಎಂಬ ಶಬ್ದಕ್ಕರ್ಥ. ೬೭

ವ. ಎಲ್ಲವ ಕಳೆದು ಶರಣನೆಂಬುದುಮಾಡಿದ ಅಂತರಂಗ ಬಹಿರಂಗದಲ್ಲಿ. ಬಳಿಕ ತನ್ನ ಹಱೆ, ತನ್ನ ಕೊಳಲು, ಕೂಡಲಚೆನ್ನಸಂಗ ಲಿಂಗಸಂಗಿಯಾಗಿ.

ಟೀ. ಲಿಂಗಾಂಗಸಂಗಿಯಾಗಿ, ಅಂಗಕರಣಂಗಳನೆಲ್ಲವ ಲಿಂಗಕ್ಕರ್ಪಿಸಿ, ಅಂಗ ಕರಣಂಗಳು ಸರ್ವಾಂಗವೆಲ್ಲಾ ಲಿಂಗವೆಯಾಗಿ ಶರಣ ತಾನೆ ಸ್ವತಂತ್ರ ಲಿಂಗವಾಗಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೬೮

ವ. ಭೂತವೈದಱಿಂದ ಸ್ಥೂಲತನು. ಮನ ಬುದ್ಧಿ ಚಿತ್ತ ಅಹಂಕಾರದಿಂದ ಸೂಕ್ಷ್ಮತನು. ಭಾವಜ್ಞಾನದಿಂದ ಕಾರಣತನು. ಈ ತ್ರಿವಿಧವು ಚೈತನ್ಯವಿಡಿದ ಕಾರಣ ಭೂತಾಂತಃಕರಣ ಭಾವಜ್ಞಾನಕ್ಕೆ ಸ್ವತಂತ್ರತೆ

ಯಿಲ್ಲ, ಆ ಚೈತನ್ಯಕ್ಕೆ ಶರೀರಭಾವವಿಲ್ಲದಿರ್ದಡೆ ತೋಱಿಕೆಯಿಲ್ಲವಾಗಿ. ಆ ಚೈತನ್ಯವೇ ತನ್ನ ಲೀಲೆಯಿಂದ ಶರಣನೆನಿಸಿತ್ತು. ಆ ಶರಣನ ಪಂಚಭೌತಿಕ ತನುವ ಇಷ್ಟಲಿಂಗವಿಂಬುಗೊಂಡಿಹ ಕಾರಣ ಕಾಯ ಪಂಚಬ್ರಹ್ಮಮಯವಾಯಿತ್ತು. ಅಂತಃಕರಣ ಅಂತಃಪ್ರೇರಕ ಪ್ರಾಣಚೈತನ್ಯಲಿಂಗವೊಳಕೊಂಡ ಕಾರಣ ಶರಣನ ಕರಣಂಗಳೇ ಲಿಂಗಕರಣಂಗಳಾದುವು. ಭಾವ ಜ್ಞಾನವನೆಡೆಗೊಂಡು ತೃಪ್ತಿಸ್ವರೂಪದಿಂದ ಆನಂದಮಯವಾಗಿಪ್ಪ ಕಾರಣ ಸಚ್ಚಿನ್ಮಯನಾದ. ಇದು ಕಾರಣ ಗೊಹೇಶ್ವರಾ, ನಿಮ್ಮ ಶರಣರ ದೃಷ್ಟಲಿಂಗವೆಂಬೆ.

ಟೀ. ಈ ವಚನ ಕಾಣಬಂದರ್ಥ. ೬೯

ವ. ಲಿಂಗ ಮುಂತಾಗಿಯೇ ನಡೆವನಾ ಶರಣ. ಲಿಂಗ ಮುಂತಾಗಿಯೇ ನುಡಿವನಾ ಶರಣ. ಲಿಂಗ ಮುಂತಾಗಿಯೇ ತೃಪ್ತನಾ ಶರಣ. ಲಿಂಗ ಕಾಯ ಶರಣ, ಶರಣಕಾಯ ಲಿಂಗ. ಇದು ಕಾರಣ ಕೂಡಲಚೆನ್ನ ಸಂಗಯ್ಯಾ, ನಿಮ್ಮ ಶರಣ ಸರ್ವಾಂಗಲಿಂಗಿ.

ಟೀ. ಈ ವಚನ ಕಾಣಬಂದರ್ಥ. ೭೦

ವ. ಆದಿಯಾಧಾರವಾಗಿಹುದೇ ಘನ. ಆ ಘನವ ವೇಧಿಸುವುದೇ ಮನ. ಆ ಮನವು ಮಹವನಿಂಬುಗೊಂಡುದೇ ಭಕ್ತಿ. ಭಿನ್ನಭಾವದಿಚ್ಛೆದೋಱದಿಹುದೇ ಆಚಾರ. ತಟ್ಟು ಮುಟ್ಟು ತಾಗು ನಿರೋಧವಿಲ್ಲದಿಹುದೇ ಪೂಜೆ. ಆಸೆ ರೋಷ ಹರುಷವಿಲ್ಲದಿಹುದೇ ಪ್ರಸಾದ. ಕರಣಮಥನದಿಚ್ಛೆದೋಱದಿಹುದೇ ಅನುಭಾವ. ಇಂತಿವು ಸರ್ವಾಂಗದಲ್ಲಿ ಅಳವಟ್ಟುವಾಗಿ ನಿರಂತರಸುಖಿ ಕೂಡಲಚೆನ್ನಸಂಗಾ, ನಿಮ್ಮ ಶರಣ.

ಟೀ. ಈ ವಚನ ಕಾಣಬಂದರ್ಥ. ೭೧

ವ. ಲಿಂಗರೂಪಿನ ಸಹಜದುದಯದ ತುಟ್ಟತುದಿಯ ತುರೀಯಾವಸ್ಥೆಯ ಆಡಿ ರೂಹಿಸುವ, ಹಾಡಿ ರೂಹಿಸುವ. ಅಱಿವಿನ ಉಪಚಾರ ಉಳ್ಳನ್ನಬರ ಬಯಲು ಬಲಿದು ತಾನಾಗಿಪ್ಪ ಮಹಾಲಿಂಗ ಕಲ್ಲೇಶ್ವರನೊಲಿದ ಶರಣನು.

ಟೀ. ಶಿವಜ್ಞಾನೋದಯವಾದ ಶರಣನು ತನ್ನ ನೋಡಲು ತಾನೆಲ್ಲಾ ಮಹಾಘನಲಿಂಗಸ್ವರೂಪೆಯಾಗಿಪ್ಪುದ ಪ್ರತ್ಯಕ್ಷವಾಗಿ ಕಂಡು, ಶಿವೋಹಂ ಶಿವೋಹಂ ಎನುತ್ತಿರ್ದನೆಂಬುದೀಗ 'ಲಿಂಗಸ್ವರೂಪಿನ ಸಹಜದುದಯದ ತುಟ್ಟತುದಿಯ ತುರೀಯಾವಸ್ಥೆ' ಯೆಂಬ ಶಬ್ದಕ್ಕರ್ಥ. ಅಂತು ಅಂತರಂಗದಲ್ಲಿ ಶಿವಜ್ಞಾನೋದಯವಾದ ಶರಣ ತನ್ನ ನೋಡಲು ತಾನೆಲ್ಲಾ ಲಿಂಗಸ್ವರೂಪನೆಯಾಗಿರ್ದ. ತನ್ನ ಲಿಂಗಸ್ವರೂಪನೇ ಬಹಿರಂಗಕ್ಕೆ ತಂದು, ಕ್ರೀಯನಜುಹಿಸಿ, ಆಡುತ್ತ ಹಾಡುತ್ತಿರ್ದ ಶರಣನೆಂಬುದೀಗ 'ಆಡಿ ರೂಹಿಸುವ, ಹಾಡಿ ರೂಹಿಸುವ' ನೆಂಬ ಶಬ್ದಕ್ಕರ್ಥ. ಅಂತು ತಾನು ಮಹಾಘನಲಿಂಗವೆಂದು ತನ್ನನಱಿದಱಿವಿಂದವೆ ತನ್ನ ತಾನರ್ಚಿಸಿಕೊಳುತ್ತ, ತನ್ನ ತಾ ಕೀರ್ತಿಸಿಕೊಳುತ್ತ, ಆ ಅಱಿವಿನ ಕ್ರೀಯಲ್ಲಿ ವಿಶ್ರಮಿಸಿಕೊಂಡಿಹನ್ನಬರ ನಿರವಯ ಪರಬ್ರಹ್ಮವು ತಾನೆ ಶರಣನೆಂಬ ಸಾಕಾರವಾಗಿಪ್ಪನೆಂಬುದೀಗ 'ಅಱಿವಿನ ಉಪಚಾರ ಉಳ್ಳನ್ನಬರ ಬಯಲು ಬಲಿದು ತಾನಾಗಿಪ್ಪ' ನೆಂಬ ಶಬ್ದಕ್ಕರ್ಥ. ಅಂತು ತನ್ನನರ್ಚಿಸಿಕೊಂಬ ಲೀಲಾವಿಲಾಸದಿಂದ ಶಿವ ತಾನೆ ಶರಣರೂಪಾಗಿರಬೇಕೆಂದೊಲಿದು ಶರಣರೂಪ ಶಿವನಾದನೆಂಬುದೀಗ 'ಮಹಾಲಿಂಗ ಕಲ್ಲೇಶ್ವರ ನೊಲಿದ ಶರಣ' ನೆಂಬ ಶಬ್ದಕ್ಕರ್ಥ. ೭೨

ವ. ಸ್ಫಟಿಕದ ಘಟದೊಳಗೀಗ ಕುಟಿಲ ಸಂಗನ ಬೀಡು. ದಿಟಪುಟವ
ನತಿಗಳೆಯಲುಂಟೆ ಹೇಳಾ ? ವಟವೃಕ್ಷ ವಟಕೋಟಿಫಲವ ನುಂಗಿದ
ತೆಜನು ಶರಣದೇಹಿಕದೇವ ಯೋಗಿನಾಥಾ.

ಟೀ. ಸ್ಫಟಿಕದ ಘಟದಂತೆ ಸಮ್ಯಗ್ಜ್ಞಾನೋದಯವಾದ ಶರಣನ ಅಂಗವೆಲ್ಲವು ನಿರ್ಮಲಜ್ಞಾನಪ್ರಕಾಶಾಂಗವೆಯಾಗಿ ಬೆಳಗುತ್ತಿಪ್ಪುದು. ಅಂತು ಬೆಳಗುತ್ತಿಪ್ಪ ಜ್ಞಾನಕಾಯವಾದ ಶರಣನು ಮಾಯಾಕುಟಿಲಸ್ವರೂಪನಾದ ಮನೋಗುಣಂಗಳ ನೇತಿ ಮಾಡಿದನೆಂಬುದೀಗ 'ಸ್ಫಟಿಕದ ಘಟದೊಳಗೀಗ ಕುಟಿಲ ಸಂಗನ ಬೀಡು' ಎಂಬ ಶಬ್ದಕ್ಕರ್ಥ. ಅಂತು ಅನಾತ್ಮಕವಾದ ಮನ ಕರಣಂಗಳ ನೇತಿ ಮಾಡಿ ತನ್ನಾತ್ಮಚಿತ್ಕಳಾಸ್ವರೂಪ ಚೈತನ್ಯವೇ ನಿಜಲಿಂಗವೆಂದಱಿದು ಗ್ರಹಿಸಿ ಬಿಡದೆಯಿರ್ದ ಶರಣನೆಂಬುದೀಗ 'ದಿಟಪುಟವನತಿಗಳೆಯಲುಂಟೆ ಹೇಳಾ' ಎಂಬ ಶಬ್ದಕ್ಕರ್ಥ. ಅಂತು ಸರ್ವಾಂಗವೆಲ್ಲಾ ಜ್ಞಾನಪ್ರಕಾಶಮಯವಾಗಿ, ತನ್ನ ಆತ್ಮಸ್ವರೂಪವೇ ಲಿಂಗವೆಂದಱಿದು ಮಱೆಯದಿಪ್ಪ ಶರಣನ ಕಾಯವೇ ಬ್ರಹ್ಮವೃಕ್ಷವಪ್ಪ ಶರಣನ ಕಾಯದ ಸರ್ವೇಂದ್ರಿಯಂಗಳಲ್ಲಿ ಪ್ರಭಾವಿಸಿ ತೋಱುವ ಆಚಾರಾದಿ ಮಹಾಲಿಂಗಂಗಳೇ ಮುಕ್ತಿಫಲಸ್ವರೂಪುಗಳಾಗಿಪ್ಪವು. ಅದು ಹೇಂಗೆಂದೊಡೆ : ವಟವೃಕ್ಷ ಹಲವು ಫಲಂಗಳ ಗ್ರಹಿಸಿ ತೋಱುತ್ತಿಹುದು ಹೇಂಗೆ ಹಾಂಗೆಂಬುದೀಗ

‘ ವಟವೃಕ್ಷ ವಟಕೋಟಿಫಲವ ನುಂಗಿದ ತೆಜಸು ’ ಎಂಬ ಶಬ್ದಕ್ಕರ್ಥ. ಅಂತು ಶರಣನ ದೇಹವೆಲ್ಲಾ ಲಿಂಗದೇಹವೆಂಬುದೀಗ ‘ ಶರಣದೇಹಿಕದೇವ ಯೋಗಿ ನಾಥಾ ’ ಎಂಬ ಶಬ್ದಕ್ಕರ್ಥ. ೭೩

ವ. ಐವರ ಸಂಗದಿಂದ ಬಂದೆ ನೋಡಯ್ಯಾ ! ಐವರ ಸಂಗದಿಂದ ನಿಂದೆ ನೋಡಯ್ಯಾ ! ಐವರೂ ತಮ್ಮ ತಮ್ಮ ಬಟ್ಟೆಯಲ್ಲಿ ಹೋದರು. ನಾನೊಬ್ಬ ನಿಸ್ಸಂಗಿಯಾಗಿ ಉಳಿದೆನಯ್ಯಾ ! ಗೊಹೇಶ್ವರನೆಂಬ ನಿತ್ಯ ನಿರಂಜನ ಸ್ವರೂಪಲ್ಲದ ಘನವ ಕಂಡೆನಯ್ಯಾ !

ಟೀ. ಶಿವಾಂಶಿಕನಾದಾತ್ಮಂಗೆ ಶಿವನ ಪಂಚಮುಖದಿಂದಲೊಗೆದ ಪಂಚ ಭೌತಿಕದೇಹ ಘಟಿಸಿತ್ತಾಗಿ ಪಂಚಭೌತಿಕದೇಹಿಯಾದ ಆತ್ಮನೆಂಬುದೀಗ ‘ ಐವರ ಸಂಗದಿಂದ ಬಂದೆ ನೋಡಯ್ಯಾ ! ಐವರ ಸಂಗದಿಂದ ನಿಂದೆ ನೋಡಯ್ಯಾ ’ ಎಂಬ ಶಬ್ದಕ್ಕರ್ಥ. ಅಂತು ಶಿವನ ಪಂಚಮುಖದಿಂದೊಗೆದ ಪಂಚತತ್ತ್ವಂಗಳ ಆ ಶಿವನ ಪಂಚಮುಖಕ್ಕೆ ಅರ್ಪಿಸಿದ ಶರಣಂಗೆ ಆ ಪಂಚಭೌತಿಕದೇಹವಿಲ್ಲದೆ ಹೋಯಿತ್ತೆಂಬುದೀಗ ‘ ಐವರು ತಮ್ಮ ತಮ್ಮ ಬಟ್ಟೆಯಲ್ಲಿ ಹೋದರು ’ ಎಂಬ ಶಬ್ದಕ್ಕರ್ಥ. ಅಂತು ದೇಹಸಂಗವನಳಿದು, ತನ್ನ ನಿಜವೆ ಉಳಿದು, ತಾನೆಲ್ಲಾ ನಿತ್ಯ ನಿರಂಜನ ನಿರವಯ ಪರಬ್ರಹ್ಮವೆಯಾಗಿಪ್ಪುದ ಪ್ರತ್ಯಕ್ಷವಾಗಿ ಕಂಡು ಶರಣ ಪರಬ್ರಹ್ಮವೆಯಾಗಿರ್ದನೆಂಬುದೀಗ ‘ ನಾನೊಬ್ಬ ನಿಸ್ಸಂಗಿಯಾಗಿ ಉಳಿದೆನಯ್ಯಾ ! ಗೊಹೇಶ್ವರನೆಂಬ ನಿತ್ಯನಿರಂಜನಸ್ವರೂಪಲ್ಲದ ಘನವ ಕಂಡೆನಯ್ಯಾ ’ ಎಂಬ ಶಬ್ದಕ್ಕರ್ಥ. ೭೪

ವ. ಸಮಸ್ತ ಕತ್ತಲೆಯ ಮುಸುಕವ ಕಳೆದಿಪ್ಪ ಇರವ ನೋಡಾ, ಬೆಳಗಿಂಗೆ ಬೆಳಗು ಸಿಂಹಾಸನವಾಗಿ ! ಬೆಳಗು ಬೆಳಗನೆ ಕೂಡಿದ ಕೂಟವ ಕೂಡಲಸಂಗಯ್ಯ ತಾನೆ ಬಲ್ಲ !

ಟೀ. ಸಮ್ಯಗ್ಜ್ಞಾನೋದಯವಾದ ಶರಣನ ಅಂಗದೊಳಗೆ ಅಜ್ಞಾನ ಭ್ರಾಂತಿಗುಣಂಗಳೇನೂ ಇಲ್ಲದೆ ಶರಣನೆಲ್ಲಾ ಜ್ಞಾನಪ್ರಕಾಶಾಂಗಮಯವಾಗಿರ್ದನು. ಅಂತಿರ್ದ ಶರಣನ ಜ್ಞಾನಪ್ರಕಾಶಾಂಗವನೆ ಪೀಠವ ಮಾಡಿಕೊಂಡು ಮಹಾಪ್ರಕಾಶ ಲಿಂಗವು ಭಿನ್ನವಿಲ್ಲದೆ ಮೂರ್ತಿಗೊಂಡು, ಲಿಂಗಾಂಗಸಂಗದ ಕ್ರೀಯನಾಚರಿಸುತ್ತಿಪ್ಪುದ ಶರಣ ಕಂಡು ಚೋದ್ಯಂಬಡುತ್ತಿರ್ದನೆಂಬುದೀಗ ‘ ಸಮಸ್ತ ಕತ್ತಲೆಯ ಮುಸಕವ ಕಳೆದಿಪ್ಪ ಇರವ ನೋಡಾ, ಬೆಳಗಿಂಗೆ ಬೆಳಗು ಸಿಂಹಾಸನವಾಗಿ ’ ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗಾಂಗ ಸಂಯೋಗವಾಗಿ ಭೇದವಳಿದು ಶರಣನೆಂಬಂಗವೆಲ್ಲಾ ಲಿಂಗವೆಯಾದಲ್ಲಿ, ಆ ಲಿಂಗದ ಇರವ ಆ ಲಿಂಗವೆ ಬಲ್ಲನಲ್ಲದೆ ಉಪಮಿಸಿ

ಹೇಳಬಾರದೆಂಬುದೀಗ ‘ ಬೆಳಗು ಬೆಳಗನೆ ಕೂಡಿದ ಕೂಟವ ಕೂಡಲಸಂಗಯ್ಯ ತಾನೆ ಬಲ್ಲ ’ ನೆಂಬ ಶಬ್ದಕ್ಕರ್ಥ. ೭೫

ವ. ತನು ನಿಮ್ಮ ರೂಪಾದ ಬಳಿಕ ಆರಿಂಗೆ ಮಾಡುವೆ ? ಮನ ನಿಮ್ಮ ರೂಪಾದ ಬಳಿಕ ಆರ ನೆನೆವೆ ? ಪ್ರಾಣ ನಿಮ್ಮ ರೂಪಾದ ಬಳಿಕ ಆರ ನಾರಾಧಿಸುವೆ ? ಅಱಿವು ನಿಮ್ಮಲ್ಲಿ ಸ್ವಯವಾದ ಬಳಿಕ ಆರನಱಿವೆ ? ಚೆನ್ನಮಲ್ಲಿಕಾರ್ಜುನಾ, ನಿಮ್ಮಿಂದ ನೀವಾದಿರಾಗಿ ನಿಮ್ಮ ಮಱೆದೆ !

ಟೀ. ಲಿಂಗಾಂಗಸಂಬಂಧಿಯಾದ ಶರಣನ ತನು ಮನ ಪ್ರಾಣ ಜ್ಞಾನಂಗಳೆಲ್ಲವು ಲಿಂಗವೆಯಾದವಾಗಿ ಶರಣ ಲಿಂಗವ ಭಿನ್ನವಿಟ್ಟು ಅಱಿಯಲಿಲ್ಲದೆ ಮಱೆದು ಲಿಂಗವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೭೬

ವ. ತೆಱಹಿಲ್ಲದ ನಡೆ, ತೆಱಹಿಲ್ಲದ ನುಡಿ, ತೆಱಹಿಲ್ಲದ ಸಂಭಾಷಣೆಯ ಸುಖವು ! ತೆಱಹಿಲ್ಲದೆ ಕಂಡು ನಂಬಿದ ಸ್ವಾನುಭಾವ ಸುಖವು. ತೆಱಹಿಲ್ಲದ ಮಹಿಮೆ. ತೆಱಹಿಲ್ಲದ ವಿಚಾರ ಕೂಡಲಸಂಗಮದೇವಾ, ನಿಮ್ಮ ಶರಣಂಗೆ.

ಟೀ. ಅಖಂಡ ಪರಿಪೂರ್ಣವಾಗಿಪ್ಪ ಮಹಾಘನಲಿಂಗವು ತನಗನನ್ಯವೆಂದು ಅಭಿನ್ನಜ್ಞಾನದಿಂದ ಕಂಡಱಿದು ನಂಬಿದ ಶರಣನು ಲಿಂಗವ ಭಿನ್ನವಿಡದೆ ಕ್ರೀಯನಾಚರಿಸುವ. ಲಿಂಗವ ಭಿನ್ನವಿಡದೆ ಲಿಂಗಾನುಭಾವದ ವರ್ತನೆಯ ನುಡಿದು ಸುಖಿಸುವ. ಲಿಂಗವ ಭಿನ್ನವಿಡದೆ ಲಿಂಗಾಂಗಸಂಯೋಗಿಯಾಗಿ ಲಿಂಗಸುಖವ ಸುಖಿಸುತ್ತಿಪ್ಪನು. ಅಂತು ಸ್ವಾನುಭಾವದಿಂದ ತನ್ನ ನಿಜವೇ ಮಹಾಘನಲಿಂಗವೆಂದು ಕಂಡು ನಂಬಿ ಲಿಂಗವೆಯಾಗಿ ನಿತ್ಯಸುಖಿಯಾಗಿಪ್ಪ ಮಹತ್ವವು ಅಭಿನ್ನಜ್ಞಾನವಳವಟ್ಟ ಶರಣಂಗಲ್ಲದೆ ಮತ್ತಾರಿಗೂ ಇಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೭೭

ವ. ಹರಿವ ನದಿಗೆ ಮೈಯೆಲ್ಲಾ ಕಾಲು. ಉರಿವ ಕಿಚ್ಚಿಗೆ ಮೈಯೆಲ್ಲಾ ಬಾಯಿ. ಬೀಸುವ ಗಾಳಿಗೆ ಮೈಯೆಲ್ಲಾ ಕೈ. ಇದುಕಾರಣ ಗೊಹೇಶ್ವರಾ, ನಿಮ್ಮ ಶರಣಂಗೆ ಸರ್ವಾಂಗವೆಲ್ಲಾ ಲಿಂಗಮಯವಯ್ಯಾ !

ಟೀ. ಈ ವಚನ ಕಾಣಬಂದರ್ಥ. ೭೮

ವ. ಉದ್ಭ್ರಮಿಯಲ್ಲ, ಉದ್ದೇಶಿಯಲ್ಲ. ನಿದ್ರೆಗೆಟ್ಟವನು ನಿಜವನೆ ಬೆಳಗು ತ್ತಿಹನು. ನಿಶ್ಚಿಂತ ಶರಣ ಚಿಂತೆಗೆಟ್ಟು ಸ್ಥಿರವಾಗಿ ನಿಂದ. ಸೀಮೆಯ ಕೆಡಿಸಿ ನಿಸ್ಸೀಮನಾದ. ಬೋಧೆಯ ಕೆಡಿಸಿ ನಿರ್ಬೋಧನಾದ. ಕಾಯವ ಕೆಡಿಸಿ ಕರ್ಮಾದಿಗುಣವಿರಹಿತನಾದ. ಆಸೆಯ ಕೆಡಿಸಿ ನಿರಾಶಕ ನಾದ. ಇದುಕಾರಣ ಕೂಡಲಚೆನ್ನಸಂಗಾ, ನಿಮ್ಮ ಶರಣಂಗೆ ಆರೂ ಸರಿಯಿಲ್ಲ.

ಟೀ. ನಿದ್ರೆಯೆಂದರೆ ತನ್ನ ನಿಜವ ಮಱೆದ ಮಱವೆ. ಅಂತಪ್ಪ ತನ್ನ ನಿಜವ ಮಱೆದ ಮಱವೆಯ ಭ್ರಾಂತಿಗುಣಂಗಳೆಲ್ಲಾ ಅಳಿದು ಸುಜ್ಞಾನಸ್ವರೂಪವಾಗಿ ತನ್ನ ನಿಜವ ತಿಳಿದ ಶರಣನು ತನ್ನ ನಿಜಸ್ವರೂಪವಪ್ಪ ಚಿತ್ಪ್ರಭಾಲಿಂಗವನು ಪ್ರಭಾ ವಿಸಿ, ಭಾವ ಮನ ಕರಕ್ಕೆ ತಂದು ಪ್ರತ್ಯಕ್ಷವ ಮಾಡಿಕೊಂಡು, ಒಳಹೊಱಗೆಂಬ ಚಿಂತೆಗೆಟ್ಟು ನಿಶ್ಚಿಂತನಾದ ಶರಣಂಗೆ ಸರ್ವಾಂಗಲಿಂಗಮಯ ಸ್ಥಿರವಾಯಿತ್ತು. ಅಂತು ಸರ್ವಾಂಗವೆಲ್ಲಾ ಲಿಂಗವೆಯಾದ ಶರಣಂಗೆ ನಾಮಸೀಮೆಗಳ, ಹೇಳುವ ಕೇಳುವ ಬೋಧಾಚಿಂತೆಗಳು, ಕಾಯ ಕರ್ಮ ಆಸೆ ರೋಷ ಹರುಷಂಗಳೆಂಬ ವೆಲ್ಲವೂ ಕೆಟ್ಟು ಮಹಾಘನಲಿಂಗವೆಯಾಗಿರ್ದನು ಶರಣನು. ಅಂತಪ್ಪ ಶರಣಂಗೆ ಇತರ ಮತಾದಿಗಳಾರೂ ಸರಿಯಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೭೯

ವ. ತನ್ನನಱೆದವಂಗೆ ಇದಿರೆಂಬುದಿಲ್ಲ. ತನ್ನನಱೆಯದವಂಗೆ ಇದಿರೆಂಬು ದುಂಟು. ಅಱೆವು ಮಱಹು ಕುಱುಹಳಿಯಿತ್ತು. ಬೆಱಗಾಯಿತ್ತು. ಬೆಱಗು ಬೆಱಗಿನೊಳಗೆ ಕಱೆಗೊಂಡಿತ್ತು ಇದೇನೋ! ಭ್ರಾಂತು ಭ್ರಾಂತನೆ ನುಂಗಿ ಗುಹೇಶ್ವರಾ, ಭವಿಯ ಬೆಂಬತ್ತಿ ಭವಿಯಾದ ಕಾರಣ.

ಟೀ. ಸಮ್ಯಗ್ಜ್ಞಾನೋದಯದಿಂದ ತಾನು ಮಹಾಘನಲಿಂಗವೆಂದು ತನ್ನ ನಿಜವನಱೆದ ಶರಣಂಗೆ ಲಿಂಗವು ಅನ್ಯವಿಲ್ಲವೆಂಬುದೀಗ 'ತನ್ನನಱೆದವಂಗೆ ಇದಿ ರೆಂಬುದಿಲ್ಲ' ವೆಂಬ ಶಬ್ದಕ್ಕರ್ಥ. ತನ್ನ ನಿಜವನಱೆಯದವಂಗೆ ಲಿಂಗವು ಅನ್ಯ ವಾಗಿಪ್ಪುದು ಎಂಬುದೀಗ 'ತನ್ನನಱೆಯದವಂಗೆ ಇದಿರೆಂಬುದುಂಟೆ' ಂಬ ಶಬ್ದ ಕ್ಕರ್ಥ. ಅಂತು ತನ್ನಿಂದ ಲಿಂಗವ ಅನ್ಯವಿಟ್ಟಱೆದು ಕೂಡಿಹೆನೆಂಬ ಭಿನ್ನಜ್ಞಾನ ದಱೆವು ಮಱವೆ ಕುಱುಹುಗಳನೆಲ್ಲವನಳಿದು, ತನ್ನನೆಲ್ಲಾ ಲಿಂಗವೆಯಾಗಿ ಕಂಡು ನೋಡುತ್ತಿರ್ಪ ಬೆಱಗಿನಲ್ಲಿರ್ದ ಶರಣನೆಂಬುದೀಗ 'ಅಱೆವು ಮಱಹು ಕುಱುಹಳಿ ಯಿತ್ತು. ಬೆಱಗು ಹತ್ತಿತ್ತು' ಎಂಬ ಶಬ್ದಕ್ಕರ್ಥ. ಅಂತು ಖಂಡಿತ ಮನವಳಿದು

ಅಖಂಡಜ್ಞಾನದಿಂದ ತನ್ನನೆಲ್ಲಾ ಲಿಂಗವೆಯಾಗಿ ಕಂಡು ಬೆಱಗು ಹತ್ತಿದ ಆ ಲಿಂಗದ ಬೆಱಗು ಹೇಂಗೆ ಘಟ್ಟಿಗೊಂಡು ನಿಂದು ಲಿಂಗವೆಯಾದ ಶರಣ. ಅಂತಾದುದು ಆಶ್ಚರ್ಯವೆಂಬುದೀಗ 'ಬೆಱಗು ಬೆಱಗಿನೊಳಗೆ ಕಱಗೊಂಡಿತ್ತು ಇದೇನೋ ?' ಎಂಬ ಶಬ್ದಕ್ಕರ್ಥ. ಅಂತು ಲಿಂಗಭ್ರಾಂತಿಯಿಂದ ಶರಣನು ಮಹದಾನಂದದ ಭ್ರಾಂತಿಯೊಳಿರ್ದ ಅಖಂಡ ಚಿಲ್ಲಿಂಗವನವಗ್ರಹಿಸಿ ಲಿಂಗವೆಯಾದ ಶರಣನೆಂಬುದೀಗ 'ಭ್ರಾಂತು ಭ್ರಾಂತನೆ ನುಂಗಿ' ಎಂಬ ಶಬ್ದಕ್ಕರ್ಥ. ಭವಿಯೆಂದರೆ ಲಿಂಗ. ಅಂತಪ್ಪ ಲಿಂಗವ ಅಭಿನ್ನಜ್ಞಾನಕ್ರೀಯಿಂದ ಬೆಂಬತ್ತಿ ಲಿಂಗವೆಯಾದ ಶರಣನೆಂಬುದೀಗ 'ಭವಿಯ ಬೆಂಬತ್ತಿ ಭವಿಯಾದ ಕಾರಣ' ವೆಂಬ ಶಬ್ದಕ್ಕರ್ಥ. ೮೦

**ವ.** ಭವಿಬೀಜದ ವೃಕ್ಷದ ಫಲದೊಳಗೆ ಭಕ್ತಿಬೀಜದ ವೃಕ್ಷ ಪಲ್ಲವಿಸಿತ್ತು. ಭಕ್ತಿಬೀಜದ ವೃಕ್ಷದ ಫಲದೊಳಗೆ ಶರಣಬೀಜ ವೃಕ್ಷ ಪಲ್ಲವಿಸಿತ್ತು. ಶರಣಬೀಜ ವೃಕ್ಷದ ಫಲದೊಳಗೆ ಕುಲನಾಶಕನಾದ ಶರಣ. ಒಂದೆ ಬಸುಱಲಿ ಬಂದು ಬಂದು ಬಳಗಕ್ಕೆ ತನ್ನ ಕುಲಕ್ಕೆ ತುಸೆ ಮಾರಿಯಾದ ಶರಣ. ಭವಿ ಭಕ್ತ ಭವಿ ಬೀಜವೃಕ್ಷದ ತಂಪು ನೆಳಲ ಬಿಟ್ಟು ಕುಳ್ಳಿರ್ದಲ್ಲಿ ಬಳಿ ಬಳಿಯ ಬಯಲಾದ ಶರಣ. ನಾದ ಬಿಂದು ಬೀಜನಪ್ಪ ಹೋಳಾಗಿ ಹಾಱಿ ಹೋದಲ್ಲಿ ಇನ್ನೇನ ಹೇಳಲುಂಟು ? ಗೊಹೇಶ್ವರಲಿಂಗವನಱಿದು ಭವಿಗೆ ಭವಿಯಾದಾತಂಗೆ ಇನ್ನೇನು ಪದವುಂಟಯ್ಯ ?

**ಟೀ.** ಭವಿಯೆಂದಡೆ ಪರಶಿವನು. ಅದು ಹೇಂಗೆಂದಡೆ : ಆ ಪರಶಿವನಿಂದ ಮೇಲೆ ಪರವಾದ ಶಿವಲಿಂಗವೊಂದಿಲ್ಲವಾಗಿ ಸಾಹಿತ್ಯಸಂಬಂಧವಿಲ್ಲ. ಅದುಕಾರಣ ಪರವಸ್ತುವೆಂಬುದೀಗ 'ಭವಿ' ಯೆಂಬ ಶಬ್ದಕ್ಕರ್ಥ. ಅಂತು ಒಂದೆಯಾಗಿರ್ದ ಪರವಸ್ತು ತಾನೆ ಸೇವ್ಯ ಸೇವಕನಾಗಿರಬೇಕೆಂದು ಲಿಂಗಾಂಗವೆರಡಾದಲ್ಲಿ ಆ ಪರವಸ್ತುವಿನ ಸಮವೇತವಾಗಿರ್ದ ಚಿಚ್ಛಕ್ತಿಯೂ ಎರಡಾಗಿ ಶಕ್ತಿಭಕ್ತಿಗಳೆನಿಸಿತ್ತು. ಅಂತು ಲಿಂಗದಲ್ಲಿ ಸಮವೇತವಾಗಿರ್ದ ಚಿತ್ತುವೇ ಶಕ್ತಿಯೆನಿಸಿತ್ತು. ಆತ್ಮಾಂಗದಲ್ಲಿ ಸಮವೇತವಾಗಿ ಜನಿಸಿದ ಚಿತ್ತುವೇ ಭಕ್ತಿಯೆನಿಸಿತ್ತಾಗಿ, ಅಂತು ಪರಶಿವನಿಂದ ಭಕ್ತಿ ಜನಿಸಿ ಪ್ರಭಾವಿಸಿತ್ತಾದ ಕಾರಣ, 'ಭವಿಬೀಜವೃಕ್ಷದ ಫಲದೊಳಗೆ ಭಕ್ತಿಬೀಜ ವೃಕ್ಷಪಲ್ಲವಿಸಿತ್ತು' ಎಂಬ ಶಬ್ದಕ್ಕರ್ಥ. ಅಂತು ಆತ್ಮನಲ್ಲಿ ಸಮೇತವಾಗಿರ್ದ ಭಕ್ತಿ ಪ್ರಕಾಶಿಸಲು ಆತ್ಮಂಗೆ ದೇಹಭಾವವಳಿದು, ಲಿಂಗಾಂಗಸಂಬಂಧಿಯಾಗಿ ಶರಣನೆನಿಸಿದನೆಂಬುದೀಗ 'ಭಕ್ತಿಬೀಜವೃಕ್ಷದ ಫಲದೊಳಗೆ ಶರಣಬೀಜವೃಕ್ಷ

ಪಲ್ಲವಿಸಿತ್ತು ' ಎಂಬ ಶಬ್ದಕ್ಕರ್ಥ. ಅಂತು ಆತ್ಮನಾ ಲಿಂಗಕ್ಕೆ ಸೇವಕನಾಗಿರಬೇಕೆಂಬ ಕಾರಣದಿಂದ ಆತ್ಮನು ದೇಹವಿಡಿದಾಕ್ಷಣವೇ ಆ ದೇಹೇಂದ್ರಿಯ ಕರಣಂಗಳು ಕೂಡೆ ಹುಟ್ಟಿಹುಟ್ಟಿ ಬರುತ್ತಿರ್ದವಾಗಿ, ಅಂತು ಬರುತ್ತಿರ್ದ ದೇಹೇಂದ್ರಿಯ ಕರಣಂಗಳೆಲ್ಲವನು ಲಿಂಗಮುಖಕ್ಕೆ ಅರ್ಪಿಸಿ ನಷ್ಟವ ಮಾಡಿದ ಶರಣನೆಂಬುದೀಗ ' ಶರಣಬೀಜವೃಕ್ಷದ ಫಲದೊಳಗೆ ಕುಲನಾಶಕನಾದ ಶರಣ. ಒಂದೆ ಬಸುಱಲಿ ಬಂದು ಬಳಗಕ್ಕೆ ತನ್ನ ಕುಲಕ್ಕೆ ತಾನೆ ಮಾರಿಯಾದ ಶರಣ ' ನೆಂಬ ಶಬ್ದಕ್ಕರ್ಥ. ಅಂತು ಭವಿಯೆಂದರೆ ಲಿಂಗ. ಭಕ್ತನೆಂದರೆ ಶರಣನೆಂಬ ಆತ್ಮಾಂಗ. ಅಂತಪ್ಪ ಲಿಂಗಾಂಗಸಂಬಂಧವಾಗಿ ಲಿಂಗಸುಖವನಱಿವುತ್ತಿಪ್ಪ ಜ್ಞಾನವೀಗ ತಂಪು ನೆಳಲಾದ ಕಾರಣ ' ಭವಿ ಭಕ್ತ ಭವಿ ಬೀಜವೃಕ್ಷದ ತಂಪು ನೆಳಲೆ ' ಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಗವಾಗಿಪ್ಪ ಲಿಂಗಸುಖವನಱಿವುತ್ತಿಪ್ಪ ಭಿನ್ನಜ್ಞಾನದ ತೋಱಿಕೆಯ ಸಂಚಲವ ಕಳೆದು, ಅಭಿನ್ನಜ್ಞಾನದಿಂದ ಅಚಲನಾಗಿ, ನಾನು ನೀನೆಂಬ ಅಂಗಭಾವಂಗಳೆಲ್ಲವೂ ಅಳಿದು, ಬಚ್ಚಬಱಿಯ ಲಿಂಗವೆಯಾಗಿರ್ದ ಶರಣನೆಂಬುದೀಗ ' ತಂಪುನೆಳಲ ಬಿಟ್ಟು ಕುಳ್ಳಿರ್ದಲ್ಲಿಯೆ ಬಳಿ ಬಳಿಯ ಬಯಲಾದ ಶರಣ ' ನೆಂಬ ಶಬ್ದಕ್ಕರ್ಥ. ಅಂತು ನಾದ ಬಿಂದು ಕಳೆಗಳೆಂಬ ಅಂಗ ಮನ ಪ್ರಾಣಂಗಳೆಲ್ಲವೂ ಲಿಂಗದೊಳಗೆ ಬೆರೆದು ಲಿಂಗವೆಯಾಗಿ ಹುಟ್ಟುಹೊಂದುಗೆಟ್ಟ ಶರಣನ ಇರವನುಪಮಿಸಿ ಹೇಳಬಾರದೆಂಬುದೀಗ ' ನಾದ ಬಿಂದು ಬೀಜನಪ್ಪ ಹೋಳಾಗಿ ಹಾಱಿ ಹೋದಲ್ಲಿ ಇನ್ನೇನನಱಸಲುಂಟು ' ಯೆಂಬ ಶಬ್ದಕ್ಕರ್ಥ. ಅಂತು ಶರಣ ಲಿಂಗವನೆ ಅಱಿದು ಲಿಂಗವನೆ ಬೆರೆದು ಲಿಂಗವೆಯಾದ ಶರಣಪಥಕ್ಕೆ ಬೇಱೆ ಘನಪದವೊಂದಿಲ್ಲವೆಂಬುದೀಗ ' ಗೊಹೇಶ್ವರಲಿಂಗವನಱಿದು ಭವಿಗೆ ಭವಿಯಾದಾತಂಗೆ ಇನ್ನೇನು ಪದವುಂಟಯ್ಯ ' ಎಂಬ ಶಬ್ದಕ್ಕರ್ಥ. ೮೧

ವ. ಅಂಗ ಲಿಂಗದಲ್ಲಿ ತರಹರವಾಗಿ, ಮನ ಜ್ಞಾನದಲ್ಲಿ ತರಹರವಾಗಿ, ಭಾವ ನಿರ್ಭಾವದಲ್ಲಿ ತರಹರವಾಗಿ, ಸಮತೆ ಶಾಂತಿಯಲ್ಲಿ ತರಹರವಾಗಿ ಇರಬಲ್ಲಾತನೇ ಅಚ್ಚ ಶರಣ ಗೊಹೇಶ್ವರಾ !

ಟೀ. ಅಂಗಲಿಂಗಸಂಗಿಯಾದ ಶರಣನ ಅಂಗವೆಲ್ಲಾ ಲಿಂಗನೆಯಾಗಿಪ್ಪುದು. ಅಂತು ಅಂಗವೆಲ್ಲಾ ಲಿಂಗವೆಯಾದಲ್ಲಿ, ಮನವೆಲ್ಲಾ ಲಿಂಗದಲ್ಲಿ ಅವಿರಳಜ್ಞಾನವೆಯಾಗಿಪ್ಪುದು. ಅಂತಪ್ಪ ಅವಿರಳಜ್ಞಾನವು ತನ್ನ ನಿಜವನೆ ಭಾವಿಸಿ, ಭಾವವಡಗಿ ನಿರ್ಭಾವವಾಗಿ, ಸಮತೆಯಲ್ಲಿ ನಿಂದು, ಆ ಸಮತೆಯೇ ನಿಜಶಾಂತಿಯಾಗಿ ನಿಂದು ಲಿಂಗವೆಯಾಗಿರಬಲ್ಲಾತ ಶರಣನಲ್ಲದೆ ಮತ್ತಾರಿಗೂ ಇಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೮೨

ವ. ಅಱಿವು ಮಱವೆಯೊಳಡಗಿ, ಮಱವೆ ಅಱವಿನೊಳಡಗಿ ತೆಱಹಿಲ್ಲದಿರ್ದ್ದೆನೆಂಬ ಹಮ್ಮಿದೇನೋ ? ಹಮ್ಮಿದೇನೋ ? ಬ್ರಹ್ಮಾದ್ಬ್ರಹ್ಮವ ನುಂಗಿ ಮತ್ತಾ ಪರಬ್ರಹ್ಮವು ನಾನೆಂದೆಂಬ ಹಮ್ಮಿದೇನೋ ? ಹಮ್ಮಿದೇನೋ ? ಆದಿಶೂನ್ಯವು ಶೂನ್ಯ, ಮಧ್ಯಶೂನ್ಯವು ಶೂನ್ಯ, ಅಂತ್ಯಶೂನ್ಯವು ಶೂನ್ಯವಾದ ಬಳಿಕ ಅಲ್ಲಿಂದತ್ತ ನಿಂದ ನಿಲವನಾರು ಬಲ್ಲರು ಹೇಳಾ ! ಬಯಲು ಚಿತ್ರಿಸಿದ ಚಿತ್ರವನಾ ಬಯಲೇ ಅಱಿವಂತೆ ಕೂಡಲಸಂಗಮದೇವ, ನಿಮ್ಮ ಶರಣರ ನಿಲವು.

ಟೀ. ಶಿವಾಂಶಿಕನಾದ ಆತ್ಮನ ನಿಜದಱಿವು ಮಱವೆಗೊಳಗಾಗಿ ದೇಹಸಂಬಂಧಿಯಾದನಾತ್ಮನು ಶಿವಾಜ್ಞೆಯಿಂದಲೆಂಬುದೀಗ 'ಅಱಿವು ಮಱವೆಯೊಳಡಗಿ' ಯೆಂಬ ಶಬ್ದಕ್ಕರ್ಥ. ಅಂತಪ್ಪ ಆತ್ಮಂಗೆ ಶಿವಕೃಪೆಯಿಂದ ಸಮ್ಯಗ್ಜ್ಞಾನೋದಯವಾಗಲು ಆ ಮಱವೆಯಳಿದು ಹೋಯಿತ್ತೆಂಬುದೀಗ 'ಮಱವೆ ಅಱಿವಿನೊಳಡಗಿ' ಯೆಂಬ ಶಬ್ದಕ್ಕರ್ಥ. ಅಂತು ಕೇವಲ ಜ್ಞಾನಸ್ವರೂಪ ತಾನೆಂದಱಿದು ಚಿದಹಂ ಎನಲು, ಚಿದಹಂಭಾವವೆ ಜನನಕ್ಕೆ ಕಾರಣವೆಂದಱಿದು, ಆ ಚಿದಹಂಭಾವವಳಿದು ತೆಱಹಿಲ್ಲದ ನಿಜ ಚಿತ್ಸ್ವರೂಪನೆಯಾಗಿರ್ದ ಶರಣನೆಂಬುದೀಗ 'ತೆಱಹಿಲ್ಲದಿರ್ದೆನೆಂಬ ಹಮ್ಮಿದೇನೋ? ಹಮ್ಮಿದೇನೋ?' ಎಂಬ ಶಬ್ದಕ್ಕರ್ಥ. ಅಂತು ಸಮ್ಯಗ್ಜ್ಞಾನಸ್ವರೂಪನಾಗಿ ತಾನು ಬ್ರಹ್ಮಾಂಶಿಕನು ಎಂದು ತನ್ನ ನಿಜವನಱಿದು ಬ್ರಹ್ಮಭಾವಗ್ರಾಹಕನಾಗಿ ಪರಬ್ರಹ್ಮೋಹಂ ಎನಲು, ಆ ಬ್ರಹ್ಮೋಹಂ ಎಂಬ ಹಮ್ಮು ಬ್ರಹ್ಮಕ್ಕಿಲ್ಲನೆಂದು ಅಱಿದು ಕಳೆದು, ನಿರಹಂಭಾವಿಯಾಗಿರ್ದ ಶರಣನೀಗ 'ಬ್ರಹ್ಮಾದ್ಬ್ರಹ್ಮವ ನುಂಗಿ ಮತ್ತಾ ಪರಬ್ರಹ್ಮವು ತಾನೆಂಬ ಹಮ್ಮಿದೇನೋ ? ಹಮ್ಮಿದೇನೋ ?' ಎಂಬ ಶಬ್ದಕ್ಕರ್ಥ. ಎಂದೆಂದೂ ದೇಹೇಂದ್ರಿಯಂಗಳು ಬ್ರಹ್ಮಕ್ಕಿಲ್ಲವಾಗಿ, ಅಂತಪ್ಪ ಬ್ರಹ್ಮಾಂಶಿಕನಾದ ಆತ್ಮಂಗೆಯೂ ಅನಾದಿಯಲ್ಲಿ ದೇಹೇಂದ್ರಿಯಂಗಳಿಲ್ಲವೆಂಬುದೀಗ 'ಆದಿಶೂನ್ಯವು ಶೂನ್ಯ' ವೆಂಬ ಶಬ್ದಕ್ಕರ್ಥ. ಅಂತು ಅನಾದಿಯಲ್ಲಿ ಆತ್ಮಂಗೆ ದೇಹೇಂದ್ರಿಯಾದಿಗಳೇನೂ ಇಲ್ಲದೆ ಇದ್ದಲ್ಲಿ ಶಿವಾಜ್ಞೆಯಿಂದ ಆತ್ಮನ ಮಧ್ಯದಲ್ಲಿ ದೇಹಸಂಬಂಧಿಯಾದಲ್ಲಿ ಸಮ್ಯಗ್ಜ್ಞಾನೋದಯದಿಂದ ಆ ದೇಹೇಂದ್ರಿಯಂಗಳೆಲ್ಲವ ಲಿಂಗಾರ್ಪಿತವ ಮಾಡಿ, ದೇಹೇಂದ್ರಿಯಾದಿಗಳು ತನಗಿಲ್ಲದೆಯಿರ್ದ ಶರಣನೆಂಬುದೀಗ 'ಮಧ್ಯಶೂನ್ಯವು ಶೂನ್ಯ' ವೆಂಬ ಶಬ್ದಕ್ಕರ್ಥ. ಅಂತು ಮಧ್ಯದಲ್ಲಿ ತೋಱಿದ ಅಂಗೇಂದ್ರಿಯಂಗಳೆಲ್ಲವ ಲಿಂಗಾರ್ಪಿತವ ಮಾಡಿ, ಅಂಗೇಂದ್ರಿಯಂಗಳು ತನಗಿಲ್ಲದೆ ತಾನು ಲಿಂಗಸ್ವರೂಪನಾಗಿರ್ದನಾಗಿ, ಶರಣಂಗೆ ಮುಂದೆ ಪರಿಭವವಿಲ್ಲದೆ ಹೋಯಿತ್ತೆಂಬುದೀಗ

'ಅಂತ್ಯಶೂನ್ಯವು ಶೂನ್ಯ' ವೆಂಬ ಶಬ್ದಕ್ಕರ್ಥ. ಅಂತು ಆದಿ ಮಧ್ಯಾವಸಾನಂಗಳಲ್ಲಿಯೂ ಲಿಂಗವಾದ ಶರಣನ ನಿಲವನುಪಮಿಸಿ ಹೇಳಬಾರದೆಂಬುದೀಗ 'ಅಲ್ಲಿಂದತ್ತ ನಿಂದ ನಿಲವನಾರು ಬಲ್ಲರು ಹೇಳಾ ?' ಎಂಬ ಶಬ್ದಕ್ಕರ್ಥ. ಬಯಲೆಂಡದೆ ಲಿಂಗವು. ಅಂತಪ್ಪ ಲಿಂಗವು ತನ್ನ ಲೀಲಾವಿಲಾಸದಿಂದ ನಾನಾ ಚಿತ್ರವಿಚಿತ್ರವಾದ ಮಾಯಾದೇಹ ದೇಹಿಗಳ ಸುಖ ದುಃಖ ಬಂಧ ಮೋಕ್ಷಂಗಳ ಕಲ್ಪಿಸಿ, ಅವರ ದುಃಖಾವಸ್ಥೆಗಳು ತನ್ನ ಹೊದ್ದದೆ, ತಾನವನಱಿಯದೆ, ಸದಾನಂದ ಸುಖಿಯಾಗಿಹನು ಲಿಂಗವು. ಅದೇಕಯ್ಯಾಯೆಂಡಡೆ: ಲಿಂಗಕ್ಕೆ ಉತ್ಪತ್ಯ ಸ್ಥಿತಿಗಳ ಹೊದ್ದಿಯೂ ಹೊದ್ದದೆ ಲಿಂಗವೆಯಾಗಿಪ್ಪರು ಶರಣರೆಂಬುದೀಗ 'ಬಯಲು ಚಿತ್ರಿಸಿದ ಚಿತ್ರವನಾ ಬಯಲೇ ಅಱಿವಂತೆ ಕೂಡಲಸಂಗಮದೇವಾ, ನಿಮ್ಮ ಶರಣರ ನಿಲವು' ಯೆಂಬ ಶಬ್ದಕ್ಕರ್ಥ. ೮೪

**ವ.** ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವೂ ನಾಸಿಕವಾಯಿತ್ತು. ತಾನಲ್ಲದನ್ಯ ವಾಸನೆಯಿಲ್ಲವಾಗಿ ಅಲ್ಲಿಯೇ ಮಹತ್ತಪ್ಪ ಪೃಥ್ವಿಯಡಗಿತ್ತು. ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವೂ ಜಿಹ್ವೆಯಾಯಿತ್ತು. ತಾನಲ್ಲದನ್ಯರುಚಿಯಿಲ್ಲವಾಗಿ ಅಲ್ಲಿಯೇ ಮಹತ್ತಪ್ಪ ಅಪ್ಪುವಡಗಿತ್ತು. ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವೂ ನೇತ್ರವಾಯಿತ್ತು. ತಾನಲ್ಲದನ್ಯರೂಹಿಲ್ಲವಾಗಿ ಅಲ್ಲಿಯೇ ಮಹತ್ತಪ್ಪ ಅಗ್ನಿಯಡಗಿತ್ತು. ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವೂ ತ್ವಕ್ಕಾಯಿತ್ತು. ತಾನಲ್ಲದನ್ಯ ಸೋಂಕಿಲ್ಲವಾಗಿ ಅಲ್ಲಿಯೇ ಮಹತ್ತಪ್ಪ ವಾಯುವಡಗಿತ್ತು. ಖಂಡಿತವಿಲ್ಲಾಗಿ ಸರ್ವಾಂಗವೆಲ್ಲವೂ ಶ್ರೋತ್ರವಾಯಿತ್ತು. ತಾನಲ್ಲದನ್ಯ ಶಬ್ದವಿಲ್ಲಾಗಿ ಅಲ್ಲಿಯೇ ಮಹತ್ತಪ್ಪ ಆಕಾಶವಡಗಿತ್ತು. ಇಂತು ಪಂಚಭೂತಂಗಳಡಗಿದರೆ ಪಂಚಬ್ರಹ್ಮಮಯವಾಯಿತ್ತು. ಅದಱೊಳಗೆ ಜಗತ್ತಡಗಿದ ಭೇದ. ಆದೇ ಪಂಚವರ್ಣಾತೀತವಾಗಿ ಮಹತ್ತನೊಳಕೊಂಡ ಆ ಶರಣನ ಭೇದವನೇನೆಂದುಪಮಿಸುವೆನಯ್ಯಾ ಗೊಹೇಶ್ವರಾ ?

**೬೬.** ಅಂಗ ಲಿಂಗ ಸಂಗವಾಗಿ ಭೇದವಳಿದು, ಅಂಗವೆಲ್ಲಾ ಅಖಂಡಿತ ಲಿಂಗವೆಯಾದ ಶರಣನ ಪಂಚೇಂದ್ರಿಯಂಗಳು ಮೊದಲಾದ ಪಂಚವಿಷಯಂಗಳೆಲ್ಲಾ ಲಿಂಗವೆಯಾದ ಕಾರಣ ಶರಣನ ಸಾಕಾರವೇ ಪಂಚಬ್ರಹ್ಮಸ್ವರೂಪವಾಯಿತ್ತು. ಅಂತು ಪಂಚಬ್ರಹ್ಮಸ್ವರೂಪವನೊಳಕೊಂಡು, ಅನಕ್ಷರಸ್ವರೂಪಮಪ್ಪ ಪರಬ್ರಹ್ಮವೆಯಾಗಿಪ್ಪನು ಶರಣನು. ಅಂತು ಜಗದ್ಭಾವನೆಯಳಿದು ಅಖಂಡಿತ ಲಿಂಗವೆ

ನಾಗಿಪ್ಪ ಶರಣನ ಚಾರಿತ್ರವನುಪಮಿಸಿ ಹೇಳಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೮೪

ವ. ದೇವಲೋಕದವರ ತೃಣವೆಂಬೆ. ಮರ್ತ್ಯಲೋಕದವರ ಕ್ಷಣವೆಂಬೆ. ಅಹಂಕಾರವೆಂಬ ಶೃಂಗಾರವ ಮಾಡೆ. [1]ನಾನಲ್ಲದನ್ಯವನಲ್ಲೆಂಬೆ[1] ಗೊಹೇಶ್ವರನೆಂಬಾತನಾಗಿ.

ಟೀ. ಶರಣನು ದೇವಲೋಕದ ದೇವತಾಪದಂಗಳನೆಲ್ಲವ [2]ತೃಣಪತ್ರವಾಗಿ[2] ಕಂಡಿಹನು. ಮರ್ತ್ಯಲೋಕದ ಮನುಷ್ಯಪದಂಗಳನೆಲ್ಲವ ಕ್ಷಣವೆಂದು ಕಂಡಿಹನು. ಆ ಶರಣನು ತಾನು ಶಿವನೆಂಬ ಚಿದಹಂಕಾರವ ಹಿಡಿದೆಯಿಪ್ಪನು. ಆ ಶರಣನು ತನ್ನ ನಿಜ ಶಿವಪದವಲ್ಲದೆ ಮಿಕ್ಕಿದ ಫಲಭೋಗಂಗಳನಲ್ಲವೆಂದು ನೇತಿಮಾಡಿ ಕಳೆದಿಹನು. ಆ ಶರಣ ತಾನೆ ಶಿವನಾದ ಕಾರಣವೆಂಬುದೀ ವಚನದ ತಾತ್ಪರ್ಯಾರ್ಥ. ೮೫

ಶರಣಸ್ಥಲ ಸಂಪೂರ್ಣ

## ಅಂತು ಸ್ಥಲ ೧೪ಕ್ಕಂ ಶ್ಲೋಕ ೧೧೮ಕ್ಕಂ ವಚನ ೬೧೧ಕ್ಕಂ

## ಮಂಗಳಂ

## ಶ್ರೀ

೧ ನಾನಲ್ಲದೇನುವನಲ್ಲೆಂಬೆ (ಎ. ರಾ.) ೨ ತೃಣಪತ್ರಾಗಿ (ಹು.)

# ೧೫ ಐಕ್ಯಸ್ಥಲ

❋

**ಸೂತ್ರ.** ಇಂತು ಅಭಿನ್ನಜ್ಞಾನದಿಂದ ಮಹಾಘನಲಿಂಗವು ತಾನೆಂದಲ್ಲಿ, ತನ್ನ ನಿಜಸುಖಾನಂದ ತನಗೆ ದೊರಕೊಂಡ ಶರಣನು ಮಹಾಘನಲಿಂಗ ತಾನೆಯಾಗಿರ್ದ ಬಳಿಕ, ಬಯಸುವ ಅಱಿವಿನ ಅಱಿಕೆ ತನ್ನ ನಿಜದಲ್ಲಿ ಅಡಗಿ ನಿಂದು ಲಿಂಗವೆಯಾಗಿರ್ದುದೇ ಸಮರಸಭಕ್ತಿ. ಆ ಸಮರಸಭಕ್ತಿಯೆಂಬುದೀಗ ಲಿಂಗೈಕ್ಯ. ಅಂತು ಲಿಂಗೈಕ್ಯಸ್ಥಲವೆಂದು ಪೇಳಲಾದುದು.

ಐಕ್ಯಸ್ಥಲಕ್ಕೆ ಶ್ಲೋಕ :

> ಷಡೂರ್ಮಯಶ್ಚ ಷಡ್ವರ್ಗೋ ನಾಸ್ತಿ ಚಾಷ್ಟವಿಧಾರ್ಚನಂ
> ನಿರ್ಭಾವಂ ನಿಜಲಿಂಗೈಕ್ಯಂ ಶಿಖಿಕರ್ಪೂರಯೋಗವತ್

**ಟೀ.** ಕ್ಷುತ್ತು ಪಿಪಾಸೆ ಶೋಕ ಮೋಹ ಜರಾ ಮರಣವೆಂಬ ಷಡೂರ್ಮಿಗಳು, ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಷಡ್ವರ್ಗಂಗಳು ಇಲ್ಲದಿರುಹ, ಅಷ್ಟವಿಧಾರ್ಚನೆಯಿಲ್ಲದಿರುಹ, ಭಾವವಿರಹಿತನಾಗಿರುತ್ತಿಹುದೀಗ ಐಕ್ಯಸ್ಥಲವು. ಕರ್ಪೂರ ಅಗ್ನಿಯ ಸಂಗವ ಮಾಡಲಾಗಿ ತನ್ನ ರೂಪಳಿದು ಅಗ್ನಿಯೇ ಆಯಿತು. ಆ ಪ್ರಕಾರದಲ್ಲಿ ಲಿಂಗವ ನೆನೆದು ಲಿಂಗವೆಯಾಗಿಹನೆಂಬುದರ್ಥ. ೧

ತತ್ತ್ವಸಾರೇ :

> ಶೂನ್ಯಂ ಶೂನ್ಯಂ ಪುನಃ ಶೂನ್ಯಂ ತ್ರಿಶೂನ್ಯಂ ಪಶ್ಯತಿ ಕ್ಷಣಾತ್
> ಸರ್ವಶೂನ್ಯಂ ನಿರಾಭಾಸಂ ಸಾಮರಸ್ಯಂ ತದಾ ಭವೇತ್

ಟೀ. ಯದಾ-ಆವಾಗಳೂ ಆತ್ಮನು, ಶೂನ್ಯಂ-ಉತ್ಪತ್ತ್ಯಶೂನ್ಯವಾದಾತನಾಗಿಯೂ, ಶೂನ್ಯಂ-ಸ್ಥಿತಿಶೂನ್ಯವಾದಾತನಾಗಿಯೂ, ಪುನಃ-ಮರಳಿ, ಶೂನ್ಯಂ-ಲಯಶೂನ್ಯವಾದಾತನಾಗಿಯೂ, ತ್ರಿಶೂನ್ಯಂ-ಉತ್ಪತ್ತ್ಯ ಸ್ಥಿತಿ ಲಯಂಗಳು ಮೂರಱಿಂದವೂ ಶೂನ್ಯವಾದಾತನಾಗಿಯೂ, ಯದಾ-ಆವಕಾಲದಲ್ಲಿ, ಕ್ಷಣಾತ್-ಕ್ಷಣಮಾತ್ರದಿಂದ, ಪಶ್ಯತಿ-ಕಾಣುತ್ತಿಹನು, ತದಾ-ಆ ವೇಳೆಯಲ್ಲಿ, ಸರ್ವಶೂನ್ಯಂ-ಸರ್ವವೂ ಶೂನ್ಯವಾಗಿ ಉಳ್ಳುದಾಗಿ, ನಿರಾಭಾಸಂ-ಬೇಱಾಗಿ ತೋಱುವುದಿಲ್ಲದಂಥಾ, ಸಾಮರಸ್ಯಂ-ಸಮರಸಕ್ಕೈಕ್ಯವು, ಭವೇತ್-ಆಹುದು. ೨

ಯಥಾ ಘೃತಂ ಘೃತೇ ನ್ಯಸ್ತಂ ಕ್ಷೀರಂ ಕ್ಷೀರೇ ಯಥೈವ ಚ
ಕೇವಲತ್ವಂ ತಥಾ ಪ್ರಾಪ್ತಂ ನ ಕಿಂಚಿದಪಿ ತದ್ಭವೇತ್

ಟೀ. ಘೃತೇ-ತುಪ್ಪದೊಳಗೆ, ನ್ಯಸ್ತಂ-ಎಱೆಯಲ್ಪಟ್ಟ ತುಪ್ಪವು, ಯಥಾ-ಹೇಂಗೆ, ಘೃತಂ-ಘೃತವೇಯಪ್ಪುದು, ಕ್ಷೀರೇ-ಹಾಲಿನೊಳಗೆ, ನ್ಯಸ್ತಂ-ಎಱೆಯಲ್ಪಟ್ಟ ಹಾಲು, ಯಥೈವ ಚ-ಹೇಂಗೆ ಹಾಲೆಯಹುದು, ತಥಾ-ಹಾಂಗೆ, ಕೇವಲತ್ವಂ-ಶುದ್ಧವಾದ ಬ್ರಹ್ಮಸ್ವರೂಪವನು, ಪ್ರಾಪ್ತಂ-ಎಯ್ದಲು ಪಟ್ಟ ಜಗತ್ತು, ಕಿಂಚಿದಪಿ-ಬೇಱಾದುದಾವುದು, ನ-ಆಗದು, ತತ್-ಆ ಬ್ರಹ್ಮವೇ, ಭವೇತ್-ಆಹುದು. ೩

## ಐಕ್ಯಸ್ಥಲಕ್ಕೆ ವಚನ :

ವ. ಮೂಱುಱಾಪ್ಯಾಯನ ಐದು ಬೆಟ್ಟವನಿಂಬುಗೊಂಡು, ಅಕಟಕಟಾ ! ಮಾಡಿ ಕೆಟ್ಟರು, ಮಾಡದೆ ಕೆಟ್ಟರು. ನೀಡಿ ಕೆಟ್ಟರು, ನೀಡದೆ ಕೆಟ್ಟರು. ಕೂಡಲಸಂಗಮದೇವನ ಬಸುಱ ಮಧ್ಯದ ಬಯಲ ಸಮಾಧಿಯಲ್ಲಿ ನಿಲ್ಲದೆ ಕೆಟ್ಟರು.

ಟೀ. ಐದು ಬೆಟ್ಟಂಗಳೆಂದರೆ ಪಂಚತತ್ತ್ವಂಗಳು. ಅಂತಪ್ಪ ಪಂಚತತ್ತ್ವಯುಕ್ತವಾದ ದೇಹವನೆ ಆಶ್ರಯವ ಮಾಡಿಕೊಂಡು, ಆತ್ಮನು ಹೊನ್ನು ಹೆಣ್ಣು ಮಣ್ಣನೆ ಬಯಸುತ್ತ, ಲಿಂಗಜಂಗಮವ ಭಿನ್ನವಿಟ್ಟು ಪೂಜೆಯ ಮಾಡಿ, ನೀಡಿ, ಭವಕ್ಕೆ ಈಡಾಗಿ ಕೆಟ್ಟರು ಕೆಲಬರು. ಲಿಂಗ ಜಂಗಮದ ಪೂಜೆಯ ಮಾಡದೆ, ನೀಡದೆ, ಅಜ್ಞಾನದಿಂದ ಭವಕ್ಕೆ ಈಡಾಗಿ ಕೆಟ್ಟರು ಅನಂತಜೀವರು ಮುನ್ನವೆ ಎಂಬುದೀಗ ' ಮೂಱುಱಾಪ್ಯಾಯನ ಐದು ಬೆಟ್ಟವನಿಂಬುಗೊಂಡು, ಅಕಟಕಟಾ ! ಮಾಡಿ ಕೆಟ್ಟರು, ಮಾಡದೆ ಕೆಟ್ಟರು. ನೀಡಿ ಕೆಟ್ಟರು, ನೀಡದೆ ಕೆಟ್ಟರು. ' ಎಂಬ ಶಬ್ದಕ್ಕರ್ಥ. ಅಂತಪ್ಪ ಹೊನ್ನು ಹೆಣ್ಣು ಮಣ್ಣು ಮೊದಲಾದ ಫಲಪದಂಗಳ ನೇನನೂ ಬಯಸದೆ ನಿರವಯ ಪರಿಪೂರ್ಣ ಲಿಂಗವೆ ತನ್ನ ನಿಜವೆಂದಱಿದು, ಲಿಂಗ

ವನೆ ಬಯಸಿ, ಲಿಂಗಭಕ್ತಿಯನೆ ಮಾಡಿ, ಲಿಂಗದೊಳಗೆ ಆತ್ಮಾಂಗವ ಸಂಗಿಸಿ, ಕೂಡಿ, ಬೆರೆದು, ಭಿನ್ನವಳಿದು ನಿರವಯಲಿಂಗವೆಯಾಗಿಪ್ಪ ಲಿಂಗೈಕ್ಯರು ಅಪೂರ್ವವೆಂಬುದೀಗ 'ಕೂಡಲಸಂಗಮದೇವನ ಬಸುಱ ಮಧ್ಯದ ಬಯಲ ಸಮಾಧಿಯಲ್ಲಿ ನಿಲ್ಲದೆ ಕೆಟ್ಟರೆ'ಂಬ ಶಬ್ದಕ್ಕರ್ಥ. ೧

ವ. ಮರುತನ ಸಂಗದಿಂದ ಪರಿಮಳ ಬೀಸರವಾಯಿತ್ತು. ನುಡಿಯ ಗಡಣದಿಂದ ಅನುಭಾವ ಬೀಸರವಾಯಿತ್ತು. ಮಾಟದ ಸಂಭ್ರಮದಿಂದ ಭಕ್ತಿ ಬೀಸರವಾಯಿತ್ತು. ಕೂಟದ ಬೆರಕೆಯ ಸಂಭ್ರಮದಿಂದ ಅಱಿವು ಬೀಸರವಾಯಿತ್ತು. ಸೂಕ್ಷ್ಮ ಶಿವಪಥವು ಸಾಮಾನ್ಯರಿಗಳವೆ? ಕೂಡಲಚೆನ್ನಸಂಗನ ಶರಣರಿಗಲ್ಲದಿಲ್ಲ.

ಟೀ. ಈ ವಚನ ಕಾಣಬಂದರ್ಥ. ೨

ವ. ಎಂಜಲುಮಾತ ನುಡಿವ ರಂಜಕರೆಲ್ಲರೂ ಮಿಗೆ ಮಿಗೆ ಮೀಸಲ ತಾವೆತ್ತ ಬಲ್ಲರೋ ? ಮೀಸಲು ಎಂಜಲಹುದೇ? ಎಂಜಲು ಮೀಸಲಹುದೇ ? ಮಾತಿನ ಬಣಬೆಯ ಮೇದ ಪಶುಪ್ರಾಣಿಯಂತೆ ಎಂಜಲು ಮಾತ ನುಡಿವುತ್ತಿಹರು. ಲಿಂಗಸಕೀಲ ಸಂಯೋಗದ ವರ್ಮಸ್ಥಲವನವರೆತ್ತ ಬಲ್ಲರು? ಕೂಡಲಚೆನ್ನಸಂಗಯ್ಯನಲ್ಲಿ ಶಬ್ದಸೂತಕರೆಲ್ಲರೂ ರೌರವನರಕಿಗಳು.

ಟೀ. ಆರೂ ಬಳಸಬಾರದೆ ಇದ್ದ ಮಿಗೆ ಮಿಗೆ ಮೀಸಲಿಗ ಲಿಂಗಾಂಗ ಸಂಯೋಗ. ಅಂತು ಮೀಸಲಾಗಿಪ್ಪ ಲಿಂಗಾಂಗಸಂಯೋಗ ಸಮ್ಯಗ್‌ಜ್ಞಾನಿಯಾದ ಸದ್ಭಕ್ತಂಗಲ್ಲದೆ ಮತ್ತಾರಿಗೂ ಸಾಧ್ಯವಲ್ಲ. ಅದು ಕಾರಣ ಸಮ್ಯಗ್‌ಜ್ಞಾನ ಭಕ್ತಿಯಿಲ್ಲದೆ ಹಿಂದಣ ಕವಿಗಳು ಹೇಳಿದ ಎಂಜಲು ವೇದಾಗಮ ಪುರಾಣ ಶಬ್ದಜಾಲವ ಕಲಿತು ನುಡಿವ ನುಡಿಯ ರಂಜಕರೆಲ್ಲರೂ ಪಶುಜೀವಿಗಳಾಗಿ ನರಕಕ್ಕೀಡಾಗಿ ಹೋಗುತ್ತಿಹರೆಂಬುದೀ ವಚನದ ತಾತ್ಪರ್ಯಾರ್ಥ. ೩

ವ. ಪ್ರಥಮ ವೇದಿಗಳೆಲ್ಲರೂ ಗತಿಯಲ್ಲಿ ಸಿಲುಕಿದರು. ಅತೀತ ಅನಾಗತರೆಂಬವರೆಲ್ಲರೂ ಮತಿಯಲ್ಲಿ ಸಿಲುಕಿದರು. ಶ್ರುತಿವಂತರೆಲ್ಲರೂ ಆಗಮದಲ್ಲಿ ಸಿಲುಕಿದರು. ಇಂಥವನೇ ಲಿಂಗೈಕ್ಯನು ? ನುಡಿದುದ ನುಡಿಯ, ನಡೆದುದ ನಡೆಯ. ಬಂದಲ್ಲಿ ಬಾರನು, ನಿಂದಲ್ಲಿ ನಿಲ್ಲನು. ನಿಸ್ಸೀಮ ಕೂಡಲಚೆನ್ನಸಂಗಾ ಲಿಂಗೈಕ್ಯನು !

ಟೀ. ಜಗತ್ಸೃಷ್ಟಿಗೆ ಪ್ರಥಮವೀಗ ಲಿಂಗದ ಸಾಕಾರ. ಅಂತಪ್ಪ ಲಿಂಗದ ಸಾಕಾರವನೆ ಭಜಿಸಿದ ದೇವತಾದಿಗಳು ಮೊದಲಾದವರೆಲ್ಲರೂ ಫಲಪದಂಗಳ ಗತಿಗೊಳಗಾಗಿಹರಲ್ಲದೆ ಅವರು ಲಿಂಗೈಕ್ಯರಲ್ಲ. ತ್ರಿಕಾಲಜ್ಞಾನಿಗಳೆಲ್ಲರೂ ತ್ರಿಕಾಲವ ತಿಳಿದು ಮತಿವಿಡಿದಿರ್ದರಲ್ಲದೆ ಅವರು ಲಿಂಗೈಕ್ಯರಲ್ಲ. ಆಗಮದ ಶ್ರುತಿಮಾರ್ಗವಿಡಿದು ತ್ರಿಪದಾರ್ಥಜ್ಞಾನವ ಸಾಧಿಸುವರೆಲ್ಲರೂ ಪಶುಗಳೆನಿಸಿ ಕರ್ಮಕಾಂಡಿಗಳಾದರಲ್ಲದೆ ಅವರು ಲಿಂಗೈಕ್ಯರಲ್ಲ. ಲಿಂಗೈಕ್ಯರ ಪರಿಕ್ರಮವೆಂತೆಂದಡೆ : ವೇದಾಗಮಂಗಳು ಹೇಳಿದ ವೇದಾಂತ ಸಿದ್ಧಾಂತ ಮಾರ್ಗವಿಡಿದು ಆಚರಿಸುವನಲ್ಲ. ತನ್ನ ಸಮ್ಯಗ್ಜ್ಞಾನದಿಂದ ಲಿಂಗಾಂಗದೈಕ್ಯಮಪ್ಪ ಸದ್ಭಕ್ತಿರಹಸ್ಯವ ಇಂತೆಂದು ನುಡಿದು ತೋಱಿ ಬೀಱುವನಲ್ಲ. ತಿರುಗಿ ಮತ್ತೆ ಹುಟ್ಟಿ ಹೊಂದುವನಲ್ಲ. ದೇಹವಿಡಿದಿರ್ದು ದೇಹಿಯಾಗಿಪ್ಪವನಲ್ಲ. ತನ್ನಾತ್ಮಾಂಗ ಮೊದಲಾದ ತನು ಭಾವಂಗಳೆಲ್ಲವು ಲಿಂಗದೊಳಗೆ ಬೆರೆದು ಲಿಂಗವೆಯಾದ ಲಿಂಗೈಕ್ಯಂಗೆ ನಾಮ ರೂಪು ಸೀಮೆಗಳಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೪

ವ. ದರ್ಶನಾದಿಗಳೆಲ್ಲಾ ವಿರಸಹಾಯಿತ್ತು ನೋಡಾ ! ಲಿಂಗಾರ್ಚಕರಲ್ಲದವರು ಲಿಂಗೈಕ್ಯವ ಬಲ್ಲರೇ ? ಕೂಡಲಚೆನ್ನಸಂಗನೆಂಬ ಲಿಂಗೈಕ್ಯರೇ ಬಲ್ಲರು !

ಟೀ. ಅಂಗಕ್ಕೆ ಲಿಂಗಕ್ಕೆ ಭೇದವಿಲ್ಲೆಂದಱಿದು, ಲಿಂಗಾಂಗಸಂಬಂಧಿಗಳಾಗಿ, ತನ್ನಾತ್ಮಾಂಗ ಮೊದಲಾದ ತನು ಕರಣ ಭುವನ ಭೋಗಂಗಳನೆಲ್ಲವ ಲಿಂಗಕ್ಕೆ ಅರ್ಪಿಸಿ, ಭೇದವಳಿದು ಲಿಂಗವೆಯಾಗಿರಬಲ್ಲ ಶರಣನೇ ಲಿಂಗೈಕ್ಯನು. ಅಂತಪ್ಪ ಲಿಂಗಾಂಗಸಂಬಂಧದ ಜ್ಞಾನಕ್ರೀಯಿಲ್ಲದೆಯಿರ್ದ ಇತರ ಸಮಯದರ್ಶನಾದಿಗಳಿಗೆ ಲಿಂಗದೊಳ್ಳೈಕ್ಯತೆಯಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೫

ವ. ಒಡಲುಗೊಂಡು ಒಡಲುವಿಡಿಯದೆ ಒಡಲಿಲ್ಲದ ನಿಜವ ಬೆರಸೆಲವೊ ! ನರರು ಸುರರು ಕಿನ್ನರರು ಖೇಚರರು ಪರಮಪದವಿಯನಱಿಯದ ಕಾರಣ ಭವದೊಳಗೆ ಸಿಲುಕಿದರು. ಕೂಡಲಚೆನ್ನಸಂಗನ ನಿಜರೂಪನೆ ಬೆರಸಿರೋ ಮುಮುಕ್ಷುಗಳಿರಾ !

ಟೀ. ಪರಮಪದವೆಂದರೆ ಮಹಾಘನಲಿಂಗಪದ. ಅಂತಪ್ಪ ಮಹಾಘನ ಲಿಂಗಪದವೇ ತನ್ನ ನಿಜಚೈತನ್ಯವೆಂದಱಿದು, ದೇಹೋಹಂ ಭಾವವಳಿದು, ತನ್ನಾತ್ಮಾಂಗ ಮೊದಲಾದ ದೇಹಕರಣಂಗಳೆಲ್ಲಾ ಲಿಂಗವೆಂದು ಲಿಂಗಕ್ಕೆ ಅರ್ಪಿಸಿ,

ಲಿಂಗದೊಳು ಬೆರೆದು ಮಹಾಘನಲಿಂಗವೆಯಪ್ಪ ಲಿಂಗಾಂಗಸಂಯೋಗದ ವರ್ಮವನರಿಯದೆ ಸರ್ವದೇವತಾದಿಗಳು ಮೊದಲಾದವರೆಲ್ಲರೂ ವೇದಾಂತ ಸಿದ್ಧಾಂತ ಮೊದಲಾದ ಬಹುಮಾರ್ಗವಿಡಿದು ಭವಕ್ಕೀಡಾದರು. ಅದು ಕಾರಣ ಮೋಕ್ಷಕ್ಕೆ ಲಿಂಗಾಂಗಸಂಬಂಧಿಯಾದಲ್ಲದಿಲ್ಲವೆಂದು ಮೋಕ್ಷಾಪೇಕ್ಷಕರರಿದು, ಲಿಂಗಾಂಗ ಸಂಯೋಗವನೆ ಸಾಧಿಸಿಕೊಳ್ಳಿ ಎಂದು ಶರಣ ಚೆನ್ನಬಸವಣ್ಣ ನಿರೂಪಿಸಿದನೆಂಬುದೀ ವಚನದ ತಾತ್ಪರ್ಯಾರ್ಥ. ೬

**ವ.** ಕಾಯದೊಳಗೆ ಕಾಯವಾಗಿರ್ದೆಯಲ್ಲಾ ಹಂಸಾ! ಸಂಸಾರ ಮಾಯಾ ಪಾಶವ ಬಿಡಲೊಲ್ಲದೆ ಡಿಂಬವ ನಚ್ಚಿ ಕೆಟ್ಟೆಯಲ್ಲಾ ಹಂಸಾ ! ಜೀವ ಶೂನ್ಯವಾಗಿ ಕೂಡಲಚೆನ್ನಸಂಗನ ಶರಣರು ಲಿಂಗವಾಗಿ ಹೋದುದ ನರಿಯಾ ಹಂಸಾ !

**ಟೀ.** ಈ ವಚನ ಕಾಣಬಂದರ್ಥ. ೭

**ವ.** ಲಿಂಗದ ಗುಣದಿಂದ ಲಿಂಗೈಕ್ಯವೆಂಬರು. ಲಿಂಗದ ಗುಣದಿಂದ ಲಿಂಗೈಕ್ಯವಿಲ್ಲ ನೋಡಾ ! ಭಾವಾದ್ವೈತಂ ಪರಹಿತಂ ಕೂಡಲಚೆನ್ನ ಸಂಗಾ ಲಿಂಗೈಕ್ಯವು.

**ಟೀ.** ಒಂದೆ ಪರವಸ್ತು ಲಿಂಗಾಂಗವೆರಡಾದಲ್ಲಿ ಆ ಪರವಸ್ತುವಿನ ಸಮೇತವಾಗಿರ್ದ ಚಿಚ್ಛಕ್ತಿಯು ಎರಡಾಗಿ ಲಿಂಗದಲ್ಲಿ ಶಕ್ತಿಯೆನಿಸಿತ್ತು. ಆತ್ಮನೆಂಬಂಗದಲ್ಲಿ ಭಕ್ತಿಯೆನಿಸಿತ್ತು. ಅದು ಕಾರಣ ಲಿಂಗದ ಗುಣವೆಂದರೆ ಚಿತ್ತು. ಆ ಚಿತ್ತುವೆಂದರೆ ಶಕ್ತಿ ಅಂತಪ್ಪ ಲಿಂಗದ ಗುಣ ಶಕ್ತಿ ಜಗತ್ ಪ್ರಪಂಚಸೃಷ್ಟಿಯ ಮಾಡುತ್ತಿಹುದಲ್ಲದೆ ಆ ಪ್ರಪಂಚನಳಿದು ಲಿಂಗದೊಳೈಕ್ಯತೆಯ ಮಾಡುವ [೧]ವರ್ಮವದಕ್ಕಿಲ್ಲ[೧]. ಅಂತಾದ ಕಾರಣ ಆತ್ಮಾಂಗ ಸದ್ಭಕ್ತಿಭಾವವು ಲಿಂಗಾಂಗವನೈಕ್ಯತೆಯ ಮಾಡಿ ಪ್ರಪಂಚ ನಷ್ಟವ ಮಾಡುತ್ತಿಹುದು. ಅಂತು ಆತ್ಮನಿಗೆ ಪರವ ಸಾಧಿಸಿ ಕೊಡುವ ಪರಹಿತ ಸ್ವರೂಪು ಅಭಿನ್ನಭಕ್ತಿಯ ಭಾವವಲ್ಲದೆ ಲಿಂಗದ ಗುಣವಾದ ಶಕ್ತಿಗಿಲ್ಲೆಂಬುದೀ ವಚನದ ತಾತ್ಪರ್ಯಾರ್ಥ. ೮

**ವ.** ಕಾಣಬಹುದೇ ನಿರಾಕಾರ ? ಕಾಣಬಹುದೇ ಮಹಾಘನವು ? ಕಂಡು ಭ್ರಮೆಗೊಂಡು ಹೋದರೆಲ್ಲರು. ಕೂಡಲಚೆನ್ನಸಂಗನ ಅನುಭಾವವ ಲಿಂಗೈಕ್ಯನೇ ಬಲ್ಲ.

---

೧ ಧರ್ಮವದಕ್ಕಿಲ್ಲ (ಹು.)

**ಟೀ.** ನಿರಾಕಾರವಾಗಿಪ್ಪ ಪರಬ್ರಹ್ಮವು ಸಕಲದೇಹಿಗಳಾರಿಗೆಯೂ ಕಾಣಬಾರದಿಹುದೇ ಸಹಜ. ಅಂತಪ್ಪ ಪರಬ್ರಹ್ಮವ ಶ್ರುತಿ ಮತಿ ಜ್ಞಾನಂಗಳಿಂದ ಕಂಡು ಕೆಲಬರು ಕೂಡುವ ಭಕ್ತಿಯೋಗವನಱಿಯದೆ ಆ ಪರಬ್ರಹ್ಮವು ತಾವೆಂದು ಬಱಿದೆ ಭ್ರಮೆಗೊಂಡು ದೇಹವಾಸನೆಯನಳಿಯಲಱಿಯದೆ ಸತ್ತುಹೋದರು ಅನಂತರು. ಅದು ಕಾರಣ ಜ್ಞಾನಕ್ರೀಯಿಂದ ಪರಬ್ರಹ್ಮವಪ್ಪ ಲಿಂಗವೆ ತನ್ನ ನಿಜವೆಂದಱಿದು, ಲಿಂಗಾಂಗಸಂಬಂಧಿಯಾಗಿ, ಅಂಗಲಿಂಗವೆಂಬ ಭೇದವಳಿದು ಲಿಂಗವೆಯಾಗಿಪ್ಪ ಲಿಂಗೈಕ್ಯನೇ ಲಿಂಗಸುಖಾನುಭಾವವ ಬಲ್ಲನಲ್ಲದೆ ಮಿಕ್ಕಿನ ವೇದಾಂತ ಸಿದ್ಧಾಂತ ಜ್ಞಾನಿಗಳಾರೂ ಅಱಿಯರೆಂಬುದೀ ವಚನದ ತಾತ್ಪರ್ಯಾರ್ಥ. ೯

**ವ.** ಬಯಲ ರೂಪು ಮಾಡಬಲ್ಲಾತನೇ ಶರಣ ! ಆ ರೂಪ ಬಯಲು ಮಾಡಬಲ್ಲಾತನೇ ಲಿಂಗಾನುಭಾವಿ ! ಆ ಬಯಲ ರೂಪು ಮಾಡಲಱಿಯದಿರ್ದಡೆ ಎಂತು ಶರಣನೆಂಬೆ ? ಆ ರೂಪು ಬಯಲ ಮಾಡಲಱಿಯದಿರ್ದಡೆ ಎಂತು ಲಿಂಗಾನುಭಾವಿಯೆಂಬೆ ? ಈ ಉಭಯವ ಒಂದಾಗಿ ಅಱಿದಡೆ ನಿಮ್ಮಲ್ಲಿ ತೆಱಹುಂಟೇ ಕೂಡಲಸಂಗಮದೇವಾ?

**ಟೀ.** ನಿರಾಕಾರವಾಗಿರ್ದ ಪರಬ್ರಹ್ಮವ ಸಾಕಾರವ ಮಾಡಿ, ಕರ ಮನ ಭಾವಂಗಳಲ್ಲಿ ಪಿಡಿದು, ಲಿಂಗಾಂಗಸಂಯೋಗಿಯಾಗಿ, ಅಂಗಸುಖಂಗಳನೆಲ್ಲವ ಲಿಂಗಕ್ಕೆ ಅರ್ಪಿಸಬಲ್ಲಾತನೇ ಶರಣನು. ಅಂತು ಲಿಂಗಾಂಗಸಂಯೋಗಿಯಾಗಿ, ಅಂಗ ಲಿಂಗವೆಂಬ ಭಿನ್ನಲಕ್ಷ್ಮವಳಿದು, ಅಂಗವೆಲ್ಲಾ ಮಹಾಘನಲಿಂಗವೆಯಾಗಿ ಲಿಂಗಸುಖವನನುಭವಿಸುತ್ತಿರ್ಪಾತನೇ ಲಿಂಗಾನುಭಾವಿ. ಅಂತು ಲಿಂಗಾಂಗವೆಂಬ ಭೇದವಳಿದು, ಒಂದೆ ಮಹಾಘನಲಿಂಗವೆಯಾಗಿ, ತನ್ನನಱಿದು ಲಿಂಗವೆಯಾಗಿರ್ದ ಶರಣನು ಲಿಂಗಕ್ಕೆ ಭಿನ್ನನಲ್ಲ. ಅಂತಪ್ಪ ಲಿಂಗಾಂಗವ ಸಂಬಂಧವ ಮಾಡಲಱಿಯದೆ ಇರ್ದವರು ಶರಣರಲ್ಲ, ಲಿಂಗಾನುಭಾವಿಗಳಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೧೦

**ವ.** ಅಱಿವಿಲ್ಲದ ಕಾರಣ ಭವಕ್ಕೆ ಬಂದರು. ಅಱಿವಿಲ್ಲದವಂಗೆ ಗುರುವಿಲ್ಲ. ಗುರುವಿಲ್ಲದವಂಗೆ ಆಚಾರವಿಲ್ಲ. ಆಚಾರವಿಲ್ಲದವಂಗೆ ಲಿಂಗವಿಲ್ಲ. ಲಿಂಗವಿಲ್ಲದವಂಗೆ ಜಂಗಮವಿಲ್ಲ. ಜಂಗಮವಿಲ್ಲದವಂಗೆ ಪ್ರಸಾದವಿಲ್ಲ. ಪ್ರಸಾದವಿಲ್ಲದವಂಗೆ ಗಣತ್ವವಿಲ್ಲ. ಅಱಿವು ಸಾಹಿತ್ಯ ಗುರು, ಗುರುಸಾಹಿತ್ಯ ಆಚಾರ, ಆಚಾರಸಾಹಿತ್ಯ ಲಿಂಗ, ಲಿಂಗಸಾಹಿತ್ಯ ಜಂಗಮ, ಜಂಗಮಸಾಹಿತ್ಯ ಪ್ರಸಾದ, ಪ್ರಸಾದಸಾಹಿತ್ಯ

ಗಣತ್ವ. ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ಈ ಒಂದು ಸ್ಥಲವಾದವರಿಗೆಲ್ಲಾ ಭಕ್ತಿ ಉನ್ನತ ಉಂಟು, ಸಕಲ ನಿಃಕಲ ನಿರ್ವಾಣ ಲಿಂಗೈಕ್ಯವಪೂರ್ವ.

ಟೀ. ಈ ವಚನ ಕಾಣಬಂದರ್ಥ. ೧೧

ವ. ಉಂಟೆಂಬ ವಸ್ತು ಇಲ್ಲೆಂಬ ಪ್ರಮಾಣು ಬಹುದು. ಆಚಾರಕ್ಕೆಕ್ಕುವುದಿದು ಭಕ್ತಿಯೇ ? ಉಂಟೆಂಬ ಉದ್ಭಾವಿಯಲ್ಲ, ಇಲ್ಲೆಂಬ ನಿರ್ಭಾವಿಯಲ್ಲ. ಇದು ಕಾರಣ ಕೂಡಲಚೆನ್ನಸಂಗಾ, ಸಜ್ಜನ ಶುದ್ಧ ಶಿವಾಚಾರಿಗಲ್ಲದೆ ಲಿಂಗೈಕ್ಯವಳವಡದು.

ಟೀ. ಅಖಂಡಪರಿಪೂರ್ಣವಾಗಿ ವಸ್ತು ಉಂಟಾಗಿರ್ದು ಆರಿಗೆಯೂ ಕಾಣಿಸಿಕೊಳ್ಳದೆ ಇಲ್ಲವಾಗಿಹುದು. ಅಂತು ಆರಿಗೆಯೂ ಕಾಣಿಸಿಕೊಳ್ಳದೆ ಇರ್ದ ವಸ್ತುವ ಶ್ರುತಪ್ರಮಾಣಂಗಳಿಂದಲಱಿದು, ಭಿನ್ನವಿಟ್ಟು ಭಾವಿಸಿ, ಆಹ್ವಾನಿಸಿ ಲಕ್ಷ್ಯಕ್ಕೆ ತಂದು ಪೂಜಿಸುತ್ತ, ಆ ಲಿಂಗದ ಪೂಜಾಕ್ರೀಯನೆಲ್ಲರಿಗೆಯೂ ತೋಱಿ, ನ್ಯಾಯಾಚಾರಕ್ಕಿಕ್ಕಿ ಭಕ್ತನೆನಿಸಿಕೊಂಬ ಕೀರ್ತಿವಂತಂಗೆಯೂ ಲಿಂಗೈಕ್ಯವಿಲ್ಲೆಂಬುದೀಗ ' ಉಂಟೆಂಬ ವಸ್ತು ಇಲ್ಲೆಂಬ ಪ್ರಮಾಣು ಬಹುದು. ಆಚಾರಕ್ಕೆಕ್ಕುವುದಿದು ಭಕ್ತಿಯೇ ? ' ಎಂಬ ಶಬ್ದಕ್ಕರ್ಥ. ಅಂತು ಲಿಂಗವುಂಟೆಂದು ಭಾವಿಸಿ, ಕರೆದು ಪೂಜಿಸಿ ಕೆಲರಿಗೆ ತೋಱಿ ಬೀಱಿ ಮೆಱೆವವನಲ್ಲ ಸದ್ಭಕ್ತನು. ಮತ್ತೆ ಲಿಂಗವ ನಱಿಯದೆ ಲಿಂಗವಿಲ್ಲೆಂದಿಪ್ಪ ಅಜ್ಞಾನ ಜೀವಭಾವಿಯೂ ಅಲ್ಲ. ಸದ್ಭಕ್ತನ ಪರಿ ಬೇಱೆ. ಅದು ಹೇಂಗೆಂದಡೆ : ತನ್ನಲ್ಲಿ ಲಿಂಗವುಂಟೆಂಬುದ ತನ್ನ ಸಮ್ಯಗ್ಜ್ಞಾನದಿಂದ ಅಱಿದು, ಲಿಂಗಾಂಗಸಂಬಂಧಿಯಾಗಿ ಭಿನ್ನಭಾವವಳಿದು ಲಿಂಗಕ್ರೀಯ ಲಿಂಗ ಮೆಚ್ಚಲಾಚರಿಸುವ ಸಜ್ಜನ ಸದ್ಭಕ್ತಂಗಲ್ಲದೆ ಲಿಂಗೈಕ್ಯವಿಲ್ಲವೆಂಬುದೀಗ ' ಉಂಟೆಂಬ ಉದ್ಭಾವಿಯಲ್ಲ, ಇಲ್ಲೆಂಬ ನಿರ್ಭಾವಿಯಲ್ಲ. ಇದು ಕಾರಣ ಕೂಡಲಚೆನ್ನಸಂಗಾ, ಸಜ್ಜನ ಶುದ್ಧ ಶಿವಾಚಾರಿಗಲ್ಲದೆ ಲಿಂಗೈಕ್ಯವಳವಡದು ' ಎಂಬ ಶಬ್ದಕ್ಕರ್ಥ. ೧೨

ವ. ಗುರುಸ್ಥಲ ನಾಸ್ತಿಯಾದಲ್ಲದೆ ಶಿಷ್ಯನಲ್ಲ. ಲಿಂಗಸ್ಥಲ ನಾಸ್ತಿಯಾದಲ್ಲದೆ ಭಕ್ತನಲ್ಲ. ಜಂಗಮಸ್ಥಲ ನಾಸ್ತಿಯಾದಲ್ಲದೆ ಶರಣನಲ್ಲ. ಇದು ಕಾರಣ ಕೂಡಲಚೆನ್ನಸಂಗಮದೇವ, ಈ ತ್ರಿವಿಧ ನಾಸ್ತಿಯಾಗಿ ಭಕ್ತ ಕೆಟ್ಟು ಭವಿಯಾದಲ್ಲದೆ ಲಿಂಗೈಕ್ಯನಲ್ಲ.

ಟೀ. ತನ್ನ ನಿಜವಪ್ಪ ಪರಬ್ರಹ್ಮವೇ ಗುರು ಲಿಂಗ ಜಂಗಮವಾಯಿತ್ತೆಂದ ಱಿದು, ಆ ಗುರು ಲಿಂಗ ಜಂಗಮ ಸೋಂಕಿದಾಕ್ಷಣವೇ ಅಂಗ ಪ್ರಾಣ ಭಾವಂಗ ಳೆಲ್ಲ ತ್ರಿವಿಧಲಿಂಗವೆಯಾದವಾಗಿ. ಅಂತು ತ್ರಿವಿಧ ಲಿಂಗಸ್ವರೂಪ ತಾನೆಂದು ತ್ರಿವಿಧ ಲಿಂಗವ ಭಿನ್ನವಿಡದೆ ಮಾಡುತ್ತಿಪ್ಪುದೇ ಭಕ್ತಿ. ಅಂತು ತ್ರಿವಿಧ ಲಿಂಗವು ತಾನೆಂದು ಮಾಡುತ್ತಿಪ್ಪ ಭಕ್ತಿಯು ಅಹಂಭಾವದ ತೋಱಿಕೆಯಳಿದು ಮಹಾಘನಲಿಂಗವೆ ಯಾಗಿ ಇರಬಲ್ಲಾತನೇ ಲಿಂಗೈಕ್ಯನೆಂಬುದೀ ವಚನದ ತಾತ್ಪರ್ಯಾರ್ಥ. ೧೩

ವ. ಗುರು ಮುಟ್ಟಿ ಗುರುವಾಯಿತ್ತು. ಲಿಂಗ ಮುಟ್ಟಿ ಲಿಂಗವಾಯಿತ್ತು. ಜಂಗಮ ಮುಟ್ಟಿ ಜಂಗಮವಾಯಿತ್ತು. ಪ್ರಸಾದ ಮುಟ್ಟಿ ಪ್ರಸಾದ ವಾಯಿತ್ತು. ಪ್ರಸಾದ ಪರವಸ್ತು ಪರದಲ್ಲಿಪ್ಪುದಾಗಿ ಇನ್ನು ಪ್ರಸಾದ ಮುಟ್ಟಬೇಕೆಂಬವರ ಮುಖವ ನೋಡಲಾಗದು ಕೂಡಲಚೆನ್ನ ಸಂಗಯ್ಯಾ!

ಟೀ. ಗುರು ಲಿಂಗ ಜಂಗಮ ಪ್ರಸಾದವೆಂಬ ಚತುರ್ವಿಧವೂ ಪರವಸ್ತು ಸ್ವರೂಪ. ಅಂತು ಪರವಸ್ತುಸ್ವರೂಪಮಪ್ಪ ಗುರು ಲಿಂಗ ಜಂಗಮ ಪ್ರಸಾದವ ಸೋಂಕಿದ ಭಕ್ತನು, ಆ ಗುರು ಲಿಂಗ ಜಂಗಮ ಪ್ರಸಾದಸ್ವರೂಪವಪ್ಪ ಪರವಸ್ತು ವೆಯಾಗಿಪ್ಪನು. ಅಂತಪ್ಪ ಗುರು ಲಿಂಗ ಜಂಗಮದ ಪ್ರಸಾದ ಸೋಂಕಿ ಪರವಸ್ತು ತಾನಾದೆನೆಂಬ ವಿಶ್ವಾಸವಿಲ್ಲದೆ ಬೇಱೆ ಪರವಸ್ತುವ ಭಾವಿಸಿ ಕೂಡಿಹೆನೆಂಬ ಅಜ್ಞಾನಿಯ ಮುಖವ ನೋಡಲಾಗದೆಂಬುದೀ ವಚನದ ತಾತ್ಪರ್ಯಾರ್ಥ. ೧೪

ವ. ದೇವಪ್ರಭೆಯೊಳಗಿಹರಲ್ಲದೆ ದೇವಗಹನವ ಮಾಡಬಾರದಾರಿಗೆಯೂ. ದೇವ ಸಕೀಲದೊಳಗೆ ಬೆಳೆಯಬಹುದಲ್ಲದೆ ದೇವ ನಷ್ಟದೊಳಗೆ ಉತ್ಪತ್ಯವಾಗಬಾರದಾರಿಗೆಯೂ. ಉತ್ಪತ್ತಿಯ ಗತಿಯನಾರೋಗಣೆಯ ಮಾಡಬಾರದಾರಿಗೆಯೂ. ಸಚರಾಚರವೆಲ್ಲವೂ ಈ ಪರಿಯಲಿ ಸಂಭ್ರಮಿಸುತ್ತಿರ್ದರಲ್ಲಾ! ಇದು ಕಾರಣ ಕೂಡಲಚೆನ್ನಸಂಗಯ್ಯನಲ್ಲಿ ಇದ್ದ ಭಾವವಳಿದಡೆ ಲಿಂಗೈಕ್ಯವು.

ಟೀ. ಅಖಂಡ ಚಿತ್‌ಪ್ರಭಾಲಿಂಗದೊಳಗೆ ಸಕಲ ಜೀವರೂ ಇಪ್ಪರು. ಅಂತಿರ್ದ ಆ ಚಿದ್‌ಘನಲಿಂಗವು ತಮ್ಮ ನಿಜವೆಂದಱಿದು ತಮ್ಮನಾ ಚಿದ್‌ಘನ ಲಿಂಗವ ಮಾಡಬಾರದಾರಿಗೆಯೂ ಎಂಬುದೀಗ 'ದೇವಪ್ರಭೆಯೊಳಗಿಹರಲ್ಲದೆ ದೇವ ಗಹನವ ಮಾಡಬಾರದಾರಿಗೆಯೂ' ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾ

ಘನಲಿಂಗವ ಸಕೀಲ ಮಾತ್ರವಾಗಿ ಶ್ರುತಜ್ಞಾನಂಗಳಿಂದಲರಿದು, ಧ್ಯಾನಿಸಿ, ಪೂಜಿಸಿ ಫಲಪದಂಗಳ ಸುಖದ ಬೆಳಸ ಬೆಳೆಯಬಹುದೆಂಬುದೀಗ 'ದೇವ ಸಕೀಲದೊಳಗೆ ಬೆಳೆಯಬಹುದಲ್ಲದೆ' ಎಂಬ ಶಬ್ದಕ್ಕರ್ಥ. ಅಂತಪ್ಪ ಚಿತ್ಪ್ರಭಾಲಿಂಗವು ತನ್ನ ಆತ್ಮಾಂತರ್ಗತವಾಗಿದ್ದುದನರಿದು, ಗುರುಮುಖದಿಂದ ಉತ್ಪತ್ಯವ ಮಾಡಿ, ಇಷ್ಟ ಪ್ರಾಣ ಭಾವಲಿಂಗವಾಗಿ ಮೂರ್ತಿಗೊಳಿಸಿ, ಸರ್ವಾಂಗವನರ್ಪಿಸಿ ಅಂಗವೆಲ್ಲಾ ಲಿಂಗವೆಯಾಗಿಪ್ಪ ಲಿಂಗದುತ್ಪತ್ಯವಾರಿಗೆಯೂ ಆಗದೆಂಬುದೀಗ 'ದೇವ ನಷ್ಟದೊಳಗೆ ಉತ್ಪತ್ಯವಾಗಬಾರದಾರಿಗೆಯೂ' ಎಂಬ ಶಬ್ದಕ್ಕರ್ಥ. ಅಂತು ಲಿಂಗೋದ್ಭವವಾಗಿ ಸರ್ವಾಂಗವನೊಳಕೊಂಡು ಅಂಗವೆಲ್ಲಾ ಲಿಂಗವೆಯಾದುದೀಗ ಮುಕ್ತಿಗತಿ. ಅಂತು ಮುಕ್ತಿಗತಿಸ್ವರೂಪನಪ್ಪ ಲಿಂಗವೆ ತಾನೆಯಾಗಿಪ್ಪುದನರಿದು, ತನ್ನ ಲಿಂಗಲಕ್ಷಣವನೆ ಗ್ರಹಿಸಿ, ಶಿವೋಹಂ ಭಾವವಳವಟ್ಟು ಶಿವಸುಖವನನುಭವಿಸುತ್ತಿಪ್ಪುದಾರಿಗೆಯೂ ಬಾರದೆಂಬುದೀಗ 'ಉತ್ಪತ್ತಿಯ ಗತಿಯನಾರೋಗಣೆಯ ಮಾಡಬಾರದಾರಿಗೆಯೂ' ಎಂಬ ಶಬ್ದಕ್ಕರ್ಥ. ಅಂತು ಶಿವ ತಾನೆಂದು ಶಿವೋಹಂ ಭಾವ ಘಟಿಸಿಪ್ಪಲ್ಲಿ, ಆ ಶಿವೋಹಂ ಎಂಬ ಭಾವವಡಗಿ ನಿಂದು ಲಿಂಗವೆಯಾಗಿರ್ದಲ್ಲದೆ ಲಿಂಗೈಕ್ಯನಲ್ಲವೆಂಬುದೀಗ 'ಇದ್ದ ಭಾವವಳಿದಡೆ ಲಿಂಗೈಕ್ಯವು' ಎಂಬ ಶಬ್ದಕ್ಕರ್ಥ. ಅಂತಪ್ಪ ಲಿಂಗೈಕ್ಯವನರಿಯದೆ ದೇಹೇಂದ್ರಿಯ ವಿಷಯಸುಖಭೋಗದಲ್ಲಿ ಸಂಭ್ರಮಿಸುತ್ತಿರ್ದರು ಸಕಲಜೀವರೆಂಬುದೀಗ 'ಸಚರಾಚರವೆಲ್ಲವೂ ಈ ಪರಿಯಲಿ ಸಂಭ್ರಮಿಸುತ್ತಿರ್ದರಲ್ಲಾ' ಎಂಬ ಶಬ್ದಕ್ಕರ್ಥ. ೧೫

**ವ.** ಹುತ್ತಕ್ಕೆ ಏಸು ಬಾಯಾದರೇನು? ಸರ್ಪನಿಪ್ಪುದೊಂದೇ ಸ್ಥಾನ.
ಭಾವ ಭಾವಿಸಿ ಭ್ರಮೆಯಳಿದು ನೋಡಾ! ಆ ಭಾವ ಭಾವಿಸಲು
ನಿರ್ಭಾವ ಕೂಡಲಸಂಗಮದೇವ!

**ಟೀ.** ಹುತ್ತಕ್ಕೆ ಏಸು ಬಾಯಾದರೇನು? ಸರ್ಪ ನೆಲೆಗೊಂಡಿಪ್ಪುದು ಒಂದೇ ಸ್ಥಾನ. ಅಂತು ಒಂದೇ ಸ್ಥಾನದಲ್ಲಿ ಸರ್ಪ ನೆಲೆಗೊಂಡಿಹ ಕಾರಣ ಹಾವಿನ ಹುತ್ತವಾಯಿತ್ತು. ಹೇಂಗೆ ಹಾಂಗೆ ದೇಹೇಂದ್ರಿಯ ಕರಣಂಗಳು ಹಲವಕ್ಕೆ ಮುಖ್ಯಕರಣವೀಗ ಭಾವ. ಅಂತಪ್ಪ ಭಾವದಲ್ಲಿ ಲಿಂಗವ ನೆಲೆಗೊಳಿಸಿ ದೇಹಭ್ರಾಂತಿಯ ನಳಿದು ಲಿಂಗವನೆ ಭಾವಿಸಿ, ಹಿಂಗದೆ ನೋಡುತ್ತಿರ್ಪ ಭಾವವೆಲ್ಲಾ ಲಿಂಗವೆಯಾಗಿಪ್ಪುದು. ಅಂತು ಭಾವಿಸುವ ಶರಣನೆಲ್ಲಾ ಲಿಂಗೈಕ್ಯವಾದ ಬಳಿಕ ಲಿಂಗದೇಹವೆನಿಸಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೧೬

**ವ.** ಕೂರ್ಮನ ಗತಿಯ ಕುವಾಡಯೋಗವು ಕುಹಕವಾದಿಗಳಿಗಳವಡದು.
ಉತ್ತಮಾಂಗವನು ಉರಸ್ಥಲದಲ್ಲಿ ಬೈಚಿಡುವ ಬಯಕೆಯನಾರ್ಕೆದು

ನೋಡಾ ! ಆರ್ಯೆಯಲಚಲ ನೀನೇ ಚಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗವು ಎಂದೂ ಎನಲಿಲ್ಲಾ !

ಟೀ. ಕೂರ್ಮನು ತನ್ನ ಜ್ಞಾನೇಂದ್ರಿಯವುಪ್ಪ ಶಿರಸ್ಸನು ತನ್ನ ಹೃದಯ ಸ್ಥಾನದಲ್ಲಿ ಅಡಗಿಸಿ, ತನ್ನ ಭಿನ್ನವಿಟ್ಟು ಕಾಬ ಭಾವವನಳಿದಿಪ್ಪ ಕೂರ್ಮನ ಯೋಗದ ಆಸುವಿನಂತೆ ಶಿವನು ತಾನೆಂದಱಿದು, ಶಿವೋಹಂ ಎನುತ್ತಿಪ್ಪ ಜ್ಞಾನದ ತೋಱಿಕೆಯ ತನ್ನ ನಿಜಾಂತರಂಗದಲ್ಲಿ ಅಡಗಿಸಿದ ಶರಣನೆ ಅಚಲಾನಂದವಪ್ಪ ಮಹಾಘನಲಿಂಗವೆಯಾಪ್ಪನು. ಅಂತಪ್ಪ ಲಿಂಗೈಕ್ಯದ ವರ್ಮವು ವಾಗ್ವಾದಿಗಳಿ ಗಸಾಧ್ಯವೆಂಬುದೀ ವಚನದ ತಾತ್ಪರ್ಯಾರ್ಥ. ೧೭

ವ. ಆಱಿವಱಿತು ಬೆಱಗು ಹತ್ತಿಂತ್ತೆಂಬ ಜ್ಞಾನವಿದೇನೋ ? ನಾಹಂ ಎಂಬಲ್ಲಿ ತಾನಾರೋ ? ಕೋಹಂ ಎಂಬಲ್ಲಿ ಮುನ್ನಾರೋ ? ಪರಬ್ರಹ್ಮ ಸೋಹಂ ಎಂಬಲ್ಲಿ ಮುನ್ನ ತಾನೇನಾಗಿರ್ದನೋ ? ಚಿದಹಂ ಎಂಬ ಹಮ್ಮಿನ ಮಾಲೆಯಿದೇನು ಹೇಳಾ ! ‘ ನಿಃಶ್ಶಬ್ದಂ ಬ್ರಹ್ಮ ಮುಚ್ಯತೇ ’ ಎಂಬ ಶಬ್ದವಿಡಿದು ಬಳಲುವ ಕಾರಣವಿದೇನೋ ಗುಹೇಶ್ವರಾ ?

ಟೀ. ಲಿಂಗವೆ ತನ್ನ ನಿಜವೆಂದಱಿದು ಅಱಿವಡಗಿ ಬೆರಸಿದ ಲಿಂಗೈಕ್ಯನು ತನ್ನ ಲಿಂಗಪಥವ ವಿವರಿಸಿ ನುಡಿದರೆ ಅದೇ ಭಿನ್ನವೆಂದಱಿದು, ನಾಹಂ ಎನ್ನದೆ, ಕೋಹಂ ಎನ್ನದೆ, ಚಿದಹಂ ಎನ್ನದೆ ಇರಬೇಕು. ‘ ನಿಃಶ್ಶಬ್ದಂ ಬ್ರಹ್ಮಮುಚ್ಯತೇ ’ ಎಂಬ ಶಬ್ದವ ನುಡಿಯದೆ ಇರಬೇಕೆಂಬುದೀ ವಚನದ ತಾತ್ಪರ್ಯಾರ್ಥ. ೧೮

ವ. ಇಷ್ಟಲಿಂಗ ಸಂಬಂಧವಾದ ಬಳಿಕ ಕಾಯಗುಣ ಕೆಟ್ಟು ಲಿಂಗಕಾಯ ವಾಯಿತ್ತು. ಪ್ರಾಣಲಿಂಗ ಸಂಬಂಧವಾದ ಬಳಿಕ ಕರಣ ಕೆಟ್ಟು ಲಿಂಗಕಿರಣಂಗಳಾದುವು. ಭಾವಲಿಂಗ ಸಂಬಂಧವಾದ ಬಳಿಕ ಇಂದ್ರಿಯಗುಣ ಕೆಟ್ಟು ಲಿಂಗೇಂದ್ರಿಯಂಗಳಾದುವು. ಇದು ಕಾರಣ ಶರಣಂಗೆ ಬೇಱೆ ಅಂಗವಿಲ್ಲ. ಬೇಱೆ ಅಂಗವಿಲ್ಲವಾಗಿ ಅರ್ಪಿತ ಅನರ್ಪಿತವೆಂಬ ಉಭಯ ಶಂಕೆ ಹಿಂಗಿತ್ತು ಕೂಡಲಚೆನ್ನಸಂಗಯ್ಯಾ, ನಿನ್ನೊಳಡಗಿದ ನಿಜೈಕ್ಯಂಗೆ.

ಟೀ. ಈ ವಚನ ಕಾಣಬಂದರ್ಥ. ೧೯

ವ. ಕಾಯಗುಣ ಕೆಟ್ಟ ಮತ್ತೆ ಅರ್ಚನೆ ಹಿಂಗಿತ್ತು. ಪ್ರಾಣಗುಣ ಕೆಟ್ಟ ಮತ್ತೆ ಅರ್ಪಿತ ಹಿಂಗಿತ್ತು. ಭಾವಗುಣ ಕೆಟ್ಟ ಮತ್ತೆ ಉಭಯಜಂಜಡ ಹಿಂಗಿತ್ತು. ಇಂತಾದ ಕಾರಣ ನಮ್ಮ ಗೊಹೇಶ್ವರನ ಶರಣನು ಲಿಂಗ ಭೋಗೋಪಭೋಗವೆಂಬ ಖಂಡಿತಬುದ್ಧಿಯ ಮೀಱಿ ಅಖಂಡಾದ್ವೈತಬ್ರಹ್ಮದಲ್ಲಿ ತಲ್ಲೀಯವಾದನು.

ಟೀ. ಇಷ್ಟ ಪ್ರಾಣ ಭಾವವೆಂಬ ಲಿಂಗತ್ರಯಂಗಳು ಅಂಗತ್ರಯಂಗಳಿಗೆ ಸಾಹಿತ್ಯವಾದ ಶರಣನ ಕಾಯ ಪ್ರಾಣ ಭಾವವೆಲ್ಲಾ ಲಿಂಗವೆಯಾಗಿ ಭಿನ್ನವಳಿದು ಅಭಿನ್ನಜ್ಞಾನಿಯಾದ ಬಳಿಕ ಲಿಂಗವ ಭಿನ್ನವಿಟ್ಟು ಭಾವಿಸಿ, ಪೂಜಿಸಿ, ಅರ್ಪಿಸಿ, ಭೋಗಿಸುವ ಗುಣ ಶರಣಂಗಿಲ್ಲ. ಶರಣನೆಲ್ಲಾ ಅಖಂಡಿತ ಲಿಂಗೈಕ್ಯನಾಗಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೨೦

ವ. ತನು ಸೋಂಕಿ ತನು ನಷ್ಟವಾಯಿತ್ತು. ಮನ ಸೋಂಕಿ ಮನ ನಷ್ಟವಾಯಿತ್ತು. ಧನ ಸೋಂಕಿ ಧನ ನಷ್ಟವಾಯಿತ್ತು. ಭಾವ ಸೋಂಕಿ ಭಾವ ನಷ್ಟವಾಯಿತ್ತು. ಅಂತಾದ ಕಾರಣ ಕೂಡಲಚೆನ್ನಸಂಗಯ್ಯಾ, ಶರಣ ಸಂದು ನಷ್ಟವಾಗಿ ನಿರ್ಮ್ಮೋಳೀಕಾರ್ಥವಾಯಿತ್ತು.

ಟೀ. ಶರಣನ ತನು ಮನ ಧನ ಭಾವಂಗಳೆಲ್ಲವೂ ಲಿಂಗ ಸೋಂಕಿ ಲಿಂಗವೆಯಾಗಿ, ಶರಣ ಲಿಂಗವೆಂಬ ಭೇದವಿಲ್ಲದೆ ಶರಣ ಲಿಂಗೈಕ್ಯನಾದನೆಂಬುದೀ ವಚನದ ತಾತ್ಪರ್ಯಾರ್ಥ. ೨೧

ವ. ಕರಸ್ಥಲದ ಲಿಂಗವ ಕಾಯಕ್ಕೆ ವೇಧಿಸಿದಲ್ಲಿ ಕಾಯ ಲಿಂಗವಾಯಿತ್ತು. ಅಂತಾದ ಮಹಾಘನಲಿಂಗವೇ ಪ್ರಾಣಕ್ಕೆ ವೇಧಿಸಿದಲ್ಲಿ ಪ್ರಾಣ ಲಿಂಗವಾಯಿತ್ತು. ಅಂತಾದ ಮಹಾಘನಲಿಂಗವೇ ಭಾವಕ್ಕೆ ವೇಧಿಸಿದಲ್ಲಿ ಭಾವ ಲಿಂಗವಾಯಿತ್ತು. ಅಂತಾದ ಮಹಾಘನಲಿಂಗವೇ ಜ್ಞಾನಕ್ಕೆ ವೇಧಿಸಿದಲ್ಲಿ ಜ್ಞಾನ ಲಿಂಗವಾಯಿತ್ತು. ಅಂತಾದ ಕಾರಣ ನಮ್ಮ ಗೊಹೇಶ್ವರನ ಶರಣಂಗೆ ಅಱಿವಱತು, ಕುಱುಹು ನಿಷ್ಪತಿಯಾಗಿ ತಾನೆಂಬ ಭಾವವು ಉರಿಯುಂಡ ಕರ್ಪುರದಂತಾಯಿತ್ತು !

ಟೀ. ಈ ವಚನ ಕಾಣಬಂದರ್ಥ. ೨೨

ವ. ರೂಪು ಶೂನ್ಯವಾಗಬೇಕು. ಶೂನ್ಯವಂಕುರಿತವಾಗಬೇಕು. ಅಂಕುರಿತಕ್ಕೆ ಸಂದು ತೆಱಹಿಲ್ಲದಿರಬೇಕು ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು.

ಟೀ. ರೂಪೆಂದಡೆ ಆತ್ಮಾಂಗವು. ಶೂನ್ಯವೆಂದಡೆ ನಿರಾಕಾರವಪ್ಪ ಮಹಾ ಘನಲಿಂಗವು. ಅಂತಾ ತನ್ನ ಆತ್ಮಾಂಗವೆಲ್ಲಾ ಮಹಾಘನಲಿಂಗವೆಂದಱಿದು ತನ್ನ ನೆಲ್ಲಾ ಲಿಂಗವೆಯಾಗಿ ಕಾಣುತ್ತಿರಬೇಕೆಂಬುದೀಗ 'ರೂಪು ಶೂನ್ಯವಾಗಬೇಕು' ಎಂಬ ಶಬ್ದಕ್ಕರ್ಥ. ಅಂತು ಅಂತರಂಗದ ಅಱಿವಿಂದ ತನ್ನನೆಲ್ಲಾ ಮಹಾಘನ ಲಿಂಗವೆಯಾಗಿ ಕಂಡು, ಭಾವಿಸುತ್ತಿಪ್ಪ ಆ ಸದ್ಭಾವದಿಂದವೇ ಆ ಮಹಾಘನಲಿಂಗವ ಸಾಕಾರವ ಮಾಡಿ, ಕರಸ್ಥಲಕ್ಕೆ ತಂದು, ಅಂತರಂಗ ಬಹಿರಂಗವೆಲ್ಲಾ ಲಿಂಗವೆಯಾಗಿ ನೋಡುತ್ತ, ಕ್ರೀಯನಾಚರಿಸಬೇಕೆಂಬುದೀಗ 'ಶೂನ್ಯವಂಕುರಿತವಾಗಬೇಕು' ಎಂಬ ಶಬ್ದಕ್ಕರ್ಥ. ಅಂತು ಸಾಕಾರವಾಗಿ ಬೆಳಗುವ ಇಷ್ಟಲಿಂಗವೇ ತಾನಾಗಿ ಕಂಡು, ಭಿನ್ನಭಾವವಿಲ್ಲದೆ ಲಿಂಗವೆಯಾಗಿರ್ದಡೆ ಅದೇ ಲಿಂಗೈಕ್ಯವೆಂಬುದೀಗ 'ಅಂಕುರಿತಕ್ಕೆ ಸಂದು ತೆಱಹಿಲ್ಲದಿರಬೇಕು ಕೂಡಲಚೆನ್ನಸಂಗಯ್ಯನಲ್ಲಿ ಲಿಂಗೈಕ್ಯವು' ಎಂಬ ಶಬ್ದಕ್ಕರ್ಥ. ೨೩

ವ. ಎನ್ನ ಕಷ್ಟಕುಲದ ಸೂತಕ ನಿಮ್ಮ ಹಸ್ತ ಮುಟ್ಟಿದಲ್ಲಿ ಹೋಯಿತ್ತು! ತಟ್ಟಿದ ಮುಟ್ಟಿದ ಸುಖಂಗಳನೆಲ್ಲವ ಲಿಂಗಮುಖಕ್ಕೆ ಅರ್ಪಿಸಿದೆನಾಗಿ ಎನ್ನ ಪಂಚೇಂದ್ರಿಯಂಗಳು ಬಯಲಾದುವು! ಎನ್ನಂತರಂಗದಲ್ಲಿ ಜ್ಞಾನಜ್ಯೋತಿಯೆಡೆಗೊಂಡುದಾಗಿ ಒಳಗೂ ಬಯಲಾಯಿತ್ತು! ಸಂಸಾರಸಂಗದ ಅವಸ್ಥೆಯ ಮೀಱಿದ ಕ್ರೀಯಲ್ಲಿ ತರಹರವಾಯಿತ್ತಾಗಿ ಬಹಿರಂಗ ಬಯಲಾಯಿತ್ತು! ಅಭಿನವ ಮಲ್ಲಿಕಾರ್ಜುನಾ, ನಿಮ್ಮ ಮುಟ್ಟಿದ ಕಾರಣ ನಾನೂ ಬಯಲಾದೆ!

ಟೀ. ಬಯಲೆಂದರೆ ಲಿಂಗ. ಅಂತು ಜ್ಞಾನಕ್ರೀಯಿಂದ ಅಂತರಂಗ ಬಹಿರಂಗವೆಲ್ಲಾ ಲಿಂಗವೆಯಾಗಿ ಶರಣ ಲಿಂಗೈಕ್ಯವಾದನೆಂಬುದೀ ವಚನದ ತಾತ್ಪರ್ಯಾರ್ಥ. ೨೪

ವ. ಕೈ ತುಂಬಿ ಹಿಡಿದು, ಕಂಗಳು ತುಂಬಿ ನೋಡಿ, ಮನ ತುಂಬಿ ಹಾರೈಸಿ, ಎಡೆಬಿಡವಿಲ್ಲದೆ ಅಱಿದ ಮತ್ತೆ ಕುಱುಹು ಕೈಗಾದಿಯಾಯಿತ್ತು. ಕಂಗಳಿಗೀಡಾಯಿತ್ತು. ಆತ್ಮನ ಉಭಯವಳಿಯಿತ್ತು. ನಿಂದಲ್ಲಿಯೇ ಲೀಯವಾಗಿ ಮನ ಸಂದಿತ್ತು ಮಾರೇಶ್ವರಾ!

ಟೀ. ಶ್ರೀಗುರುಕೃಪೆಯಿಂದ ತನ್ನ ನಿಜವಪ್ಪ ಪರಬ್ರಹ್ಮವೇ ಸಾಕಾರವಾಗಿ ಕರಸ್ಥಲಕ್ಕೆ ಬಂದು, ಕಣ್ಮನಕ್ಕೆ ಪ್ರತ್ಯಕ್ಷವಾದುದನಱಿದು, ಕರಸ್ಥಲದಲ್ಲಿ ಪಿಡಿದು, ಕಣ್ಣು ತುಂಬಿ ನೋಡಿ, ಮನದಲ್ಲಿ ಹಾರಯಿಸಿ, ಆತ್ಮಂಗೆ ಇಷ್ಟಲಿಂಗಕಳಾಸಂಬಂಧ

ಯೋಗವು ಕ್ರೀಯಿಂದ ಘಟಿಸಲು ಆತ್ಮಾಂಗವೆಲ್ಲವೂ ಲಿಂಗದೊಳೈಕ್ಯವಾಗಿ, ಮನದ ತೋಱಿಕೆಯಳಿದು ಶರಣನಾ ಲಿಂಗವೆಯಾದನೆಂಬುದೀ ವಚನದ ತಾತ್ಪರ್ಯಾರ್ಥ. ೨೫

ವ. ಆಚಾರವೆಂಬ ಬಿಲ್ಲಿಗೆ ವಿಚಾರವೆಂಬ ನಾರಿ, ಸಮತೆಯೆಂಬ ತಿರುವ ಮೆಟ್ಟಿ ಜೀವಡೆಗ್ಗೆದು, ಶಿಷ್ಯನೆಂಬ ಅಂಬ ತೊಡಚಿ, ಗುರುವೆಂಬ ವ್ಯಾಧನು ಲಿಂಗವೆಂಬ ಬಯಲಗುಱಿಯನೆಚ್ಚಡೆ ಗಱಿದೋಱದಂತೆ ಮುಳುಗಿ ಅಡಗಿತ್ತು ! ಆ ಗುಱಿಯನು ಬಾಣವನು ಅಱಸಲುಂಟೇ ಕೂಡಲಚೆನ್ನಸಂಗಾ, ನಿಮ್ಮಲ್ಲಿ ?

ಟೀ. ಶ್ರೀಗುರುಕೃಪೆಯಿಂದ ತನುವಿಗೆ ಆಚಾರವನಳವಡಿಸಿ, ಮನಕ್ಕೆ ಜ್ಞಾನವನಳವಡಿಸಿ, ದುರ್ಬುದ್ಧಿಯಿಲ್ಲದಂತೆ ಶಾಂತಿಯನಳವಡಿಸಿ, ಶಿಷ್ಯನೆಂಬ ಆತ್ಮಾಂಗವನು ಮಹಾಘನಲಿಂಗದೊಳಗೆ ಪ್ರಯೋಗಿಸಲು ತನು ಕರಣೇಂದ್ರಿಯಂಗಳು ಸಹವಾಗಿ ಆತ್ಮನು ಲಿಂಗದೊಳೈಕ್ಯವನೆಯ್ದಿ, ಅಂಗಲಿಂಗವೆಂಬ ಭೇದ ದೋಱದೆ ಮಹಾಘನಲಿಂಗವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೨೬

ವ. ಎಮ್ಮವರಿಗೆ ಸಾವಿಲ್ಲ. ಎಮ್ಮವರು ಸಾವನಱಿಯರು. ಸಾವೆಂಬುದು ಸ್ವಯವಲ್ಲ. ಲಿಂಗದಲ್ಲಿ ಉದಯವಾದ ಲಿಂಗೈಕ್ಯಂಗೆ ಆ ಲಿಂಗದಲ್ಲಿಯಲ್ಲದೆ ಬೇಱೆ ಮತ್ತೊಂದೆಡೆಯುಂಟೇ ಕೂಡಲಸಂಗಮದೇವಾ ?

ಟೀ. ಮಹಾಘನಲಿಂಗದ ಚಿತ್ಕಲಾಂಶವೇ ಶರಣರೂಪಾಗಿ ಲಿಂಗಾಂಗ ಸಂಯೋಗಿಯಾಗಿ ಚರಿಸಿ, ಲಿಂಗದೊಳೈಕ್ಯವನೆಯ್ದಿ ನಿತ್ಯರಾಗಿಪ್ಪರಾಗಿ ಶರಣರು ಸಾವು ಹುಟ್ಟನಱಿಯರು ಭವಜೀವಿಗಳಂತೆ ಎಂಬುದೀ ವಚನದ ತಾತ್ಪರ್ಯಾರ್ಥ. ೨೭

ವ. ಉರಿಯೊಳಗಣ ಕರ್ಪೂರಕ್ಕೆ ಕರಿಯುಂಟೇ ಅಯ್ಯಾ ? ಬಯಲ ಮರೀಚಿಯ ಜಲಕ್ಕೆ ಕೆಸಱುಂಟೇ ಅಯ್ಯಾ ? ವಾಯುವನಪ್ಪಿದ ಪರಿಮಳಕ್ಕೆ ನಿರ್ಮಾಲ್ಯ ಉಂಟೇ ಅಯ್ಯಾ ? ನೀವು ನೆಱೆಯೊಲಿದ ಬಳಿಕ ಎನಗೆ ಭವವುಂಟೇ ? ಕೂಡಲಸಂಗಮದೇವಾ, ನಿಮ್ಮ ಚರಣ ಕಮಲದೊಳಗೆ ಇಂಬಿಟ್ಟುಕೊಳ್ಳಯ್ಯಾ !

ಟೀ. ಲಿಂಗವು ನೆಱೆಯೊಲಿದು ಅಂಗವನಪ್ಪಿ ಲಿಂಗಾಂಗಸಂಯೋಗಿಯಾದ ಶರಣಂಗೆ ಜನನ ಮರಣವಿಲ್ಲವಾಗಿ ಆ ಶರಣ ತಾನು ಲಿಂಗವೆಂಬ ಅಱಿವಿನ

ತೋಱಿಕೆಯ ಭಿನ್ನವಳಿದು ಲಿಂಗೈಕ್ಯನಪ್ಪ ಕಾಲದಲ್ಲಿ ಶರಣನು ಸಮರಸಭಕ್ತಿಯಿಂದ ಬೇಡಿದ ಬೇಡಿಕೆಯೆಂಬುದೀ ವಚನದ ತಾತ್ಪರ್ಯಾರ್ಥ. ೨೮

ವ. ಬೆಳಗು ಕತ್ತಲೆಯ ನುಂಗಿ, ಒಳಗೆ ನಾನೊಬ್ಬನೆಯಾದೆ ! ಕಾಂಬ ಕತ್ತಲೆಯ ಕಳೆದುಳಿದು ನಿಮಗಾನು ಗುಱಿಯಾದೆ ಗೊಹೇಶ್ವರಾ !

ಟೀ. ಬೆಳಗೆಂಬ ಜ್ಞಾನಪ್ರಕಾಶವಾಗಲು ಅಜ್ಞಾನವಳಿದು ಅಂತರಂಗದಲ್ಲಿ ತನ್ನ ನೋಡಿ ತಾನೆ ಶಿವನೆಂದು ಕಂಡು, ಶಿವೋಹಂ ಎನುತಿಪ್ಪ ಚಿದಹಂಭಾವವೇ ಮಱವೆಯೆಂದಱಿದು, ಆ ಚಿದಹಂ ಭಾವವನಳಿದು ನಿರಹಂಭಾವವಪ್ಪ ಭಕ್ತಿಯೋಗದಿಂದ ಶರಣ ಲಿಂಗದಲ್ಲೈಕ್ಯವಾದನೆಂಬುದೀ ವಚನದ ತಾತ್ಪರ್ಯಾರ್ಥ. ೨೯

ವ. ಅಱುಹಿನೊಳಗಣ ಕುಱುಹು ಮಱಹಿಂಗೆ ಬೀಜ. ಕುಱುಹಿನ ಮಱಹ ಅಱಿವು ನುಂಗಿ, ಘನಕ್ಕೆ ಘನ ವೇದ್ಯವಾದ ಬಳಿಕ ನಿತ್ಯಪರಿಪೂರ್ಣ ತಾನೆ ಕಲಿದೇವರ ದೇವನು, ವಾಙ್ಮನಕ್ಕಗೋಚರನು !

ಟೀ. ಮಹಾಘನಲಿಂಗವ ಭಿನ್ನಲಕ್ಷವ ಮಾಡಿ ಅಱಿದಡೆ ಅದೀಗ ಅಱುಹಿನೊಳಗಣ ಕುಱುಹು. ಅಂತು ಭಿನ್ನಲಕ್ಷವ ಮಾಡಿ ಲಿಂಗವನಱಿವ ಭಿನ್ನಜ್ಞಾನವೆಲ್ಲಾ ಮಱವೆ. ಅಂತಪ್ಪ ಮಱವೆಯನಳಿದು ಅಭಿನ್ನಜ್ಞಾನದಿಂದ ಮಹಾಘನಲಿಂಗವನವಗ್ರಹಿಸಿ ಘನಲಿಂಗೈಕ್ಯನಾಗಿಪ್ಪ ಶರಣನೇ ಉಪಮಿಸಬಾರದ ನಿತ್ಯಪರಿಪೂರ್ಣವಸ್ತುವೆಂಬುದೀ ವಚನದ ತಾತ್ಪರ್ಯಾರ್ಥ. ೩೦

ವ. ನೋಡಿಹೆನೆಂದರೆ ದೃಷ್ಟಿ ಕೊಳ್ಳದು. ಪೂಜಿಸಿಹೆನೆಂದರೆ ಪೂಜೆಗೊಳ್ಳದಿನ್ನೆಂತೋ ? ಅಱಿದೆನೆಂದರೆ ಏನೂ ಇಲ್ಲ. ಘನ ದೃಷ್ಟಿ ಕೂಡಲಚೆನ್ನಸಂಗಯ್ಯ ಉಭಯಗೆಟ್ಟ ಲಿಂಗೈಕ್ಯನು !

ಟೀ. ಅಖಂಡ ಪರಿಪೂರ್ಣವಸ್ತುವ ಭಿನ್ನವಿಟ್ಟು ನೋಡಿಹೆನೆಂಬ ಭಿನ್ನಜ್ಞಾನದೃಕ್ಕಿಗೆ ಗೋಚರವಾಗದು. ಭಿನ್ನವಿಟ್ಟು ಪೂಜಿಸುವ ಪೂಜೆಯ ಕೈಕೊಳದು. ಭಿನ್ನವಿಟ್ಟು ಅಱಿದೆನೆಂಬ ಅಱಿವಿಂಗೆ ತನ್ನನೇನನೂ ತೋಱದು. ಅಂತಪ್ಪ ಮಹಾಘನವಸ್ತುವ ಭಿನ್ನವಿಡದೆ ಅಭಿನ್ನಜ್ಞಾನದೃಷ್ಟಿಯಿಂದ ಕಂಡು, ಅಂಗ ಲಿಂಗವೆಂಬ ದ್ವೈತವಳಿದು ಲಿಂಗೈಕ್ಯವಾದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೩೧

ಲಿಂಗವಿಡಿದು ಲಿಂಗಮಾಹೇಶ್ವರನೆನಿಸಿಕೊಂಬೆ. ಲಿಂಗವಿಡಿದು ಲಿಂಗ ಪ್ರಾಣಿಯೆನಿಸಿಕೊಂಬೆ. ಲಿಂಗವಿಡಿದು ಲಿಂಗವೆನಿಸಿಕೊಂಬೆ. ಅಱಿವಱಿತು ಕ್ರಿಯಾನುಭಾವವಿಡಿದು ಮೀಱಿ ಕೂಡಲಚೆನ್ನಸಂಗ ತಾನಾದ!

ಟೀ. ಲಿಂಗಸಂಬಂಧಿಯಾದ ಶರಣನ ಅಂಗ ಪ್ರಾಣ ಭಾವಂಗಳೆಲ್ಲಾ ಲಿಂಗವೆಯಾಗಿ, ಲಿಂಗವು ತಾನೆಂಬ ಅಹಂಭಾವದಱಿವನಡಗಿಸಿ ಅಭಿನ್ನವಾಗಿರ್ದುದೇ ಭಕ್ತಿ. ಅಂತಪ್ಪ ಭಕ್ತಿಯೀಗ ಮೀಱಿದ ಕ್ರೀಯೆನಿಸುವುದು. ಅಂತು ಮೀಱಿದ ಅಭಿನ್ನಕ್ರೀಯಿಂದ ಲಿಂಗವು ತಾನಾದನೆಂಬುದೀ ವಚನದ ತಾತ್ಪರ್ಯಾರ್ಥ. ೩೩

ವ. ಮುಟ್ಟಿತ್ತು ಕೆಟ್ಟಿತ್ತೆಂದರೆ ಇನ್ನಱಸುವ ಠಾವಾವುದಯ್ಯಾ? ತನುವ ಮಱೆದಡೆ ನೆನಹಿನೊಳಗದೇನೋ? ಹಾವು ಪರೆಗಳೆದರೆ ವಿಷ ನಾಶವಪ್ಪುದೇ? ಶರಣನು ಕಾಯವೆಂಬ ಕಂಥೆಯ ಕಳೆದರೆ ಗತ ಮೃತವಹನೇ? ಅಱಿವು ಲಿಂಗದಲ್ಲಿ ಪ್ರತಿಷ್ಠೆಯಾಗಿ ನಿರ್ಲೇಪನಾಗಿ ಮಹಾಲಿಂಗ ಕಲ್ಲೇಶ್ವರನಲ್ಲಿ ಲೀಯವಾದ ಶರಣ.

ಟೀ. ಈ ವಚನ ಕಾಣಬಂದರ್ಥ. ೩೪

ವ. ಸತ್ತ ಹೆಣನ ಹೊತ್ತವರೆಲ್ಲಾ ಅಚ್ಚುಗಂಗೊಂಡರಲ್ಲಾ! ಹೊತ್ತವರೆಲ್ಲಾ ಸತ್ತುದ ಕಂಡು ಮೂರ್ಛಿತವಾದರಲ್ಲಾ! ಸುತ್ತ ಬಂದಿರ್ದವರೆಲ್ಲಾ ಹೋಗಿ ಅದ ಮುಟ್ಟಲಮ್ಮರು ನೋಡಾ! ಮುಟ್ಟಿದರೆ ಮುನ್ನ ಮೂವರ ಕೆಡಿಸಿತ್ತು! ಸತ್ತ ಪರಿಯ ನೋಡಾ! ಅದು ಕಾಷ್ಠನಲ್ಲಿ ಉರಿಯದು, ಕಿಚ್ಚಿನಲ್ಲಿ ಬೇಯದು, ಸತ್ತ ಪರಿಯ ನೋಡಾ! ಕೂಡಲಚೆನ್ನಸಂಗಮದೇವನೆಂಬ ಚಿತ್ತ ಸತ್ತ ಪರಿಯ ನೋಡಾ!!

ಟೀ. ಸತ್ತ ಹೆಣನೆಂದರೆ ಪರಬ್ರಹ್ಮವೇ ಇಷ್ಟಲಿಂಗಸ್ವರೂಪಾದುದೀಗ. ಅಂತಪ್ಪ ಇಷ್ಟಲಿಂಗವ ಚಿತ್ಸ್ವರೂಪನಾದ ಶರಣ ತನ್ನ ಅಂಗತ್ರಯಂಗಳಲ್ಲಿ ಧರಿಸಲು ತನು ಮನ ಪ್ರಾಣಂಗಳೆಲ್ಲವೂ ಲಿಂಗ ಸೋಂಕಿ ಅಂಗಭಾವವಳಿದು, ಸಂಸಾರ ಪ್ರಪಂಚಿಗೆ ಬೇಸತ್ತು ವಿರತಿಯನೆಯ್ದಿದನೆಂಬುದೀಗ 'ಸತ್ತ ಹೆಣನ ಹೊತ್ತವರೆಲ್ಲಾ ಅಚ್ಚುಗಂಗೊಂಡರಲ್ಲಾ' ಎಂಬ ಶಬ್ದಕ್ಕರ್ಥ. ಅಂತು ಲಿಂಗ ಸೋಂಕಿದ ಅಂಗ ಭಾವವಳಿದು, ತನು ಮನ ಪ್ರಾಣಂಗಳೆಲ್ಲವೂ ಲಿಂಗವೆಯಾಗಿ, ತಮ್ಮ ಕಂಡು ಭಿನ್ನ

ಭಾವವ ಮಱೆದರೆಂಬುದೀಗ 'ಹೊತ್ತವರೆಲ್ಲಾ ಸತ್ತುದ ಕಂಡು ಮೂರ್ಛಿತವ್ರೋದ ರಲ್ಲಾ' ಎಂಬ ಶಬ್ದಕ್ಕರ್ಥ. ಅಂತು ತಾನೆಲ್ಲಾ ಲಿಂಗವೆಯಾದ ಶರಣನ ಬಾಹ್ಯದ ವಿಷಯೇಂದ್ರಿಯಂಗಳು ಸೋಂಕಲಂಜಿರ್ದವೆಂಬುದೀಗ 'ಸುತ್ತಿ ಬಂದಿರ್ದವರೆಲ್ಲಾ ಹೋಗಿ ಅದ ಮುಟ್ಟಲಮ್ಮರು ನೋಡಾ' ಎಂಬ ಶಬ್ದಕ್ಕರ್ಥ. ಅಂತು ಲಿಂಗವ ನಱೆದು ಮುಂಚಿ ಸೋಂಕಿದ ತನು ಮನ ಪ್ರಾಣಂಗಳಳಿದು ಲಿಂಗವೆಯಾಗಿರ್ದ ಶರಣ. ಅಂತು ಲಿಂಗದ ಪರಿ ಆಶ್ಚರ್ಯವೆಂಬುದೀಗ 'ಮುಟ್ಟಿದರೆ ಮುನ್ನ ಮೂವರ ಕೆಡಿಸಿತ್ತು! ಸತ್ತ ಪರಿಯ ನೋಡಾ' ಎಂಬ ಶಬ್ದಕ್ಕರ್ಥ. ಅಂತು ಲಿಂಗ ವಾಗಿ ಶರಣ ಮರಳಿ ಭವಾರಣ್ಯದೊಳಗೆ ಹುಟ್ಟಿ ದೇಹವಿಡಿದು ಪ್ರಭಾವಿಸುವನಲ್ಲ. ತಾಪತ್ರಯಾಗ್ನಿಗಳಲ್ಲಿ ಬೇವವನಲ್ಲ. ಅಂತು ಲಿಂಗದ ಪರಿ ಆಶ್ಚರ್ಯವೆಂಬುದೀಗ 'ಕಾಡಿನಲ್ಲಿ ಉರಿಯದು, ಕಿಚ್ಚಿನಲ್ಲಿ ಬೇಯದು, ಸತ್ತ ಪರಿಯ ನೋಡಾ' ಎಂಬ ಶಬ್ದಕ್ಕರ್ಥ. ಅಂತು ಶರಣನೆಲ್ಲಾ ಲಿಂಗವೆಂದಱೆದಱೆವೆಲ್ಲಾ ಲಿಂಗವಾದ ಪರಿ ಆಶ್ಚರ್ಯವೆಂಬುದೀಗ 'ಕೂಡಲಚೆನ್ನಸಂಗನೆಂಬ ಚಿತ್ತ ಸತ್ತ ಪರಿಯ ನೋಡಾ' ಎಂಬ ಶಬ್ದಕ್ಕರ್ಥ. ೩೪

ವ. ಗ್ರಾಮದ ಮಧ್ಯದ ಧವಳಾರದೊಳಗೊಂದು ಸತ್ತ ಹೆಣನಿರುತ್ತಿರಲು, ಆ ಗ್ರಾಮವ ಸುತ್ತಿ ಬರುತ್ತಿರ್ದ ರಕ್ಕಸಿ ಸತ್ತುದ ಕಂಡಳಲ್ಲಾ! ಗ್ರಾಮ ನನ್ನ ಕಾಹು. ಗ್ರಾಮದಲ್ಲಿ ನಾನಿಪ್ಪೆ. ಇದಾರೋ ಕೊಂದ ವರು? ನಾನು ಕೊಲ್ಲದ ಮುನ್ನ ಅದು ತಾನೆ ಸತ್ತಡೆ ಎನಗಿದು ಸೋಜಿಗವು! ಸತ್ತುದು ಗ್ರಾಮವನೆ ಕೆಡಿಸಿತ್ತು. ಇಲ್ಲಿರ್ದಡೆ ಎನ್ನನೂ ಕೆಡಿಸಿದುಪಟಳವ ನೋಡಾ! ಎಂದು ಗ್ರಾಮವ ಬಿಟ್ಟು ಹೋಯಿ ತ್ತಯ್ಯಾ ಕೂಡಲಚೆನ್ನಸಂಗಮದೇವಾ?

ಟೀ. ಗ್ರಾಮವೆಂದರೆ ದೇಹ. ಧವಳಾರವೆಂದರೆ ಜ್ಞಾನಪ್ರಕಾಶ. ಸತ್ತ ಹೆಣನೆಂದರೆ ಮಹಾಲಿಂಗಸ್ವರೂಪು. ಅಂತು ಶರಣನ ದೇಹದ ಅಂತರಂಗದಲ್ಲಿ ಜ್ಞಾನ ಪ್ರಕಾಶವಾಗಲು, ತನ್ನ ನಿಜವೇ ಮಹಾಘನಲಿಂಗವೆಂದಱಿದು, ಲಿಂಗಾಂಗ ಸಂಬಂಧವ ಘಟಿಸಿ, ಅಂಗಭಾವವಳಿದು ಲಿಂಗವೆಯಾದ ಶರಣನ ಅಂಗದಲ್ಲಿ ಮಾಯೆಯಿರಲಂಜಿ ಬಿಟ್ಟುಹೋಯಿತ್ತೆಂಬುದೀ ವಚನದ ತಾತ್ಪರ್ಯಾರ್ಥ. ೩೫

ವ. ಜ್ಞಾತೃವೇ ¹ಅಱುಹಿಸುವುದು¹. ಜ್ಞಾನವೇ ಅಱಿವುದು. ಜ್ಞೇಯವೇ ನಿಶ್ಚಯಿಸುವುದು. ಈ ಜ್ಞಾತ ಜ್ಞಾನ ಜ್ಞೇಯವೆಂಬ ತ್ರಿವಿಧಸಾಧನ

೧ ಅಱಿಸುವುದು (ಹು.)

ದಿಂದ ಲಿಂಗವನಱಿಸಿ, ಲಿಂಗವನಱಿದು, ಲಿಂಗವ ಬೆರಸಿ ಲಿಂಗವಾದ ಮತ್ತೆ ಜ್ಞಾತೃ ಜ್ಞಾನ ಜ್ಞೇಯವೆಂಬ ತ್ರಿವಿಧ ಭ್ರಾಂತಿಸೂತಕ ಹೋಯಿತ್ತು, ನಿಜವಾಯಿತ್ತು ಕಾಣಾ ಗೊಹೇಶ್ವರಾ !

ಟೀ. ಈ ವಚನ ಕಾಣಬಂದರ್ಥ. ೩೬

ವ. ನೆನೆಯಲಱಿಯೆ, ನಿರ್ಧರಿಸಲಱಿಯೆ, ಮನವಿಲ್ಲಾಗಿ. ಭಾವಿಸಲಱಿಯೆ, ಬೆರಸಲಱಿಯೆ, ಭಾವ ನಿರ್ಭಾವವಾಯಿತ್ತಾಗಿ. ಧ್ಯಾನ ಮೌನವನಱಿಯೆ, ಧ್ಯಾನಾತೀತ ತಾನೆಯಾಯಿತ್ತಾಗಿ. ಜ್ಞಾತೃ ಜ್ಞಾನ ಜ್ಞೇಯಂಗಳೆಲ್ಲವ ಮೀಱಿ ಅಭಿನವ ಮಲ್ಲಿಕಾರ್ಜುನನಲ್ಲಿ ಪರಮಸುಖಿಯಾಗಿರ್ದೆ.

ಟೀ. ಜ್ಞಾತೃವೇ ಆತ್ಮನು. ಜ್ಞಾನವೇ ಅಱಿವು. ಜ್ಞೇಯವೇ ಅಱುಹಿಸಿಕೊಂಬ ಲಿಂಗ. ಅಂತು ಆತ್ಮನು ಜ್ಞಾನದಿಂದ ತನ್ನ ನಿಜವೇ ಲಿಂಗವೆಂದಱಿದು ಲಿಂಗಾಂಗಸಂಯೋಗಿಯಾದಲ್ಲಿ ಅಂಗ ಮನ ಭಾವ ಜ್ಞಾನಂಗಳೆಲ್ಲವೂ ಲಿಂಗದೊಳೈಕ್ಯವಾಗಿ ಲಿಂಗವಾದ ಶರಣನ ಸುಖಕ್ಕೆ ಪ್ರತಿಯಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೩೭

ವ. ಅಱಿಯಲಿಲ್ಲದ ಅಱಿವು, ಮಱೆಯಲಿಲ್ಲದ ಮಱಹು. ನೋಡಲಿಲ್ಲದ ನೋಟ, ಕೂಡಲಿಲ್ಲದ ಕೂಟ. ಬೆರಸಲಿಲ್ಲದ ಬೆಱಗು ನಿಂದುದು ಕೂಡಲಚೆನ್ನಸಂಗಾ ಲಿಂಗೈಕ್ಯಂಗೆ

ಟೀ. ಮಹಾಘನಲಿಂಗವ ತನ್ನಿಂದ ಭಿನ್ನವಿಟ್ಟು ಅಱಿಯದೆ ಮಱೆಯದೆ, ನೋಡದೆ ಕೂಡದೆ, ಬೆರೆಯದೆ ಬೆಱಗುವಡದೆ ಮಹಾಲಿಂಗವು ತಾನೆಂದೇ ಅಭಿನ್ನ ಜ್ಞಾನದಿಂದ ಅಱಿದು, ದೇಹಭಾವವ ಮಱೆದು, ಲಿಂಗವ ನೋಡಿ ಕೂಡಿ ಬೆರೆದು ಬೇಱಿಲ್ಲದೆ ಬೆಱಗುವಟ್ಟು ನಿಂದ ನಿಜಲಿಂಗ ಲಿಂಗೈಕ್ಯನ ನಿಲವೆಂಬುದೀ ವಚನದ ತಾತ್ಪರ್ಯಾರ್ಥ. ೩೮

ವ. ನೋಡಿ ನೋಟವ ಮಱೆದು, ಕೂಡಿ ಕೂಟವ ಮಱೆದು, ಬಯಲ ಸಮರಸಕ್ಕೆ ಮರುಳಾಯಿತ್ತಲ್ಲಾ ! ಜೀವ ಪ್ರಾಣನ ಭೇದವಳಿದು ನಿಜವದಕ್ಕಾಯಿತ್ತಲ್ಲಾ ! ಅನ್ಯ ಚಿಹ್ನವಳಿದು ತನ್ನ ತಾ ಮಱೆಯಿತ್ತು. ಕೂಡಲಚೆನ್ನಸಂಗಾ ನೀನೆಂದೇ ನಿಂದಿತ್ತಲ್ಲಾ !

ಟೀ. ಬಯಲೆಂದಡೆ ಮಹಾಘನಲಿಂಗ. ಅಂತು ಮಹಾಘನಲಿಂಗವೆಂಬ ಪತಿಗೆ ಶರಣನೆಂಬ ಸತಿ ಅತಿಭಕ್ತಿರತಿಯಿಂದ ಮರುಳಾಗಿ ಅಭಿನ್ನಜ್ಞಾನದಿಂದ ಲಿಂಗದೊಡಗೂಡಿ ಬೆರೆದು, ಜೀವಭಾವವಳಿದು ಮಹಾಘನಲಿಂಗವೇ ತಾನಾದ ಶರಣನು ಲಿಂಗವ ನೋಡಿ ಕೂಡಿಹೆನೆಂಬ ಅವಸ್ಥೆಗಳಿಲ್ಲವ ಮಱೆದು ಲಿಂಗವೆಯಾಗಿರ್ದನೆಂಬುದೀ ವಚನದ ತಾತ್ಪರ್ಯಾರ್ಥ. ೩೯

ವ. ದೃಷ್ಟ ನಷ್ಟವಾದುದಕ್ಕೇನು ದೃಷ್ಟ ? ಭಾವ ನಷ್ಟವಾದುದೇ ದೃಷ್ಟ. ಭಾವ ನಷ್ಟವಾದುದಕ್ಕೇನು ದೃಷ್ಟ? ಜ್ಞಾನ ನಷ್ಟವಾದುದೇ ದೃಷ್ಟ. ಜ್ಞಾನ ನಷ್ಟವಾದುದಕ್ಕೇನು ದೃಷ್ಟ ? ಸ್ವಯ ಪರವೆಂದೆನ್ನದಿಹುದೇ ದೃಷ್ಟ. ಸ್ವಯ ಪರವೆಂದೆನ್ನದಿಹುದಕ್ಕೇನು ದೃಷ್ಟ ? ಕೂಡಲಚೆನ್ನಸಂಗಾ ಎಂದು ಎನ್ನದಿಹುದೇ ದೃಷ್ಟ.

ಟೀ. ಮಹಾಘನಲಿಂಗವ ತನ್ನಿಂದನ್ಯವಿಟ್ಟು ಲಕ್ಷ್ಯಕ್ಕೆ ತಂದು ಭಾವಿಸುವುದೀಗ ದೃಷ್ಟವೆನಿಸುವುದು. ಅಂತಪ್ಪ ಭಿನ್ನಲಕ್ಷ್ಯವಳಿದು ಮಹಾಘನಲಿಂಗವು ತಾನೆಂದಱಿದು ಅಭಿನ್ನನಾಗಿಹುದೇ ದೃಷ್ಟ. ಅಭಿನ್ನನಾಗಿಹುದಕ್ಕೇನು ದೃಷ್ಟವೆಂದರೆ ಭಿನ್ನಭಾವವಳಿದಿಹುದೇ ದೃಷ್ಟ. ಭಿನ್ನಭಾವವಳಿದುದಕ್ಕೇನು ದೃಷ್ಟವೆಂದರೆ ಭಿನ್ನಜ್ಞಾನವಳಿದಿಹುದೇ ದೃಷ್ಟ. ಭಿನ್ನಜ್ಞಾನವಳಿದುದಕ್ಕೇನು ದೃಷ್ಟವೆಂದರೆ ನಾನು ನೀನೆನ್ನದಿಹುದೇ ದೃಷ್ಟ. ನಾನು ನೀನೆಂಬುದಕ್ಕೇನು ದೃಷ್ಟವೆಂದರೆ ತಾನು ಮಹಾಘನಲಿಂಗವೆಂಬ ಮಹದಹಂಕಾರವಳಿದು ಲಿಂಗವು ತಾನೆಯಾಗಿಹುದೆ ದೃಷ್ಟವೆಂಬುದೀ ವಚನದ ತಾತ್ಪರ್ಯಾರ್ಥ. ೪೦

ವ. ಅಱುಹಿಂದಲಾದ ಮಱಹಿನ ಶಬ್ದವನಱಿಯಲಾಗದು. ಅಱಿದಡೆ ಅದಕ್ಕೆ ಅದೇ ಭಂಗ. ಅಱಿವಱತು, ಮಱಹು ನಷ್ಟವಾಗಿ, ಜ್ಞಾನ ಬೆಂದಲ್ಲಿ ನಿರ್ಣಯವಿಲ್ಲಯ್ಯಾ ! ಜ್ಞಾನದೊಳಗಣ ಬುದ್ಧಿಯ ಭಸ್ಮವಾಗಿ ಧರಿಸಿದಲ್ಲಿ ಕೂಡಲಚೆನ್ನಸಂಗಯ್ಯ ಸರ್ವನಿವಾಸಿಯಾದ.

ಟೀ. ತಾನು ಲಿಂಗವೆಂದಱಿಯದೆ ಲಿಂಗವ ತನ್ನಿಂದ ಭಿನ್ನವಿಟ್ಟು ಅಱಿದು ನುಡಿವ ಅಱಿವೆಲ್ಲಾ ಮಱಹು. ಅಂತು ಮಱಹನುಳ್ಳ ಭಿನ್ನದಱಿವನಱಿದಡೆ ಅದೇ ಮರಳಿ ಭವಕ್ಕೆ ಸಾಧನವೆಂಬುದೀಗ ‘ ಅಱುಹಿಂದಲಾದ ಮಱಹಿನ ಶಬ್ದವ ಮಱೆಯಲಾಗದು. ಅಱಿದಡೆ ಅದಕ್ಕೆ ಅದೇ ಭಂಗ ’ ವೆಂಬ ಶಬ್ದಕ್ಕರ್ಥ. ಅಂತು ಭವಕ್ಕೆ ಕಾರಣವಾದ ಅಱಿವು ಮಱವೆಯನುಳಿದು ಅಭಿನ್ನಜ್ಞಾನಿಯಾಗಿ

ತಾನೆಲ್ಲಾ ಲಿಂಗನೆಂದಱಿದು ಭಿನ್ನಜ್ಞಾನವಳಿದಲ್ಲಿ ಲಿಂಗವು ತನ್ನಿಂದನ್ಯವಾಗಿಲ್ಲ ವೆಂಬುದೀಗ 'ಅಱಿವಱಿತು, ಮಱಹು ನಷ್ಟವಾಗಿ, ಜ್ಞಾನ ಬೆಂದಲ್ಲಿ ನಿರ್ಣಯ ವಿಲ್ಲಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಅಭಿನ್ನಜ್ಞಾನದಿಂದ ಶಿವನು ತಾನೆಂದಱಿದು, ಶಿವನು ತಾನೆಂಬ ಅಹಂಭಾವದಱಿವಿನ ತೋಱಿಕೆಯು ತನ್ನ ಮಹಾ ಜ್ಞಾನದಿಂದವೆ ಅಳಿದು, ಅಖಂಡ ಜ್ಞಾನಪ್ರಕಾಶವೆಯಾಗಿಪ್ಪ ಶರಣನಲ್ಲಿ ಮಹಾ ಘನಲಿಂಗವು ಐಕ್ಯವಾಗಿರ್ದನೆಂಬುದೀಗ 'ಜ್ಞಾನದೊಳಗಣ ಬುದ್ಧಿಯು ಭಸ್ಮವಾಗಿ ಧರಿಸಿದಲ್ಲಿ ಕೂಡಲಚೆನ್ನಸಂಗಯ್ಯ ಸರ್ವನಿವಾಸಿಯಾದ' ಎಂಬ ಶಬ್ದಕ್ಕರ್ಥ. ೪೧

**ವ.** ನೀರೊಳಗೆ ಕಿಚ್ಚಿರ್ದು ನೆಳಲ ಸುಟ್ಟಿತ್ತು ! ನೆಳಲ ಸುಟ್ಟ ಬೂದಿಯ ನಿಟ್ಟುಕೊಂಡಡೆ ಭೂಮಿ ಸತ್ತಿತ್ತು ! ಆಕಾಶ ಹೊತ್ತಿತ್ತು ! ದೇವನ ದೇವತ್ವ ಕೆಟ್ಟಿತ್ತು ! ದೇವಿಯು ಒಕತನ ಮುಱಿಯಿತ್ತು ! ಕೇಳಬಾರದ ಠಾವಿನಲ್ಲಿ ಕಾಣಬಾರದ ಲಿಂಗ ಮೂರ್ತಿಗೊಂಡರೆ ನೋಡಬಾರದ ಪೂಜೆಯಾಯಿತ್ತು! ಚಿಕ್ಕಯ್ಯಪ್ರಿಯಸಿದ್ಧಲಿಂಗಾ, ಪ್ರಭುದೇವರ ನಿಲವ ಕಂಡು ಇಲ್ಲ ಇಲ್ಲವೆನುತಿರ್ದೆನು !

**ಟೀ.** ನೀರೆಂದರೆ ಮನಸ್ಸು. ಅಂತಪ್ಪ ಮನೋಮಧ್ಯದಲ್ಲಿ ಜ್ಞಾನಾಗ್ನಿ ಇದ್ದು ಪ್ರಭಾವಿಸಿ ಅಜ್ಞಾನವೆಂಬ ನೆಳಲ ದಹಿಸಿತ್ತೆಂಬುದೀಗ 'ನೀರೊಳಗೆ ಕಿಚ್ಚಿರ್ದು ನೆಳಲ ಸುಟ್ಟಿತ್ತು' ಎಂಬ ಶಬ್ದಕ್ಕರ್ಥ. ಅಂತು ಅಜ್ಞಾನವಳಿದು ಮನ ವೆಲ್ಲಾ ಜ್ಞಾನಪ್ರಕಾಶವಾಯಿತ್ತು. ಅಂತಾದ ಜ್ಞಾನಪ್ರಕಾಶವನೆ ಅಂತರಂಗದಲ್ಲಿ ಆವರಣವ ಮಾಡಿಕೊಂಡ ಶರಣನೆಂಬುದೀಗ 'ನೆಳಲ ಸುಟ್ಟ ಬೂದಿಯನಿಟ್ಟು ಕೊಂಡ' ನೆಂಬ ಶಬ್ದಕ್ಕರ್ಥ. ಅಂತು ಅಂತರಂಗದೊಳಗೆ ಜ್ಞಾನಪ್ರಕಾಶಮಯ ವಾದ ಶರಣಂಗೆ ಭೂಮಿಯೆಂಬ ದೇಹಕ್ಕೆ ಆಚಾರವಳವಟ್ಟು ದೇಹವೆಲ್ಲಾ ಸತ್ತು ವೆನಿಸಿಕೊಂಬ ಲಿಂಗವಾಯಿತ್ತೆಂಬುದೀಗ 'ಭೂಮಿ ಸತ್ತಿತ್ತು' ಎಂಬ ಶಬ್ದಕ್ಕರ್ಥ. ಅಂತು ಜ್ಞಾನಕ್ರೀಯಿಂದ ಸರ್ವಾಂಗ ಲಿಂಗವಾಗಲು ಆಕಾಶವೆಂಬ ಆತ್ಮನಿಗೆ ಶಿವ ತತ್ತ್ವವಾಗಿ ಶಿವೋಹಂಭಾವವ ಹೊತ್ತುಕೊಂಡಿತ್ತೆಂಬುದೀಗ 'ಆಕಾಶ ಹೊತ್ತಿತ್ತೆ' ೦ಬ ಶಬ್ದಕ್ಕರ್ಥ. ಅಂತು ಶಿವೋಹಂ ಎಂಬ ಶರಣಂಗೆ ಶಿವತತ್ತ್ವ ಬೇಱಿಲ್ಲದೆ ಹೋಯಿತ್ತೆಂಬುದೀಗ 'ದೇವನ ದೇವತ್ವ ಕೆಟ್ಟಿತ್ತು' ಎಂಬ ಶಬ್ದ ಕ್ಕರ್ಥ. ಅಂತು ಶರಣನೆಲ್ಲಾ ಶಿವನಾದಲ್ಲಿ ಶಿವತ್ವವನಱಿವುತ್ತಿರ್ದಲ್ಲಿ ಜ್ಞಾನಶಕ್ತಿಯ ಮನವಾರ್ತೆಯೂ ಬಿಟ್ಟುಹೋಯಿತ್ತೆಂಬುದೀಗ 'ದೇವಿಯ ಒಕತನ ಮುಱಿ ಯಿತ್ತು' ಎಂಬ ಶಬ್ದಕ್ಕರ್ಥ. ಅಂತು ಲಿಂಗವ ಭಿನ್ನವಿಟ್ಟು ಕೇಳಿಹೆನು, ಅಱಿದಿಹೆ ನೆಂಬ ಭಿನ್ನವಿವೇಕವಿಲ್ಲದೆ ಅಭಿನ್ನಜ್ಞಾನಸ್ವರೂಪನಾಗಿರ್ದ ಶರಣನೀಗ 'ಕೇಳ

ಬಾರದ ಠಾವು ' ಯೆಂಬ ಶಬ್ದಕ್ಕರ್ಥ. ಅಂತು ಅಭಿನ್ನಜ್ಞಾನಿಯಾದ ಶರಣನಲ್ಲಿ ಭಿನ್ನವಿಟ್ಟು ಕಾಣಿಸಿಕೊಳ್ಳದೆಯಿಪ್ಪ ಮಹಾಘನಲಿಂಗವು ಭಿನ್ನವಿಲ್ಲದೆ ಇರ್ದನೆಂಬುದೀಗ ' ಕೇಳಬಾರದ ಠಾವಿನಲ್ಲಿ ನೋಡಬಾರದ ಲಿಂಗ ಮೂರ್ತಿಗೊಂಡ ' ನೆಂಬ ಶಬ್ದಕ್ಕರ್ಥ. ಅಂತು ಅಭಿನ್ನಜ್ಞಾನಿಯಾದ ಶರಣನೆಲ್ಲಾ ಮಹಾಘನಲಿಂಗವೆಯಾಗಿರ್ದ ಬಳಿಕ ಲಿಂಗವ ಭಿನ್ನವಿಟ್ಟು ನೋಡಲಿಲ್ಲದೆ ನಿರ್ಭಾವಿಯಾಗಿ ನಿಂದ ನಿಲವೀಗ ಲಿಂಗದ ಪರಿಪೂರ್ಣಪೂಜೆಯಾದ ಕಾರಣ ' ನೋಡಬಾರದ ಪೂಜೆಯಾಯಿತ್ತು ' ಎಂಬ ಶಬ್ದಕ್ಕರ್ಥ. ಅಂತಾದ ಶರಣಂಗೆ ಲಿಂಗವು ಭಿನ್ನವಿಲ್ಲವಾಗಿ ಇಲ್ಲ, ಇಲ್ಲವೆಂಬುದೀಗ ' ಪ್ರಭುದೇವರ ನಿಲವ ಕಂಡು ಇಲ್ಲ ಇಲ್ಲವೆನುತ್ತಿರ್ದ ' ನೆಂಬ ಶಬ್ದಕ್ಕರ್ಥ. ೪೨

ವ. ವಾಙ್ಮನಕ್ಕೆ ಬಾರದ ಅಪ್ರತಿಮಲಿಂಗವ ಕೂಡಿ ಅಚಲಾನಂದದೊಳಿಪ್ಪ ಪರಮ ನಿರ್ಲೇಪಿಗೆ ಭಾವವಿಲ್ಲ. ಭಾವವಿಲ್ಲವಾಗಿ ಜ್ಞಾನವಿಲ್ಲ ಜ್ಞಾನವಿಲ್ಲವಾಗಿ ಚಿಕ್ಕಯ್ಯಪ್ರಿಯ ಸಿದ್ಧಲಿಂಗಯ್ಯಿಲ್ಲ ಇಲ್ಲ, ಸಿಲ್ಲುವಾಣು !

ಟೀ. ನುಡಿಗೆಡೆಯಿಲ್ಲದ ಪರಿಪೂರ್ಣಲಿಂಗವೆ ತನ್ನ ನಿಜವೆಂದಱಿದು ಲಿಂಗಾಂಗಸಂಯೋಗಿಯಾದ ಶರಣನ ಅಂಗವೆಲ್ಲಾ ಲಿಂಗವೆಯಾಗಿ, ಲಿಂಗಾನಂದ ಸುಖದೊಳಗೆ ಇಪ್ಪ ಶರಣಂಗೆ ಪರವಾಗಿ ಲಿಂಗವಿಲ್ಲದ ಕಾರಣ, ಲಿಂಗವ ಭಿನ್ನವಿಟ್ಟು ಭಾವಿಸಿಹೆನು, ಕೂಡಿಹೆನು, ಕಂಡೆನೆಂಬ ಭಾವ ಜ್ಞಾನಂಗಳ ಅವಸ್ಥೆಗಳೇನೂ ಇಲ್ಲದೆ ಮಹಾಘನಲಿಂಗವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೪೩

ವ. ನೆನಹಿನ ಸುಖವ ನೋಟ ನುಂಗಿತ್ತು ! ನೋಟದ ಸುಖವ ಕೂಟ ನುಂಗಿತ್ತು ! ಕೂಟದ ಸುಖವ ಆಲಿಂಗನ ನುಂಗಿತ್ತು ! ಆಲಿಂಗನದ ಸುಖವ ಸಂಗ ನುಂಗಿತ್ತು ! ಸಂಗದ ಸುಖವ ಸಮರತಿ ನುಂಗಿತ್ತು ! ಸಮರತಿಯ ಸುಖವ ಪರವಶ ನುಂಗಿತ್ತು ! ಪರವಶದ ಸುಖವ ಕೂಡಲಚೆನ್ನಸಂಗಯ್ಯ ತಾನೆ ಬಲ್ಲ !!

ಟೀ. ಈ ವಚನ ಕಾಣಬಂದರ್ಥ. ೪೪

ವ. ಉರಿಯ ಸೀರೆಯನುಟ್ಟು, ಕಡೆಸೆಱಗ ಬಿಡಬೀಸಿ, ಮಡದಿ ತನ್ನ ಕೆಳದಿಯರನೊಡಗೊಂಡು ಆಡುತ್ತಿರೆ, ಪತಿ ಬಂದು ಮುಡಿಯನೆ

ಹಿಡಿದು, ಉಟ್ಟ ಸೀರೆಯನುಗಿಯೆ, ಮಡದಿ ಒಡಗೂಡುತ್ತಿರೆ, ಸಮರಸದಲ್ಲಿ ಸತಿಯಳಿದು ಪತಿಯಾಗಿ, ಪತಿಯಳಿದು ನಿಷ್ಪತಿಯಾಗಿ, ಸತಿ ಪತಿ ನಿಷ್ಪತಿಯೆಂಬ ತ್ರಿವಿಧವೂ ಏಕಾರ್ಥವಾದ ಕೂಡಲಚೆನ್ನ ಸಂಗಯ್ಯನಲ್ಲಿ ಬಸವಣ್ಣನ ಪಾದಕ್ಕೆ ನಮೋ ನಮೋ ಎನುತಿರ್ದೆನು !

೬೪. ಉರಿಯೆಂದರೆ ಜ್ಞಾನಸ್ವರೂಪು. ಅಂತಪ್ಪ ಜ್ಞಾನವನೆ ಸರ್ವಾಂಗದಲ್ಲಿ ಅಂಬರವಾಗಿ ಹೊದೆದುಕೊಂಡನು ಶರಣನು ಎಂಬುದೀಗ 'ಉರಿಯ ಸೀರೆಯನುಟ್ಟು' ಎಂಬ ಶಬ್ದಕ್ಕರ್ಥ. ಅಂತು ಸಮ್ಯಗ್‌ಜ್ಞಾನಸ್ವರೂಪನಾದ ಶರಣನು ತನ್ನ ನಿಜವೇ ಮಹಾಘನಲಿಂಗವೆಂದು ತಾನರಿದು, ಭಿನ್ನಭಾವವ ನೇತಿ ಮಾಡಿದನೆಂಬುದೀಗ 'ಕಡೆಸೆಜಗ ಬಿಡ ಬೀಸಿ' ಯೆಂಬ ಶಬ್ದಕ್ಕರ್ಥ. ಅಂತು ಚಿತ್‌ಸ್ವರೂಪನಾದ ಶರಣಸತಿ ಲಿಂಗವೆಂಬ ಪತಿಯ ನೆರೆವ ಭಕ್ತಿರತಿಯ ಕಾಲದಲ್ಲಿ ಆ ಶರಣನಂಗದಲ್ಲಿರ್ದ ಷಡ್ವಿಧ ಶಕ್ತಿಯರೆಲ್ಲರೂ ಷಡ್ವಿಧ ಭಕ್ತ್ಯಂಗನೆಯರಾಗಿ, ಶರಣಸತಿಯ ಕೂಡಿ, ಶಿವಕ್ರೀಯನಾಚರಿಸುತ್ತಿರ್ದರೆಂಬುದೀಗ 'ಮಡದಿ ತನ್ನ ಕೆಳದಿಯರನೊಡಗೊಂಡು ಆಡುತ್ತಿರೆ' ಎಂಬ ಶಬ್ದಕ್ಕರ್ಥ. ಅಂತು ಷಡ್ವಿಧ ಭಕ್ತಿಯಿಂದಲಾಚರಿಸುತ್ತಿಪ್ಪ ಶರಣ ತನ್ನ ನಿಜವೇ ಮಹಾಘನಲಿಂಗವೆಂದರಿದು ಕಾಣುತ್ತಿಪ್ಪ ಅಂತರಂಗದರಿವೀಗ ಪಶ್ಚಿಮದ ಮುಖ. ಅಂತು ಪಶ್ಚಿಮದ ಮುಖವೆಂಬುದೀಗ 'ಮುಡಿ' ಯೆಂಬ ಶಬ್ದಕ್ಕರ್ಥ. ಅಂತು ಪಶ್ಚಿಮಮುಖವಾದ ಅಂತರಂಗದ ಅಭಿನ್ನದರಿವುವಿಡಿದು ಲಿಂಗ ಭಿನ್ನವಿಲ್ಲದಿರ್ದುದನರಿದಲ್ಲಿ ಶರಣನು ತುರಿಯಾವಸ್ಥೆಯ ಕಳೆದು ಲಿಂಗದಲ್ಲಿ ಅಭಿನ್ನನಾಗಿರ್ದ ಶರಣನೆಂಬುದೀಗ 'ಪತಿ ಬಂದು ಮುಡಿಯನೆ ಹಿಡಿದು, ಉಟ್ಟ ಸೀರೆಯನುಗಿಯೆ, ಮಡದಿ ಒಡಗೂಡುತ್ತಿರೆ' ಎಂಬ ಶಬ್ದಕ್ಕರ್ಥ. ಅಂತು ಅಭಿನ್ನಜ್ಞಾನದಿಂದ ಲಿಂಗದಲ್ಲಿ ಸಮರಸಭಕ್ತಿಯ ಕೂಟವಾಗಲು ಶರಣ ತಾನೆ ಲಿಂಗವಾದನೆಂಬುದೀಗ 'ಸಮರಸದಲ್ಲಿ ಸತಿಯಳಿದು ಪತಿಯಾಗಿ' ಎಂಬ ಶಬ್ದಕ್ಕರ್ಥ. ಅಂತು ಲಿಂಗವು ತಾನಾದ ಶರಣಂಗೆ ಲಿಂಗವು ತಾನೆಂಬ ಅಹಂಭಾವದರಿವು ನಿಷ್ಪತ್ತಿಯಾಯಿತ್ತೆಂಬುದೀಗ 'ಪತಿಯಳಿದು ನಿಷ್ಪತಿಯಾಗಿ' ಎಂಬ ಶಬ್ದಕ್ಕರ್ಥ. ಅಂತು ಅರಿವು ನಿಷ್ಪತ್ತಿಯಾದಲ್ಲಿ ಸತಿ ಪತಿ ನಿಷ್ಪತ್ತಿಯೆಂದು ಮೂಱಾಗಿ ಅರಿವ ಅರಿವೇನೂ ಇಲ್ಲದೆ ಒಂದೆ ಮಹಾಘನಲಿಂಗವೆಯಾಗಿರ್ದನು ಶರಣನು. ಅಂತಪ್ಪ ಶರಣನ ಪಾದಕ್ಕೆ ನಮಸ್ಕಾರವ ಮಾಡಿದವರು ಮುಕ್ತರೆಂಬುದೀಗ 'ಸತಿ ಪತಿ ನಿಷ್ಪತಿಯೆಂಬ ತ್ರಿವಿಧವೂ ಏಕಾರ್ಥವಾದ ಕೂಡಲಚೆನ್ನಸಂಗಯ್ಯನಲ್ಲಿ ಬಸವಣ್ಣನ ಪಾದಕ್ಕೆ ನಮೋ ನಮೋ ಎನುತಿರ್ದೆನು' ಎಂಬ ಶಬ್ದಕ್ಕರ್ಥ. ೪೫

**ವ.** ಜಲದ ಚಿತ್ತಾರದ ಕೊರಳಿನಲ್ಲಿ ದಾರವಿಲ್ಲದ ಮುತ್ತಿನ ಸರವ ನೋಡಾ! ಚಿತ್ತಾರವಳಿಯದೆ, ಮುತ್ತು ಉಳಿಯದೆ ನಿಂದ ನಿಲವಿನ ಪರಿಯ ನೋಡಾ ! ಗಮನವಿಲ್ಲದ ಗಂಭೀರ, ಶಬ್ದವಿಲ್ಲದ ಸಾರಾಯ ಸಮತೆಯಾಗಿ ನಿಂದ ಅಜಗಣ್ಣಂಗೆ ಇನ್ನಾರು ಸರಿಯೆಂದೆಂಜೆನು ?

**ಟೀ.** ಜಲದ ಚಿತ್ತಾರವೆಂದರೆ ಜಲಸ್ವರೂಪಾದ ದೇಹ. ಅಂತಪ್ಪ ದೇಹ ವಿಡಿದ ಶರಣನು ಆ ದೇಹದ ಕಂಠಸ್ಥಾನದಲ್ಲಿ ಭಿನ್ನಜ್ಞಾನಸೂತ್ರವಿಲ್ಲದೆ ಅಭಿನ್ನ ಜ್ಞಾನಸೂತ್ರದಲ್ಲಿ ಮುಕ್ತಿಸ್ವರೂಪನಪ್ಪ ಲಿಂಗವ ಸಾಹಿತ್ಯವ ಮಾಡಿಕೊಂಡ ಪರಿ ಚೋದ್ಯವೆಂಬುದೀಗ ' ಜಲದ ಚಿತ್ತಾರದ ಕೊರಳಿನಲ್ಲಿ ದಾರವಿಲ್ಲದ ಮುತ್ತಿನ ಸರವ ನೋಡಾ ' ಎಂಬ ಶಬ್ದಕ್ಕರ್ಥ. ಅಂತು ಅಂಗಕ್ಕೆ ಲಿಂಗವ ಬೇಱಿಟ್ಟು ಉಳಿಸದೆ ಲಿಂಗಾಂಗ ಸಂಬಂಧಿಯಾಗಿ ಅಂಗವಿರ್ದಂತೆ ಅಂಗವೆಲ್ಲಾ ಲಿಂಗಸ್ವರೂಪನಾದ ಶರಣನ ಪರಿ ಚೋದ್ಯವೆಂಬುದೀಗ ' ಚಿತ್ತಾರವಳಿಯದೆ ಮುತ್ತು ಉಳಿಯದೆ ನಿಂದ ನಿಲವಿನ ಪರಿಯ ನೋಡಾ ' ಎಂಬ ಶಬ್ದಕ್ಕರ್ಥ. ಗಮನವೆಂದಡೆ ಭಿನ್ನಕ್ರಿಯಾಚಾರ. ಅಂತಪ್ಪ ಭಿನ್ನಕ್ರಿಯೆಯನಾಚರಿಸುವನಲ್ಲ ಶರಣ ತಾನೆ ಮಹಾಘನಲಿಂಗವೆಯಾಗಿ ಎಂಬುದೀಗ ' ಗಮನವಿಲ್ಲದ ಗಂಭೀರ ' ನೆಂಬ ಶಬ್ದಕ್ಕರ್ಥ. ಅಂತು ವಾಙ್ಮನಕ್ಕೆ ಬಾರದ ನಿಶ್ಶಬ್ದಬ್ರಹ್ಮವಾಗಿ ಪರಮಶಾಂತಿಯನೆಯ್ದಿ ನಿಂದ ಲಿಂಗೈಕ್ಯಂಗೆ ಹರಿ ಸುರ ಬ್ರಹ್ಮ ಮೊದಲಾದ ದೇವತಾದಿಗಳಾರೂ ಸರಿಯಲ್ಲವೆಂಬುದೀಗ ' ಶಬ್ದವಿಲ್ಲದ ಸಾರಾಯ ಸಮತೆಯಾಗಿ ನಿಂದ ಅಜಗಣ್ಣಂಗೆ ಇನ್ನಾರು ಸರಿಯೆಂದೆಂಬೆ ' ನೆಂಬ ಶಬ್ದಕ್ಕರ್ಥ. ೬೬

**ವ.** ತನ್ನನಱಿದಱಿವೆಂತುಟೊ ? ತನ್ನ ಮಱೆದ ಮಱವೆಂತುಟೊ ? ಅಱಿದು ಮಱೆದವರು ನಿಮ್ಮ ಪ್ರತಿಬಿಂಬದಂತಿಪ್ಪರು ಕಾಣಾ ಗುಹೇಶ್ವರಾ.

**ಟೀ.** ಸಮ್ಯಗ್‌ಜ್ಞಾನದಿಂದ ತಾನು ಮಹಾಘನಲಿಂಗವೆಂದು ತನ್ನ ನಿಜವನಱಿದ ಶರಣನ ಅಱಿವನುಪಮಿಸಬಾರದೆಂಬುದೀಗ ' ತನ್ನನಱಿದಱಿವೆಂತುಟೊ ' ಎಂಬ ಶಬ್ದಕ್ಕರ್ಥ. ಅಂತು ತನ್ನ ನಿಜವೇ ಮಹಾಘನಲಿಂಗವೆಂದಱಿದು ಲಿಂಗಾಂಗ ಸಂಯೋಗಿಯಾಗಿ ಅಂಗಲಿಂಗವೆಂಬೆರಡಳಿದು ಲಿಂಗವೆ ತಾನಾದಲ್ಲಿ ಲಿಂಗವು ತಾನೆಂಬಱಿವು ನಿಷ್ಪತ್ತಿಯಾಗಿ ತನ್ನ ಮಱೆದಿಪ್ಪ ಶರಣನ ಮಱಹನುಪಮಿಸಬಾರದೆಂಬುದೀಗ ' ತನ್ನ ಮಱೆದ ಮಱಹೆಂತುಟೊ ' ಎಂಬ ಶಬ್ದಕ್ಕರ್ಥ. ಅಂತು

ಅರಿದು ಮರೆದು ಲಿಂಗೈಕ್ಯನಾದ ಶರಣ ಲಿಂಗವೆಯಾಗಿಪ್ಪನೆಂಬುದೀಗ ‘ ಅರಿದು ಮರೆದವರು ನಿಮ್ಮ ಪ್ರತಿಬಿಂಬದಂತಿಪ್ಪರು ಕಾಣಾ ಗುಹೇಶ್ವರಾ ’ ಎಂಬ ಶಬ್ದಕ್ಕರ್ಥ. ೪೭

**ವ.** ಊಟ್ಟುದ ತೊಱೆದಂಗೆ ಊರೇನು ? ಕಾಡೇನು ? ನಷ್ಟ ಸಂತಾನಕ್ಕೆ ಕುಲವೇನು ? ಛಲವೇನು ? ಹುಟ್ಟುಗೆಟ್ಟವಂಗೆ ಪುಣ್ಯವೇನು ? ಪಾಪವೇನು ? ಅದು ಕೆಟ್ಟುದು ಕೆಟ್ಟುದು. ತನ್ನ ತಾನಱಿಯದೆ ಒಟ್ಟಬಯಲಲ್ಲಿ ಬಿದ್ದ ಅಜಗಣ್ಣತಂದೆ !

**ಟೀ.** ಸಮ್ಯಗ್ಜ್ಞಾನದಿಂದ ತನ್ನ ನಿಜವೇ ಮಹಾಘನಲಿಂಗವೆಂದಱಿದು ಲಿಂಗಾಂಗಸಂಗಿಯಾಗಿ, ದೇಹಾಭಿಮಾನವಳಿದು ಲಿಂಗಾಭಿಮಾನಿಯಾದ ಶರಣನು ಊರೊಳಗಿರ್ದಡೆಯೂ ಕಾಡೊಳಗಿರ್ದಡೆಯೂ ಶರಣ ಸಂಸಾರಿಯಲ್ಲವೆಂಬುದೀಗ ‘ ಉಟ್ಟುದ ತೊಱೆದಂಗೆ ಊರೇನು ? ಕಾಡೇನು ? ’ ಎಂಬ ಶಬ್ದಕ್ಕರ್ಥ. ಅಂತು ಗುರುಕರುಣದಿಂದ ಪುನರ್ಜಾತನಾಗಿ ಅಂಗಭಾವವಳಿದು ಲಿಂಗವಾದ ಶರಣಂಗೆ ಕುಲಾಭಿಮಾನವಿಲ್ಲವೆಂಬುದೀಗ ‘ ನಷ್ಟ ಸಂತಾನಕ್ಕೆ ಕುಲವೇನು? ಛಲವೇನು? ’ ಎಂಬ ಶಬ್ದಕ್ಕರ್ಥ. ಅಂತು ಅಂಗವೆಲ್ಲಾ ಲಿಂಗವೆಯಾಗಿ ದೇಹವಾಸನೆಯಳಿದ ಶರಣನು ಮುಂದೆ ದೇಹವಿಡಿದು ಹುಟ್ಟಲಿಲ್ಲದ ಕಾರಣ, ಆ ಶರಣ ಕ್ರೀಯ ಮಾಡಿದಲ್ಲಿ ಪುಣ್ಯವಿಲ್ಲ, ಮಾಡದಿರ್ದಡೆ ಪಾಪವಿಲ್ಲವೆಂಬುದೀಗ ‘ ಹುಟ್ಟುಗೆಟ್ಟವಂಗೆ ಪುಣ್ಯವೇನು ? ಪಾಪವೇನು ? ’ ಎಂಬ ಶಬ್ದಕ್ಕರ್ಥ. ಅಂತು ದೇಹವಾಸನೆ ಕೆಟ್ಟು ಲಿಂಗವಾದಲ್ಲಿ ಲಿಂಗ ತಾನೆಂಬ ಅಹಂಭಾವದಱಿವು ತನ್ನಲ್ಲಿಯೆ ಕೆಟ್ಟು ಲಿಂಗೈಕ್ಯವಾಗಿರ್ದ ಶರಣನೆಂಬುದೀಗ ‘ ಅದು ಕೆಟ್ಟುದು ಕೆಟ್ಟುದು. ತನ್ನ ತಾನಱಿಯದೆ ಒಟ್ಟಬಯಲಲ್ಲಿ ಬಿದ್ದ ಅಜಗಣ್ಣತಂದೆ ’ ಯೆಂಬ ಶಬ್ದಕ್ಕರ್ಥ. ೪೮

**ವ.** ಅಂಗ ಲಿಂಗಕ್ಕೆ ಗೂಡಾಯಿತ್ತು. ಲಿಂಗ ಅಂಗಕ್ಕೆ ಗೂಡಾಯಿತ್ತು. ಅಂಗ ಲಿಂಗ ಸಂಗವೆಂಬ ಸಂದಳಿದು ನಿಜಲಿಂಗೈಕ್ಯವಾಯಿತ್ತು. ಭಾವ ನಿರ್ಭಾವ ನಿಷ್ಪತ್ತಿಯಾದಲ್ಲಿ ಮಹಾದಾನಿ ಸೊಡ್ಡಳಂಗೆ ಸರ್ವನಿರ್ವಾಣವಾಯಿತ್ತು.

**ಟೀ.** ಲಿಂಗಾಂಗ ಸಂಯೋಗಿಯಾದ ಶರಣನ ಅಂಗ ಲಿಂಗವೆರಡೂ ಸಮರಸೈಕ್ಯವಾಗಿ, ಅಂಗಲಿಂಗವೆಂಬ ಭೇದವಳಿದು ಮಹಾಘನಲಿಂಗ ತಾನಾದ ಶರಣನು ಭಾವಿಸಲಿಲ್ಲದೆ ನಿರ್ಭಾವಿಯಾಗಿ ನಿಷ್ಪತ್ತಿಯನೆಯ್ದಿ ನಿಂದಲ್ಲಿ, ಅಂಗ ಲಿಂಗ ಸಂಗವೆಂಬ

ಸಂಸಾರಾವರಣವಿಲ್ಲದೆ ಬಚ್ಚಬಱಿಯ ಲಿಂಗವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೪೯

ವ. ಅಱುವೆಯನೊಱಲೆ ಕೊಂಡಡೆ ಆಕಾಶವನುಡು ಮೇಯಿತ್ತಲ್ಲಾ ! ಕತ್ತಲೆ ಬೆಳಗುವ ತಾನೆ ನುಂಗಿತ್ತಲ್ಲಾ ! ಗೊಹೇಶ್ವರಾ, ಸತ್ತವರು ಬದುಕಿದವರ ಹೊತ್ತರು !!

ಟೀ. ಅಱುವೆಯೆಂದರೆ ಜ್ಞಾನ. ಅಂತು ಲಿಂಗವ ಭಿನ್ನವಿಟ್ಟಜೀವ ಭಿನ್ನ ಜ್ಞಾನವು ಹಱಿಹಂಚಾಗಿ ಜೀರ್ಣವಾಗಿ ಪೋಯಿತ್ತು ಅಖಂಡಿತ ಜ್ಞಾನದಿಂದ ಲೆಂಬುದೀಗ ' ಅಱುವೆಯನೊಱಲೆ ಕೊಂಡಡೆ ' ಎಂಬ ಶಬ್ದಕ್ಕರ್ಥ. ಆತ್ಮಾಕಾಶ ವೆಂಬುದೀಗ ಆಕಾಶವೆಂಬ ಶಬ್ದಕ್ಕರ್ಥ. ಆ ಆತ್ಮಾಕಾಶದಲ್ಲಿ ಸೂಕ್ಷ್ಮವಾಗಿಪ್ಪ ಚಿತ್ಪ್ರಭಾಲಿಂಗವೇ ನಕ್ಷತ್ರವೆಂಬುದೀಗ ' ಉಡು ' ವೆಂಬ ಶಬ್ದಕ್ಕರ್ಥ. ಅಂತು ಖಂಡಿತವನಳಿದು ಅಖಂಡಿತಜ್ಞಾನಿಯಾದ ಶರಣನ ಆತ್ಮಾಂಗವ ಚಿತ್ಕಲಾಲಿಂಗವು ಅವಗ್ರಹಿಸಿತ್ತೆಂಬುದೀಗ ' ಅಱುವೆಯನೊಱಲೆ ಕೊಂಡಡೆ ಆಕಾಶವನುಡು ಮೇಯಿತ್ತಲ್ಲಾ ' ಎಂಬ ಶಬ್ದಕ್ಕರ್ಥ. ಅಂತು ಶರಣನ ಆತ್ಮಾಂಗವ ಲಿಂಗವು ಅವಗ್ರಹಿಸಿದಲ್ಲಿ ಆ ಆತ್ಮಾಂಗದ ಕೂಡೆ ಅಱಿವು ಮಱವೆಯನುಳ್ಳ ಮನವನೂ ಲಿಂಗವೇ ಅವಗ್ರಹಿಸಿತ್ತೆಂಬುದೀಗ ' ಕತ್ತಲೆ ಬೆಳಗುವ ತಾನೆ ನುಂಗಿತ್ತಲ್ಲಾ ' ಎಂಬ ಶಬ್ದಕ್ಕರ್ಥ. ಅಂತು ಅಂಗಭಾವವಳಿದು ಶರಣನು ಅಖಂಡಿತ ಚಿಚ್ಚೈತನ್ಯಲಿಂಗವ ತಾಳಿರ್ದನೆಂಬುದೀಗ ' ಸತ್ತವರು ಬದುಕಿದವರ ಹೊತ್ತರು ' ಎಂಬ ಶಬ್ದಕ್ಕರ್ಥ. ೫೦

ವ. ಉಂಡಡೇನೋ ? ಉಣ್ಣದಿರ್ದಡೇನೋ ? ಸೋಂಕಿತವೇನೋ ? ಅಸೋಂಕಿತವೇನೋ ? ಹುಟ್ಟುವುದಿಲ್ಲವಾಗಿ ಹೊಂದಲಿಲ್ಲ. ಸತ್ತು ಬದುಕಿ ನಿಶ್ಚಿಂತವಾಯಿತ್ತು ಗೊಹೇಶ್ವರಾ !

ಟೀ. ಅಂಗಲಿಂಗಸಂಯೋಗಿಯಾದ ಶರಣನು ಅಂಗವಳಿದು ಅಖಂಡ ಚೈತನ್ಯಲಿಂಗವೆಯಾಗಿ, ಶರಣ ಸರ್ವಶಂಕೆಯನಳಿದನೆಂಬುದೀಗ ' ಸತ್ತು ಬದುಕಿ ನಿಶ್ಚಿಂತವಾಯಿತ್ತು ' ಎಂಬ ಶಬ್ದಕ್ಕರ್ಥ. ಅಂತು ಅಂಗವಳಿದು ಲಿಂಗವೆಯಾದ ಲಿಂಗೈಕ್ಯನು ಭೋಗಿಸಿದುದೆಲ್ಲಾ ಲಿಂಗಭೋಗವೆಯಾಗಿ ಲಿಂಗೈಕ್ಯಂಗೆ ಜನನ ಮರಣವಿಲ್ಲವೆಂಬುದೀಗ ' ಉಂಡಡೇನೋ ? ಉಣ್ಣದಿರ್ದಡೇನೋ ? ಸೋಂಕಿತವೇನೋ ? ಅಸೋಂಕಿತವೇನೋ ? ಹುಟ್ಟಲಿಲ್ಲವಾಗಿ ಹೊಂದಲಿಲ್ಲ ' ವೆಂಬ ಶಬ್ದಕ್ಕರ್ಥ. ೫೧

**ವ.** ಹೊಸ ಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು ! ಸ್ಫಟಿಕದ ಘಟದೊಳಗಣ ಪ್ರಭೆಯಂತೆ ಲಿಂಗೈಕ್ಯವು ! ವಾಯುವಿನ ಸಂಚದ ನಿಲವಿನಂತೆ ಲಿಂಗೈಕ್ಯನ ಸಂಬಂಧವದು ಗೊಹೇಶ್ವರಾ !

**ಟೀ.** ಮುತ್ತಿನ ಚಿಪ್ಪಿನ ಸಂಗದಿಂದ ಉದಕವು ಬಲಿದು ಮುತ್ತಾಗಿ ಮರಳಿ ಉದಕವಾಗದ ಹಾಂಗೆ ದೇಹಿಯಾಗಿರ್ದ ಆತ್ಮನು ಲಿಂಗಸಂಗದಿಂದ ಲಿಂಗವಾದ ಬಳಿಕ ಮರಳಿ ದೇಹಿಯಾಗನೆಂಬುದೀಗ 'ಹೊಸ ಮುತ್ತಿನ ಸುಪ್ಪಾಣಿಯಂತೆ ಲಿಂಗೈಕ್ಯವು' ಎಂಬ ಶಬ್ದಕ್ಕರ್ಥ. ಭೂಮಿಯ ಸಂಗದಿಂದ ಮಾಸಿರ್ದ ಸ್ಫಟಿಕಾಂಗವು ಒಪ್ಪವಿಟ್ಟಲ್ಲಿ ತನ್ನ ನಿರ್ಮಲದ ಸುಪ್ರಕಾಶವೆಯಾಗಿಪ್ಪುದು ಹೇಂಗೆ ಹಾಂಗೆ ಶಿವಾಂಶಿಕನಾದ ಆತ್ಮನು ದೇಹಸಂಗದಿಂದ ತನ್ನ ನಿಜವ ಮರೆದಿರ್ದಲ್ಲಿ ಜ್ಞಾನಕ್ರೀ ಘಟಿಸಲು ಜೀವಭಾವವಳಿದು ಆತ್ಮನೆಲ್ಲಾ ಚಿತ್‌ಪ್ರಭಾಲಿಂಗವೆಯಾಗಿಪ್ಪನೆಂಬುದೀಗ 'ಸ್ಫಟಿಕದ ಘಟದೊಳಗಣ ಪ್ರಭೆಯಂತೆ ಲಿಂಗೈಕ್ಯವು' ಎಂಬ ಶಬ್ದಕ್ಕರ್ಥ. ಆಕಾಶದಿಂದುದಯಿಸಿದ ವಾಯುವು ಆಕಾಶದೊಳಗೆ ಚರಿಸಿ ಆಕಾಶದೊಳಗಡಗುವಂತೆ ಲಿಂಗದಿಂದ ಉದಯಿಸಿದ ಶರಣನು ಲಿಂಗಾಂಗಸಂಗಿಯಾಗಿ, ಲಿಂಗದೊಳಗೆ ಚರಿಸಿ ಲಿಂಗದೊಳಗೆ ಐಕ್ಯವಪ್ಪನು. ಅಂತು ಲಿಂಗಾಂಗದೈಕ್ಯವೆಂಬುದು ಅಭೇದ್ಯಸಂಬಂಧವೆಂಬುದೀಗ 'ವಾಯುವಿನ ಸಂಚದ ನಿಲವಿನಂತೆ ಲಿಂಗೈಕ್ಯನ ಸಂಬಂಧವದು' ಎಂಬ ಶಬ್ದಕ್ಕರ್ಥ. ೫೨

**ವ.** ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯಾ ! ಬಯಲ ಜೀವನ, ಬಯಲ ಭಾವನೆ, ಬಯಲು ಬಯಲಾಗಿ ಬಯಲಾಯಿತ್ತಯ್ಯಾ ! ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು ! ನಾ ನಿಮ್ಮ ನಂಬಿ ಬಯಲಾದೆ ಗೊಹೇಶ್ವರಾ !!

**ಟೀ.** ಬಯಲೆಂದರೆ ನಿಃಕಲಪರಶಿವಲಿಂಗವು. ಅಂತಪ್ಪ ನಿಃಕಲಲಿಂಗವು ತನ್ನ ಲೀಲೆಯಿಂದ ತನ್ನ ನಿರವಯದ ನಿಜವ ತನ್ನ ತಾನುದ್ಭವಿಸಿ ಬೆಳೆದು ಅಖಂಡ ತೇಜೋಮೂರ್ತಿಯಪ್ಪ ಮಹಾಲಿಂಗವಾಯಿತ್ತು. ಅಂತಾದ ಮಹಾಲಿಂಗವು ತನ್ನ ನಿರವಯದ ನಿಜಭಾವದಲ್ಲಿ ಭರಿತನಾಗಿಪ್ಪನೆಂಬುದೀಗ 'ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು, ಬಯಲು ಬಯಲಾಗಿ ಬಯಲಾಯಿತ್ತಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಮಹಾಲಿಂಗಾಕಾರವಾದಲ್ಲಿ ಆ ಲಿಂಗದ ತದಂಶಕವೇ ಜೀವಾತ್ಮನೆಂಬ ಅಂಗವಾಯಿತ್ತೆಂಬುದೀಗ 'ಬಯಲ ಜೀವ' ನೆಂಬ ಶಬ್ದಕ್ಕರ್ಥ.

ಅಂತಪ್ಪ ಜೀವಾತ್ಮಂಗೆ ಲಿಂಗಭಾವ ಘಟಿಸಿತ್ತೆಂಬುದೀಗ 'ಬಯಲ ಭಾವನೆ' ಯೆಂಬ ಶಬ್ದಕ್ಕರ್ಥ. ಅಂತು ಆತ್ಮನಿಗೆ ಲಿಂಗಭಾವ ಘಟಿಸಿದಲ್ಲಿ ಮಿಥ್ಯಾದೇಹವೆಂಬ ಬಯಲು ಬಯಲಾಗಿ ಆತ್ಮನೆಲ್ಲಾ ಲಿಂಗವೆಂಬ ಬಯಲಾಯಿತ್ತೆಂಬುದೀಗ 'ಬಯಲು ಬಯಲಾಗಿ ಬಯಲಾಯಿತ್ತಯ್ಯಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಶಿವಪೂಜಾಕ್ರೀಯಿಂದ ಪ್ರಾಣ ಮನ ಭಾವಂಗಳೆಲ್ಲವು ಲಿಂಗವೆಯಾದ ಬಳಿಕ ತಾನೇ ಲಿಂಗವೆಂಬ ಅಭಿನ್ನದಱಿವಿನ ವಿಶ್ವಾಸ ಘಟಿಸಿ, ಲಿಂಗವ ಭಿನ್ನವಿಟ್ಟು ಅಱಿಯದೆ ಲಿಂಗವೆಯಾಗಿರ್ದ ಶರಣನೆಂಬುದೀಗ 'ನಿಮ್ಮ ಪೂಜಿಸಿದವರು ಮುನ್ನವೆ ಬಯಲಾದರು ! ನಾ ನಿಮ್ಮ ನಂಬಿ ಬಯಲಾದೆ' ನೆಂಬ ಶಬ್ದಕ್ಕರ್ಥ. ೫೩

**ವ.** ಸಮಸುಖಸಂಧಾನವಿಲ್ಲದ ಸಂಗ ನೋಡಾ ! ತಾಗು ನಿರೋಧವಿಲ್ಲದ ಸಂಗ ನೋಡಾ! ಆವಂಗೆ ಆವಂಗೆ ಅನುಭಾವವಿಲ್ಲದ ಸಂಗ ನೋಡಾ! ಕೂಡಲಸಂಗಮದೇವಾ, ಲಿಂಗೈಕ್ಯಸಂಗ ನೋಡಾ !!

ಟೀ. ಅಂಗಕ್ಕೆ ಲಿಂಗವ ಭಿನ್ನವಿಟ್ಟು ಸಂಗವ ಮಾಡಿ ಸುಖಿಸಿಹೆನೆಂದಡೆ ಲಿಂಗಸಂಗವಿಲ್ಲವೆಂಬುದೀಗ 'ಸಮಸುಖಸಂಧಾನವಿಲ್ಲದ ಸಂಗ ನೋಡಾ' ಎಂಬ ಶಬ್ದಕ್ಕರ್ಥ. ಅಂತು ಭಿನ್ನವಿಟ್ಟು ಕೂಡಿ ಅಗಲಿ ಸುಖದುಃಖವ ಕೊಡುವ ಸಂಗವಲ್ಲ ಲಿಂಗಸಂಗವೆಂಬುದೀಗ 'ತಾಗು ನಿರೋಧವಿಲ್ಲದ ಸಂಗ ನೋಡಾ' ಎಂಬ ಶಬ್ದಕ್ಕರ್ಥ. ಅಂತು ಲಿಂಗಾಂಗಸಂಗದನುಭವವ ಲಿಂಗಶರಣರಲ್ಲದೆ ಮತ್ತಾರೂ ಅಱಿಯರೆಂಬುದೀಗ 'ಆವಂಗೆ ಆವಂಗೆ ಅನುಭಾವವಿಲ್ಲದ ಸಂಗ ನೋಡಾ' ಎಂಬ ಶಬ್ದಕ್ಕರ್ಥ. ಅಂತಪ್ಪ ಮಹಾಘನಲಿಂಗವು ತನಗೆ ಅನನ್ಯ ಪರಿಪೂರ್ಣವೆಂದಱಿದು ಲಿಂಗವನನ್ಯವಿಡದೆ ಲಿಂಗಾಂಗಸಂಗಿಯಾಗಿ ಭೇದವಿಲ್ಲದೆ ಲಿಂಗೈಕ್ಯನಾಗಿಪ್ಪುದೇ ಲಿಂಗಾಂಗಸಂಗವೆಂಬುದೀಗ 'ಕೂಡಲಸಂಗಮದೇವಾ, ಲಿಂಗೈಕ್ಯಸಂಗ ನೋಡಾ' ಎಂಬ ಶಬ್ದಕ್ಕರ್ಥ. [illegible]

**ವ.** ಕೆಟ್ಟುದನಱಸಹೋಗಿ ತಾನೇ ಕೆಟ್ಟಿತ್ತು ! ಹೇಳಲಿಂತೂ ಬಾರದು, ಕೇಳಲಿಂತೂ ಬಾರದು. [1]ಎಂತಿರ್ದಡಂತೆ[1] ಸಹಜ ಸ್ವಾನುಭಾವದ ಸಮ್ಯಗ್ಜ್ಞಾನವ ಅಜ್ಞಾನಿ ಬಲ್ಲನೇ ಗೊಹೇಶ್ವರಾ ?

ಟೀ. ಶಿವನ ಲೀಲಾವಶದಿಂದ ಶಿವಾಂಶಿಕವಾದ ಆತ್ಮನು ಕೆಟ್ಟು ತನ್ನ ನಿಜವ ತಾನಱಿಯದೆ ಅನೇಕ ಭವದಲ್ಲಿ ಬಂದು ಶಿವಕೃಪೆಯಿಂದ ಒಮ್ಮೆ ಸುಜ್ಞಾ

೧ ಎಂತಿರ್ದೊಡಂತೆ (ಎ.)

ನೋದಯವಾಗಿ, ಆ ಕೆಟ್ಟ ನಿಜದ ನಿಲವ ಜ್ಞಾನ ಕ್ರಿಯೆಯಿಂದಲಱಸುವನ್ನಬರ ಆ ಅಱಸುವಾತ ತಾನೆಲ್ಲಾ ಮಹಾಘನಲಿಂಗವೆಯಾಗಿ, ತಾನೆಂಬ ಜೀವಭಾವ ಕೆಟ್ಟಿತ್ತೆಂಬುದೀಗ ' ಆ ಕೆಟ್ಟುದನಱಸ ಹೋಗಿ ತಾನೆ ಕೆಟ್ಟಿತ್ತು ' ಎಂಬ ಶಬ್ದಕ್ಕರ್ಥ. ಅಂತು ಜೀವತ್ವವಳಿದು ಶಿವತ್ವವಾದ ನಿಲವ ಅಂತಿಂತೆಂದುಪಮಿಸಬಾರದೆಂಬುದೀಗ ' ಹೇಳಲಿಂತೂ ಬಾರದು, ಕೇಳಲಿಂತೂ ಬಾರದು ' ಎಂಬ ಶಬ್ದಕ್ಕರ್ಥ. ಅಂತು ಂ ತನ್ನ ಶಿವತ್ವವ ಸಹಜವೆಂತಿರ್ದಂತೆ ನಿಂದ ಶರಣನ ಸ್ವಾನುಭಾವದನು ಅಜ್ಞಾನಿಗಳಱಿಯರೆಂಬುದೀಗ ' ಎಂತಿರ್ದುದಂತೆ ಸಹಜ ಸ್ವಾನುಭಾವದ ಸಮ್ಯಗ್ಜ್ಞಾನವ ಅಜ್ಞಾನಿ ಬಲ್ಲನೇ ' ಎಂಬ ಶಬ್ದಕ್ಕರ್ಥ. ೫೫

ವ. ತುಂಬಿ ಪರಿಮಳವನುಂಡುದೋ ? ಪರಿಮಳ ತುಂಬಿಯನುಂಡುದೋ ? ಲಿಂಗ ಪ್ರಾಣವಾಯಿತೋ ? ಪ್ರಾಣ ಲಿಂಗವಾಯಿತೋ ? ಗುಹೇಶ್ವರಾ, ಈ ಉಭಯದ ಭೇದವ ನೀನೇ ಬಲ್ಲೆ !

ಟೀ. ತುಂಬಿಯೆಂದಡೆ ಪರಿಪೂರ್ಣವಾಗಿಪ್ಪ ಲಿಂಗಕ್ಕೆ ಹೆಸರು. ಪರಿಮಳವೆಂದರೆ ಸ್ವಾನುಭಾವವಾಸನೆಗೆ ಹೆಸರು. ಅಂತು ಪರಿಪೂರ್ಣಲಿಂಗವು ತಾನೆಂದಱಿದ ಶರಣನ ಸ್ವಾನುಭಾವದೊಳಗೆ ಲಿಂಗವು ಲೀಯವಾಗಿ, ಲಿಂಗದೊಳಗೆ ಭಾವ ಲೀಯವಾಗಲು, ಲಿಂಗವು ಪ್ರಾಣದೊಳಗೆ ಐಕ್ಯವಾಗಿ, ಪ್ರಾಣವು ಲಿಂಗದೊಳಗೆ ಐಕ್ಯವಾಗಿ ಭೇದವಿಲ್ಲದೆ ಲಿಂಗೈಕ್ಯನಾದ ಶರಣನ ನಿಲವ ಲಿಂಗವೇ ಬಲ್ಲನಲ್ಲದೆ ಮತ್ತಾರೂ ಅಱಿಯರು ಎಂಬುದೀ ವಚನದ ತಾತ್ಪರ್ಯಾರ್ಥ. ೫೬

ವ. ಒಲೆಯುರಿಯನುರುಹಿದೊಡೆ ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು ! ಮಹೀತಳನ ಜಡೆ ಸೀಯಿತ್ತು ! ಮರೀಚಿಕನ ಶಿರ ಬೆಂದಿತ್ತು ! ರುದ್ರನ ಹಾವುಗೆ ಉರಿಯಿತ್ತು ! ರುದ್ರಗಣಂಗಳು ನಿವಾಟವಾದರು ! [೧]ಮುಡದಿಯರೈವರು[೧] ಮುಡಿಯ ಹಿಡಿದುಕೊಂಡು ಹೋದರು ! ಭಸ್ಮಧಾರಿಯಾದ್ಯೆ ಕೂಡಲಸಂಗಮದೇವಾ !!

ಟೀ. ಒಲೆಯೆಂದರೆ ತನುತ್ರಯಂಗಳು. ಅಂತಪ್ಪ ತನುತ್ರಯಂಗಳಿಗೆ ಚೈತನ್ಯಾಧಾರವಾಗಿ ಹೃದಯದಲ್ಲಿಪ್ಪ ಚಿದಗ್ನಿಯನು ಸ್ವಾನುಭಾವಬೋಧೆಯಿಂದ ಪ್ರಭಾವಿಸಿದ ಶರಣನೆಂಬುದೀಗ ' ಒಲೆಯುರಿಯನುರುಹಿದೊಡೆ ' ಯೆಂಬ ಶಬ್ದಕ್ಕರ್ಥ. ಅಂತು ಪ್ರಭಾವಿಸಿದ ಚಿದಗ್ನಿಯ ತೇಜಸ್ಫುರಣೆ ಶರಣನ ಸರ್ವಾಂಗವ

---

೧ ಮಡದಿಯರು (ಎ. ರಾ.)

ನವಗ್ರಹಿಸಲು ಗೊಳಕನಾಥನೆಂಬ ದೇಹಕ್ಕೆ ಕಂಟಕವಾಗಿ ದೇಹವಾಸನೆಯುಳಿಯಿತ್ತು ಎಂಬುದೀಗ ' ಹೊಗೆ ಗೋಳಕನಾಥನ ಕೊರಳ ಸುತ್ತಿತ್ತು ' ಎಂಬ ಶಬ್ದಕ್ಕರ್ಥ. ಮಹೀತಳನೆಂದಡೆ ದೇಹವ ತಾಳಿರ್ದ ಜೀವನು. ಜಡೆಯೆಂದಡೆ ದೇಹೋಹಂ ಭಾವ. ಅಂತು ಜೀವನ ದೇಹೋಹಂ ಭಾವ ನಾಶವಾಯಿತ್ತೆಂಬುದೀಗ ' ಮಹೀತಳನ ಜಡೆ ಸೀಯಿತ್ತು ' ಎಂಬ ಶಬ್ದಕ್ಕರ್ಥ. ಮರೀಚಿಕನೆಂದರೆ ಮನಸ್ಸು. ಅಂತಪ್ಪ ಮನದ ದುರ್ವಿವೇಕನೆಂಬ ಶಿರ ಸುಟ್ಟುಹೋಯಿತ್ತೆಂಬುದೀಗ ' ಮರೀಚಿಕನ ಶಿರ ಬೆಂದಿತ್ತು ' ಎಂಬ ಶಬ್ದಕ್ಕರ್ಥ. ರುದ್ರನೆಂದರೆ ಲಿಂಗವು. ಆ ರುದ್ರನ ಹಾವುಗೆಯೆಂದರೆ ಲಿಂಗವ ಭಿನ್ನವಿಟ್ಟು ಆಚರಿಸುವ ಭಿನ್ನಕ್ರಿಯಾಜ್ಞಾನಂಗಳು. ಅಂತಪ್ಪ ಭಿನ್ನಕ್ರಿಯಾಜ್ಞಾನಂಗಳಳಿದು ಅಖಂಡಜ್ಞಾನಪ್ರಕಾಶಮಯವಾಗಿ ಲಿಂಗದಲ್ಲಿ ಭಿನ್ನವಳಿದ ಶರಣನೆಂಬುದೀಗ ' ರುದ್ರನ ಹಾವುಗೆ ಉರಿಯಿತ್ತು ' ಎಂಬ ಶಬ್ದಕ್ಕರ್ಥ. ಅಂತು ಸರ್ವಾಂಗವೆಲ್ಲಾ ಅಖಂಡ ಚಿತ್ಪ್ರಕಾಶ ಲಿಂಗವೆಯಾದ ಶರಣನ ಅಂಗ ಕರಣಂಗಳೆಲ್ಲವು ಲಿಂಗವೆಯಾದವೆಂಬುದೀಗ ' ರುದ್ರಗಣಂಗಳು ನಿವಾಟವಾದರು ' ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣನ ಅಂಗದ ಷಡ್ವಿಧ ಶಕ್ತಿಯರೆಲ್ಲರೂ ಬಹಿರ್ಮುಖವನಳಿದು ಅಂತರ್ಮುಖವಾದುದೀಗ ಪಶ್ಚಿಮಮುಖ. ಅಂತಪ್ಪ ಪಶ್ಚಿಮಮುಖವಪ್ಪ ಅಂತರಂಗದ ಅಭಿನ್ನಜ್ಞಾನವಿಡಿದು ಶಿವತತ್ವವನೆಯ್ದಿದರೆಂಬುದೀಗ ' [೧]ಮಡದಿಯರೈವರು[೧] ಮುಡಿಯ ಹಿಡಿದುಕೊಂಡು ಹೋದರು ' ಎಂಬ ಶಬ್ದಕ್ಕರ್ಥ. ಅಂತು ಶರಣನೆಲ್ಲಾ ಅಖಂಡ ಚಿತ್ಪ್ರಕಾಶ ಲಿಂಗವೆಯಾಗಿರ್ದನೆಂಬುದೀಗ ' ಭಸ್ಮಧಾರಿಯಾದ್ಯೆ ಕೂಡಲಸಂಗಮದೇವಾ ' ಎಂಬ ಶಬ್ದಕ್ಕರ್ಥ. ೫೭

**ವ.** ಲಿಂಗಾರ್ಚನೆಯ ಮಾಡುವ ಮಹಾಮಹಿಮರೆಲ್ಲರೂ ಸಲಿಗೆವಂತರಾಗಿ ಒಳಗೈದಾರೆ ! ಆನು ದೇವಾ ಹೊಜಗಣವನು. ಸಂಬೋಳಿ ಸಂಬೋಳಿಯೆನುತ್ತ ಇಂಬಿನಲ್ಲಿ ಇದೇನೆ. ಕೂಡಲಸಂಗಯ್ಯಾ, ನಿಮ್ಮ ನಾಮವಿಡಿದು ನಾನು ಅನಾಮಿಕನಾದೆನು !

**ಟೀ.** ಲಿಂಗವ ಭಿನ್ನವಿಟ್ಟು ಪೂಜಿಸಿ, ಚತುರ್ವಿಧ ಪದಂಗಳ ಪಡೆದು ಶಿವ ಲೋಕದೊಳಗೆ ಶಿವನಲ್ಲಿ ತೇಜಿಷ್ಠರಾಗಿಪ್ಪ ಮಹಿಮೆವಂತರಂತಲ್ಲ, ಶಿವಶರಣರ ಪರಿಬೇಱೆ. ಅದೆಂತೆಂದಡೆ : ಲಿಂಗ ತಾನೆಂದಱಿದು ಶಿವೋಹಂ ಶಿವೋಹಂ ಎಂಬ

೧ ಮಡದಿಯರು (ಎ. ರಾ.)

ಶಿವನ ಅದ್ವಯನಾಮವಿಡಿದು ಚತುರ್ವಿಧ ಪದಂಗಳಿಗೆ ಹೊಱಗಾಗಿ ಕಡೆ ಮೊದಲಿಲ್ಲದ ನಿರ್ನಾಮವಸ್ತುವೆ ತಾನಾದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೫೮

**ವ.** ಸ್ವಸ್ಥಾನ ಸ್ವಸ್ಥಿರದ ಸುಮನ ಮಂಟಪದೊಳಗೆ ನಿತ್ಯನಿರಂಜನ ಪ್ರಭೆಯ ಬೆಳಗು ! ಶಿವಯೋಗಾನುಭಾವವೇಕಾರ್ಥವಾಗಿ ಗೊಹೇಶ್ವರ, ನಿಮ್ಮ ಶರಣ ಅನುಪಮಸುಖಿಯಾಗಿರ್ದನು !

**ಟೀ.** ಮನಕ್ಕೆ ಸದ್ವಿವೇಕದೋಱಿ, ತನ್ನ ನಿಜಸ್ಥಲವೆ ಪರಬ್ರಹ್ಮವೆಂದಱಿದು, ಮನವು ದುರ್ವಿಕಾರದ ಸಂಚಲವನಳಿದು, ಶಿವಭಾವದಲ್ಲಿ ನೆಲೆಗೊಂಡು ಸ್ವಸ್ಥನಾಗಿ ನಿಂದ ಮನವೀಗ ಸುಮನ. ಅಂತಪ್ಪ ಸುಮನವೆ ಮನೆಯಾಗಿ ನಿತ್ಯ ನಿರಂಜನ ಸುಪ್ರಭೆಯ ಬೆಳಗ ಪ್ರಜ್ವಲಿಸುತ್ತ ಪರಶಿವಲಿಂಗವು ನೆಲೆಗೊಂಡು ವಿಶ್ರಮಿಸಿ, ಆ ಶರಣನ ಅಂಗವೆಲ್ಲವ ಲಿಂಗವೆ ಅಂಗೀಕರಿಸಿ, ಲಿಂಗಾಂಗಸಂಯೋಗವಾದಲ್ಲಿ, ಅಂಗಲಿಂಗವೆಂಬ ಭೇದವಳಿದು ಮಹಾಘನಲಿಂಗವೆಯಾಗಿರ್ದ ಶರಣನ ಪರಮಸುಖವನುಪಮಿಸಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೫೯

**ವ.** ಕಾಯಗುಣವಳಿದು ಜೀವನ್ಮುಕ್ತನಾದ ಬಳಿಕ ಸಮ್ಯಗ್‌ಜ್ಞಾನವೆಂಬ ಶಾಂತಿ ದೊರೆಕೊಂಡಿತ್ತು ನೋಡಿರೇ ! ಅಂತರಂಗ ಬಹಿರಂಗವೆಂಬುದನಱಿಯನಾಗಿ ದ್ವೈತಾದ್ವೈತವ ನಿಕರಿಸಿ ನಿರ್ವಾಣ ನಿಷ್ಪತಿಯಾಗಿ ಗೊಹೇಶ್ವರಾ, ನಿಮ್ಮ ಶರಣನನುಪಮಸುಖಿ !!

**ಟೀ.** ಜ್ಞಾನಕ್ರೀಯಿಂದ ಲಿಂಗಾಂಗಸಂಬಂಧಿಯಾದ ಶರಣನ ಅಂಗ ಪ್ರಾಣಂಗಳೆಲ್ಲಾ ಲಿಂಗದೊಳೈಕ್ಯವಾಗಿ, ಒಳಹೊಱಗೆನ್ನದೆ ಸರ್ವಾಂಗ ಲಿಂಗವಾದ ಶರಣನು ತಾನೆಲ್ಲಾ ಲಿಂಗವೆಯಾಗಿರ್ದುದ ಸಮ್ಯಗ್‌ಜ್ಞಾನದಿಂದಱಿದು, ಶಾಂತಿಯನೈದಿ, ತಾನಿದಿರೆಂಬ ಅವಸ್ಥೆಗಳೆಲ್ಲವನಳಿದು, ನಿಜದುಳುಮೆಯಾಗಿ ನಿಂದು ಅಱಿವು ನಿಷ್ಪತ್ತಿಯಾದ ಶರಣನ ನಿಜಸುಖವನಾರೂ ಉಪಮಿಸಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೬೦

**ವ.** ಅಱಿಯಲಿಲ್ಲದ ಅಱಿವು ಅವಗ್ರಹಿಸಿತ್ತಾಗಿ ಅಱಿಯಲಿಲ್ಲ, ಮಱೆಯಲಿಲ್ಲ. ನಿಜವು ನಿಂದಿತ್ತಾಗಿ, ನಿರ್ನಾಮವಾಯಿತ್ತಾಗಿ ನಿಷ್ಪತಿಯಾಯಿತ್ತು ! ಅಗಮ್ಯದಲ್ಲಿ ಗಮನಗೆಟ್ಟಿತ್ತು! ನಿಂದಲ್ಲಿ ನಿರಾಳವಾಯಿತ್ತು! ಕೂಡಲಸಂಗಮದೇವರಲ್ಲಿ ಶಬ್ದ ಮುಗ್ಧವಾಯಿತ್ತು !!

**ಟೀ.** ಶ್ರುತಿ ಮತಿಗಳಱಿವಿಂಗೆ ಅಗೋಚರವಾಗಿಪ್ಪ ಅಖಂಡ ಚಿಚ್ಚೈತನ್ಯ ಲಿಂಗವು ಶರಣನನವಗ್ರಹಿಸಿ ಭೇದವಳಿದು ಶರಣನೆಲ್ಲಾ ಲಿಂಗವಾದಲ್ಲಿ ಲಿಂಗವ ಭಿನ್ನವಿಟ್ಟು ಅಱಿಯಲಿಲ್ಲ. ಅಂತು ಲಿಂಗವ ಭಿನ್ನವಿಟ್ಟು ಅಱಿವ ಭಿನ್ನಜ್ಞಾನದ ಮಱವೆಯಿಲ್ಲದೆ ಹೋಗಿ ಅಖಂಡಜ್ಞಾನಸ್ವರೂಪನಪ್ಪ ನಿಜವಸ್ತುವೆಯಾಗಿ ನಿಂದ ಶರಣನ ನಿಲವಿಂಗೆ ನಾಮರೂಪುಗಳಿಲ್ಲ. ತಾನೆ ಬ್ರಹ್ಮವೆಂಬ ಅಱಿವಿನ ತೋಱಿಕೆಯು ಹಮ್ಮಿಲ್ಲದೆ ನಿಷ್ಪ್ರತ್ತಿಯನೈದಿ, ನಿರ್ಗಮನಿಯಾಗಿ ನಿಂದು, ನಿಃಕಲವಸ್ತುವೆಯಾಗಿ ನಿಶ್ಶಬ್ದಬ್ರಹ್ಮವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೬೧

**ವ.** ಭಾವಕ್ಕೆ ಇಂಬಿಲ್ಲ. ಶಬ್ದ ಮೀಸಲು ನೋಡಾ! ನುಡಿಗೆಡೆಯಿಲ್ಲ, ಎಡೆಗೆ ಕಡೆಯಿಲ್ಲ, ಗುಹೇಶ್ವರಲಿಂಗವು ವೇಧಿಸಲೊಡನೆ.

**ಟೀ.** ಲಿಂಗಾಂಗಸಂಗಿಯಾದಾಕ್ಷಣವೆ ಶರಣನ ಅಂಗ ಮನ ಭಾವಂಗಳೊಳಹೊಱಗೆ ಪರಿಪೂರ್ಣವಾಗಿ ಮಹಾಘನಲಿಂಗವಿಂಬುಗೊಂಡು, ಲಿಂಗಾಂಗವೆಂಬ ಭೇದವಳಿದು, ಕಡೆಮೊದಲಿಲ್ಲದ ಮಹಾಘನಲಿಂಗವೆಯಾದನು ಶರಣನು. ತನ್ನ ನಿಜವ ಕುಱುಹಿಟ್ಟು ನುಡಿದು ಹೇಳಬಾರದಾಗಿ ನಿಶ್ಶಬ್ದಬ್ರಹ್ಮವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೬೨

**ವ.** ತನು ನಷ್ಟ, ಮನ ನಷ್ಟ, ನೆನಹು ನಷ್ಟ, ಭಾವ ನಷ್ಟ, ಜ್ಞಾನ ನಷ್ಟ. ಇಂತು ಪಂಚನಷ್ಟದೊಳಗೆ ನಾನು ನಷ್ಟವಾದೆನು! ಆ ನಷ್ಟದೊಳಗೆ ನೀನೂ ನಷ್ಟವಾದೆ! ಕಲಿದೇವರ ದೇವಾ ಎಂಬ ನುಡಿ ' ನಿಶ್ಶಬ್ದಂ ಬ್ರಹ್ಮಮುಚ್ಯತೇ ' ಎನುತ್ತಿದ್ದಿತ್ತು!

**ಟೀ.** ಲಿಂಗಾಂಗಸಂಬಂಧಿಯಾದ ಶರಣನ ತನು ಮನ ಭಾವ ಜ್ಞಾನಂಗಳೆಲ್ಲವೂ ಲಿಂಗದೊಳೈಕ್ಯವಾಗಿ ಅಱಿವ ಅಱುಹಿಸಿಕೊಂಬವೆರಡಳಿದು ಮಹಾಘನಲಿಂಗವೆ ತಾನಾದಲ್ಲಿ, ತಾನೆಂಬಱಿವ ಉಲುಹಡಗಿ ನಿಶ್ಶಬ್ದಬ್ರಹ್ಮವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೬೩

**ವ.** ಅಂಗೈಯೊಳಗಣ ನಾರಿವಾಣದ ಶಶಿ ಅಂಬರದೆರಳೆಯ ನುಂಗಿತ್ತಲ್ಲಾ! ಕಂಭದೊಳಗೊಂದು ಮಾಣಿಕ್ಯದ ಬಿಂದು ನವಕೋಟಿಬ್ರಹ್ಮರ ನುಂಗಿತ್ತಲ್ಲಾ! ಅಂಡಜವೆಂಬ ಶಕ್ತಿ ಹಲವು ಪಕ್ಷಿಯ ನುಂಗಿ ನಿರ್ವಯಲಾಯಿತ್ತು ಗುಹೇಶ್ವರಾ !!

ಟೀ. 'ಅಂಗೈಯೊಳಗಣ ನಾರಿವಾಣದ ಶಶಿ'ಯೆಂದರೆ ತನ್ನ ಭಕ್ತರಿಗೆ ಬೇಡಿದ ಚತುರ್ವಿಧಪದ ಮೊದಲಾದ ನಿತ್ಯಾಮೃತಗಳನೀವುತ್ತ ಕಲ್ಪವೃಕ್ಷವಾಗಿಪ್ಪುದು ಕರಸ್ಥಲದ ಇಷ್ಟಲಿಂಗವು. ಅಂತಪ್ಪ ಇಷ್ಟಲಿಂಗವು ಅಂಗ ಪ್ರಾಣ ಭಾವಂಗಳೊಳಗೆ ಪರಿಪೂರ್ಣಭಾವವನೆಯ್ದಿ ಶರಣನನವಗ್ರಹಿಸಿದಲ್ಲಿ, ಶರಣನ ಆತ್ಮಾಕಾಶಮಧ್ಯದಲ್ಲಿ ಸಂಚರಿಸುತ್ತಿರ್ದ ಮನವೆಂಬ ಕಳಂಕನು ಅವಗ್ರಹಿಸಿತ್ತೆಂಬುದೀಗ 'ಅಂಗೈಯೊಳಗಣ ನಾರಿವಾಣದ ಶಶಿ ಅಂಬರದೆಗಳೆಯ ನುಂಗಿತ್ತಲ್ಲಾ' ಎಂಬ ಶಬ್ದಕ್ಕರ್ಥ. ಅಂತು ಒಳಹೊಱಗೆನ್ನದೆ ಶರಣನೆಲ್ಲಾ ಲಿಂಗವೆಯಾಗಿ ಭಿನ್ನಭಾವದೋಱದೆಯಿರ್ದ ಏಕೋಭಾವವೀಗ ಕಂಭ. ಅಂತು ಏಕೋಭಾವದಲ್ಲಿಪ್ಪ ಅಖಂಡ ಚಿತ್ಪ್ರಭಾಲಿಂಗವೆಂಬುದೀಗ 'ಮಾಣಿಕ್ಯ'ವೆಂಬ ಶಬ್ದಕ್ಕರ್ಥ. ಆ ಲಿಂಗದ ಚಿತ್ಪ್ರಕಾಶಾಂಗವೇ ಚಿದ್ಬಿಂದು. ಅಂತು ಶರಣನೆಲ್ಲಾ ಲಿಂಗದ ಚಿದಂಗವಾಗಿ ಅನಂತಬ್ರಹ್ಮಕಲ್ಪಂಗಳ ತನ್ನಲ್ಲಿ ನಾಶವ ಮಾಡಿ ಜನನ ಮರಣ ವಿರಹಿತನಾದ ಶರಣನೆಂಬುದೀಗ 'ಕಂಭದೊಳಗಣ ಮಾಣಿಕ್ಯದ ಬಿಂದು ನವಕೋಟಿಬ್ರಹ್ಮರ ನುಂಗಿತ್ತಲ್ಲಾ' ಎಂಬ ಶಬ್ದಕ್ಕರ್ಥ. ಅಂತು ಶರಣನೆಂಬ ಚಿದಾಬಿಂದುವೇ ಚಿದ್ಬ್ರಹ್ಮಾಂಡ. ಅಂತು ಚಿದ್ಬ್ರಹ್ಮಾಂಡಸ್ವರೂಪನಾದ ಶರಣನ ಚಿತ್ತುವೇ ಜೀವಹಂಸಸಂಬಂಧವಾದ ಕರಣಂಗಳೆಲ್ಲವನವಗ್ರಹಿಸಿ, ತಾನೆ ಶಿವನೆಂಬ ಚಿದಹಂಕಾರ ನಿರಹಂಕಾರವನೆಯ್ದಿ ನಿರ್ವಯಲಪ್ಪ ಪರಶಿವಲಿಂಗವೆಯಾಗಿರ್ದ ಶರಣನೆಂಬುದೀಗ 'ಅಂಡಜನೆಂಬ ತತ್ತಿ ಹಲವು ಪಕ್ಷಿಯ ನುಂಗಿ ನಿರ್ವಯಲಾಯಿತ್ತು ಗುಹೇಶ್ವರಾ' ಎಂಬ ಶಬ್ದಕ್ಕರ್ಥ. ೬೪

ವ. ನಿರ್ವಿಕಲ್ಪವೆಂಬ ನಿಜದೊಳಗೆ ನಿರಹಂಭಾವದಲಿರ್ದೆ ನೋಡಯ್ಯಾ! ನೋಡಿಹೆನೆಂದಡೆ ನೋಡಲಿಲ್ಲ. ಕೇಳಿಹೆನೆಂದಡೆ ಕೇಳಲಿಲ್ಲ. ಘನ ನಿರಂಜನದ ಬೆಳಗಿಂಬಾದುದನೇನೆಂಬೆ ಗುಹೇಶ್ವರಾ!

ಟೀ. ಕಲ್ಪನೆಗೆ ಬಾರದೆ ಇರ್ದ ಮಹಾಘನಲಿಂಗವೆ ತನ್ನ ನಿಜವೆಂದಱಿದಲ್ಲ, ತಾನೆಂಬ ಅಹಂಭಾವವಳಿದು ಲಿಂಗೈಕ್ಯನಾದ ಶರಣಂಗೆ ಲಿಂಗವು ಭಿನ್ನವಿಟ್ಟಿಲ್ಲವಾಗಿ, ಲಿಂಗವ ನೋಡಿ ಕೂಡಿಹೆನೆಂಬ ಅವಸ್ಥೆಗಳೇನೂ ಇಲ್ಲದೆ, ಮಹಾಘನಲಿಂಗವೇ ತಾನಾಗಿ ವಿಶ್ರಮಿಸಿ ನಿಂದ ಶರಣನ ನಿಲವನುಪಮಿಸಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೬೫

ವ. ತೆಱಹಿಲ್ಲದ ಘನವು ಕುಱುಹಿಂಗೆ ಬಾರದ ಮುನ್ನ ತೋಱಿದವರಾರೋ ಮಹಾಘನಲಿಂಗೈಕ್ಯವನು? ಆಱೂಥಿಯ ಕೂಟದಲ್ಲಿ ನಾನಾರುವ

ಸಾಕ್ಷಿಯ ಕಾಣೆನು ! ಬೇಱೆ ಮಾಡಿ ನುಡಿಯಬಹುದೇ ಪ್ರಾಣಲಿಂಗ
ವನು ? ಅಱಿವು ಸ್ವಯವಾಗಿ ಮಱಹು ನಷ್ಟವಾದರೆ ಗೊಹೇಶ್ವರಾ,
ನಿಮ್ಮ ಶರಣನುಪಮಾತೀತನು !

ಟೀ. ಮಹಾಘನಲಿಂಗವನು ಶ್ರೀಗುರು ಕುಱುಹಿಂಗೆ ತಂದು ಕರಸ್ಥಲಕ್ಕೆ ಕೊಡದ ಮುನ್ನವೆ ಆ ಶಿಷ್ಯಂಗೆ ಜ್ಞಾನೋದಯವಾಗಿ ಸಂಸಾರಭವಪಾಶವ ತಾನೆ ಛೇದನವ ಮಾಡಿಕೊಂಡು, ಲಿಂಗಾಂಗದ್ವೈಕ್ಯಸಂಬಂಧವ ತಾನೆಯಱಿದು, ಬಯಸಿ ಬಂದ ಬಳಿಕ ಶ್ರೀಗುರು ಉಪದೇಶವ ಮಾಡಿದನೆಂಬುದೀಗ 'ತೇಜಹಿಲ್ಲದ ಘನವು ಕುಱುಹಿಂಗೆ ಬಾರದ ಮುನ್ನ ತೋಱಿದವರಾರು ಹೇಳಾ ಮಹಾಘನಲಿಂಗೈಕ್ಯವನು' ಎಂಬ ಶಬ್ದಕ್ಕರ್ಥ. ಅಂತು ಜ್ಞಾನಸ್ವರೂಪನಾದ ಶರಣನ ಅಂಗ ಪ್ರಾಣಸ್ವರೂಪವೇ ಲಿಂಗ. ಅಂತಪ್ಪ ಅಂಗ ಪ್ರಾಣಕ್ಕೆ ಭೇದವಿಲ್ಲವಾಗಿ ತನ್ನಿಂದ ಲಿಂಗವ ಭಿನ್ನವ ಮಾಡಿ ನುಡಿಯಬಾರದೆಂಬುದೀಗ 'ಬೇಱೆ ಮಾಡಿ ನುಡಿಯಬಹುದೇ ಪ್ರಾಣಲಿಂಗವನು' ಎಂಬ ಶಬ್ದಕ್ಕರ್ಥ. ಅಂತು ಸಮ್ಯಗ್‌ಜ್ಞಾನಸ್ವರೂಪನಾಗಿ ಅಜ್ಞಾನನಿವೃತ್ತಿಯಾಗಿ ಮಹಾಲಿಂಗದಲ್ಲಿ ಐಕ್ಯವಾದ ಶರಣನ ನಿಲವನುಪಮಿಸಬಾರದೆಂಬುದೀಗ 'ಅಱಿವು ಸ್ವಯವಾಗಿ ಮಱಹು ನಷ್ಟವಾದರೆ ಗೊಹೇಶ್ವರಾ, ನಿಮ್ಮ ಶರಣನುಪಮಾತೀತ' ನೆಂಬ ಶಬ್ದಕ್ಕರ್ಥ. ೬೬

ವ. ನುಡಿಯಿಂದ ನಡೆಗೆಟ್ಟಿತ್ತು. ನಡೆಯಿಂದ ನುಡಿಗೆಟ್ಟಿತ್ತು. ಭಾವದ
ಗುಸುಟು ತಾನೆ ಸಾಚಿ ಮಾಡುದು. ಗೊಹೇಶ್ವರನೆಂಬ ಅಱಿವು
ಸಿನೆ ಬಂಜೆಯಾಯಿತ್ತಲ್ಲಾ !

ಟೀ. ಶರಣ ತಾನೆಲ್ಲಾ ಲಿಂಗವೆಂದು ತನ್ನ ಸಮ್ಯಗ್‌ಜ್ಞಾನಾನುಭಾವವರ್ತನೆಯಿಂದಲಱಿದು ಭಿನ್ನ ಕ್ರಿಯಾಚಾರವನಳಿದ ಶರಣನೆಂಬುದೀಗ 'ನುಡಿಯಿಂದ ನಡೆಗೆಟ್ಟಿತ್ತು' ಎಂಬ ಶಬ್ದಕ್ಕರ್ಥ. ಅಂತು ಶರಣ ತಾನೆ ಲಿಂಗವಾಗಿ ತನ್ನನಱಿದು, ತಾನೆ ಲಿಂಗವೆಂಬ ಮಹದಹಂಕಾರದ ಅಱಿವಿನ ಉಲುಹನು ನಿರಹಂಕಾರ ಕ್ರೀಯಿಂದಳಿದು ನಿಶ್ಶಬ್ದವಾಗಿ ನಿಂದುದೆ ಲಿಂಗೈಕ್ಯವೆಂಬುದೀಗ 'ನಡೆಯಿಂದ ನುಡಿಗೆಟ್ಟಿತ್ತು' ಎಂಬ ಶಬ್ದಕ್ಕರ್ಥ. ಅಂತು ತಾನೆಂಬುದನಳಿದು ಶರಣ ಲಿಂಗವೆಯಾದಲ್ಲಿ ಭಾವ ನಿರ್ಭಾವವಾಯಿತ್ತು, ಅಱಿವು ಹುಟ್ಟುಗೆಟ್ಟುಪೋಯಿತ್ತೆಂಬುದೀಗ 'ಭಾವದ ಗುಸುಟು ತಾನೆ ಸಾಚಿ ಮಾಡುದು. ಗೊಹೇಶ್ವರನೆಂಬ ಅಱಿವು ಸಿನೆ ಬಂಜೆಯಾಯಿತ್ತಲ್ಲಾ' ಎಂಬ ಶಬ್ದಕ್ಕರ್ಥ. ೬೭

**ವ.** ಕರ್ಪೂರದ ಕಳ್ಳನ ಹುಲ್ಲಿನಲ್ಲಿ ಕಟ್ಟಲು, ಅಗ್ನಿಯೆಂಬ ಹಿತವ ಬಂದು ಬಿಡಿಸಲೊಡನೆ ಪಾಶ ಬೆಂದು, ಕಳ್ಳ ತನ್ನಲ್ಲಿಯೆ ಅಡಗಿದನು ! ಬಯಲ ಶರಣಂಗೆ ಬಯಲ ಪಾಶ ಬಂದು ಕಟ್ಟಲು, ಬಯಲ ಲಿಂಗ ಬಂದು ಬಿಡಿಸಲು, ಬಯಲು ಬಯಲು ಏಕವಾಯಿತ್ತು ! ಮಹಾಲಿಂಗಕಲ್ಲೇಶ್ವರನೆಂಬ ಸಂಪತ್ತು ಸರ್ವಶೂನ್ಯವಾಯಿತ್ತು !!

**ಟೀ.** ಬಯಲೆಂದರೆ ಮಹಾಘನಲಿಂಗ. ಅಂತಪ್ಪ ಲಿಂಗದ ತದಂಶವೇ ಶರಣನೆಂಬುದೀಗ ಬಯಲ ಶರಣನೆಂಬ ಶಬ್ದಕ್ಕರ್ಥ. ಅಂತಪ್ಪ ಶರಣಂಗೆ ಶಿವಾಜ್ಞೆಯಿಂದ ಬಯಲೆಂಬ ಮಿಥ್ಯಾಮಾಯಾಪಾಶ ಬಂದು ಕಟ್ಟಲು, ಆ ಬಯಲೆಂಬ ಮಹಾಘನಲಿಂಗವೆ ಬಂದು ಶರಣನ ಅಂಗವನೆಲ್ಲವನಂಗೀಕರಿಸಿ, ಮಾಯಾಪಾಶಂಗಳನಳಿಯಲು ಶರಣ ಲಿಂಗದೊಳೈಕ್ಯವಾಗಿ, ಶರಣನೆಂಬ ಪೂಜಕನೆಲ್ಲಾ ಲಿಂಗವೆಂಬ ಪೂಜ್ಯನಾಗಿ, ಅಂಗದ ಪೂಜಾವೈಭವದ ಭಿನ್ನಕ್ರೀಗಳೇನೂ ಇಲ್ಲದೆ ಹೋಯಿತ್ತು ಶಿಖಿ ಕರ್ಪೂರಯೋಗದಂತೆ, ಎಂಬುದೀ ವಚನದ ತಾತ್ಪರ್ಯಾರ್ಥ. ೬೮

**ವ.** ಮನದ ಕೊನೆಯ ಮೇಲೆ ನೆನೆದ ನೆನಹು ಜನನ ಮರಣವ ನಿಲಿಸಿ, ಜ್ಞಾನಜ್ಯೋತಿಯ ಉದಯ ಭಾನುಕೋಟಿಯ ಮೀಜಿತ್ತು. ಸ್ವಾನುಭಾವದ ಉದಯ ಜ್ಞಾನಶೂನ್ಯದಲಡಗಿದ ಘನವನೇನೆಂಬೆ ಗುಹೇಶ್ವರಾ ?

**ಟೀ.** ಮನಕ್ಕೆ ಸದ್ವಿವೇಕದೋಜೆ, ಸಕಲ ತತ್ತ್ವಂಗಳ ನೀತಿಮಾಡಿ, ತನ್ನ ನಿಜವೇ ಮಹಾಘನಲಿಂಗವೆಂದರಿದು, ಲಿಂಗದ ನೆನಹು ಘಟಿಸಿ ತುರಿಯಾವಸ್ಥೆಯಿಂದ ಲಿಂಗಾಂಗಸಂಗಿಯಾದಲ್ಲಿ ಹುಟ್ಟಿಹೊಂದಿನ ದೇಹವಾಸನೆಯಳಿಯಿತ್ತು. ಅಂತು ದೇಹವಾಸನೆಯಳಿದ ಶರಣನೆಲ್ಲಾ ಲಿಂಗವೆಯಾಗಿ ಭಿನ್ನದೋಜವೆ ಅಖಂಡಿತ ಜ್ಞಾನಪ್ರಕಾಶಮಯನಾಗಿ ತಾನೆ ಶಿವನೆಂದು ಶಿವೋಹಂಭಾವ ನೆಲೆಗೊಂಡಲ್ಲಿ, ಆ ಶಿವೋಹಂಭಾವದಜೀವು ತನ್ನಲ್ಲಿ ಅಡಗಿ ನಿಂದ ಲಿಂಗೈಕ್ಯನ ಘನವನುಪಮಿಸಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೬೯

**ವ.** ಉದಕದೊಳಗಣ ಕಿಚ್ಚಿನಂತೆ ಲಿಂಗೈಕ್ಯವು ! ವಾಯು ನುಂಗಿದ ಪರಿಮಳದಂತೆ ಲಿಂಗೈಕ್ಯವು ! ಉರಿಯೊಳಡಗಿದ ಕರ್ಪೂರದಂತೆ ಲಿಂಗೈಕ್ಯವು ! ಭಾವ ನಟಿಸಿದ ಬಯಲಿನಂತೆ ಲಿಂಗೈಕ್ಯವು ! ಅಜೀವು ನುಂಗಿದ ಮಜಹಿನಂತೆ ಲಿಂಗೈಕ್ಯವು ! ‘ ಯತೋ ವಾಚೋ ನಿವ

ರ್ತಂತೇ ಅಪ್ರಾಪ್ಯ ಮನಸಾ ಸಹ ' ಎಂದುದಾಗಿ, ವಾಙ್ಮನಕ್ಕಗೋಚರವಾದ ಮಹಾಘನಶರಣನನೊಳಕೊಂಡು, ಥಳಥಳಿಸಿಬೆಳಬೆಳಗಿ ಹೊಳೆವುತ್ತ ನಿಸ್ತಬ್ದಬ್ರಹ್ಮವಾಗಿರ್ದನಯ್ಯಾ ನಮ್ಮ ಶಂಭುಜಕ್ಕೇಶ್ವರನು !

ಟೀ. ಈ ವಚನ ಕಾಣಬಂದರ್ಥ. ೭೦

ವ. ಆನು ನೀನೆಂಬುದು ತಾನಿಲ್ಲ. ತಾನಱಿದ ಬಳಿಕ ಏನೂಯಿಲ್ಲ. ಇಲ್ಲದುದು ಇಲ್ಲದುದು ಎಲ್ಲಿಪ್ಪುದೋ ? [1]ಇಲ್ಲಾದುದಿಲ್ಲಾದುದೆಂತಿಪ್ಪುದೋ ?[1] ಅನುವನಱಿದು ತನುವ ಮಱೆದಡೆ ಭಾವರಹಿತ ಗೊಹೇಶ್ವರ ಬಯಲು !

ಟೀ. ಸಮ್ಯಗ್ಜ್ಞಾನದಿಂದ ತನ್ನ ನಿಜವೇ ಮಹಾಘನಲಿಂಗವೆಂಬ ಅನುವನಱಿದು, ಲಿಂಗಾಂಗಸಂಯೋಗಿಯಾಗಿ, ಅಂಗಭಾವವಳಿದು ಶರಣನೆಲ್ಲಾ ಮಹಾಘನಲಿಂಗವೆಯಾದಲ್ಲಿ, ಶರಣ ಲಿಂಗವೆಂಬ ಎರಡಿಲ್ಲ ಅಂತು ಎರಡಿಲ್ಲದೆ ಇರ್ದ ಲಿಂಗೈಕ್ಯನ ನಿಲವು ಎಂತಿಪ್ಪುದೆಂದು ಆರಿಗೂ ಅಱಿಯಬಾರದು. ಶರಣ ಲಿಂಗವೆಯಾಗಿಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೭೧

ವ. ಆನು ನೀನೆಂಬ ಮೋಹವೆಲ್ಲಿಯದೋ ? ಭಾವ ನಿರ್ಭಾವವೆಂಬ ಪ್ರಸಂಗ ಎಲ್ಲಿಯದೋ ಹೇಳಾ ! ಮನಲೀಯ ಮನಲೀಯ ಉಭಯ ಭಾವರಹಿತ ಕೂಡಲಚೆನ್ನಸಂಗಾ, ಲಿಂಗೈಕ್ಯವು.

ಟೀ. ಅಂಗ ಲಿಂಗ, ಭಾವ ನಿರ್ಭಾವವೆಂಬ ಭೇದವೆಲ್ಲವೂ ಮನದಿಂದ. ಅಂತಪ್ಪ ಮನವೇ ಲಿಂಗದೊಳೈಕ್ಯವಾದಲ್ಲಿ ಅಂಗ ಲಿಂಗವೆಂಬ ಭೇದವಿಲ್ಲದೆ ಮಹಾಘನಲಿಂಗವೆಯಾಗಿರ್ದ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೭೨

ವ. ಪ್ರಥಮದಲ್ಲಿ ವಸ್ತು ಏನೂ ಏನೂ ಇಲ್ಲದ ಮಹಾಘನಶೂನ್ಯಬ್ರಹ್ಮವಾಗಿದ್ದಿತ್ತು. ಅಂತಿರ್ದ ಪರವಸ್ತು ತಾನೆ ತನ್ನ ಲೀಲೆಯಿಂದ ತನ್ನ ದಿವ್ಯಾನಂದಸ್ವಲೀಲಾಸ್ವಭಾವದಿಂದಾದುದು ಆತ್ಮನೆಂಬಂಗಸ್ಥಲ. ಅಂತಾದ ಜೀವಾತ್ಮನೆಂಬ ಅಂಗಸ್ಥಲಕ್ಕೆ ಸೇರಿದ ತತ್ತ್ವಂಗಳಿಪ್ಪತ್ತೈದು.

[1] ಇಲ್ಲದುದಿಲ್ಲವುದೆಂತಿಪ್ಪುದೋ ? (ಎ. ರಾ.)

ಅವಾವುವಯ್ಯಾ ಎಂದಡೆ : ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು, ವಾಗಾದಿ ಕರ್ಮೇಂದ್ರಿಯಂಗಳೈದು, ಶಬ್ದಾದಿ ವಿಷಯಂಗಳೈದು, ಪ್ರಾಣಾದಿ ವಾಯುಗಳೈದು, ಮನ ಬುದ್ಧಿ ಚಿತ್ತ ಅಹಂಕಾರ ಜೀವಂಗಳೈದು. ಅಂತು ಅಂಗತತ್ತ್ವಂಗಳಿಪ್ಪತ್ತೈದು. ಇಂತು ಅಂಗತತ್ತ್ವ ಇಪ್ಪತ್ತೈದು ತನ್ನೊಳಗೆ ಸಮರಸತ್ವವನೆಯ್ದಿಸಲೋಸುಗ ಭಕ್ತಿ ತದರ್ಥವಾಗಿ ಆ ಮಹಾಘನ ಪರಾತ್ಪರವಪ್ಪ ದಿವ್ಯಲಿಂಗವು ಹನ್ನೊಂದು ತತ್ತ್ವವಾಯಿತ್ತು. ಇಂತೀ ಹನ್ನೊಂದು ತತ್ತ್ವದ ಪರಿಕ್ರಮವೆಂತೆಂದೊಡೆ : ಶಾಂತ್ಯಾದಿ ಶಕ್ತಿಗಳೈದು, ಶಿವಾದಿ ಕರ್ತೃಗಳೈದು, ಪರಶಿವತತ್ತ್ವವೊಂದು. ಇಂತೀ ಲಿಂಗತತ್ತ್ವ ಹನ್ನೊಂದು. ಆ ಅಂಗತತ್ತ್ವ ಲಿಂಗತತ್ತ್ವವೆಂಬ ಉಭಯತತ್ತ್ವ ಮೂವತ್ತಾರು. ಇಂತಿವಱ ಸಮರಸೈಕ್ಯವೆಂತುಟಯ್ಯಾ ಎಂದಡೆ : ನಿವೃತ್ತಿಶಕ್ತಿಯುಸ್ಸೈದಿ ವಾಗಾದಿ ಕರ್ಮೇಂದ್ರಿಯಂಗಳೈದು ಕರ್ಮಸಾದಾಖ್ಯವನೊಡಗೂಡಿದಲ್ಲಿ ಪೃಥ್ವಿತತ್ತ್ವ ಬಯಲಾಯಿತ್ತು. ಪ್ರತಿಷ್ಠಾಶಕ್ತಿಯುಸ್ಸೈದಿ ಶಬ್ದಾದಿ ವಿಷಯಂಗಳೈದು ಕರ್ತೃಸಾದಾಖ್ಯವನೊಡಗೂಡಿದಲ್ಲಿ ಅಪ್ಪು ತತ್ತ್ವ ಬಯಲಾಯಿತ್ತು. ವಿದ್ಯಾಶಕ್ತಿಯುಸ್ಸೈದಿ ಶ್ರೋತ್ರಾದಿ ಜ್ಞಾನೇಂದ್ರಿಯಂಗಳೈದು ಮೂರ್ತಿಸಾದಾಖ್ಯವನೊಡಗೂಡಿದಲ್ಲಿ ತೇಜತತ್ತ್ವ ಬಯಲಾಯಿತ್ತು. ಶಾಂತಿಶಕ್ತಿಯುಸ್ಸೈದಿ ಪ್ರಾಣಾದಿ ವಾಯುಗಳೈದು ಅಮೂರ್ತಿಸಾದಾಖ್ಯವನೊಡಗೂಡಿದಲ್ಲಿ ವಾಯುತತ್ತ್ವ ಬಯಲಾಯಿತ್ತು. ಶಾಂತ್ಯತೀತಶಕ್ತಿಯುಸೆಯ್ದಿ ಮನ ಬುದ್ಧಿ ಚಿತ್ತ ಅಹಂಕಾರ ಜೀವಂಗಳೈದು ಶಿವಸಾದಾಖ್ಯವನೊಡಗೂಡಿದಲ್ಲಿ ಆಕಾಶತತ್ತ್ವ

ಇಂತೀ ಪಂಚವಿಂಶತಿ ತತ್ತ್ವಂಗಳು ಲಿಂಗೈಕ್ಯವಾಗಲೊಡನೆ ಲಿಂಗತತ್ತ್ವ ಹನ್ನೊಂದು ತಾವು ಒಂದೊಂದನೊಡಗೂಡಿ ಏಕಾರ್ಥವಾದಲ್ಲಿ ಕುಳಸ್ಥಳವಡಗಿತ್ತು. ಇಂತು ಕುಳಸ್ಥಲ ಸ್ಥಲಕುಳವಡಗಲೊಡನೆ ಮಹಾಘನ ಪರಾತ್ಪರವಪ್ಪ ದಿವ್ಯಲಿಂಗವು ವಾರಿಕಲ್ಲು ಕರಗಿ ನೀರಾದಂತೆ ತನ್ನ ಪರಮಾನಂದದಿಂದವೆ ಸರ್ವಶೂನ್ಯವಾಯಿತ್ತು. ಅದೆಂತೆನಲು,

ಸಾಕ್ಷಿ :

ಅನಾದಿಸಿದ್ಧಸಂಸ್ಕಾರಂ ಕರ್ತೃ ಕರ್ಮ ವಿವರ್ಜಯೇತ್
ಸ್ವಯಮೇವ ಭವೇದ್ದೇಹೀ ಸ್ವಯಮೇವ ವಿಲೀಯತೇ

ಅಂತಃ ಶೂನ್ಯಂ ಬಹಿಃ ಶೂನ್ಯಂ ಶೂನ್ಯಶೂನ್ಯಾ ದಿಶೋ ದಶ
ಸರ್ವಶೂನ್ಯಂ ನಿರಾಕಾರಂ ನಿರ್ದ್ವಂದ್ವಂ ಪರಮಂ ಪದಂ

ಎಂದುದಾಗಿ,ಇಂತೀ ಅಂಗತತ್ತ್ವವಿಪ್ಪತ್ತೈದು ಲಿಂಗತತ್ತ್ವ ಹನ್ನೊಂದು, ಇಂತೀ ಉಭಯತತ್ತ್ವ ಏಕಾರ್ಥವಾಗಿ ಸರ್ವಶೂನ್ಯವನೆಯ್ದಿದ ಪರಿಕ್ರಮದ ನಿರ್ಣಯದ ಬೆಡಗು ತತ್ತ್ವಮಸ್ಯಾದಿ ವಾಕ್ಯಾರ್ಥಂಗಳಲ್ಲಿ ಕಾಣಲಾಯಿತ್ತು. ಅದೆಂತೆಂದಡೆ : ತತ್ಪದವೇ ಲಿಂಗ, ತ್ವಂ ಪದವೇ ಅಂಗ, ಈ ಎರಡರ ಐಕ್ಯವೇ ಅಸಿ ಎಂದುದಾಗಿ, ಇಂತು ಸಕಲನಾಗಬಲ್ಲ, ಸಕಲ ನಿಃಕಲನಾಗಬಲ್ಲ, ಸಕಲ ನಿಃಕಲಾತೀತನಾಗಿ ಏನೂ ಏನೂ ಇಲ್ಲದ ಮಹಾಘನಶೂನ್ಯಬ್ರಹ್ಮವಾಗಿ ಇರಬಲ್ಲನಯ್ಯಾ ನಮ್ಮ ಗೊಹೇಶ್ವರಲಿಂಗವು !

**ಟೀ.** ಈ ವಚನ ಕಾಣಬಂದರ್ಥ. ೭೩

**ವ.** ಏನೆಂಬೆನೇನೆಂಬೆನೊಂದೆರಡಾದುದ ! ಏನೆಂಬೆನೇನೆಂಬೆನೆರಡೊಂದಾದುದ ! ಅವಿರಳಘನಲಿಂಗೈಕ್ಯವ ಮಹಾದಾನಿ ಕೂಡಲಸಂಗಮದೇವ ತಾನೆ ಬಲ್ಲಾ !!

**ಟೀ.** ಅಖಂಡಾದ್ವಯಮಪ್ಪ ಪರಶಿವಲಿಂಗವು ತಾನೆ ತನ್ನ ಲೀಲೆಯಿಂದ ಲಿಂಗ ಶರಣನೆಂಬೆರಡಾಗಿ ಪೂಜ್ಯ ಪೂಜಕರೆನಿಸಿದ ಬಳಿಕ, ಲಿಂಗಾಂಗಸ್ವೈಕ್ಯ ಕ್ರೀಯಿಂದ ಭೇದವಳಿದು ಶರಣನೆಲ್ಲಾ ಮಹಾಘನಲಿಂಗವೆ ತಾನಾಗಿಪ್ಪನು. ಅಂತು ಶರಣನೆಲ್ಲಾ ಲಿಂಗವೆಯಾಗಿಪ್ಪ ವರವ ಲಿಂಗವೆ ಕೊಟ್ಟು, ಲಿಂಗವಾದುದ ಲಿಂಗವೆ ಬಲ್ಲನಲ್ಲದೆ, ಅಜೀವ ಅಱುಹಿಸಿಕೊಂಬವೆಂಬವೆರಡಿಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೭೪

**ವ.** ಸತ್ತಾತನೊಬ್ಬ, ಹೊತ್ತಾತನೊಬ್ಬ, ಇವರಿಬ್ಬರನೂ ಒಯ್ದು ಸುಟ್ಟಾತನೊಬ್ಬ ! ಮದುವಣಿಗನಾರೋ ? ಮದುವಳಿಗೆ ಯಾರೋ ? ಮದುವೆಯ ನಡುವೆ ಮರಣವಡ್ಡಬಿದ್ದಿತ್ತು ! ಹಸೆಯುಳಿಯದ ಮುನ್ನ ಮದುವಣಿಗನಳಿದ ! ಗೊಹೇಶ್ವರಾ, ನಿಮ್ಮ ಶರಣನೆಂದೂ ಅಳಿಯ !!

**ಟೀ.** ಸತ್ತಾತನೆಂದರೆ ಲಿಂಗವು. ಹೊತ್ತಾತನೆಂದರೆ ಆ ಲಿಂಗವ ಅಂಗದಲ್ಲಿ ಧರಿಸಿದ ಶರಣನು. ಅಂತಪ್ಪ ಶರಣ ಲಿಂಗವೆರಡೂ ಒಂದೇ ಮಹಾಘನಲಿಂಗ

ವೆಂದು ನಿಜವನರುಹಿಸಿ ಕೊಟ್ಟು ದ್ವೈತಭಾವವನು ಮಹಾಜ್ಞಾನಾಗ್ನಿಯಿಂದ ದಹನವ ಮಾಡಲು ಅದೀಗ 'ಸತ್ತಾತನೊಬ್ಬ, ಹೊತ್ತಾತನೊಬ್ಬ, ಇವರಿಬ್ಬರನೂ ಒಯ್ದು ಸುಟ್ಟಾತನೊಬ್ಬ' ನೆಂಬ ಶಬ್ದಕ್ಕರ್ಥ. ಅಂತು ಮಹಾಜ್ಞಾನಾಗ್ನಿಯಿಂದ ಆತ್ಮನೆಂಬಂಗವು ಲಿಂಗವು ಎರಡೂ ಏಕರಸವಾಗಲು ಶರಣಸತಿ, ಲಿಂಗಪತಿ ಎಂಬ ಭಾವ ಕೈಗೂಡಲಾಕ್ಷಣವೆ ಉಭಯಭಾವವಳಿಯಿತ್ತೆಂಬುದೀಗ 'ಮದುವಣಿಗನಾರೋ? ಮದುವಳಿಗೆ ಯಾರೋ? ಮದುವೆಯ ನಡುವೆ ಮರಣವಡ್ಡಬಿದ್ದಿತ್ತು' ಎಂಬ ಶಬ್ದಕ್ಕರ್ಥ. ಹಸೆಯೆಂದರೆ ಸದಾಚಾರ ಕ್ರೀ. ಅಂತಪ್ಪ ಸದಾಚಾರಕ್ರೀಯಿದ್ದಂತೆ ಶರಣಸಂಗದೊಳಗೆ ಲಿಂಗೈಕ್ಯವಾಗಿ, ಭಿನ್ನವಳಿದು ಶರಣನೆಲ್ಲಾ ಮಹಾಘನಲಿಂಗವೆಯಾಗಿ ನಿತ್ಯನಾಗಿರ್ದನೆಂಬುದೀಗ 'ಹಸೆಯುಳಿಯದ ಮುನ್ನ ಮದುವಣಿಗನಳಿದ ಗೊಹೇಶ್ವರಾ, ನಿಮ್ಮ ಶರಣನೆಂದೂ ಅಳಿಯ' ನೆಂಬ ಶಬ್ದಕ್ಕರ್ಥ. ೭೫

ವ. ದೃಷ್ಟಕ್ಕೆ ದೃಷ್ಟ ಮುಂದೆ ಇಲ್ಲ, ಇಲ್ಲ. ಮಾಡಿದಡೇನಹುದೋ? ಮಾಡದಿರ್ದಡೇನಹುದೋ? ಗೊಹೇಶ್ವರನೆಂಬ ಅರುಹಿನ ಕುರುಹು ಮುಂದೆ ಇಲ್ಲ, ಇಲ್ಲ. ಮಾಡಿದಡೇನಹುದೋ? ಮಾಡದಿರ್ದಡೇನಹುದೋ?

ಟೀ. ಲಿಂಗದಲ್ಲಿ ಅಂಗ ಲೀಯವಾಗಿ, ಜ್ಞಾನದಲ್ಲಿ ಮನ ಲೀಯವಾದ ಬಳಿಕ, ಆ ಶರಣ ಸತ್ಕ್ರಿಯೋಪಚಾರಂಗಳ ಮಾಡಿದಡೆಯೂ ಉಪಾಧಿಕನಲ್ಲ. ಮಾಡದಿರ್ದಡೆಯೂ ತಾಮಸಿಯಲ್ಲ. ಈ ಉಭಯವೂ ಆತಂಗಿಲ್ಲವಾಗಿ, ಸ್ವತಂತ್ರ ಮಹಿಮನಾಗಿ ತನ್ನ ಲೀಲೆಯಲ್ಲಿ ತಾನೆ ಇಪ್ಪನೆಂಬುದೀ ವಚನದ ತಾತ್ಪರ್ಯಾರ್ಥ. ೭೬

ಐಕ್ಯಸ್ಥಲ ಸಂಪೂರ್ಣ

ಅಂತು ಸ್ಥಲ ೧೫ಕ್ಕಂ ಶ್ಲೋಕ ೧೨೨ಕ್ಕಂ ವಚನ ೬೮೧ಕ್ಕಂ

ಮಂಗಳಂ

ಶ್ರೀ

# ೧೬ ಸ್ವಲೀಲಾನಂದಭಕ್ತಿಸ್ಥಲ

ಸೂತ್ರ. ಅಂತು ಮಹಾಘನಲಿಂಗವು ತನ್ನ ಸ್ವಲೀಲೆಯಿಂದ ಲಿಂಗಾಂಗ ವೆರಡಾಗಿ, ಪೂಜ್ಯಪೂಜಕನೆನಿಸಿದ ಭೇದದಿಂದ ಎರಡಾಗಿ ತೋಱಿದಲ್ಲಿ, ಆ ಎರಡಾ ದುದು ಒಂದೇ ವಸ್ತುವೆಂದಱಿದು, ಅಂಗ ಲಿಂಗವೆಂಬ ಭೇದವಳಿದ ಜ್ಞಾನಕ್ರೀ ಯಿಂದ ಅಂಗವೆಲ್ಲಾ ಲಿಂಗವೆಯಾದುದೀಗ ಐಕ್ಯಸ್ಥಲ. ಅಂತು ಲಿಂಗದಲ್ಲಿ ಐಕ್ಯ ವಾಗಿ ಲಿಂಗವೆಯಾಗಿಪ್ಪ ಶರಣನ ಚಾರಿತ್ರವೆಂತೆಂದಡೆ : ಶರಣ ಲಿಂಗವಾಗಿಪ್ಪನಾಗಿ ಲಿಂಗ ತಾನೆಂಬ ಅಱಿವಿನ ಹಂಮಿಲ್ಲದಿಪ್ಪ, ತನ್ನ ನಿಜವ ಮಱೆಯದಿಪ್ಪ, ಬೇಱೊಂದ ಬಯಸದಿಪ್ಪ, ಒಳಹೊಱಗೆನ್ನದೆ ಅಖಂಡ ಲಿಂಗವೆಯಾಗಿಪ್ಪನು ಶರಣ. ಅಂತು ಶರಣ ತಾನೆ ಸ್ವತಂತ್ರಲಿಂಗವಾಗಿಪ್ಪನು. ಅಂತು ಶರಣ ಸ್ವತಂತ್ರಲಿಂಗ ವಾಗಿರ್ದಲ್ಲಿ ತನ್ನ ಸ್ವಲೀಲೆಯಿಂದ ಕ್ರೀಯಲ್ಲಿ ವಿಶ್ರಮಿಸಿ ತನ್ನ ತಾನರ್ಚಿಸಿ ಪೂಜಿಸಿ ಕೊಳುತಿಪ್ಪನಾಗಿ ಸ್ವಲೀಲಾನಂದಭಕ್ತಿಯೆಂದು ಹೇಳಲಾಯಿತ್ತು.

ಸ್ವಲೀಲಾನಂದಭಕ್ತಿಸ್ಥಲಕ್ಕೆ ಶ್ಲೋಕ :

ನಾಶಿವಸ್ಯ ಶಿವೋಪಾಸ್ತಿರ್ಘಟತೇ ಜನ್ಮಕೋಟಿಭಿಃ
ಶಿವಸ್ಯೈವ ಶಿವೋಪಾಸ್ತಿರಿತಿ ನಾನಾ ಶ್ರುತಿಸ್ಥಿತಿಃ

ಟೀ. ಜನ್ಮ-ಜನ್ಮಂಗಳ, ಕೋಟಿಭಿಃ-ಕೋಟಿಗಳಿಂದವೂ, ನಾಶಿವಸ್ಯ-ಶಿವ ನಲ್ಲದಾತಂಗೆ, ಶಿವೋಪಾಸ್ತಿಃ-ಶಿವನ ಸೇವೆ, ನ ಘಟತೆ-ಘಟಿಸುತ್ತಿರದು. ಶಿವಸ್ಯ-ಶಿವನಾದಾತಂಗೆ, ಶಿವೋಪಾಸ್ತಿಃ - ಶಿವನ ಸೇವೆ, ಇತಿ - ಹೀಂಗೆಂಬ ಅರ್ಥದಲ್ಲಿ, ನಾನಾಶ್ರುತಿಸ್ಥಿತಿ:-ಹಲವು ಶ್ರುತಿಗಳ ಸ್ಥಿತಿಯೂ ಉಂಟಾಗಿಹುದು. ೧

ಅದ್ವೈತಭಕ್ತಿಯುಕ್ತಸ್ಯ ಯೋಗಿನಃ ಸಕಲಕ್ರಿಯಾ
ಆಸ್ತೇ ದಗ್ಧಪಟನ್ಯಾಯಾತ್ ಕ್ರಿಯಾಮಾತ್ರಾ ಹಿ ನ ಕ್ರಿಯಾ

ಟೀ. ಅದ್ವೈತಭಕ್ತಿಯುಕ್ತಸ್ಯ - ಅದ್ವೈತ ಭಕ್ತಿಯೊಡನೆ ಕೂಡಿದ, ಯೋಗಿನಃ - ಯೋಗಿಯ, ಸಕಲ - ಸಮಸ್ತವಾದ, ಕ್ರಿಯಾ - ಕ್ರಿಯೆ, ದಗ್ಧಪಟನ್ಯಾಯಾತ್-ಬೆಂದ ಸೀರೆಯ ಪರಿಯಿಂದ, ಕ್ರಿಯಾಮಾತ್ರಾ ಹಿ - ಕ್ರಿಯಾಮಾತ್ರವೆ ಆದುದಾಗಿ, ಆಸ್ತೇ-ಇರುತ್ತಿಹುದು, ಕ್ರಿಯಾ-ಪರಾರ್ಥವಾದ ಕ್ರಿಯೆ, ನ-ಅಲ್ಲ. ಬೆಂದ ಸೀರೆ ಹೇಂಗೆ ನೋಡಿಹೆನೆಂದರೆ ಸೀರೆಯಲ್ಲವೋ ಹಾಂಗೆ ಶಿವಯೋಗಿಯ ಕ್ರಿಯೆಯೂ ಪರಮಾರ್ಥವಾದ ಕ್ರಿಯೆಯಲ್ಲವೆಂಬುದರ್ಥ. ೨

ಯಥಾ ಚಿತ್ರಪಟಸ್ತ್ರೀಣಾಂ ವಿಲಾಸೋ ನೈವ ಬಾಧತೇ
ತಥಾದ್ವೈತವಿಲಾಸಸ್ಥ ಕ್ರಿಯಾಣಾಂ ನೈವ ಬಾಧತೇ

ಟೀ. ಚಿತ್ರಪಟಸ್ತ್ರೀಣಾಂ-ಚಿತ್ರಪಟದಲ್ಲಿ ಬರೆದ ಸ್ತ್ರೀಯರುಗಳ, ವಿಲಾಸ-ವಿಲಾಸವು, ಯಥಾ-ಹೇಂಗೆ, ನ ಬಾಧತೇ-ಬಾಧಿಸದೆ ಇರುವದು, ತಥಾ-ಹಾಂಗೆ, ಕ್ರಿಯಾಣಾಂ - ಕರ್ಮಂಗಳ, ಅದ್ವೈತವಿಲಾಸಸ್ಥ - ಅದ್ವೈತವಿಲಾಸವು, ನ ಏವ ಬಾಧತೇ-ಬಾಧಿಸದೆ ಇಹುದು. ೩

ನ ಪ್ರರೋಹಂತಿ ಬೀಜಾನಿ ಯಥಾ ಭ್ರಷ್ಟಾನಿ ಭೂತಲೇ
ಅದ್ವೈತಭಕ್ತಿಯುಕ್ತಾನಿ ಕರ್ಮಾಣಿ ಚ ತಥೈವ ಹಿ

ಟೀ. ಭ್ರಷ್ಟಾನಿ-ಹುರಿಯಲ್ಪಟ್ಟಂಥ, ಬೀಜಾನಿ-ಬೀಜಗಳು, ಯಥಾ-ಹೇಂಗೆ, ಭೂತಲೇ-ಭೂಮಿಯ ಮೇಲೆ, ನ ಪ್ರರೋಹಂತಿ-ಮೊಳೆಯುತ್ತಿರವೋ, ಅದ್ವೈತಭಕ್ತಿಯುಕ್ತಾನಿ-ಅದ್ವೈತಭಕ್ತಿಯೊಡನೆ ಕೂಡಿದ, ಕರ್ಮಾಣಿ ಚ-ಕರ್ಮಂಗಳು, ತಥೈವ-ಹಾಂಗೆ, ಕದಾಚನ-ಒಮ್ಮೆಯೂ, ನ ಪ್ರರೋಹಂತಿ-ಹುಟ್ಟುತ್ತಿರವು. ೪

ಯಥಾ ವಂಧ್ಯಾಃ ಸ್ತ್ರಿಯೋ ಲೋಕೇ ಫಲಾಯ ನ ಕದಾಚನ
ತಥಾದ್ವೈತಕ್ರಿಯಾ ಲೋಕೇ ಫಲಾಯ ನ ಕದಾಚನ

ಟೀ. ಲೋಕೇ - ಲೋಕದಲ್ಲಿ, ವಂಧ್ಯಾಃ ಸ್ತ್ರಿಯಃ - ಬಂಜೆ ಸ್ತ್ರೀಯರು, ಯಥಾ-ಹೇಂಗೆ, ಕದಾಚನ - ಒಮ್ಮೆಯೂ, ಫಲಾಯ - ಸಂತಾನಕ್ಕೋಸುಗ, ನ ಭವಂತಿ-ಆಗುತ್ತಿರದು, ತಥಾ-ಹಾಂಗೆ, ಲೋಕೇ-ಲೋಕದಲ್ಲಿ, ಅದ್ವೈತಕ್ರಿಯಾ-

ಅದ್ವೈತಕ್ರಿಯೆಗಳು, ಕದಾಚನ-ಎಂದೆಂದೂ, ಫಲಾಯ-ಜಾತ್ಯಾಯುರ್ಭೋಗರೂಪವಾದ ತ್ರಿವಿಧ ಫಲಕ್ಕೋಸುಗ, ನ-ಆಗವು. ೫

ಶಿವರೂಪತಯಾ ಸರ್ವಂ ಯಸ್ಯ ಭಾತಿ ಸ್ವಭಾವತಃ
ಸ್ವೇಚ್ಛಾಚಾರಃ ಸಮಾಚಾರಸ್ತಸ್ಯ ಚಾರ್ಚಾ ಹಿ ಶೂಲಿನಃ

ಟೀ. ಯಸ್ಯ-ಆವಾತಂಗೆ, ಸ್ವಭಾವತಃ-ಸ್ವಭಾವದಿಂದವೆ, ಶಿವರೂಪತಯಾ-ಶಿವರೂಪವಹುದರಿಂದವೇ ಶಿವರೂಪವಾಗಿ, ಸರ್ವಂ-ಸಮಸ್ತವು, ಭಾತಿ-ತೋರುತ್ತಿಹುದು, ತಸ್ಯ-ಆತನ, ಸ್ವೇಚ್ಛಾಚಾರಃ ಸಮಾಚಾರಶ್ಚ-ಸ್ವೇಚ್ಛಾಚಾರದಿಂದ ಆಚರಿಸುತ್ತಿಹುದು, ಶೂಲಿನಃ-ಸದಾಶಿವನ, ಅರ್ಚಾ ಹಿ-ಪೂಜೆಯುಲಾ ! ೬

ಏವಮರ್ಚನಮೀಶಸ್ಯ ಸ್ವೇಚ್ಛಾಚಾರನಿಬಂಧನಾತ್
ಭವತ್ಯೇ ನ ಸಂದೇಹಃ ಶಿವೋಽಹಮಿತಿ ವೇದನಾತ್

ಟೀ. ಏವಂ-ಈ ಪರಿಯಿಂದ, ಅಹಂ-ನಾನು, ಶಿವಮಿತಿ-ಶಿವನೆಂದು, ವೇದನಾತ್-ಅರಿವುದರಿಂದ, ಸ್ವೇಚ್ಛಾಚಾರನಿಬಂಧನಾತ್-ತನ್ನ ಇಚ್ಛೆಯ ಆಚರಣೆಯನು ರಚಿಸುತ್ತಿಹನೆ, ಈಶಸ್ಯ-ಶಿವನ, ಅರ್ಚನಂ-ಪೂಜೆ, ಭವತಿ-ಆಗುತ್ತಿಹುದು, ಸಂದೇಹಃ-ಸಂದೇಹವು, ನ-ಇಲ್ಲ. ೭

ಅಹಮಿತಿ ಶಿವ ಏವ ಸತ್ಯಚಿದ್ಘನಃ ಸ್ಫುರತಿ ತದಾ ಪೃಥಗಸ್ತಿ ನೈವ ವಸ್ತು
ಇದಮಿತಿ ವಪುಷಾ ಚ ತೇನ ಬಂಧನಂ ನ ಹಿ ಶರಣಸ್ಯ ವಿಮೋಚನಂ ನ ಕಿಂಚಿತ್

ಟೀ. ಅಹಮಿತಿ-ನಾನೆಂದು, ಸತ್ಯಚಿದ್ಘನ-ಸಚ್ಚಿದಾನಂದಗಳ ಘಟ್ಟಿಯಪ್ಪ, ಶಿವ ಏವ-ಶಿವನೆಯಾಗಿ, ತದಾ-ಆ ಕಾಲದಲ್ಲಿ, ಸ್ಫುರತಿ-ತೋರುತ್ತಿಹನು, ಪೃಥಕ್-ಬೇರಾದ, ವಸ್ತು-ಪದಾರ್ಥವು, ನೈವ ಇಲ್ಲವೆ ಇಹುದು, ಶರಣಸ್ಯ-ಶರಣಂಗೆ, ತೇನ ವಪುಷಾ-ಆ ದೇಹದಿಂದ, ಇದಮಿತಿ-ಇದುಯೆಂದು ಎಂಬ, ಬಂಧನಂ-ಬಂಧನವು, ನ ಹಿ-ಇಲ್ಲ, ಮೋಚನಂ-ಬಂಧಮೋಚನವು, ಕಿಂಚಿತ್-ಒಪ್ಪಚ್ಚಿ, ನ-ಇಲ್ಲ. ೮

ಬಂಧಮುಕ್ತ್ಯೋರಭಾವೇ ಹಿ ಭಕ್ತಿರುಕ್ತಾ ನಿರರ್ಗಲಾ
ನ ಬಂಧೇ ಮೋಚನೇ ಚಾಽಪಿ ನ ತಯೋಶ್ಚ ಸಮುಚ್ಚಯೇ

ಟೀ. ಹಿ - ಆವುದಾನೊಂದು ಕಾರಣವಾಗಿ, ಬಂಧಮುಕ್ತ್ಯೋಃ-ಬಂಧಮೋಕ್ಷಂಗಳ, ಅಭಾವೇ ಹಿ - ಇಲ್ಲದಿಹಲ್ಲಿಯೆ, ನಿರರ್ಗಲಾ - ಪ್ರತಿಬಂಧವಿಲ್ಲದಿಹಂಥಾ,

ಭಕ್ತಿಃ-ಭಕ್ತಿಯು, ಉಕ್ತಾ-ಹೇಳಲ್ಪಟ್ಟುದು, ಹೇಳಲ್ಪಟ್ಟಭಕ್ತಿ, ಬಂಧೇ-ಬಂಧನದಲ್ಲಿಯೂ, ನ - ಇಲ್ಲ, ಮೋಚನೇ ಚಾಪಿ - ಮೋಚನೆಯಲ್ಲಿಯೂ, ನ - ಇಲ್ಲ, ತಯೋಃ - ಆ ಬಂಧಮೋಕ್ಷಂಗಳ, ಸಮುಚ್ಚಯೇ-ಕೂಡಿದಲ್ಲಿಯೂ, ನ-ಇಲ್ಲ. ೯

ನ ಯೋಗೋ ನ ತಪೋ ನಾರ್ಚಾಕ್ರಮಃ ಕೋಽಪಿ ನ ವಿದ್ಯತೇ
ಅಮಾಯೇ ಶಿವಮಾರ್ಗೇಽಸ್ಮಿನ್ ಭಕ್ತಿರೇಕಾ ಪ್ರಶಸ್ಯತೇ

ಟೀ. ಅಮಾಯೇ-ಮಾಯೆಯಿಲ್ಲದಂಥಾ, ಅಸ್ಮಿನ್-ಈ, ಶಿವಮಾರ್ಗೇ-ಶಿವಮಾರ್ಗದಲ್ಲಿ, ಯೋಗಃ-ಯೋಗವು, ನ ವಿದ್ಯತೇ - ಉಂಟಾಗುತ್ತಿರದು, ತಪಃ - ತಪಸ್ಸು, ನ ವಿದ್ಯತೇ-ಇಲ್ಲ,. ಕೋಪಿ - ಒಂದು, ಕ್ರಮಃ - ಕ್ರಮವು, ನ ವಿದ್ಯತೇ - ಉಂಟಾಗುತ್ತಿರದು, ಭಕ್ತಿಃ-ಭಕ್ತಿಯೂ, ಏಕಾ-ಒಂದೇ, ಪ್ರಶಸ್ಯತೇ-ಕೊಂಡಾಡಲ್ಪಡುತ್ತಿಹುದು. ೧೦

ಜ್ಞಾನಾದೇವ ಹಿ ಮೋಕ್ಷಸ್ಸ್ಯಾನ್ಮೋಕ್ಷಾದುಪರಿ ಶಾಂಭವೀ
ಭಕ್ತಿಃ ಪರತರಾ ಭಾತಿ ಸ್ವತಂತ್ರಾ ನಿಜಲೀಲಯಾ

ಟೀ. ಜ್ಞಾನಾದೇವ-ಸಮ್ಯಗ್‌ಜ್ಞಾನದಿಂದವೇ, ಮೋಕ್ಷಃ-ಕರ್ಮಬಂಧನಮೋಕ್ಷವು, ಸ್ಯಾತ್-ಆಹುದು, ಮೋಕ್ಷಾತ್-ಮೋಕ್ಷಕ್ಕಿಂದವು, ಉಪರಿ-ಮೇಲೆ, ಪರತರಾ-ಅತ್ಯುತ್ತಮವಾದ, ಸ್ವತಂತ್ರಾ-ತನ್ನಾಧೀನವಾದ. ಶಾಂಭವೀ-ಶಿವಸಂಬಂಧಿನಿಯಾದ, ಭಕ್ತಿಃ-ಭಕ್ತಿಯು, ನಿಜಲೀಲಯಾ-ತನ್ನ ಲೀಲೆಯಿಂದ, ಭಾತಿ-ತೋಜುತ್ತಿಹುದು. ೧೧

ಧರ್ಮಾದಿಪುರುಷಾರ್ಥಾನಾಂ ಚತುರ್ಣಾಂ ಪರತಃ ಪರಾ
ಪಂಚಮಃ ಪುರುಷಾರ್ಥೋ ಹಿ ಭಕ್ತಿಃ ಶೈವೀ ಸನಾತನೀ

ಟೀ. ಚತುರ್ಣಾಂ - ನಾಲ್ಕಾದಂಥಾ, ಧರ್ಮಾದಿಪುರುಷಾರ್ಥಾನಾಂ - ಧರ್ಮ ಮೊದಲಾದ ಪುರುಷಾರ್ಥಂಗಳ, ಪರತಃ-ಮೇಲೆ, ಪರಃ-ಮುತ್ತೊಂದಾದ, ಪಂಚಮಃ-ಐದನೆಯದಾದ, ಪುರುಷಾರ್ಥಃ-ಪುರುಷಾರ್ಥವು, ಸನಾತನೀ-ನಿತ್ಯವಾದ ಶಿವಸಂಬಂಧಿನಿಯಾದ, ಭಕ್ತಿಃ-ಭಕ್ತಿಯಲಾ. ೧೨

**ಅತಃ ಪರಾಭಕ್ತಿವಿಲಾಸವೈಭವೇ ಸದಾಶಿವಾದ್ವೈತಪರಾಯಣಃ ಸ್ವಯಂ**
**ಪ್ರಸಾದಮಾಸಾದ್ಯ ನಿಜೈಕ್ಯಸೌಖ್ಯದಂ ಸ್ವಮೇವ ಗಾಯನ್ವಿಚರೇತ್**
**ಸ್ವಲೀಲಯಾ**

ಟೀ. ಅತಃ - ಆದುಕಾರಣವಾಗಿ, ಪರಾಭಕ್ತಿವಿಲಾಸವೈಭವೇ-ಪರಾ-ಪರಿಯೆಂಬ, ಭಕ್ತಿ-ಭಕ್ತಿಯು, ವಿಲಾಸವೈಭವೇ-ವಿಭುತ್ವದಲ್ಲಿ, ಸ್ವಯಂ-ತಾನು, ಸದಾ-ಎಲ್ಲಾಗಳು, ಶಿವಾದ್ವೈತಪರಾಯಣಃ-ಶಿವನ ಅದ್ವೈತದಲ್ಲಿ ತಾತ್ಪರ್ಯ ಉಳ್ಳಾತನಾಗಿ, ನಿಜೈಕ್ಯಸೌಖ್ಯದಂ-ನಿಜ-ತನ್ನ, ಐಕ್ಯ-ಏಕತ್ವವೆಂಬ, ಸೌಖ್ಯದಂ-ಸುಖವನು ಕೊಡುವಂಥಾ, ಪ್ರಸಾದಂ-ಪ್ರಸಾದವನು, ಆಸಾದ್ಯ-ಎಯ್ದಿ, ಸ್ವಮೇವ-ತನ್ನನೇ, ಗಾಯನ್-ಹೇಳುತ್ತಲು, ಸ್ವಲೀಲಯಾ-ತನ್ನ ಲೀಲೆಯಿಂದ, ವಿಚರೇತ್-ಚರಿಸುವುದು. ೧೩

## ಸ್ವಲೀಲಾನಂದಭಕ್ತಿಸ್ಥಲಕ್ಕೆ ವಚನ :

ವ. ಪೂಜೆಯುಳ್ಳನ್ನಕ್ಕ ಲಿಂಗವ ಹಾಡಿದೆ ! ಮಾಟವುಳ್ಳನ್ನಕ್ಕ ಜಂಗಮವ ಹಾಡಿದೆ ! ಜಿಹ್ವೆಯುಳ್ಳನ್ನಕ್ಕ ಪ್ರಸಾದವ ಹಾಡಿದೆ ! ಈ ತ್ರಿವಿಧ ನಾಸ್ತಿಯಾದ ಬಳಿಕ ಎನ್ನ ನಾ ಹಾಡಿಕೊಂಡೆ ಕಾಣಾ ಕೂಡಲಸಂಗಮದೇವಾ !!

ಟೀ. ಸತ್ತು ಚಿತ್ತಾನಂದವಪ್ಪ ಲಿಂಗ ಜಂಗಮ ಪ್ರಸಾದವೇ ತನ್ನ ನಿಜನೆಂದಱಿದು, ಆ ಲಿಂಗ ಜಂಗಮ ಪ್ರಸಾದಕ್ಕೆ ತನು ಮನ ಪ್ರಾಣಂಗಳನರ್ಪಿಸುವನ್ನಕ್ಕ ಶರಣನ ಅಜೀವಿಂಗೆ ಕ್ರಿಯಾಭೇದಚಿಂತನೆದೋಱುತ್ತಿದ್ದಿತ್ತು. ಆ ತನು ಮನ ಪ್ರಾಣಂಗಳ ಲಿಂಗ ಜಂಗಮ ಪ್ರಸಾದಕ್ಕೆ ಅರ್ಪಿಸಿ, ಲಿಂಗ ಜಂಗಮ ಪ್ರಸಾದನೊಳ್ಳೈಕ್ಯವಾದಲ್ಲಿ ಅಜೀವಿನ ಭೇದಚಿಂತನೆಯಳಿದು ಶರಣನೆಲ್ಲಾ ಲಿಂಗವೆಯಾಗಿರ್ದನು. ಅಂತು ಲಿಂಗವೆಯಾಗಿರ್ದ ಶರಣನು ಮಾಡುತ್ತಿರ್ಪ ಕ್ರಿಯೆಯೆಲ್ಲವು ತನ್ನ ತಾನರ್ಚಿಸಿಕೊಂಬ ಸ್ವಲೀಲಾನಂದಭಕ್ತಿಯೆಂಬುದೀ ವಚನದ ತಾತ್ಪರ್ಯಾರ್ಥ. ೧

ವ. ಮಾಡಿ ಮಾಡಿಸಿಕೊಂಬವೆರಡಱ ನಿಲುಕಡೆ ಒಂದೇ. ಗುರು ಒಂದೇ, ಲಿಂಗವೊಂದೇ. ಜಂಗಮವೊಂದೇ, ಪ್ರಸಾದವೊಂದೇ. ಒಂದಾದಲ್ಲಿ ಎರಡಾಗಿ ಮಾಡುವ ಭಕ್ತ ನೀನೇ ಕೂಡಲಸಂಗಮದೇವಾ !

ಟೀ. ಒಂದೆಯಾಗಿರ್ದ ಪರಬ್ರಹ್ಮವು ತಾನೆ ತನ್ನ ಸ್ವಲೀಲಾನಂದದಿಂದ ಗುರು ಲಿಂಗ ಜಂಗಮ ಪ್ರಸಾದವೆಂಬ ಚತುರ್ವಿಧವಾಗಿ, ಆ ಚತುರ್ವಿಧಕ್ಕೆ ಭಕ್ತಿಯ ಮಾಡುವ ಭಕ್ತ ತಾನೆಯಾಗಿ, ತನ್ನ ತಾನರ್ಚಿಸಿಕೊಳ್ಳುತ್ತಿಹ ಶಿವ ತಾನೆ ಎಂಬುದೀ ವಚನದ ತಾತ್ಪರ್ಯಾರ್ಥ. ೨

**ವ.** ಭಕ್ತಂಗೆ ಉತ್ಪತ್ಯವಿಲ್ಲವಾಗಿ ಸ್ಥಿತಿಯಿಲ್ಲ. ಸ್ಥಿತಿಯಿಲ್ಲವಾಗಿ ಲಯವಿಲ್ಲ. ಲಯವಿಲ್ಲವಾಗಿ ದೇಹನಾಮಪ್ರವರ್ತನೆಯಿಲ್ಲ. ಇವಾವವೂ ಇಲ್ಲದ ಕಾರಣ ನಿಮ್ಮ ಶರಣನಂಗ ಬಚ್ಚಬಱಿಯ ಬಯಲು ಗೊಹೇಶ್ವರಾ !

**ಟೀ.** ಪೂಜ್ಯ ಪೂಜಕನಾದ ಲಿಂಗಾಂಗವೆರಡೂ ಒಂದೇ ವಸ್ತುವೆಂದಱಿದು ಭೇದವಳಿದ ಕೂಟವೀಗ ಭಕ್ತಿ. ಅಂತು ಭೇದವಳಿದು ತಾನೆಲ್ಲಾ ಲಿಂಗವೆಯಾಗಿಪ್ಪ ಸದ್ಭಕ್ತಂಗೆ ಉತ್ಪತ್ಯ ಸ್ಥಿತಿ ಲಯವಿಲ್ಲವಾಗಿ ದೇಹವಿಡಿದಿರ್ದು ದೇಹವಾಸನೆಯಿಲ್ಲ. ಆ ಶರಣನ ಅಂಗವೆಲ್ಲಾ ಬಚ್ಚಬಱಿಯ ಲಿಂಗವೆಂಬುದೀ ವಚನದ ತಾತ್ಪರ್ಯಾರ್ಥ. ೩

**ವ.** ಶರಣ ಮೂರ್ತನಲ್ಲ, ಅಮೂರ್ತನಲ್ಲ. ಲಿಂಗದಲ್ಲಿ ಪ್ರಾಣಸಂಚಿತ. ಪ್ರಾಣದಲ್ಲಿ ಪ್ರಸಾದಸಂಹರಣೆ. ಪ್ರಸಾದದಲ್ಲಿ ಕಾಯಾಶ್ರಿತನು. ಲೋಕಲೌಕಿಕಪ್ರಕಾರದುದಯನಲ್ಲ ಕೂಡಲಚೆನ್ನಸಂಗಾ, ನಿಮ್ಮ ಶರಣ.

**ಟೀ.** ಸಾಕಾರವಾಗಿಪ್ಪ ಒಡ್ಡಜೀವನಲ್ಲ ಶರಣ. ಏನೂ ಇಲ್ಲದ ನಿರಾಕಾರವಾಗಿಪ್ಪ ಶೂನ್ಯನಲ್ಲ ಶರಣ. ಅಖಂಡಚೈತನ್ಯವಾಗಿಪ್ಪ ಆ ಲಿಂಗದ ತದಂಶವೇ ಪ್ರಾಣವಾಗಿ ಉದಯಿಸಿದ ಶರಣನೆಂಬುದೀಗ 'ಶರಣ ಮೂರ್ತನಲ್ಲ, ಅಮೂರ್ತನಲ್ಲ. ಲಿಂಗದಲ್ಲಿ ಪ್ರಾಣಸಂಚಿತ' ನೆಂಬ ಶಬ್ದಕ್ಕರ್ಥ. ಅಂತು ಶಿವಾಂಶಿಕನಾದ ಶರಣನ ಪ್ರಾಣವು ತನ್ನ ನಿಜವಪ್ಪ ಲಿಂಗಸ್ವರೂಪವ ಬಿಡದೆ ಧರಿಸಿಕೊಂಡು ಶರಣರೂಪಾಯಿತ್ತೆಂಬುದೀಗ 'ಪ್ರಾಣದಲ್ಲಿ ಪ್ರಸಾದಸಂಹರಣೆ' ಯೆಂಬ ಶಬ್ದಕ್ಕರ್ಥ. ಅಂತು ಶರಣ ತನ್ನ ಲಿಂಗಸ್ವರೂಪವ ಬಿಡದೆ ಧರಿಸಿಕೊಂಡು ದೇಹವನಾಶ್ರಯಿಸಿ ತನ್ನ ತಾನರ್ಚಿಸಿಕೊಳುತ ಲಿಂಗವೆಯಾಗಿಪ್ಪ ಶರಣನೆಂಬುದೀಗ 'ಪ್ರಸಾದದಲ್ಲಿ ಕಾಯಾಶ್ರಿತನು' ಎಂಬ ಶಬ್ದಕ್ಕರ್ಥ. ಅಂತು ಶಿವನ ಸಂಕಲ್ಪದಿಂದಾದ ಜಗದುತ್ಪತ್ಯದಂತಲ್ಲ ಶರಣನುತ್ಪತ್ಯವೆಂಬುದೀಗ 'ಲೋಕಲೌಕಿಕಪ್ರಕಾರದುದಯನಲ್ಲ ಕೂಡಲಚೆನ್ನಸಂಗಾ, ನಿಮ್ಮ ಶರಣನೆ'ಂಬ ಶಬ್ದಕ್ಕರ್ಥ. ೪

**ವ.** ಅನಾಯಾಸದಿಂದ ಮನೆಯ ಮಾಡಿ, ನಿರಾಯಾಸದಿಂದ ಪರಮಸುಖಿ. ರೂಪಿಸುವಲ್ಲಿ ರೂಪಾಧಿಕ, ನೋಡುವಲ್ಲಿ ನೋಟ ಘನ. ಇಂತು ಸಹಜಸಂಗಿಯ ನಿಲವಿನ ಪರಿ ಉದಕದೊಳಗಣ ಬಿಂದು ಉದಯರತ್ನದಂತೆ, ಕೂಡಲಚೆನ್ನಸಂಗಾ, ನಿಮ್ಮ ಶರಣನ ಪರಿ ಬೇಱೆ.

**ಟೀ.** ಮಹಾಘನಲಿಂಗವು ತನ್ನ ತಾನರ್ಚಿಸಿಕೊಂಬ ಲೀಲಾವಿಲಾಸದಿಂದ ದೇಹವೆಂಬ ಮನೆಯ ಮಾಡಿಕೊಂಡು, ಶರಣರೂಪಾಗಿ, ತನ್ನ ನಿಜಸ್ವರೂಪವನೆ ಸಾಕಾರವ ಮಾಡಿ ಕರಸ್ಥಳದಲ್ಲಿ ಮೂರ್ತಿಗೊಳಿಸಿ, ತನ್ನ ತಾನರ್ಚಿಸಿಕೊಳುತ ಆ ಇಷ್ಟಲಿಂಗವ ಭಿನ್ನವಿಡದೆ ಅಖಂಡಜ್ಞಾನದೃಷ್ಟಿಯಿಂದ ನೋಡುತ್ತ, ತನ್ನ ಶಿವತ್ವದ ಘನಸುಖವ ಹಿಂಗದೆ ಸುಖಿಸುತ್ತಿಪ್ಪ ಶರಣನು. ಅಂತಿಪ್ಪ ಶರಣನ ಇರವಿನ ಪರಿ ಎಂತೆಂದಡೆ : ಉದಯಕಾಲದ ಸೂರ್ಯನ ತೇಜ ಜಲಬಿಂದುಗಳಲ್ಲಿ ಪ್ರತಿಬಿಂಬಿಸಿ ಬೆಳಗಿ ತೋರುತ್ತಿರ್ದು, ಆ ಜಲಬಿಂದುಗಳಲ್ಲಿ ಆ ತೇಜ ನಿರ್ಲೇಪಕವಾಗಿಪ್ಪಂತೆ ಶರಣ ದೇಹವಿಡಿದಿರ್ದು ದೇಹಿಯಲ್ಲದೆ ನಿರ್ಲೇಪಕನಾಗಿಪ್ಪ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೫

**ವ.** ಶರಣ ದೃಷ್ಟಾದೃಷ್ಟ ಕಾಣಯ್ಯಾ ! ಮುಟ್ಟದೆ ಮುಟ್ಟುವನಯ್ಯಾ ! ಆಗಿನ ಆಗು ಕಾಣಯ್ಯಾ ! ಭೇದದ ಭೇದ ಕಾಣಯ್ಯಾ ! ಅಱುಹಿನ ಅಱುಹು ಕಾಣಯ್ಯಾ ! ಲಿಂಗದಲ್ಲಿ ಹಿಂಗದ ಬಿಂದು ಕೂಡಲಚೆನ್ನ ಸಂಗಾ, ನಿಮ್ಮಲ್ಲಿ ಸಂಗನಬಸವಣ್ಣನಯ್ಯಾ !!

**ಟೀ.** ಶರಣನು ತಾನೇ ಇಷ್ಟಲಿಂಗವಾಗಿ, ತಾನೇ ಪ್ರಾಣಲಿಂಗವಾಗಿ ತನ್ನ ತಾನರ್ಚಿಸಿಕೊಳ್ಳುತ್ತಿಹನೆಂಬುದೀಗ ‘ ಶರಣ ದೃಷ್ಟಾದೃಷ್ಟ ಕಾಣಯ್ಯಾ ’ ಎಂಬ ಶಬ್ದಕ್ಕರ್ಥ. ಅಂತು ಶರಣ ಸಕಲ ವಿಷಯಪದಾರ್ಥಂಗಳ ಜೀವನಾಗಿ ಮುಟ್ಟುವ ನಲ್ಲ. ಶರಣ ಲಿಂಗವಾಗಿ ಮುಟ್ಟಿ ನಿರ್ಲೇಪಿಯಾಗಿಹನೆಂಬುದೀಗ ‘ ಮುಟ್ಟದೆ ಮುಟ್ಟುವನಯ್ಯಾ ’ ಎಂಬ ಶಬ್ದಕ್ಕರ್ಥ. ಸಕಲಫಲಭೋಗಂಗಳೆಲ್ಲವೂ ಜೇಗೆ ಯನುಳ್ಳವು. ನಿತ್ಯವಾದ ಆಗಿನ ಮುಕ್ತಿಸ್ವರೂಪು. ಆ ಮುಕ್ತಿಸ್ವರೂಪವೇ ಶರಣ ನೆಂಬುದೀಗ ‘ ಆಗಿನ ಆಗು ಕಾಣಯ್ಯಾ ’ ಎಂಬ ಶಬ್ದಕ್ಕರ್ಥ. ಸಕಲ ಜಗತ್ ಪ್ರಪಂಚಿನ ಒಳಗಿರ್ದು ಹೊದ್ದಿಯೂ ಹೊದ್ದದೆಯಿಪ್ಪುದೀಗ ಬ್ರಹ್ಮದ ಭೇದ. ಅಂತಪ್ಪ ಭೇದವನುಳ್ಳ ಆ ಬ್ರಹ್ಮವು ತಾನೆ ಶರಣನೆಂಬುದೀಗ ‘ ಭೇದದ ಭೇದ ಕಾಣಯ್ಯಾ ’ ಎಂಬ ಶಬ್ದಕ್ಕರ್ಥ. ತನ್ನನೆಲ್ಲಾ ಪರಬ್ರಹ್ಮವೆಯಾಗಿ ಕಂಡಱಿದು ಭಿನ್ನದೋಱದೆಯಿಪ್ಪುದೀಗ ಅಱಿವು. ಅಂತಪ್ಪ ಅಖಂಡಜ್ಞಾನಸ್ವರೂಪನು ಶರಣ ನೆಂಬುದೀಗ ‘ ಅಱುಹಿನ ಅಱುಹು ಕಾಣಯ್ಯಾ ’ ಎಂಬ ಶಬ್ದಕ್ಕರ್ಥ. ಮಹಾ ಘನಲಿಂಗದ ಚಿತ್‌ಪ್ರಭಾಂಗವೆಂಬುದೀಗ ಚಿದ್ಬಿಂದು. ಅಂತು ಲಿಂಗದಂಗವಾಗಿ ಹಿಂಗಲಿಲ್ಲದೆಯಿಪ್ಪ ಚಿದ್ಬಿಂದು ತಾನೆ ಲಿಂಗವ ಕೂಡಿಕೊಂಡು ಶರಣರೂಪಾಯಿ ತ್ತೆಂಬುದೀಗ ‘ ಲಿಂಗದಲ್ಲಿ ಹಿಂಗದ ಬಿಂದು ಕೂಡಲಚೆನ್ನಸಂಗಾ, ನಿಮ್ಮಲ್ಲಿ ಸಂಗನ ಬಸವಣ್ಣನಯ್ಯಾ ’ ಎಂಬ ಶಬ್ದಕ್ಕರ್ಥ. ೬

ವ. ಸಮರತಿ ಸಮಕಳೆ ಸಮಸುಖ ಸ್ವಾನುಭಾವ ಹಿರಿದುಕಿಱಿದಾದುದನಾರೂ ಅಱಿಯರು. ಪಾಷಾಣಪರೀಕ್ಷೆವಂತನಂತೆ ಕೂಡಲಸಂಗಮದೇವಯ್ಯಾ, ಗುರುಕರುಣವುಳ್ಳವರ ನಿಜವಿಂತುಟು.

ಟೀ. ಅಖಂಡ ಚಿದಾನಂದಸುಖರತಿಕಳಾಪರಿಪೂರ್ಣಸ್ವರೂಪನಾಗಿ ಹೆಚ್ಚು ಕುಂದಿಲ್ಲದೆಯಿರ್ದ ಮಹಾಘನಲಿಂಗವು ತನ್ನ ಸ್ವಭಾವದಿಂದವೆ ತನ್ನ ತಾನರ್ಚಿಸಿಕೊಂಬ ಲೀಲಾವಿಲಾಸದೊಳ್, ಲಿಂಗವು ಶರಣನೆಂಬ ಹಿರಿದು ಕಿಱಿದಾಯಿತ್ತು. ಅಂತು ಹಿರಿದು ಕಿಱಿದಾದುದು ಒಂದೇ ವಸ್ತುವೆಂದು ಶರಣ ತನ್ನ ನಿಜವ ಗುರುಕರುಣದಿಂದಱಿದು, ಶರಣನೆಲ್ಲಾ ಲಿಂಗವೆಯೆಂದು ತನ್ನ ಲಿಂಗಸ್ವರೂಪವ ತಾನೆ ಅರ್ಚಿಸಿಕೊಳುತಿಪ್ಪನು. ಅಂತಪ್ಪ ಶರಣನ ಚಾರಿತ್ರವ ಇತರ ಮಾರ್ಗಿಗಳಾರೂ ಅಱಿಯರು. ಅದು ಹೇಂಗೆಂದಡೆ : ರತ್ನಪಾಷಾಣದ ತೇಜ ಕಾಂತಿ ಎಲ್ಲಾ ಪಾಷಾಣಂಗಳಿಗಿಲ್ಲದಂತೆ. ಅಂತಪ್ಪ ರತ್ನಪಾಷಾಣದ ಜಾತಿ ಕಲೆಗಳನಱಿವ ದೃಷ್ಟಿವಾಳಿಕೆಯೂ ಒಬ್ಬಂಗಲ್ಲದೆ ಎಲ್ಲರಿಗೆಯೂ ಇಲ್ಲದಂತೆ ಶರಣನ ಜ್ಞಾನಚಾರಿತ್ರ ವಾರಿಗೆಯೂ ಇಲ್ಲವೆಂಬುದೀ ವಚನದ ತಾತ್ಪರ್ಯಾರ್ಥ. ೭

ವ. ಹಸಿವಿನ ಪ್ರೇಮಕ್ಕಾಗಿ ಹುಸಿದು ಮಜ್ಜನಕ್ಕೆಱೆವರು. ದೇವರಿಲ್ಲ, ಭಕ್ತರಿಲ್ಲ. ನಾನೂ ಇಲ್ಲ, ೧ಮತ್ತೆ ನೀನೂ೧ ಇಲ್ಲ. ಗೊಹೇಶ್ವರಾ, ಗೊಹೇಶ್ವರಾ, ಪೂಜಿಸುವವರೂ ಇಲ್ಲ, ಪೂಜೆಗೊಂಬವರೂ ಇಲ್ಲ !!

ಟೀ. ಮಹಾಘನಲಿಂಗವು ತನ್ನ ತಾನರ್ಚಿಸಿಕೊಂಬ ಜ್ಞಾನಾಪ್ಯಾಯನದೊಳ್, ಶರಣರೂಪಾಗಿ ತನ್ನ ತಾನರ್ಚಿಸಿಕೊಳುತ್ತಿಹನು. ಅಂತು ತನ್ನ ತಾನರ್ಚಿಸಿಕೊಂಬ ಪೂಜಾಕ್ರಿಯೆಗಳಿಗೆ ಫಲವಿಲ್ಲ, ಪದವಿಲ್ಲ. ಪದವಿಲ್ಲಾಗಿ ಆ ಶರಣ ಮಾಡುವ ಪೂಜಾಕ್ರಿಯೆಗಳೆಲ್ಲವೂ ಹುಸಿಕ್ರೀ. ಅಂತು ದೇವ ಭಕ್ತ, ಪೂಜ್ಯ ಪೂಜಕನೆಂಬ ಎರಡಿಲ್ಲದೆ ಲಿಂಗವೆ ಶರಣನಾಗಿ, ತನ್ನ ಸ್ವಲೀಲೆಯಿಂದ ತನ್ನ ತಾನರ್ಚಿಸಿಕೊಳುತ್ತಿಹನಾಗಿ ಶರಣನ ಪೂಜಾ ಜ್ಞಾನ ಕ್ರಿಯೆಗಳು ಬದ್ಧವಲ್ಲ, ಹುಸಿ ಎಂಬುದೀ ವಚನದ ತಾತ್ಪರ್ಯಾರ್ಥ. ೮

ವ. ಶರಣ ದೃಷ್ಟಾದೃಷ್ಟವನಱಿಯನು. ಸಾವಯ ನಿರವಯನೆಂದೂ ಉಪಮಿಸನು. ಶರಣ ತಾನು ಸ್ವತಂತ್ರನಾಗಿ ಭಾವರಹಿತನು. ವಿಕೃತವೇಷದಿಂದ ಸುಕೃತವ ಜೋಡಿಸುವನಲ್ಲ ಶರಣನು. ಪ್ರಕೃತಿ

೧ ಮತ್ತೀನೂ (ಎ.)

ಗುಣವಿಡಿದು ಮೂರ್ತಿಯಾದ ಉಪಜೀವಿ ತಾನಲ್ಲ. ಕೂಡಲಚೆನ್ನ ಸಂಗನ ಶರಣ ಸಾರಾಯಸನುಮತನು.

ಟೀ. ಶರಣ ಇಷ್ಟಲಿಂಗ ಪ್ರಾಣಲಿಂಗವೆಂದು ಲಿಂಗವ ಭಿನ್ನವಿಟ್ಟು ಅಱಿ ವನಲ್ಲ. ಶರಣ ತಾನೆಲ್ಲಾ ಲಿಂಗವೆಯಾಗಿಪ್ಪನೆಂಬುದೀಗ 'ಶರಣ ದೃಷ್ಟಾದೃಷ್ಟವ ನಱಿಯನು' ಎಂಬ ಶಬ್ದಕ್ಕರ್ಥ. ಸಾವಯವೆಂದರೆ ಜೀವಾತ್ಮನು, ನಿರವಯ ವೆಂದಡೆ ಪರಮಾತ್ಮನು. ಅಂತಪ್ಪ ಜೀವ ಪರಮರ ಯೋಗದ ಎಣಿಕೆಯ ಲೆಕ್ಕಿಸು ವನಲ್ಲ ಶರಣ. ತಾನೆಲ್ಲಾ ಚಿತ್ಪರಮಲಿಂಗವೆಯಾಗಿಪ್ಪನು ಎಂಬುದೀಗ 'ಸಾವಯ ನಿರವಯವನೆಂದೂ ಉಪಮಿಸನು' ಎಂಬ ಶಬ್ದಕ್ಕರ್ಥ. ಶರಣನು ತಾನೇ ಸ್ವತಂತ್ರ ಲಿಂಗವೆಯಾಗಿಪ್ಪನಾಗಿ, ಶರಣಂಗೆ ಲಿಂಗವ ಭಿನ್ನವಿಟ್ಟು ಭಾವಿಸಿಹೆನೆಂಬ ಭಾವ ವಿಲ್ಲವೆಂಬುದೀಗ 'ಶರಣ ತಾನು ಸ್ವತಂತ್ರನಾಗಿ ಭಾವರಹಿತನು' ಎಂಬ ಶಬ್ದಕ್ಕರ್ಥ. ತಪೋವೇಷ ಮೊದಲಾದ ವೇಷಂಗಳ ತಾಳಿ, ಮೋಕ್ಷವ ಸಾಧಿಸಿಹೆನೆಂಬ ಬದ್ಧನಲ್ಲ. ಶರಣ ತಾನೆ ಮುಕ್ತಿಸ್ವರೂಪನೆಂಬುದೀಗ 'ವಿಕೃತವೇಷದಿಂದ ಸುಕೃತವ ಜೋಡಿ ಸುವನಲ್ಲ ಶರಣ' ನೆಂಬ ಶಬ್ದಕ್ಕರ್ಥ. ಪ್ರಕೃತಿಯೆಂದಡೆ ಮಾಯಾಶಕ್ತಿ. ಅಂತಪ್ಪ ಮಾಯಾಮಱವೆಯಿಂದ ತನ್ನ ನಿಜವ ಮಱೆದು, ದೇಹಿಯಾಗಿ ಹುಟ್ಟಿ ಹುಟ್ಟಿ ಬರುತ್ತಿಹ ಜೀವನಲ್ಲ ಶರಣನು. ಮತ್ತೆಂತೆಂದಡೆ : ಮಾಯಾವಿರಹಿತವಾಗಿಪ್ಪ ಬಚ್ಚಬಱಿಯ ಅಖಂಡಜ್ಞಾನಾನಂದಸ್ವರೂಪಾದ ಲಿಂಗವೇ ಶರಣನಾದನೆಂಬುದೀಗ 'ಪ್ರಕೃತಿಗುಣವಿಡಿದು ಮೂರ್ತಿಯಾದ ಉಪಜೀವಿ ತಾನಲ್ಲ. ಕೂಡಲಚೆನ್ನಸಂಗನ ಶರಣನು ಸಾರಾಯಸನುಮತನು' ಎಂಬ ಶಬ್ದಕ್ಕರ್ಥ. ೯

ವ. ಸಂಗವಿಡಿದಂತೆ ಸಂಗವಿಡಿದು ನೋಡದಿರಯ್ಯಾ ! ಶರಣ ಸಂಗಸೂತಕಿಯಲ್ಲ ನೋಡಯ್ಯಾ ! ಲಿಂಗಪರೀಕ್ಷಿತ ಸಂಗವಂತನೆಂದೆನ್ನದಿರಯ್ಯ ! ಶರಣ ಮನ ಬಂದಂತೆ ಮಾಡುವ. ಅಱಿಸಿ ಸಕಲಾಗಮಾಚಾರ್ಯನಪ್ಪ ನೋಡಯ್ಯಾ ! ಮಿಂಚಿನ ಗೊಂಚಲಂತೆ ಮುಂದೆ ರೂಪಾಗಿ ತೋಱುತ್ತಿಪ್ಪುದು ! ಹಿಂದೆ ನೋಡಲು ಬಯಲಾಗಿರುತ್ತಿಪ್ಪುದು ! ಶರಣನೊಡಲುಗೊಂಡಡೆ ಸಾಮಾನ್ಯನೇ ? ಪ್ರಕೃತಿಗುಣಭಿನ್ನಭಾವಿಯಲ್ಲ ಕೂಡಲಚೆನ್ನಸಂಗಾ, ನಿಮ್ಮ ಶರಣನ ಪರಿ ಬೇಱೆ.

ಟೀ. ಈ ವಚನ ಕಾಣಬಂದರ್ಥ. ೧೦

ವ. ಕುಲದೊಳಗೆ ಹುಟ್ಟಿ ಕುಲವ ಬೆರಸದೆ ತಮ್ಮ ನಿಲವ ಬಲಿದಿಪ್ಪವರು ಇನ್ನಾರು ಹೇಳಾ ? ಹಬ್ಬಿದ ಮೂಱು ಬೆಟ್ಟಕ್ಕೆ ತನ್ನ ಮನವ ಹಬ್ಬ

ಲೀಯದೆ ಲಿಂಗ ಜಂಗಮಕ್ಕೆ ಸವೆಸಿ ಸ್ವಯಲಿಂಗವಪ್ಪವರಿನ್ನಾರು ಹೇಳಾ ? ಸ್ವಯೋ ಲಿಂಗ, ಸ್ವಯೋ ಶರಣ, ಸ್ವಯೋ ಭೋಗವೆಂದು ದಾಗಿ ಗೊಹೇಶ್ವರಾ, ನಿಮ್ಮ ಶರಣ ಸಂಗನಬಸವಣ್ಣನ ನಿಲವಿಂಗೆ ನಮೋ ನಮೋ ಎಂಬೆನು!

ಟೀ. ದೇಹಿಗಳೊಳಗೆ ದೇಹವಿಡಿದು ಹುಟ್ಟಿ ಜೀವನಾಗದೆ ತನ್ನ ಶಿವತ್ವದ ಇರವ ಬಲಿದುಕೊಂಡಿಪ್ಪನು ಶರಣನಲ್ಲದೆ ಮತ್ತಾರೂ ಇಲ್ಲವೆಂಬುದೀಗ 'ಕುಲದಲ್ಲಿ ಹುಟ್ಟಿ ಕುಲವ ಬೆರಸದೆ ತಮ್ಮ ನಿಲವ ಬಲಿದಿಪ್ಪವರಿನ್ನಾರು ಹೇಳಾ' ಎಂಬ ಶಬ್ದ ಕ್ಕರ್ಥ. ಹೊನ್ನು ಹೆಣ್ಣು ಮಣ್ಣೆಂಬ ತ್ರಿವಿಧ ಅಹಂಮಮತೆಗಳೀಗ ಜಗವೆಲ್ಲವ ಸುತ್ತಿ ಹಬ್ಬಿ ಮುಚ್ಚಿಕೊಂಡಿಪ ಪರ್ವತಂಗಳು. ಅಂತಪ್ಪ ತ್ರಿವಿಧ ಅಹಂಮಮತೆ ಗಳ ಶರಣ ತನ್ನ ಮನದಲ್ಲಿ ಹಬ್ಬಲೀಯದೆ, ಆ ಹೊನ್ನು ಹೆಣ್ಣು ಮಣ್ಣುಗಳ ಗುರು ಲಿಂಗ ಜಂಗಮಕ್ಕರ್ಪಿಸಿ ತಾನೆಲ್ಲಾ ಲಿಂಗವೆಯಾಗಿಪ್ಪುದು ಶರಣಂಗಲ್ಲದೆ ಮತ್ತಾ ರಿಗೂ ಇಲ್ಲವೆಂಬುದೀಗ 'ಹಬ್ಬಿದ ಮೂರು ಬೆಟ್ಟಕ್ಕೆ ತನ್ನ ಮನವ ಹಬ್ಬಲೀಯದೆ ಲಿಂಗಜಂಗಮಕ್ಕೆ ಅರ್ಪಿಸಿ, ಸ್ವಯಲಿಂಗವಪ್ಪವರಿನ್ನಾರು ಹೇಳಾ' ಎಂಬ ಶಬ್ದ ಕ್ಕರ್ಥ. ಮಹಾಘನವಸ್ತು ತಾನೇ ಲಿಂಗವಾಗಿ, ತಾನೇ ಶರಣನಾಗಿ, ತಾನೇ ಉಭ ಯದ ಸಂಗಸುಖಭೋಗವ ತಾನೆಯಾಗಿ ಭೋಗಿಸುತ್ತಿಪ್ಪನು ಶಿವನು. ಅಂತಾಗಿ ಶಿವಶರಣರಿಗೆ ಶರಣುಪ್ರೋಕ್ಷವರೆಲ್ಲರೂ ಮುಕ್ತರೆಂಬುದೀಗ 'ಸ್ವಯೋ ಲಿಂಗ, ಸ್ವಯೋ ಶರಣ, ಸ್ವಯೋ ಭೋಗವೆಂದುದಾಗಿ ಗೊಹೇಶ್ವರಾ, ನಿಮ್ಮ ಶರಣ ಸಂಗನ ಬಸವಣ್ಣನ ನಿಲವಿಂಗೆ ನಮೋ ನಮೋ ಎಂಬೆನೆ'ಂಬ ಶಬ್ದಕ್ಕರ್ಥ. ೧೧

ವ. ಲಿಂಗಗಂಭೀರ ನಿಸ್ಸಂಗಿಯ ಸಂಗವ ನಾನೇನೆಂಬೆನಯ್ಯಾ ! ಪರಮಾ ರ್ಥದಿಂದ ಗಮಿಸುವ ಗಮನವ ನಾನೇನೆಂಬೆನಯ್ಯಾ ! ಕೂಡಲ ಸಂಗನ ಶರಣರು ಕಾಯವ ನೆವದಿಂದಲರ್ಪಿಸುವ ಬೆಡಗ ನಾನೇ ನೆಂಬೆನಯ್ಯಾ !!

ಟೀ. ಅಖಂಡಪರಿಪೂರ್ಣ ಚಿತ್‌ಪರಮಲಿಂಗವು ಮಾಯಾದೇಹಸಂಸಾರ ಸಂಗವಿಲ್ಲದೆಯಿದ್ದರ್ೂ ತನ್ನ ತಾನರ್ಚಿಸಿಕೊಂಬ ಲೀಲಾವಿಲಾಸದಿಂದ ಶರಣರೂಪಾಗಿ ದೇಹಸಂಗವಿಡಿದಿರ್ದ್ದು, ಆ ದೇಹವಾಸನೆಯ ಹೊದ್ದದೆ ಇಪ್ಪ ಶರಣರ ಪರಿ ಆಶ್ಚರ್ಯವೆಂಬುದೀಗ 'ಲಿಂಗಗಂಭೀರ ನಿಸ್ಸಂಗಿಯ ಸಂಗವ ನಾನೇನೆಂಬೆನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಚಿತ್ಪರಮಲಿಂಗವು ತಾನೇ ಶರಣನಾಗಿ ತನ್ನ ತಾನ ರ್ಚಿಸಿಕೊಳ್ಳುತಿಹನು. ಅಂತು ತನ್ನ ತಾನರ್ಚಿಸಿಕೊಂಬ ಶಿವಜ್ಞಾನಾಚಾರವನುಪ

ಮಿಸಬಾರದೆಂಬುದೀಗ 'ಪರಮಾರ್ಥದಿಂದ ಗಮಿಸುವ ಗಮನವ ನಾನೇನೆಂಬೆನಯ್ಯಾ' ಎಂಬ ಶಬ್ದಕ್ಕರ್ಥ. ಅಂತು ಚಿತ್ಪರಮಲಿಂಗವು ತಾನೇ ಶರಣನಾಗಿ, ತನ್ನ ತಾನರ್ಚಿಸಿಕೊಂಬ ಭಕ್ತಿಯ ನೆವದಿಂದ ದೇಹಸುಖಂಗಳನರ್ಪಿಸಿಕೊಂಡು ನಿರ್ಲೇಪಿಯಾಗಿಪ್ಪ ಶರಣನ ಬೆಡಗು ಆಶ್ಚರ್ಯವೆಂಬುದೀಗ 'ಕೂಡಲಸಂಗನ ಶರಣರು ಕಾಯವ ನೆವದಿಂದಲರ್ಪಿಸುವ ಬೆಡಗ ನಾನೇನೆಂಬೆನಯ್ಯಾ' ಎಂಬ ಶಬ್ದಕ್ಕರ್ಥ. ೧೨

ವ. ನಾ ನೀನೆಂಬ ಭೇದ ಅಂದೂ ಇಲ್ಲ, ಇಂದೂ ಇಲ್ಲ. ಸಾಲೋಕ್ಯನಲ್ಲ, ಸಾಮೀಪ್ಯನಲ್ಲ ಶರಣ. ಸಾರೂಪ್ಯನಲ್ಲ, ಸಾಯುಜ್ಯನಲ್ಲ ಶರಣ. ಸಕಾಯನಲ್ಲ, ಅಕಾಯನಲ್ಲ ಗೊಹೇಶ್ವರಲಿಂಗವು ತಾನಾಗಿ.

ಟೀ. ನಾ ನೀನೆಂಬ ದ್ವೈತವಿಲ್ಲದೆ ಒಂದೆಯಾಗಿರ್ದ ಪರವಸ್ತು ತಾನೇ ತನ್ನ ಲೀಲಾವಿಲಾಸದಿಂದ ಶರಣರೂಪಾಗಿ ತನ್ನ ತಾನರ್ಚಿಸಿಕೊಳ್ಳುತ್ತಿಪ್ಪನು. ಅಂತು ವಸ್ತು ಶರಣರೂಪಾಗಿ ತನ್ನ ತಾನರ್ಚಿಸಿ ಪೂಜಿಸಿಕೊಂಬಲ್ಲಿಯೂ ದ್ವೈತವಿಲ್ಲ. ಅಂತು ದ್ವೈತವಂದೂ ಇಂದೂ ಎಂದೂ ಇಲ್ಲದೆ ಒಂದೇ ವಸ್ತುವಾಗಿಪ್ಪನಾಗಿ ಶರಣನು ಚತುರ್ವಿಧ ಪದಂಗಳ ಪಡೆದಿಪ್ಪ ಭಿನ್ನಮುಕ್ತರೊಳಗಲ್ಲ. ಅದು ಕಾರಣ ದೇಹಿಯಾಗಿಪ್ಪ ಬದ್ಧನಲ್ಲ. ನಿರ್ದೇಹಿಯಾಗಿಪ್ಪ ಶೂನ್ಯನಲ್ಲ. ಸ್ವತಂತ್ರ ಶಿವ ತಾನೆ ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೧೩

ವ. ಸಕಲ ನಿಃಕಲನಯ್ಯಾ, ನಿಃಕಲ ಸಕಲನಯ್ಯಾ! ಸಕಲನಾಗಿ ಸಂಸಾರಿಯಲ್ಲ. ನಿಃಕಲನಾಗಿ ವೈರಾಗಿಯಲ್ಲ. ಸಂಸಾರಿಯಲ್ಲದ ಸಂಗ, ವೈರಾಗಿಯಲ್ಲದ ನಿಸ್ಸಂಗ. ಇಂತೀ ಉಭಯ ಸಂಗದಿಂದ ಮಹವನೆಯ್ದಿಪ್ಪನಾಗಿ ಕೂಡಲಚೆನ್ನಸಂಗಾ, ನಿಮ್ಮ ಶರಣನೆಂತಿರ್ದಡೇನಯ್ಯಾ?

ಟೀ. ಶರಣನು ಸಾಕಾರವಾಗಿ ದೃಶ್ಯನಪ್ಪ ಜೀವನಲ್ಲ. ನಿರಾಕಾರನಾಗಿ ಸಾಕಾರವ ನೇತಿಮಾಡಿ ತೊಲಗಿದಿಪ್ಪವನಲ್ಲ. ಶರಣ ಸಕಲ ನಿಃಕಲವ ಮಾಡಿಕೊಂಡು ತನ್ನ ಶಿವತ್ವದ ಘನಪದವ ಬಿಡದೆ, ತನ್ನ ತಾನರ್ಚಿಸಿಕೊಳುತ್ತ, ತನ್ನ ಸ್ವಲೀಲೆಯೊಳಿಪ್ಪ ಸ್ವತಂತ್ರ ಶಿವನು ತಾನೆ ಶರಣನು. ಅಂತಪ್ಪ ಶರಣನೆಂತಿರ್ದಡೆಯೂ ಅಂತಿಂತೆನಬಾರದೆಂಬುದೀ ವಚನದ ತಾತ್ಪರ್ಯಾರ್ಥ. ೧೪

ವ. ಇಹಪರವೆಂಬ ಇದ್ದೆಸೆಗೆ ಇದ್ದೆಸೆಯಾಗಿರ್ದನ ಪರಿ ಹೊಸತು! ಸಯಿ ಹತ್ತದ ನಾಲಗೆಯಂತೆ, ಹುಡಿ ಹತ್ತದ ಗಾಳಿಯಂತೆ, ಕಾಡಿಗೆ ಹತ್ತದ

ಆಲಿಯಂತೆ ಇರ್ದೆನಯ್ಯಾ ! ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗದಲ್ಲಿ ಆಚರಿಸುತ್ತ ಆಚರಿಸುತ್ತ ಆಚರಿಸದಂತಿರ್ದೆ ನೋಡಯ್ಯಾ !!

ಟೀ. ಇಹ ಪರವೆಂಬೆರಡಕ್ಕೆ ಬೇಱೆ ಎರಡು ಇಹಪರಂಗಳಾಗಿರ್ದ ಶರಣನು. ಅದು ಹೇಂಗೆಂದಡೆ : ಇಹಲೋಕದ ದೇಹಿಗಳಂತಲ್ಲ, ಲಿಂಗದೇಹಿಯಾಗಿಪ್ಪನಾಗಿ ಶರಣನ ಇಹದ ಪರಿ ಬೇಱಾಯಿತ್ತು. ಪರಲೋಕದ ಚತುರ್ವಿಧ ಪದಂಗಳ ಹೊದ್ದದೆಯಿಪ್ಪ ಪರಶಿವನು ತಾನೆಯಾಗಿಪ್ಪನಾಗಿ ಶರಣನ ಪರದ ಪರಿ ಬೇಱೆಯಿತ್ತು. ಅಂತು ಇಹಕ್ಕೆ ಇಹ, ಪರಕ್ಕೆ ಪರವಾಗಿರ್ದ ಶರಣನ ಪರಿ ಹೊಸತು ಎಂಬುದೀಗ ' ಇಹಪರವೆಂಬ ಇದ್ದೆಸೆಗೆ ಇದ್ದೆಸೆಯಾಗಿರ್ದನ ಪರಿ ಹೊಸತು ' ಎಂಬ ಶಬ್ದಕ್ಕರ್ಥ. ಅಂತು ಶರಣನು ಇಹಪರವೆಂಬ ಜಗವ ಹೊದ್ದಿಯೂ ಹೊದ್ದದೆ ಮಹಾಘನವು ತಾನೆಯಾಗಿರ್ಪನೆಂಬುದೀಗ 'ಸಯಿ ಹತ್ತದ ನಾಲಗೆಯಂತೆ, ಹುಡಿ ಹತ್ತದ ಗಾಳಿಯಂತೆ, ಕಾಡಿಗೆ ಹತ್ತದಾಲಿಯಂತೆ ಇರ್ದೆನಯ್ಯಾ ' ಎಂಬ ಶಬ್ದಕ್ಕರ್ಥ. ಅಂತು ಶರಣನೆಲ್ಲಾ ಮಹಾಘನಲಿಂಗವೆಯಾಗಿರ್ದು ತನ್ನ ಸ್ವಲೀಲೆಯಿಂದ ತನ್ನ ತಾನ ಭಕ್ತನಾಗಿ ಲಿಂಗಕ್ರೀಯನಾಚರಿಸುತ್ತಿಪ್ಪನು. ಅಂತು ಶರಣನಾಚರಿಸುವ ಕ್ರಿಯಾಚಾರವು ಫಲಪದವನೆಯ್ದುವ ಕ್ರಿಯಾಚಾರವಲ್ಲವೆಂಬುದೀಗ ' ಸಿಮ್ಮಲಿಗೆಯ ಚೆನ್ನರಾಮನೆಂಬ ಲಿಂಗದಲ್ಲಿ ಆಚರಿಸುತ್ತ ಆಚರಿಸುತ್ತ ಆಚರಿಸದಂತಿರ್ದೆನಯ್ಯಾ ' ಎಂಬ ಶಬ್ದಕ್ಕರ್ಥ. ೧೫

ವ. ಊಷ್ಮದ ಒಱತೆಯಂತೆ, ಉರಿಯ ನೆಳಲಂತೆ, ಮಂಜಿನ ಮಳೆಯಂತೆ, ಬಿಸಿಲ ಕುದುರೆಯಂತೆ, ಬೆಟ್ಟದ ಶಬ್ದದಂತೆ ಸುಳಿವ ಸಿದ್ಧಸೋಮನಾಥಲಿಂಗ, ನಿಮ್ಮ ಶರಣ !

ಟೀ. ಊಷ್ಮದ ಗಮ್ಮಕ್ಕೆ ಬೆಮರ್ತು ಒಱೆತ ಬೆಮರು ಭೂಮಿಯ ಒಱತೆಯಂತಲ್ಲ. ಅದು ಹೇಂಗೆ ಹಾಂಗೆ; ಕಿಚ್ಚಿನ ಉರಿಯ ನೆಳಲು ಎಲ್ಲಾ ವೃಕ್ಷಂಗಳ ನೆಳಲಂತಲ್ಲ, ಅದು ಹೇಂಗೆ ಹಾಂಗೆ; ಮಂಜಿನ ಮಳೆ ಎಲ್ಲಾ ಮಳೆಗಳಂತಲ್ಲ, ಅದು ಹೇಂಗೆ ಹಾಂಗೆ; ಬಿಸಿಲ ಕುದುರೆ ಎಲ್ಲಾ ಕುದುರೆಗಳಂತಲ್ಲ, ಅದು ಹೇಂಗೆ ಹಾಂಗೆ; ಬೆಟ್ಟದ ಶಬ್ದ ಎಲ್ಲಾ ಶಬ್ದದಂತಲ್ಲ, ಅದು ಹೇಂಗೆ ಹಾಂಗೆ ಶರಣ ದೇಹವಿಡಿದು ಚರಿಸಿದಡೆಯೂ ಎಲ್ಲಾ ದೇಹಿಗಳಂತೆ ದೇಹಿಯಲ್ಲ. ಶರಣನು ನಿರ್ದೇಹಿಯೆಂಬುದೀ ವಚನದ ತಾತ್ಪರ್ಯಾರ್ಥ. ೧೬

ವ. ಹಿರಿಯರೆಂತಿಪ್ಪರಯ್ಯಾ ? ಅಯ್ಯಾ, ವಿಟದ ರಾಸಿಗೆ ಅವರ ಘಟ ಲಕ್ಷಣ. ನಿಸ್ಸೀಮರೆಂತಿಪ್ಪರಯ್ಯಾ ? ಅಯ್ಯಾ, ಸೀಮೆಗೆಡೆಗುಡದ

ಬಯಲನೊಳಕೊಂಡಿಪ್ಪರು. ಭಾವರೆಂತಿಪ್ಪರಯ್ಯಾ ? ಅಯ್ಯಾ, ಕಣ್ಣಾಲಿ ದೃಷ್ಟಿಯ ನುಂಗಿದಂತೆ. ನೀರೆಂತು ನನೆವುದೆಂದು ಬೆಸಗೊಂಡಡೆ ಹೇಳುವ ಶಬ್ದದಂತಿಹುದವರ ನಿಲವು. ' ಲಿಂಗಮಧ್ಯೇ ಜಗತ್ಸರ್ವಂ ' ಲಿಂಗದಂಗ ರೇಕಣ್ಣಪ್ರಿಯನಾಗಿನಾಥನಂತಿಪ್ಪರು.

೬೬. ಮಾಯಾ ತೋಱಿಕೆಯ ಸಟೆಯೇನೂ ಇಲ್ಲದಿರ್ದ ಬಚ್ಚಬಱಿಯ ಮಹಾಘನವೆಂಬ ನಿಜದ ನಿಧಿಯೆಲ್ಲಾ ತಾವೆಯಾಗಿರ್ಪರು ಶರಣರು. ಅಂತಿಪ್ಪ ಶರಣರೇ ಹಿರಿಯರು. ಆ ಶರಣರ ದೇಹ ಆ ನಿಜದ ನಿಧಿಗೆ ಇಕ್ಕಿದ ಮುದ್ರೆಯಾಗಿಪ್ಪುದು. ಅದೆಂತೆಂದಡೆ : ಭಕ್ತ ಲಿಂಗದ ರಾಶಿಗೆ ಇಕ್ಕಿದ ಮಣ್ಣ ಮುದ್ರೆಯಂತೆ ಇದ್ದಿತ್ತೆಂಬುದೀಗ ' ಹಿರಿಯರೆಂತಿಪ್ಪರಯ್ಯಾ? ಅಯ್ಯಾ, ದಿಟದ ರಾಶಿಗವರ ಘಟ ಲಕ್ಷಣ ' ವೆಂಬ ಶಬ್ದಕ್ಕರ್ಥ. ನಾಮ ಸೀಮೆಗಳಿಗೆ ಬಾರದೆ, ವಾಙ್ಮನಕ್ಕಗೋಚರವಾಗಿಪ್ಪ ಪರವಸ್ತುವೆ ತಾನಾಗಿಪ್ಪರು ಶರಣರು. ಅಂತಿಪ್ಪ ಶರಣರು ನಿಸ್ಸೀಮರೆಂಬುದೀಗ ' ನಿಸ್ಸೀಮರೆಂತಿಪ್ಪರಯ್ಯಾ? ಅಯ್ಯಾ, ಸೀಮೆಗೆಡೆಗುಡದ ಬಯಲನೊಳಕೊಂಡಿಪ್ಪರೆಂ'ಬ ಶಬ್ದಕ್ಕರ್ಥ. ಕಣ್ಣಿನ ಕರಿಯಾಲಿಯಲ್ಲಿ ಮಹಾಘನತೇಜೋದೃಕ್ಕಡಗಿ ತೋಱಿ ಪ್ರಕಾಶಿಸುವಂತೆ ಶರಣ ಸ್ವಾನುಭಾವದಲ್ಲಿ ಭಿನ್ನವಿಲ್ಲದೆ ಅಖಂಡಜ್ಞಾನಪ್ರಕಾಶಲಿಂಗವೇ ಬೆಳಗುತ್ತಿದ್ದಿತ್ತು. ಅಂತಿಪ್ಪ ಶರಣರೇ ಭಾವಸ್ವರೂಪರೆಂಬುದೀಗ ' ಭಾವರೆಂತಿಪ್ಪರಯ್ಯಾ ? ಅಯ್ಯಾ, ಕಣ್ಣಾಲಿ ದೃಷ್ಟಿಯ ನುಂಗಿದಂತೆ ' ಎಂಬ ಶಬ್ದಕ್ಕರ್ಥ. ನೀರೆಂತು ನನೆವುದೆಂದು ಬೆಸಗೊಂಡಡೆ ಉಪಮಿಸಿ ಹೇಳಬಹುದೇ? ಹೇಳಬಾರದು ಹೇಂಗೆ ಹಾಂಗೆ, ಆ ಮಹಾಘನಲಿಂಗವೆಯಾಗಿಪ್ಪ ಶರಣನ ನಿಲವ ಅಂತಿಂತೆಂದು ವಚಿಸಿ ಹೇಳಬಾರದೆಂಬುದೀಗ ' ನೀರೆಂತು ನನೆವುದೆಂದು ಬೆಸಗೊಂಡಡೆ ಹೇಳುವ ಶಬ್ದದಂತಿಹುದವರ ನಿಲವು ' ಎಂಬ ಶಬ್ದಕ್ಕರ್ಥ. ಅಂತಪ್ಪ ಶರಣರ ನಿಲವು ಮತ್ತೆಂತೆಂದಡೆ : ಮಹಾಘನವಸ್ತು ತನ್ನ ತಾನರ್ಚಿಸಿಕೊಂಬ ಲೀಲಾವಿಲಾಸದಿಂದ ತನ್ನೊಳಗೆ ತಾನೆ ಲಿಂಗಾಂಗವೆರಡಾಯಿತ್ತು. ಅಂತಾದ ಎರಡಱೊಳಗೆ ಅಂಗವೇ ಆತ್ಮನೆನಿಸಿ ಸಕಲತತ್ತ್ವಮಯವಾಗಿ ಜಗತ್ತಾಯಿತ್ತು. ಅಂತಾದ ಅಂಗತತ್ತ್ವಂಗಳಲ್ಲಿ ವಿಯೋಗವಿಲ್ಲದೆ, ಪ್ರಾಣಸ್ವರೂಪನಾಗಿ ಲಿಂಗವಿರ್ದು ಶರಣನೆನಿಸಿ ತನ್ನ ತಾನರ್ಚಿಸಿಕೊಳುತ್ತ ತನ್ನ ಶಿವತ್ವವೆಂತಿರ್ದಂತೆ ಇಹನು ಶರಣನೆಂಬುದೀಗ ' ಲಿಂಗಮಧ್ಯೇ ಜಗತ್ಸರ್ವಂ ಲಿಂಗದಂಗ ರೇಕಣ್ಣಪ್ರಿಯನಾಗಿನಾಥನಂತಿಪ್ಪರು ' ಎಂಬ ಶಬ್ದಕ್ಕರ್ಥ. ೧೭

೭. ಕುಲವಿಲ್ಲದ ಅಕುಲನು, ಶರೀರವಿಲ್ಲದ ಸಂಬಂಧಿ. ಮತ್ಸರವಿಲ್ಲದ ಮಹಿಮನು, ಕರ್ಮವಿಲ್ಲದ ಕಾರಣಿಕನು. ಅರ್ಪಿತವಿಲ್ಲದ ಅಪ್ಯಾ

ಯುನಿ, ಜಂಗಮವಿಲ್ಲದ ಸಮಶೀಲನು. ಲಿಂಗವಿಲ್ಲದ ನಿರುತನು, ಪ್ರಸಾದವಿಲ್ಲದ ಪರಿಣಾಮಿ ಕೂಡಲಚೆನ್ನಸಂಗಾ, ನಿಮ್ಮ ಶರಣನು.

ಟೀ. ಗುರುಕರಜಾತನಾಗಿ ಮಲತ್ರಯಂಗಳ ಕಳೆದು, ಸರ್ವಾಂಗಲಿಂಗವಾದ ಶರಣನು ದೇಹಿಯಲ್ಲ. ಜಗದ ಕುಲಾಶ್ರಮದೊಳಗಲ್ಲ. ಆ ಶರಣನು ಮನ ಕರಣಂಗಳ ನೀತಿ ಮಾಡಿ ಕಳೆಯಬೇಕೆಂದು ವೈರಾಗ್ಯ ತಾಳಿ ಕರಣಂಗಳ ಕೂಡ ಮತ್ಸರಿಸುವನಲ್ಲ. ಆ ಕರಣಂಗಳನೆಲ್ಲವ ಲಿಂಗೋಪಕರಣಂಗಳ ಮಾಡಿ ಲಿಂಗವಾಗಿಪ್ಪ ಘನಮಹಿಮನು. ಆ ಶರಣನು ಪುಣ್ಯ ಪಾಪವೆಂಬ ಉಭಯಕರ್ಮವೇನೂ ಇಲ್ಲದೆ ಶಿವನೆಯಾಗಿಪ್ಪನು. ಆ ಶರಣನ ಮನ ಪ್ರಾಣ ಕರಣ ಇಂದ್ರಿಯ ವಿಷಯ ಆಪ್ಯಾಯನವೆಲ್ಲಾ ಲಿಂಗವೆಯಾಗಿ, ಲಿಂಗವು ಭೋಗಿಸುತ್ತಿಪ್ಪನಾಗಿ ಲಿಂಗವ ಭಿನ್ನವಿಟ್ಟು ಅರ್ಪಿಸುವನಲ್ಲ. ಆ ಶರಣ ಲಿಂಗ ಜಂಗಮ ಪ್ರಸಾದವ ತನ್ನಿಂದ ಭಿನ್ನವಿಟ್ಟು ಕ್ರೀಯನಾಚರಿಸುವನಲ್ಲ. ಆ ಲಿಂಗ ಜಂಗಮ ಪ್ರಸಾದವೆಲ್ಲಾ ತಾನೆಂದು ಅಭಿನ್ನಕ್ರಿಯಾಶೀಲನಾಗಿ ಅರ್ಚಿಸುತ್ತಿಪ್ಪನು. ಅಂತು ಶರಣನು ಮಹಾಘನಲಿಂಗವು ತಾನಾಗಿರ್ದು, ತನ್ನ ತಾನರ್ಚಿಸಿಕೊಂಬ ಸ್ವಲೀಲಾನಂದಕ್ರೀಯಲ್ಲಿ ವಿಶ್ರಮಿಸಿ ಪರಮಸುಖವನೆಯ್ದಿಪ್ಪನು ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೧೮

ವ. ತೆಱಹಿಲ್ಲದ ನಡೆ, ತೆಱಹಿಲ್ಲದ ನುಡಿ, ತೆಱಹಿಲ್ಲದ ಸಂಭಾಷಣೆಯ ಸುಖವು. ತೆಱಹಿಲ್ಲದ ನಂಬುಗೆ, ತೆಱಹಿಲ್ಲದ ಮಹಿಮೆ, ತೆಱಹಿಲ್ಲದ ವಿಚಾರ ಕೂಡಲಚೆನ್ನಸಂಗಾ, ನಿಮ್ಮ ಶರಣಂಗೆ.

ಟೀ. ಲಿಂಗಾಂಗವೆಂಬ ಭೇದವೇನೂ ಇಲ್ಲದೆ ಅಖಂಡ ಪರಿಪೂರ್ಣಲಿಂಗವು ತಾನಾಗಿರ್ದ ಶರಣಂಗೆ ಲಿಂಗವ ಭಿನ್ನವಿಟ್ಟು ಆಚರಿಸುವ ಭಿನ್ನಕ್ರಿಯಾಜ್ಞಾನವಿಲ್ಲ. ಆ ಶರಣ ತಾನೇ ಲಿಂಗವಾಗಿ ತನ್ನ ತಾನರ್ಚಿಸಿಕೊಳುತ್ತಿಪ್ಪ ಅಭಿನ್ನಜ್ಞಾನಕ್ರೀಯಿಂದ ಆಚರಿಸುತ್ತಿಪ್ಪನು ಶರಣನೆಂಬುದೀ ವಚನದ ತಾತ್ಪರ್ಯಾರ್ಥ. ೧೯

ವ. ಆತ್ಮನ ನಿಜವನಱಿದು ಪರಮಾತ್ಮಲಿಂಗ ತಾನೆಂದಱಿದ ಶರಣಂಗೆ ಎಂತಿರ್ದಂತೆ ಪೂಜೆ ನೋಡಾ ! ಶರಣ ಭೋಗಿಸಿದುದೆಲ್ಲಾ ಶಿವಾರ್ಪಿತ. ರುಚಿಸಿದುದೆಲ್ಲಾ ಪ್ರಸಾದ. ಶರಣನಱಿದುದೆಲ್ಲಾ ಪರಬ್ರಹ್ಮ. ಮಱೆದುದೆಲ್ಲಾ ಪರಮಸುಖ. ನುಡಿದುದೆಲ್ಲಾ ಶಿವತತ್ತ್ವ. ಶರಣ ತಾನೆ ಕೂಡಲಚೆನ್ನಸಂಗಮದೇವ !

**ಟೀ.** ಈ ವಚನ ಕಾಣಬಂದರ್ಥ. ೨೦

**ವ.** ಶರಣ ನಿದ್ರೆಗೈದರೆ ಜಪವ್ರೋ, ಶರಣನೆದ್ದಿರ್ದಡೆ ಶಿವರಾತ್ರಿ ಕಾಣಿ ಭೋ! ಶರಣ ನಡೆದುದೇ ಪಾವನ ಭೋ! ನುಡಿದುದೇ ಶಿವತತ್ತ್ವ ಭೋ! ಕೂಡಲಸಂಗಮದೇವ ಶರಣನ ಕಾಯವೇ ಕೈಲಾಸ ಕಾಣಿ ಭೋ!

**ಟೀ.** ಈ ವಚನ ಕಾಣಬಂದರ್ಥ. ೨೧

**ವ.** ಅಱಿದೆನೆಂಬುದು ತಾ ಬಯಲು. ಅಱಿಯೆನೆಂಬುದು ತಾ ಬಯಲು. ಮಱೆದೆನೆಂಬುದು ತಾ ಬಯಲು. ಅಱುಹಿನ ಕುಱುಹಿನ ಮಱವಿನೊಳಗೆ ಗುಹೇಶ್ವರನೆಂಬುದು ತಾ ಬಯಲು ನೋಡಾ!

**ಟೀ.** ಬಯಲೆಂದಡೆ ಮಹಾಘನಲಿಂಗವು. ಅಂತಪ್ಪ ಮಹಾಘನಲಿಂಗವೇ ಶರಣನಾದನಾಗಿ, ಆ ಶರಣನ ಅಱಿವು ಮಱಹು ಕುಱುಹುಗಳೆಲ್ಲವೂ ಬಚ್ಚಬಱಿಯ ಲಿಂಗವೆಯಾಗಿದ್ದಿತ್ತು. ಅಂತು ದೇಹವೆಂಬ ಗುಹೆಗೆ ಈಶ್ವರನೆನಿಸಿಕೊಂಡು ಮಹಾಘನಲಿಂಗವು ತನ್ನ ತಾನರ್ಚಿಸಿಕೊಳುತ್ತ ತನ್ನ ಸ್ವಲೀಲೆಯಿಂದ ಶರಣರೂಪಾಗಿ ಚರಿಸುತ್ತಿಹನೆಂಬುದೀ ವಚನದ ತಾತ್ಪರ್ಯಾರ್ಥ. ೨೨

**ವ.** ನನಗೆ ನಾನೇ ಗುರುವಾದೆನಯ್ಯಾ! ನನಗೆ ನಾನೇ ಲಿಂಗವಾದೆನಯ್ಯಾ! ನನಗೆ ನಾನೇ ಜಂಗಮವಾದೆನಯ್ಯಾ! ನನಗೆ ನಾನೇ ಪ್ರಸಾದವಾದೆನಯ್ಯಾ! ನನಗೆ ನಾನೇ ಭಕ್ತನಾದೆನಯ್ಯಾ! ರೇಕಣ್ಣಪ್ರಿಯ ನಾಗಿನಾಥನಲ್ಲಿ ಆಗುಹೋಗನಱಿಯೆನಯ್ಯಾ ನಾನು!

**ಟೀ.** ಪರಶಿವನು ತನ್ನ ಸ್ವಲೀಲೆಯಿಂದ ತಾನೇ ಗುರುವಾಗಿ, ತಾನೇ ಲಿಂಗವಾಗಿ, ತಾನೇ ಜಂಗಮವಾಗಿ, ತಾನೇ ಪ್ರಸಾದವಾಗಿ, ತಾನೇ ಭಕ್ತನಾಗಿ ತನಗೆ ತಾನೇ ಭಕ್ತಿಯ ಮಾಡಿಕೊಳ್ಳುತ್ತಿಹನು. ಅಂತು ಪರಶಿವನು ತಾನೇ ಭಕ್ತನಾದ ಕಾರಣ ಆ ಭಕ್ತಂಗೆ ಸುಖದುಃಖ ಬಂಧಮೋಕ್ಷವೆಂಬ [೧]ಆಗು ಫೇಗೆಗಳಿಲ್ಲ[೧]. ಆ ಭಕ್ತನಿಂತಿರ್ದುದೆಲ್ಲಾ ಮುಕ್ತಿಸುಖವೆಂಬುದೀ ವಚನದ ತಾತ್ಪರ್ಯಾರ್ಥ. ೨೩

**ವ.** ಪರವೇ ಹಮ್ಮಿನಿಂದ ಜೀವನಾಯಿತ್ತೆಂಬುವನೊಬ್ಬ ವಾದಿ. ಆತ್ಮನು ಪಶುಪಾಶಬದ್ಧನು, ಅನಾದಿ ಮಲಯುಕ್ತನೆಂಬವನೊಬ್ಬ ವಾದಿ. ಇವ

೧ ಆಗುಫೇಗಿಗಳಿಲ್ಲ (ಎ. ಹು.)

ರಿಬ್ಬರೂ ತರ್ಕಕ್ಕೆ ಸಿಲುಕಿ ದುಃಖಕ್ಕೊಳಗಾದರು. ಅದೆಂತೆಂದಡೆ : ಆತ್ಮನು ಅನಾದಿ ಮಲಸಂಬಂಧಿಯಾದಡೆ, ಆತ್ಮಸ್ವರೂಪ ಮಲ ಸ್ವರೂಪ ಬಲ್ಲಡೆ ನೀವು ಹೇಳಿರೇ ? ಪೃಥ್ವಿ ಅಪ್ಪು ಕೂಡಿ ಸ್ಥೂಲ ತನು. ತೇಜ ವಾಯು ಕೂಡಿ ಸೂಕ್ಷ್ಮತನು. ಅಂಬರ ಅಹಂಕಾರ ಗೂಡಿ ಕಾರಣತನು. ಈ ತನುತ್ರಯವಿಲ್ಲದಂದು, ಪಂಚತತ್ತ್ವಂಗಳು ಶಾಖೆದೋಱದಂದು, ಆದಿ ಅನಾದಿ, ಸ್ವರೂಪ ನಿರೂಪ, ಹಮ್ಮು ಬಿಮ್ಮು, ಯುಗ ಜುಗ, ಸುರಾಳ ನಿರಾಳವಿಲ್ಲದಂದು ಆತ್ಮನಲ್ಲಿ ಮಲ ಹುದುಗಿರ್ದ ಭೇದವ ತಿಳಿದು ರೂಹಿಸಿ ಹೇಳಬಲ್ಲರೆ ಸಿದ್ಧಾಂತಿ ಯೆಂಬೆ. ಹಮ್ಮಿನಿಂದ ಶಿವನೇ ಜೀವನು, ಹಮ್ಮಳಿದ ಜೀವನೇ ಶಿವ ನಾದಡೆ ಸೃಷ್ಟಿ ಸ್ಥಿತಿ ಸಂಹಾರಂಗಳೇಕಾದವು ? ವಾಚ್ಯಾವಾಚ್ಯಂಗಳೇ ಕಾದವು ? ಜಾತಿ ವಿಜಾತಿಗಳೇಕಾದವು ? ಸ್ಥಾನಾಸ್ಥಾನಂಗಳೇಕಾ ದವು ? ಪಕ್ಷಾಪಕ್ಷಂಗಳೇಕಾದವು ? ದೇಹಾದೇಹಂಗಳೇಕಾದವು ? ಅಂಡಜ ಸ್ವೇದಜ ಜರಾಯುಜ ಉದ್ಭಿಜವೆಂಬ ಚೌರಾಸಿಲಕ್ಷ ಜೀವಂಗ ಳೇಕಾದವು ? ಆದಡೂ ಆಗಲಿ. ಬ್ರಹ್ಮಕ್ಕೆ ತಥ್ಯ ಮಿಥ್ಯ, ರಾಗ ದ್ವೇಷ, ಹಮ್ಮು ಬಿಮ್ಮು, ಮದ ಮತ್ಸರ, ನಾ ನೀನೆಂಬ ಬ್ರಾಂತಿ ಸೂತಕವುಂಟೇ ? ಅದಲ್ಲ ನಿಲ್ಲು ಬ್ರಹ್ಮಕ್ಕೆ ಹಮ್ಮು ಹೋಹ ಬಹ ಭೇದವ ತಿಳಿದು, ಸಂಕಲ್ಪ ವಿಕಲ್ಪವಿಲ್ಲದೆ, ಸ್ತುತಿ ನಿಂದೆಗಳನಱಿ ಯದೆ. ಪಕ್ಷಾಪಕ್ಷಂಗಳಿಲ್ಲದೆ, ಕಾಮ ನಿಃಕಾಮವಿಲ್ಲದೆ, ಭೀತಿ ನಿರ್ಭೀತಿಯಿಲ್ಲದೆ ನಿಗಂಗಸ್ವರೂಪನಾದಡೆ ವೇದಾಂತಿಯೆಂಬೆ. ಈ ಉಭಯದ ವಾದವ ಹೊದ್ದರು ನಮ್ಮ ಶರಣರು, ಆದಿಯನಾದಿ ಯಿಂದತ್ತಣ ಶರಣ ಲಿಂಗ ಸಂಬಂಧವನಱಿದರಾಗಿ. ಅದೆಂತೆಂದಡೆ : ಸತ್ತು ವೆನಿಸಿ ಶಬ ನಿಶ್ಶಬ್ದಕ್ಕೆ ಬಾರದ ನಿಶ್ಶೂನ್ಯಲಿಂಗವೆ ಪ್ರಾಣವಾಗಿ ಚಿತ್ತುವೆನಿಸಿ, ನಾಮ ನಿರ್ನಾಮಕ್ಕೆ ಬಾರದ ಸ್ವರೂಪು ನಿರೂಪಲ್ಲದ ಶರಣನ ಅಂಗವಾಗಿ, ಈ ಉಭಯ ಸಂಪುಟದಿಂದ ಸಕಲನಿಃಕಲ ವೆನಿಸಿತ್ತು. ಆ ಸಕಲನಿಃಕಲತತ್ತ್ವವೆ ತನ್ನ ಶಕ್ತಿಸಮರಸ ಸಂಭಾ ಷಣೆಯಿಂದ ಲೀಲೆದೋಱಲಾಗಿ ತಾನೇ ಗುರುವಾದ, ತಾನೇ ಶಿಷ್ಯ ನಾದ, ತಾನೇ ಲಿಂಗವಾದ, ತಾನೇ ಜಂಗಮವಾದ, ತಾನೇ ಪ್ರಸಾದ ವಾದ, ತಾನೇ ಸರ್ವಚೈತನ್ಯಾತ್ಮಕನಾದ ಭೇದವ ತಮ್ಮಿಂದ ತಾವೇ ಅಱಿದರಾಗಿ ವೇದಾಂತ ಸಿದ್ಧಾಂತವೆಂಬ ವಾಗ್ಜಾಲವ ನುಡಿಯರು. ಅದೆಂತೆಂದಡೆ : ತರ್ಕಕ್ಕತರ್ಕ್ಯರು. ಸಾಧ್ಯಕ್ಕಸಾಧ್ಯರು. ಭೇದಕ್ಕಭೇ

ದ್ಯರು. ದ್ವೈತಾದ್ವೈತವ ಮೀಱಿ ನಿಂದ ನಿಜಸುಖಿಗಳಯ್ಯಾ ನಿಮ್ಮ ಶರಣರು ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ !

ಟೀ. ಈ ವಚನ ಕಾಣಬಂದರ್ಥ. ೨೪

ವ. ' ಯದ್ಭಾವಂ ತದ್ಭವತಿ ' ಎಂಬ ಭಾವವುಂಟಾಗಿ ಶಿವ ತಾನೆ ಗುರುವಾದ. ' ಯದ್ಭಾವಂ ತದ್ಭವತಿ ' ಎಂಬ ಭಾವವುಂಟಾಗಿ ಶಿವ ತಾನೆ ಶಿಷ್ಯನಾದ. ' ಯದ್ಭಾವಂ ತದ್ಭವತಿ ' ಎಂಬ ಭಾವವುಂಟಾಗಿ ಶಿವ ತಾನೆ ಜಂಗಮವಾದ. ' ಯದ್ಭಾವಂ ತದ್ಭವತಿ ' ಎಂದುದಾಗಿ ಶಿವ ತಾನೆ ಭಕ್ತನಾದ. ' ಯದ್ಭಾವಂ ತದ್ಭವತಿ ' ಎಂಬ ಭಾವವುಂಟಾಗಿ ಶಿವ ತಾನೆ ಪ್ರಸಾದವಾದ. ' ಯದ್ಭಾವಂ ತದ್ಭವತಿ ' ಎಂಬ ಭಾವವುಂಟಾಗಿ ಶಿವ ತಾನೆ ಪ್ರಸಾದಿಯಾದ. ' ಯದ್ಭಾವಂ ತದ್ಭವತಿ ' ಎಂಬ ಭಾವವುಂಟಾಗಿ ಕೂಡಲಚೆನ್ನಸಂಗ [೧]ತಾನಾದ[೧].

ಟೀ. ಪರಶಿವನು ತಾನಂತೆಂದು ಭಾವಿಸಿದಂತೆ ಅಹುದು ಸತ್ಯ. ಅದು ಕಾರಣ ಪರಶಿವನು ತಾನೆ ತನ್ನನರ್ಚಿಸಿಕೊಂಬ ಇಚ್ಛಾಭಾವದೊಳ್ ತಾನೇ ಗುರು ಲಿಂಗ ಜಂಗಮ ಪ್ರಸಾದವೆಂಬ ಚತುರ್ವಿಧವಾಗಿ, ಆ ಚತುರ್ವಿಧಕ್ಕೆ ಭಕ್ತನು ತಾನೆಯಾಗಿ, ಪರಶಿವನು ತನ್ನ ಸ್ವೇಚ್ಛಾಭಾವದಿಂದ ತನಗೆ ತಾನೇ ಭಕ್ತಿಯ ಮಾಡಿಕೊಳ್ಳುತ್ತಿಹನೆಂಬುದೀ ವಚನದ ತಾತ್ಪರ್ಯಾರ್ಥ. ೨೫

ವ. ಸ್ವಯಂ ಪ್ರಸಾದಂ ವಾ, ಸ್ವಯಂ ಲಿಂಗಂ ವಾ, ಸ್ವಯಂ ದಾಸೋಹಂ ವಾ, ಸ್ವಯಂ ಶರಣಂ ವಾ, ಸ್ವಯಂ ವಾ ಕೂಡಲಚೆನ್ನಸಂಗ ಪ್ರಸಾದಂ ವಾ.

ಟೀ. ಪ್ರಸಾದವೆಂದಡೆ ಪರವಸ್ತು. ಅಂತಪ್ಪ ಪರವಸ್ತು ತಾನೇ ಲಿಂಗವಾಗಿ, ತಾನೇ ಜಂಗಮವಾಗಿ, ತಾನೇ ಭಕ್ತನಾಗಿ, ತನಗೆ ತಾನೇ ಭಕ್ತಿಯ ಮಾಡಿಕೊಳುತ್ತಿಹನು ಪರಶಿವಲಿಂಗವು ತಾನೇ ತನ್ನ ಸ್ವಲೀಲೆಯಿಂದಲೆಂಬುದೀ ವಚನದ ತಾತ್ಪರ್ಯಾರ್ಥ. ೨೬

ವ. ಸರ್ವಾಂಗಪ್ರಸಾದಂ ವಾ, ಸರ್ವಾರ್ಥಪ್ರಸಾದಂ ವಾ, ಸರ್ವಾಂಗ ಸ್ವಯಂ ವಾ ಕೂಡಲಚೆನ್ನಸಂಗ ಪ್ರಸಾದಂ ವಾ.

೧ ತಾನೆಯಾದ (ಎ.)

ಟೀ. ಪ್ರಸಾದವೆಂದಡೆ ಲಿಂಗವು. ಅಂತಪ್ಪ ಲಿಂಗವು ತಾನೇ ಜೀವಾತ್ಮ ಮೊದಲಾದ ತನುಕರಣ ಸರ್ವಾಂಗಸ್ವರೂಪಾಗಿ ಶರಣನೆನಿಸಿ, ಅಂಗಲಿಂಗವು ತಾನೇ ಸಕಲವಿಷಯ ಪದಾರ್ಥಂಗಳಾಗಿ, ತನಗೆ ತಾನೇ ಭಕ್ತಿಯ ಮಾಡಿಕೊಳ್ಳುತ್ತಿಹನು. ಅಂತು ಭಕ್ತಿಯ ಮಾಡಿಕೊಳುತ್ತಿಹ ಭಕ್ತನ ಸರ್ವಾಂಗವೆಲ್ಲವು ಲಿಂಗವು ತಾನೆ ಎಂಬುದೀ ವಚನದ ತಾತ್ಪರ್ಯಾರ್ಥ. ೨೭

ವ. ಒಲಿತ ಫಲಿತ ಪ್ರಸಾದಂ ವಾ, ಆದಿ ವ್ಯಾಧಿ ಪ್ರಸಾದಂ ವಾ, ಗಮ ನಾಗಮನ ಪ್ರಸಾದಂ ವಾ, ಸ್ವಯಂ ವಾ ಕೂಡಲಚೆನ್ನಸಂಗ ಪ್ರಸಾದಂ ವಾ.

ಟೀ. ಪ್ರಸಾದವೆಂದಡೆ ಪರಶಿವಲಿಂಗವು. ಅಂತಪ್ಪ ಪರಶಿವಲಿಂಗವು ತಾನೇ ದೇಹ ಕರಣಂಗಳಾಗಿ, ಲಿಂಗವು ತಾನೆ ಬಾಲ ಯೌವನ ವೃದ್ಧನಾಗಿ, ಲಿಂಗವು ತಾನೆ ನರೆತೆರೆಗಳಾಗಿ, ಲಿಂಗವು ತಾನೆ ಆಧಿವ್ಯಾಧಿಗಳಾಗಿ, ಲಿಂಗವು ತಾನೆ ಗಮನಾ ಗಮನಂಗಳು ಆಗಿ, ಎಲ್ಲಾ ದೇಹಿಗಳಂತೆ ಶರಣರೂಪಿಂದ ಚರಿಸುತ್ತಿಹನಾ ಪರಶಿವ ಲಿಂಗವು ತಾನೇ ತನ್ನ ಸ್ವಲೀಲೆಯಿಂದಲೆಂಬುದೀ ವಚನದ ತಾತ್ಪರ್ಯಾರ್ಥ. ೨೮

ವ. ಭಾಂಡ ಭಾಜನ ಪದಾರ್ಥ ತ್ರೈವಿಧ ಪ್ರಸಾದಂ ವಾ, ಅಂಗಲೇಪನ ಸರ್ವ ಪ್ರಸಾದಂ ವಾ, ರೋಮ ರೋಮ ಪ್ರಸಾದಂ ವಾ, ಸ್ವಯಂ ವಾ ಕೂಡಲಚೆನ್ನಸಂಗ ವಾ.

ಟೀ. ಪ್ರಸಾದವೆಂದಡೆ ಪರಶಿವಲಿಂಗವು. ಅಂತಪ್ಪ ಪರಶಿವಲಿಂಗವು ತಾನೇ ಭಾಂಡ ಭಾಜನ ಪದಾರ್ಥಂಗಳಾಗಿ, ಆ ಲಿಂಗವು ತಾನೇ ಗಂಧ ಕಸ್ತೂರಿ ಪುಷ್ಪ ವಸ್ತ್ರಾಭರಣಂಗಳಾಗಿ, ಆ ಲಿಂಗವು ತಾನೆ ರೋಮರೋಮಂಗಳು ಮೊದ ಲಾದ ಸರ್ವಾಂಗಸ್ವರೂಪನಾಗಿ ಶರಣನೆನಿಸಿ, ತಾನೇ ತನ್ನನರ್ಚಿಸಿಕೊಳ್ಳುತ್ತಿಹನು ಪರಶಿವಲಿಂಗವು ತನ್ನ ಸ್ವಲೀಲಾನಂದದಿಂದಲೆಂಬುದೀ ವಚನದ ತಾತ್ಪರ್ಯಾರ್ಥ. ೨೯

ವ. ಸರ್ವತ್ರಯ ಸರ್ವಗುಣತ್ರಯ ಪ್ರಸಾದಂ ವಾ, ಸರ್ವಾಭಾವ ಪ್ರಸಾದಂ ವಾ, ಪರಿಪೂರ್ಣ ಪ್ರಸಾದಂ ವಾ, ಸ್ವಯಂ ವಾ ಶರಣಂ ವಾ, ಸ್ವಯಂ ವಾ ಕೂಡಲಚೆನ್ನಸಂಗ ಸರ್ವಪ್ರಸಾದಂ ವಾ.

ಟೀ. ಪ್ರಸಾದವೆಂದಡೆ ಪರಶಿವಲಿಂಗವು. ಅಂತಪ್ಪ ಪರಶಿವಲಿಂಗವು ತಾನೆ ತನುತ್ರಯವಾಗಿ, ಜೀವತ್ರಯವಾಗಿ, ಅವಸ್ಥಾತ್ರಯವಾಗಿ, ಗುಣತ್ರಯವಾಗಿ, ಮನ

ಬುದ್ಧಿ ಚಿತ್ತ ಅಹಂಕಾರ ಜ್ಞಾನ ಭಾವಂಗಳಾಗಿ, ಸಕಲೇಂದ್ರಿಯ ವಿಷಯಂಗಳೆಲ್ಲವೂ ತಾನೆಯಾಗಿ, ಲಿಂಗವು ತಾನೆ ಪರಿಪೂರ್ಣವಾದ ದೇಹ ಗುಣಸ್ವರೂಪನಾಗಿ, ಲಿಂಗವು ತಾನೆ ಶರಣನೆನಿಸಿ, ತನ್ನ ತಾನರ್ಚಿಸಿಕೊಳುತ್ತಿಹನು ಪರಶಿವಲಿಂಗವು ತನ್ನ ಸ್ವಲೀಲಾನಂದದಿಂದಲೆಂಬುದೀ ವಚನದ ತಾತ್ಪರ್ಯಾರ್ಥ. ೩೦

ವ. ಕಂಡುದೆಲ್ಲಾ ಪಾವನ, ಕೇಳುವುದೆಲ್ಲಾ ಪರಮಬೋಧೆ. ಮುಟ್ಟಿತೆಲ್ಲಾ ಪರುಷದ ಸೋಂಕು, ಒಡನೆ ನುಡಿದವರೆಲ್ಲರೂ ಸದ್ಯೋನ್ಮುಕ್ತರು. ಸುಳಿದ ಸುಳುಹೆಲ್ಲಾ ಜಗತ್ಪಾವನ. ಮೆಟ್ಟಿದ ಧರೆಯೆಲ್ಲವೂ ಅವಿಮುಕ್ತಿಕ್ಷೇತ್ರ. ಸೋಂಕಿದ ಜಗವೆಲ್ಲವೂ ಪುಣ್ಯತೀರ್ಥಂಗಳು. ಶರಣೆಂದು ಭಕ್ತಿ ಮಾಡಿದವರೆಲ್ಲರೂ ಸಾಯುಜ್ಯರು. ಗುಹೇಶ್ವರನ ಶರಣನ ಸುಳುಹಿನ ಸೊಗಸನುಪಮಿಸಬಾರದು.

ಟೀ. ಈ ವಚನ ಕಾಣಬಂದರ್ಥ. ೩೧

ಸ್ವಲೀಲಾನಂದಭಕ್ತಿಸ್ಥಲ ಸಂಪೂರ್ಣ

ಅಂತು ಸ್ಥಲ ೧೬ಕ್ಕಂ ಶ್ಲೋಕ ೧೩೫ಕ್ಕಂ ವಚನ ೭೧೨ಕ್ಕಂ

**ಮಂಗಳಂ**

**ಶ್ರೀ**

ಅಂತು ಮಹಾಘನವಸ್ತು ತನ್ನ ೧ಸ್ವಲೀಲೆಯಿಂದ೧ ಲಿಂಗಾಂಗವೆರಡಾಗಿ, ಪೂಜ್ಯ ಪೂಜಕನಾಗಿ ಆಚರಿಸುವ ಸ್ವೇಚ್ಛಾಚಾರವೇ ಸ್ವಲೀಲಾನಂದಭಕ್ತಿಯೆನಿಸಿತ್ತು. ಅಂತು ನಿಃಕಲವಸ್ತು ತನ್ನ ಸ್ವಲೀಲೆಯಿಂದ ಮೂರ್ತಿಯಾಗಿ, ಲಿಂಗಾಂಗವಾದ ಭೇದವೆಂತುಟೆಂದರೆ : ಶಿವನು ಸರ್ವಕಲಾಸಂಪೂರ್ಣನಾದ ಕಾರಣದಿಂದ ತನ್ನ ಸರ್ವಕಲಾಸಂಪೂರ್ಣತ್ವದೊಳಗೆ ಒಂದು ಕಡಮೆಯಾಗಬಾರದೆಂದು ಚದುರಿನಿಂದ ನಿಃಕಲನಾಗಿ, ಸಕಲನಿಃಕಲನಾಗಿ, ಸಕಲನಾಗಿ, ಲಿಂಗವಾಗಿ, ಅಂಗವಾಗಿ, ಶಕ್ತಿಯಾಗಿ, ಭಕ್ತಿಯಾಗಿ, ಪದಾರ್ಥವಾಗಿ, ಪ್ರಸಾದವಾಗಿ, ಸಕಲ ನಿಃಕಲಾನಂದಂಗಳಲ್ಲಿ ನಿತ್ಯಾನಂದನಾಗಿ ನಟಿಸಿಪ್ಪ ಶಿವನ ಸರ್ವಕಲಾಸಂಪೂರ್ಣದ ಚಾರಿತ್ರಮಂ ಪುರಾತರ ವಚನಂಗಳಿಂದ ಸ್ಥಲವಿಟ್ಟು ಹೇಳಿದ ಸ್ಥಲ ಹದಿನಾಱು. ಅಂತು ಹದಿನಾಱು ಸ್ಥಲಂಗಳು ಲಿಂಗಲೀಲಾವಿಲಾಸಚಾರಿತ್ರ. ಈ ಲಿಂಗಲೀಲಾವಿಲಾಸಚಾರಿತ್ರವೇ ಶರಣಚಾರಿತ್ರವೆಂದು ಪುರಾತರ ವಚನಗಳಿಂದ ಕಾಣಲಾಯಿತ್ತಾಗಿ, ಮಿಕ್ಕಿನ ವೇದಾಗಮಂಗಳು ಜಡ್ಡುಗೊಜಡೆಂದು ಅವ ಬಿಟ್ಟು, ಪುರಾತರ ವಚನ ೨ಏಳುನೂಱುಎಪ್ಪತ್ತ೨ ತೆಗೆದುಕೊಂಡು, ಷೋಡಶಸ್ಥಲ ಪರಿಕ್ರಮದಿಂದ ಸೇರಿಸಿ, ವ್ಯಾಖ್ಯಾನವ ಮಾಡಿದ ವಿದ್ಯಾನಗರದ ೩ಕಲ್ಲುಮಠದ ಪ್ರಭುದೇವಾರ್ಯನಾ೩. ಇದಱ ನಾಮ ಲಿಂಗಲೀಲಾವಿಲಾಸಚಾರಿತ್ರ. ಈ ಲಿಂಗಲೀಲಾವಿಲಾಸಚಾರಿತ್ರವನು ಶಿವಶರಣರು ತಮ್ಮ ಚಾರಿತ್ರವೆಂದು, ತಮ್ಮ ನಿಜವೆಂದು, ತಮ್ಮ ಮಹತ್ವವೆಂದು ಅಱಿದು ಆನಂದಿಸುವ ಶಿವಗಣಂಗಳಿಗೆ ಸಮರ್ಪಿತವಾಯಿತ್ತೆಂದು ಅಱಿದು ಒಪ್ಪುಗೊಂಬ ಶರಣರಿಗೆ ಶರಣೆನುತಿರ್ದೆನು. ಈ ಲಿಂಗಲೀಲಾವಿಲಾಸಚಾರಿತ್ರವನು ಬರೆದು ಓದಿ ಕೇಳಿ ಅಱಿದು ಆನಂದಿಸುವ ಭಕ್ತಜನಂಗಳಿಗೆ ಇಹ ಪರದ ಸುಖವ ಕೊಡುವ ದಾತೃವಪ್ಪ ಶಿವಪದವಂ ಕೊಡುವುದೀ ಪುರಾತನರ ವಚನಪ್ರಸಾದ. ಶಿವಗಣಂಗಳು ಎನ್ನ ಶರಣನೊಪ್ಪುಗೊಂಬುದು. ಶಿವಗಣಂಗಳಿಗೆ ಶರಣು ಶರಣಾರ್ಥಿ, ಶರಣಾರ್ಥಿ.

## ಲಿಂಗಲೀಲಾವಿಲಾಸಚಾರಿತ್ರ ಸಂಪೂರ್ಣಂ

## ಮಂಗಳಂ

## ಶ್ರೀ

೧ ಸ್ವಲೀಲಾನಂದದಿಂದ (ಎ.), ೨ ಏಳನೂಱೆಪ್ಪತ್ತೈದ (ಹು.)
೩ ಕಲ್ಲುಮಟದ ಪ್ರಭುದೇವಾರ್ಯರು (ಎ.)

ಕಂದ : ಇದು ಶೈವಗಜಕೆ ಕೇಸರಿ
ಇದು ಶೈವಾದ್ರಿಯು ಪೊಳಲ್ಚುವಡೆ ಕುಲಿಶಾಯುಧ
ಇದು ಶೈವಶರಧಿವಡಬಂ
ಇದು ಶೈವಾಭ್ರಕ್ಕೆ ಚಂಡಮರುತಂ ನಿರುತಂ ೧

ವೀರಶೈವಾಮೃತಾರ್ಣವ
ಭೋರೆನೆ ನೆಱೆ ಬೇಡಿತೀವ ಸುರಭೂರುಹ ಮ-
ತ್ತೋರಂತೆ ಶಿವನ ಪದಯುಗ-
ದೋರಗೆಯೊಳಗಿರಿಪುದಯ್ಯ ಶರಣಚರಿತ್ರಂ ೨

ಲಿಂಗಲೀಲಾವಿಲಾಸವ
ಪಿಂಗದೆ ಬರೆದೋದಿ ಕೇಳ್ದ ಶರಣಜನಕ್ಕಂ
ಹಿಂಗಿ ಸಂಸಾರ ಭಂಗವು
ಮುಂಗಡೆಯೊಳು ಸಂಗನೀವ ಶಿವಸಾಯುಜ್ಯವ ೩

ಶುಭಮಸ್ತು

ಮಂಗಳ ಮಹಾ

ಶ್ರೀ

# ಲಿಂಗಲೀಲಾವಿಲಾಸಚಾರಿತ್ರದಲ್ಲಿಯ
# ವಚನಗಳ ವರ್ಣಾನುಕ್ರಮಣಿಕೆ

( ಸೂಚನೆ:— ಇಲ್ಲಿ ಕೊಟ್ಟಿರುವ ಸಂಖ್ಯೆಗಳಲ್ಲಿ ಮೊದಲನೆಯದು ಪುಟ ಸಂಖ್ಯೆ ಎರಡನೆಯದು ವಚನ ಸಂಖ್ಯೆ )

## ಅ

## ಆ

## ಇ

## ಈ



## ಉ



## ಊ



## ಎ

## ಏ

## ಐ



## ಒ



## ಓಂ



## ಕ

ಖ



ಗ

## ಘ

## ಚ



## ಛ



## ಜ

## ಜ್ಞ



## ತ

## ದ



## ಧ

## ನ

## ಪ

## ಫ



## ಬ

## ಭ

## ಮ

ವ

## ಸ

## ಹ

ಲಿಂಗಲೀಲಾವಿಲಾಸಚಾರಿತ್ರದಲ್ಲಿಯ

# ವಚನಕಾರರ ಅಂಕಿತಗಳ ವರ್ಣಾನುಕ್ರಮಣಿಕೆ

ಸೂಚನೆ—ಇಲ್ಲಿ ಮೊದಲು ವಚನಕಾರರ ಅಂಕಿತ, ಆ ಮೇಲೆ ವಚನಕಾರರ ಹೆಸರು, ವಚನಗಳ ಸಂಖ್ಯೆ ಕೊಡಲ್ಪಟ್ಟಿವೆ.

| | | | |
|---|---|---|---|
| ೧ | ಅಜಗಣ್ಣಾ | ಮುಕ್ತಾಯಕ್ಕ | ೪ |
| ೨ | ಅಭಿನವ ಮಲ್ಲಿಕಾರ್ಜುನಾ | ಡೋಹಾರಕಕ್ಕಯ್ಯ | ೨ |
| ೩ | ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರಾ | ಉರಿಲಿಂಗಪೆದ್ದಿಗಳು | ೨೫ |
| ೪ | ಉರಿಲಿಂಗದೇವಾ | ಉರಿಲಿಂಗದೇವ | ೪ |
| ೫ | ಉಳಿಯುಮೇಶ್ವರಾ | ಚಿಕ್ಕಣ್ಣ (ನಿಜಲಿಂಗ ಚಿಕ್ಕಯ್ಯ) | ೧ |
| ೬ | ಎನ್ನಯ್ಯ ಪ್ರಿಯ ಇಮ್ಮಡಿ ನಿಷ್ಕಳಂಕ ಮಲ್ಲಿಕಾರ್ಜುನಾ | ಮಹಾದೇವಿ ( ಮೋಳಿಗೆ ಮಾರಯ್ಯಗಳ ಪತ್ನಿ ) | ೩ |
| ೭ | ಏಣಾಂಕಧರ ಸೋಮೇಶ್ವರಾ | ಬಿಬ್ಬಿಬಾಚಯ್ಯ | ೧ |
| ೮ | ಐಘಟದೂರ ರಾಮೇಶ್ವರಲಿಂಗ | ಮೆರೆಮಿಂಡದೇವ | ೧ |
| ೯ | ಕಲಿದೇವರದೇವಾ | ಮಡಿವಾಳಮಾಚಿದೇವ | ೭ |
| ೧೦ | ಕದಂಬ ಕೈಲಾಸ ಕೂಡಲ ಚೆನ್ನ ಸಂಗಮದೇವ | ? | ೧ |
| ೧೧ | ಕಪಿಲ ಸಿದ್ಧಮಲ್ಲಿಕಾರ್ಜುನಾ | ಸಿದ್ಧರಾಮ | ೩೨ |
| ೧೨ | ಕೂಡಲಸಂಗಮದೇವ | ಬಸವೇಶ್ವರ | ೧೭೦ |
| ೧೩ | ಕೂಡಲಚೆನ್ನಸಂಗಮದೇವ | ಚೆನ್ನಬಸವೇಶ್ವರ | ೧೮೬ |
| ೧೪ | ಗೊಹೇಶ್ವರಾ | ಅಲ್ಲಮಪ್ರಭು | ೧೯೦ |
| ೧೫ | ಗೋಪಿನಾಥ ವಿಶ್ವೇಶ್ವರಲಿಂಗ | ತುರುಗಾಹಿ ರಾಮಣ್ಣ | ೧ |
| ೧೬ | ಚಂಡೇಶ್ವರಾ (ಚಂದೇಶ್ವರಾ?) | ನುಲಿಯ ಚಂದಯ್ಯ (?) | ೧ |
| ೧೭ | ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ | ಘಟ್ಟಿವಾಳಯ್ಯ | ೯ |
| ೧೮ | ಚಿ(ಸಿ)ಮ್ಮಲಿಗೆಯ ಚೆನ್ನರಾಮ | ಚೆಂದಿಮರಸ | ೧೫ |
| ೧೯ | ಚೆನ್ನಮಲ್ಲಿಕಾರ್ಜುನಾ | ಉಡುತಡಿಯ ಮಹಾದೇವಿಯಕ್ಕ | ೨೨ |
| ೨೦ | ಚೌಡಯ್ಯ | ಅಂಬಿಗರ ಚೌಡಯ್ಯ | ೫ |
| ೨೧ | ತೆಲುಗೇಶ್ವರಾ | ತೆಲಗು ಜೊಮ್ಮಯ್ಯ | ೧ |

| | | | |
|---|---|---|---|
| ೨೨ | ನಿಜಗುರು ಸ್ವತಂತ್ರ ಕಪಿಲಸಿದ್ಧ ಮಲ್ಲಿಕಾರ್ಜುನಾ | | ೭ |
| ೨೩ | ಸಿದ್ಧಳಂಕ ಮಲ್ಲಿಕಾರ್ಜುನಾ | ಮೋಳಿಗೆಯ ಮಾರಯ್ಯ | ೬ |
| ೨೪ | ಬಸವಪ್ರಿಯ ಕೂಡಲ ಸಂಗಮದೇವ | ಹಡಪದ ಅಪ್ಪಣ್ಣ | ೪ |
| ೨೫ | ಘೇಮೇಶ್ವರ | ಸಾಕದ ಘೇಮಯ್ಯ | ೧ |
| ೨೬ | ಮಹಾಲಿಂಗ ಕಲ್ಲೇಶ್ವರ | ಹಾವಿನಹಾಳ ಕಲ್ಲಯ್ಯ | ೫ |
| ೨೭ | ಮಹಾಲಿಂಗ ಗಜೇಶ್ವರ | ಗಜೇಶ ಮಸಣಯ್ಯ | ೩ |
| ೨೮ | ಮಹಾದಾನಿ ಸೊಡ್ಡಳಾ | ಸೊಡ್ಡಳಬಾಚರಸ | ೪ |
| ೨೯ | ಮಾರೇಶ್ವರಾ | ಮಾರೇಶ್ವರೊಡೆಯರು (ಕನ್ನಡ ಮಾರಿ ತಂದೆ) | ೧ |
| ೩೦ | ಯೋಗಿನಾಥ | ಸಿದ್ಧರಾಮ | ೧೯ |
| ೩೧ | ರಾಮನಾಥಾ | ದೇವರ ದಾಸಿಮಯ್ಯ | ೧೦ |
| ೩೨ | ರೇಕಣ್ಣ ಪ್ರಿಯ ನಾಗಿನಾಥ | ಬಹುರೂಪಿ ಚೌಡಯ್ಯ | ೭ |
| ೩೩ | ಶಂಭುಜಕ್ಕೇಶ್ವರಾ | ಸತ್ಯಕ್ಕ | ೪ |
| ೩೪ | ಶಂಭುಸೋಮನಾಥಲಿಂಗ | ಜೋಡರ ಮಾಯಣ್ಣ | ೧ |
| ೩೫ | ಸಕಳೇಶ್ವರದೇವ | ಸಕಳೇಶ ಮಾದರಸ | ೭ |
| ೩೬ | ಸದಾಶಿವಮೂರ್ತಿಲಿಂಗ | ಅರಿವಿನ ಮಾರಿ ತಂದೆ | ೧ |
| ೩೭ | ಸಿದ್ಧಸೋಮನಾಥಲಿಂಗ | ಅಮುಗಿದೇವ | ೬ |
| ೩೮ | ಹಂಪೆಯ ವಿರೂಪಾಕ್ಷ | ಉಗ್ಗವಣೆ ಹಂಪಯ್ಯ | ೧ |
| | | | * |

* ಗ್ರಂಥದ ಅಂತ್ಯದಲ್ಲಿ ' ಅಂತು ಸ್ಥಲ ೧೬ಕ್ಕಂ ಶ್ಲೋಕ ೧೩೫ಕ್ಕಂ ವಚನ ೭೧೨ಕ್ಕಂ ಮಂಗಳಂ ' ಎಂದಿದೆ. ಎಲ್ಲ ಪ್ರತಿಗಳು ವಚನಗಳ ಸಂಖ್ಯೆ ೭೧೨ ಎಂದೇ ಹೇಳಿವೆ. ಇಲ್ಲಿ ಎಣಿಕೆ ತಪ್ಪಿದೆ. ಲಿಂಗಲೀಲಾವಿಲಾಸಚಾರಿತ್ರದ ವಚನಗಳ ಒಟ್ಟು ಸಂಖ್ಯೆ ೭೨೯ ಎಂಬುದೇ